## ಸಾವಿರ ವರ್ಷ ಇತಿಹಾಸದ

# ಕೊಂಕಣಿ ಮಾಹಿತಿ ಶೋಧ ಗ್ರಂಥ

## 1000 VARSHA ITIHASAD

# KONKANI MAHITI SHODHA GRANTH




Dr. Vasant Shantaram Bandekar Sadashivgad, Karwar Mob.: 9342700507

# ಸಾವಿರ ವರ್ಷ ಇತಿಹಾಸದ
# ಕೊಂಕಣಿ ಮಾಹಿತಿ ಶೋಧ ಗ್ರಂಥ


ಸಂಪಾದಕರು :

ಡಾ. ವಸಂತ ಶಾಂತಾರಾಮ ಬಾಂದೇಕರ



ಪ್ರಕಾಶಕರು :

ಶ್ರೀ ಸಾಯಿ ಪಬ್ಲಿಕೇಶನ್ ಸದಾಶಿವಗಡ, ಕಾರವಾರ (ಉ.ಕ.) ಕರ್ನಾಟಕ

ಮೊ.: 9342700507

ಪುಟ ವಿನ್ಯಾಸ :

ಶ್ರೀ ಸಾಯಿ ಸ್ಟುಡಿಯೋ, ಸದಾಶಿವಗಡ, ಕಾರವಾರ

ಮುದ್ರಣ:

ಶ್ರೀ ಸಾಯಿ ಪ್ರಿಂಟರ್ಸ್, ಕಾರವಾರ

ಮೊ. : 9611872294

# Saveera Varsha Itihasad Konkani Mahiti Shodha Granth

**Published by**
**Shree Sai Publications**
**Sadashivgad, Karwar(U.K.) Karnataka - 581352**
**Mob.: 9342700507**
**First Edition 2021**

**Pages : 270**
**Price: Rs. 350/-**
**Paper Used 21.3 Maplitho**
**Book Size : 1/4**


ಮೊದಲನೇಯ ಮುದ್ರಣ – 2021
ಬೆಲೆ : ಮೂರು ನೂರು ರೂಪಾಯಿ ಮಾತ್ರ
ಮುಖಪುಟ ವಿನ್ಯಾಸ : ಮಂಗಲದಾಸ ಗೌಡ, ಅಚವೆ

ಮಾರ್ಗದರ್ಶಕರು
ಶ್ರೀ ಗಣೇಶ ಬಿಷ್ಠಣ್ಣನವರ, ಸದಾಶಿವಗಡ
ಡಾ. ಅರವಿಂದ ಶ್ಯಾನಭಾಗ, ಬಾಳೇರಿ, ಕುಮಟಾ
ಶ್ರೀ ಜಾರ್ಜ್ ಫರ್ನಾಂಡೀಸ್, ಕಾರವಾರ
ಶ್ರೀ ಸತೀಶ ನಾಯ್ಕ, ಅಗ್ರಾ
ಶ್ರೀ ನಾಗೇಶ ಅಣ್ವೇಕರ, ಕಾರವಾರ

ಮುದ್ರಣ: ಶ್ರೀ ಸಾಯಿ ಪ್ರಿಂಟರ್ಸ್ ಮೊ.: 9611872294
ಪ್ರತಿಗಳು : 1000

# ARCHDIOCESE OF BANGALORE



**Most Rev. Peter Machado**
*Archbishop of Bangalore*

Archbishop's House
75 Miller's Road
Benson Town, Bengaluru - 560 046
Karnataka, INDIA
✆ +91 +080-2333 0438
Fax : +91 +080-2353 1600
E-mail : archbishop@bangalorearchdiocese.org
Website : www.bangalorearchdiocese.org

Ref. No.:

22-09-2020

To,
Mr. Vasant S Bandekar
Shivaji Circle
Sadashivgad
Karwar ( U K)
Karnataka-581352

Dear Vasant,

Peace! Wish you all success in your creative & entertaining display of tallents as Mimicry and as a writer of **"Konkani Book Sanghrah Granth"** regarding thousnad years history of Konkani literature & Culture.

God bless you.

With kind regards,

Yours in Christ,

+Peter Machado
Archbishop of Bangalore

# ಮುನ್ನುಡಿ

ಕೊಂಕಣಿ ಹಸನಾಯಿತು ಅದು
ಪಸನಾಯಿತು ಹೆಸರು
ತುಂಬುಕ್ಕುತ್ತಿದೆ ವಸಂತ ಹೃದಯದು
ಭಾವೈಕ್ಯದ ಉಸಿರು
ಹಳ್ಳ ಕೊಳ್ಳ, ಕೋಟೆ ಕೊತ್ತಲು
ಕಾಡುಮೇಡು ಕರಾವಳಿಯ ಹೆಸರು
ಕೊಂಕಣಾಂಬೆಗೆ ತಾನಾಗಲಿ
ನಾಡಿದು ಹೊಂಬಸಿರು !

ಎಂಬಂತೆ ಡಾ. ವಸಂತ ಬಾಂದೇಕರವರು ಸುಸಂಸ್ಕೃತಿಯ ಧೀಮಂತರು ಸಾಮಾಜಿಕ ಮತ್ತು ಭಾಷಿಕ ಹರಿಕಾರರು ಸಂಪಾದಕ ಕೃತಿಯಲ್ಲಿ ಸಮಾಜ ಹಾಗು ಸಮುದಾಯಗಳು ನುಡಿಯುವ ಭಾಷೆಯನ್ನು ಅಮೂಲಾಗ್ರ ರೀತಿಯಲ್ಲಿ ಸಂಗ್ರಹಿಸಿ ಚಿತ್ರಿಸಿರುವದು ಒಂದು ಹೂಸ ವಿಹಂಗಮ ನೋಡಿದಂತಿದೆ. ಪುರಾಣ ಪುಣ್ಯ ಐತಿಹಾಸಿಕ ಸಾಮಜಿಕ ಮತ್ತು ಸಾಂಸ್ಕೃತೀಕ ವ್ಯಕ್ತಿಗಳಿಂದ ಮೊದಲ್ಗೊಂಡು ಆಳಿ ಅಳಿದ ಪರಾಕ್ರಮಿಗಳ ತ್ಯಾಗ, ಬಲಿದಾನಗಳ ಲಗ್ಗೆ ಸಂಗ್ರಹಿಸಿದ್ದಾರೆ. ಅಂದಿನ ಕಾಲದ ಸಾಮಾಜಿಕ ಮತ್ತು ಸಾಂಸ್ಕೃತೀಕ ಮೌಲ್ಯಗಳನ್ನು ಪರಿಚಯಿಸುತ್ತಾ ಭಾಷೆಯ ಹಿರಿಮೆಯನ್ನು ಎತ್ತಿ ಕಟ್ಟುವ ಪ್ರಯತ್ನ ನಿಜವಾಗಲೂ ಸ್ತುತ್ತಾರ್ಹ!

ಹತ್ತನೇ ಶತಮಾನದಲ್ಲಿ ಬಳಕೆಯಾದ ಕೊಂಕಣಿ ಭಾಷೆಯ ಶಾಸನವನ್ನು ಉಲ್ಲೇಖಿಸಿ ಮಾತೃ ಭಾಷೆಯ ಅರ್ಥಪೂರ್ಣತೆಯನ್ನು ಭಾಷೆಯ ಒಡಲನ್ನು ವಲವ ಜನತೆಗೆ ಕೃತಿಯ ಮೂಲಕ ಮೆಚ್ಚಿಸುವ ಯತ್ನ ಭವಿಷ್ಯದ ದಿಕ್ಸೂಚಿಯಾಗಿದೆ.

ಮನೆ-ಮನೆಗಳನ್ನು ತಲಪುವ ರೀತಿಯಲ್ಲಿ ಮಾತೃಭಾಷೆಯ ಹಿನ್ನಲೆ ಅದರ ಮಹತ್ವ ಜೊತೆಗೆ ವಿಕಾಸ ಹಾಗೂ ಕೊಂಕಣಿ ಭಾಷೆಯ ಚಳವಳಿ, ವಿಶ್ವ ಕೊಂಕಣಿ ಕೇಂದ್ರ ಮತ್ತು ಭಾಷೆಗೆ ಸಂವಿಧಾನ ಮನ್ನಣೆ, ಭಾಷಾ ಸಮುದಾಯದಲ್ಲಿ ತಳವೂರಿರುವ ಜನಪದ ಕಲೆಗಳ ಸಮಗ್ರ ವಿಹಂಗಮವನ್ನು ಸಂಗ್ರಹಿಸಿ ವಿವರಿಸಿದ್ದಾರೆ.

ಇನ್ನು ಕೃತಿಯ ಒಳಹೊಕ್ಕು ನೋಡಿದಾಗ ಭಾಷೆಯನ್ನು ಕಟ್ಟುವ ಶ್ರಮಿಸಿದ ಸಾಹಿತಿಗಳ ಪರಿಚಯ ಜೋತೆಗೆ ಬೇರೆ, ಬೇರೆ ಪ್ರದೇಶದಗಳಲ್ಲಿ ಹಬ್ಬಿರುವ ಭಾಷಾಭಿಮಾನ ವೈವಿಧ್ಯತೆಯ ಭಾವನೆಗಳನ್ನು ಪರಿಪಕ್ವತೆಯಿಂದ ಸಂಪಾದಕರು ಸಂಗ್ರಹಿಸಿದ್ದನ್ನು ಗ್ರಹಿಸಬಹುದು. ಮುಂದೆ ಭಾಷೆಯ ವಿಸ್ತಾರವಾಗಿ ವಿಶ್ಲೇಷಿಸುತ್ತಾ ಭಾಷೆ ಅವನತಿಯತ್ತ ಬೇಡ, ಭಾಷಾಭಿವೃದ್ಧಿಯಲ್ಲಿ ದೃಢಸಂಕಲ್ಪವನ್ನು ಪ್ರದರ್ಶಿಸೋಣ ಎಂಬ ಅಂತರ ದೃಷ್ಠಿಯನ್ನು ವ್ಯಕ್ತಪಡಿಸಿದ್ದಾರೆ. ಕರ್ನಾಟಕ, ಗೋವಾ, ಮಹಾರಾಷ್ಟ್ರ ಮತ್ತು ಕೇರಳ ರಾಜ್ಯಗಳಲ್ಲಿನ ಕೊಂಕಣಿ ಭಾಷೆಯ ಇತಿಹಾಸ, ವ್ಯಾಪ್ತಿ, ವಿಸ್ತರಣೆ ಜೊತೆಗೆ ಸಾಧನೆಗಳ ಬೆಳಕು ಚೆಲ್ಲುವುದರ ಮೂಲಕ ಭಾಷೆಯ ಜೌಚಿತ್ಯತೆಗೆ ಗಮನ ಸೆಳೆದಿದ್ದಾರೆ. ಬಹುಶಃ ಹಿಂದೆ ಯಾರೂ ಮಾಡದೇ ಇರುವ ಕರ್ತವ್ಯವನ್ನು ಡಾ. ವಸಂತ ಬಾಂದೇಕರ ಮಾಡಿದ್ದಾರೆ.



**- ಶ್ರೀ ಗಣೇಶ ಎನ್. ಬಿಷ್ಟಣ್ಣನವರ ಎಂ.ಎ. ಬಿಎಡ್**
ಸಹ ಶಿಕ್ಷಕರು, ಶಿವಾಜಿ ವಿದ್ಯಾಮಂದಿರ
ಅಸ್ನೋಟಿ, ಕಾರವಾರ, (ಉ.ಕ.) ಮೊ.: 9482209990

# ಕೊಂಕಣಿ ಮಾಹಿತಿ ಶೋಧ ಗ್ರಂಥ

**ಸಂಪಾದಕೀಯ**

ಬಹಳಷ್ಟು ಕೊಂಕಣಿ ಭಾಷಿಕರಿಗೆ ತಮ್ಮ ಭಾಷೆಯ ಇತಿಹಾಸ-ಹಿನ್ನೆಲೆ ಗೊತ್ತಿಲ್ಲಾ, ಬೇರೆಭಾಷೆಯವರಂತೂ ಕೊಂಕಣಿ ಮಾತನಾಡುವವರು ಕಾಥೋಲಿಕ್ ಕ್ರಿಶ್ಚನ್ ಹಾಗೂ (ಜಿಎಸ್‌ಬಿ) ಕೊಂಕ್ಣಾ ಎರಡೇ ಸಮುದಾಯಗಳಿರುವದಾಗಿ ತಿಳಿದಿದ್ದಾರೆ. ಕೊಂಕಣಿ ಭಾಷೆಗೆ ಲಿಪಿಯೇ ಇಲ್ಲ ಎಂದು ವಾದ ಮಾಡುವವರೂ ಇದ್ದಾರೆ. ಕೊಂಕಣಿ ಭಾಷೆಗೆ ಸಂವಿಧಾನದಲ್ಲಿ ರಾಷ್ಟ್ರೀಯ ಭಾಷೆ ಎಂದು ಮನ್ನಣೆ ದೊರೆತಿರುವ ಬಗ್ಗೆ ಮಾಹಿತಿ ಹಲವರಿಗಿಲ್ಲ, ಕೊಂಕಣಿಯಲ್ಲೂ ಜ್ಞಾನಪೀಠ ಪ್ರಶಸ್ತಿ ದೊರೆತಿರುವ ಬಗ್ಗೆಎಷ್ಟೋ ಕೊಂಕಣಿಗರಿಗೆ ತಿಳಿಯಲಾರದ ವಿಷಯವಾಗಿದೆ.

ಆದ್ದರಿಂದಲೇ ಒಂದು ಸಾವಿರ ವರ್ಷದ ಹಿಂದಿನ ಇತಿಹಾಸವುಳ್ಳ ಕೊಂಕಣಿಗರ ಸಮಸ್ತ ಮಾಹಿತಿಯನ್ನು ಕನ್ನಡದಲ್ಲಿ ಪುಸ್ತಕ ರೂಪದಲ್ಲಿ ತರಲು ಪ್ರಯತ್ನಿಸಲಾಗಿದೆ ಕಾರಣ ಕರ್ನಾಟಕದ ಕನ್ನಡಬಲ್ಲ ಕೊಂಕಣಿಗರಿಗೂ ಕರ್ನಾಟಕದ ಕನ್ನಡಿಗರಿಗೂ ಪರದೇಶದಲ್ಲಿರುವ ಕನ್ನಡ ಬಲ್ಲವರಿಗೂ ಕೊಂಕಣಿಯ ಬಗ್ಗೆ ಮಾಹಿತಿ ಪಡೆಯಲು ಅನುಕೂಲವಾಗುವುದು.

ಈ ಕೊಂಕಣಿ ಮಾಹಿತಿ ಸಂಗ್ರಹ ಗ್ರಂಥವನ್ನು ಕರ್ನಾಟಕ-ಮಾಹಾರಾಷ್ಟ್ರ-ಗೋವಾ-ಕೇರಳಾ ರಾಜ್ಯದ ಹಾಗೂ ಪರ ದೇಶದಲ್ಲಿ ನೆಲೆಸಿರುವ ಕೊಂಕಣಿ ಸಾಹಿತಿಗಳು, ಲೇಖಕರು ಬರೆದ (ಮರಾಠಿ-ದೇವನಾಗರಿ-ಕನ್ನಡ-ಇಂಗ್ಲೀಷ-ರೋಮಿ) ವಿವಿಧ ಮಾಹಿತಿ ಪುಸ್ತಕಗಳನ್ನು ಅಧ್ಯಯನ ಮಾಡಿ ಕನ್ನಡ ಲಿಪಿಯಲ್ಲಿ ಅನುವಾದ ಮಾಡಿ ಸಂಗ್ರಹಿಸಲಾಗಿದೆ.

ಈ ಸಂಗ್ರಹ ಗ್ರಂಥದಲ್ಲಿ ಕೊಂಕಣಿಯ ಒಂದು ಸಾವಿರ ವರ್ಷಗಳ ಹಿಂದಿನ ಇತಿಹಾಸ, ಅದರ ಹಿನ್ನೆಲೆ ಕೊಂಕಣಿಯ ಲಿಪಿಗಳು - ಭಾಷೆಗೆ ಸಂವಿಧಾನದಲ್ಲಿ ಸಿಕ್ಕ ಸ್ಥಾನಮಾನ - ವಿವಿಧ ಕೊಂಕಣಿ ಭಾಷಿಕ ಸಮುದಾಯಗಳು - ಅಖಿಲಭಾರತ ಕೊಂಕಣಿ ಪರಿಷತ್ ಸ್ಥಾಪನೆ - ಗೋವಾ-ಕರ್ನಾಟಕ-ಕೇರಳಾ ರಾಜ್ಯದಲ್ಲಿ ಕೊಂಕಣಿಗಾಗಿ ನಡೆದ ಚಳುವಳಿ-ಕರ್ನಾಟಕದಲ್ಲಿ ವಿಜಯೋತ್ಸವ-ಕರ್ನಾಟಕದ ಕೊಂಕಣಿ ಸಾಹಿತ್ಯ ಅಕಾಡೆಮಿ ಸ್ಥಾಪನೆ-ಕೊಂಕಣಿಯ ವಿವಿಧ ಜಾನಪದ ಕಲೆಗಳು-ಕರ್ನಾಟಕದಲ್ಲಿ ಕೊಂಕಣಿ ಪ್ರತಿಕೋಧ್ಯಮ ಕೊಂಕಣಿ ರಂಗಭೂಮಿ-ಗೋವಾ ಕೊಂಕಣಿ ಅಕಾಡೆಮಿ, ಕರ್ನಾಟಕ ಶಾಲೆಗಳಲ್ಲಿ ಕೊಂಕಣಿ ಶಿಕ್ಷಣ-ಕೊಂಕಣಿ ಚಲನಚಿತ್ರಗಳು-ಭಾರತದ ಅಭಿವೃದ್ಧಿಯಲ್ಲಿ ಕೊಂಕಣಿಗರ ದೇಣಿಗೆ-ಕೊಂಕಣಿಗೆ ಜ್ಞಾನಪೀಠ ಪುರಸ್ಕಾರ-ವಿದೇಶದಲ್ಲಿ ಕೊಂಕಣಿ ಪರಿಮಳ ಮಾಧವ ಮಂಜುನಾಥ ಶಾನಭಾಗ, ಶೆಣೈ ಗೊಂಯಬಾಬ ವಿಶ್ವದ ಏಕೈಕ ಕೊಂಕಣಿ ಭಾಷಿಕ ತಾಲೂಕಾ ಕಾರವಾರವು 16ನೇ ಶತಮಾನದಲ್ಲಿ ಪ್ರಸಿದ್ಧ ವ್ಯಾಪಾರಿ ಕೇಂದ್ರವಾಗಿತ್ತು. ಕೊಂಕಣಿ ಭಾಷಿಕ ಒಂದು ಗ್ರಾಮದ ರಚನೆಯು 200 ವರ್ಷಗಳ ಹಿಂದೆ ಮನೆಯ ರಚನೆ-ಮಣ್ಣಿನ-ತಾಮ್ರದ-ಹಿತ್ತಾಳೆ ಪಾತ್ರೆಗಳ ಹೆಸರುಗಳು ಮನೆ ಪರಿಸರದಲ್ಲಿ ಬೆಳೆಸಿದ ವಿವಿಧ ಹೂವು-ಹಣ್ಣು-ಕಾಯಿಪಲ್ಲೆ ಹೆಸರುಗಳು ಸಮುದ್ರ ಹಾಗೂ ನದಿ ಮೀನಿನ ವಿವಿಧ ಹೆಸರುಗಳು ವಿವಿಧ ಮಾಂಸಾಹಾರಿ-ಶಾಖಾಹಾರಿ ಊಟದ ಹೆಸರು ತಿಂಡಿ-ತಿನಿಸುಗಳ ಹೆಸರು, ಶೃಂಗಾರ ಅಲಂಕಾರ ವಸ್ತುಗಳ ಹೆಸರು, ಹಿಂದು-ಕ್ರಿಶ್ಚನ ಧರ್ಮದವರ ವಿವಿಧ ಆಚರಣೆ ಹಬ್ಬಗಳ ಹೆಸರು ಹಾಗೂ ಜನನದಿಂದ ಮರಣದವರೆಗಿನ ವಿವಿಧ ಸಂಸ್ಕಾರಗಳ ಮಾಹಿತಿ, ವಿಶ್ವ ಕೊಂಕಣಿ ಕೇಂದ್ರ ಸ್ಥಾಪನೆ, ಮಾಂಡ ಸೋಬಾಣ ಸಂಸ್ಥೆ ಸ್ಥಾಪನೆ, ಪ್ರಸಿದ್ಧ ಸಾಹಿತಿ ಶ್ರೀ ಮಾಹಾಬಳೇಶ್ವರ ಸೈಲ ಮುಂತಾದವರ ಮಾಹಿತಿಗಳು ಲಭ್ಯವಾಗಿದೆ. ಈ ಸಂಗ್ರಹದಲ್ಲಿ ಗೋವಾದ ಪ್ರಸಿದ್ಧ ಲೇಖಕರಾದ ಡಾ. ತಾನಾಜಿ ಹಳದಣಕರ, ಗೋವಾದ ಡಾ. ಜಯಂತಿ ನಾಯಕ, ಡಾ. ದಾಮೋದರ ಮೌಜಿ, ಡಾ. ಶ್ರೀಧರ, ಶ್ರೀ ಪಾವ್ಲ ಮೊರಾಯಸ ಮಂಗಳೂರು, ಡಾ. ಜಯಂತ ನಾಯಕ. ಸ್ಟೀವನ ಪಿತೋರಿ, ಗ್ಲಾಡಿಸ್ ಕ್ಯಾಡ್ರಸ್ ಪೆರ್ಮಡೆ ಮಂಗಳೂರು, ಕೇರಳದ ಎನ್ ಪುರುಷೋತ್ತಮ ಮಲ್ಯಾ ಕುಮಟಾದ ಶ್ರೀ ಅರುಣ ಉಭಯಕರ ಶಿರ್ಶಿಯ ಶ್ರೀ ವಾಸುದೇವ ಶಾನಭಾಗ, ಕಾರವಾರದ ಡಾ. ವಸಂತ ಬಾಂದೇಕರ, ಶ್ರೀಮತಿ ಲಕ್ಷ್ಮೀ ವಿ. ಬಾಂದೇಕರ, ಶ್ರೀ ನಾಗೇಶ ಅಣ್ವೇಕರ, ಅಮೇರಿಕಾ (ಚಿಕ್ಯಾಗೋದ) ಡಾ. ಅಶ್ವಿನ ಪ್ರಭು ಇತ್ಯಾದಿಗಳ ಲೇಖನಗಳ ಸಂಗ್ರಹ ಗ್ರಂಥ ಇದಾಗಿದೆ. ಆದರೆ ಈ ಸಂಗ್ರಹ ಪುಸ್ತಕ ಕಾರ್ಯವು ಸುಲಭವಾಗಿರಲಿಲ್ಲಾ ಕಾರಣ ಒಂದು ಸಾವಿರ ವರ್ಷದ ಮಾಹಿತಿ ಒಂದೇ ಸ್ಥಳದಲ್ಲಿ ಲಭ್ಯವಿರಲಿಲ್ಲಾ ಕೆಲವೊಂದು ಗೂಗಲ್ ತಂತ್ರಜ್ಞಾನ ದಿಂದ ಪಡೆಯಲಾಯಿತು.

ಈ ಕೃತಿಯ ಯೋಜನೆ 3 ತಿಂಗಳು ಕೋವಿಡ-19 ಕಾರಣದಿಂದ ಮನೆಯಲ್ಲೇ ಉಳಿಯುವ ಪ್ರಸಂಗ ಬಂದಿದ್ದರಿಂದ ಮನೆಯಲ್ಲಿರುವ ಚಿಕ್ಕ ಪುಸ್ತಕ ಸಂಗ್ರಹಾಲಯದಿಂದ ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ ಗೋವಾ

ಅಕಾಡೆಮಿ ಹಾಗೂ ವಿಶ್ವಕೊಂಕಣಿ ಕೇಂದ್ರದ ಪುಸ್ತಕಗಳಿಂದ ಅನುಕೂಲವಾಯಿತು.

ಇಂದಿನ ಯುವ ಪೀಳಗೆಗೆ ಬರೀ ಲಿಖಿತ ರೂಪದಲ್ಲಿ ತಿಳಿಸಿದರೆ ಪರಿಣಾಮಕಾರಿಯಾಗಲಾರದೆಂಬ ದೃಷ್ಟಿಯಿಂದ ಈ ಹಿಂದೆ ವಿವಿಧ ಗ್ರಾಮೀಣ ಭಾಗದಲ್ಲಿ ಸಂಚರಿಸಿ ಪುರಾತನ ಗ್ರಹಬಳಕೆ ವಸ್ತು ಹಾಗೂ ಪರಿಸರಗಳ ದೃಶ್ಯವನ್ನು ಛಾಯಾಚಿತ್ರದೊಂದಿಗೆ ಸಂಗ್ರಹಿಸಲಾಗಿತ್ತು. ಕರಾವಳಿ ಉತ್ಸವದಲ್ಲೂ ಪ್ರದರ್ಶಿಸಲಾಗಿತ್ತು. ಆ ನಶಿಸಿ ಹೋಗುತ್ತಿರುವ ವಸ್ತುಗಳ ಚಿತ್ರಸಹಿತ ಆ ಕೃತಿಯಲ್ಲಿ ಅಳವಡಿಸಿರುವದರಿಂದ ಯುವ ಪೀಳಗೆಗೆ ಅರಿಯಲು ಅಧ್ಯಯನ ಮಾಡಲು ಅನುಕೂಲವಾಗುವದು.

ನನ್ನ ಮುಖ್ಯ ಉದ್ದೇಶವೆಂದರೆ ಕೊಂಕಣಿ ಭಾಷೆಗೆ ರಾಷ್ಟ್ರೀಯ ಸ್ಥಾನಮಾನ ದೊರೆತು 25 ವರ್ಷಗತಿಸಿದರೂ ಗ್ರಾಮೀಣಭಾಗದ ಕೊಂಕಣಿಗರಿಗೆ ಅದರ ಮಹತ್ವ ಮಾತೃಭಾಷೆಯ ಗೌರವ ಕಲೆ-ಸಾಹಿತ್ಯದ ರಕ್ಷಣೆ-ಅಭಿವೃದ್ಧಿಯ ಮಹತ್ವದ ವಿಷಯ ಅವರವರೆಗೆ ತಲೂಪದೇ ಇರುವದರಿಂದ ಅಭಿವೃದ್ಧಿಗೆ ಹಿಂದೇಟಾಗಿದೆ. ಜೊತೆಗೆ ಸಮಗ್ರ ಮಾಹಿತಿ ಒಂದೇ ಪುಸ್ತಕದಲ್ಲಿರದೇ ಪತ್ರಿಕಾ ಮಾಧ್ಯಮದವರಿಗೂ ತಲುಪದೇ ಪ್ರಚಾರಕ್ಕೆ ಹಿನ್ನಡೆಯಾಗಿದೆ. ಆದ್ದರಿಂದಲೇ ಈ ಕೃತಿಯ ಯೋಜನೆ ನಾನು ಕೈಗೆತ್ತಿ-ಕೊಂಡು ಕನ್ನಡದಲ್ಲಿ ರಚಿಸಿ ರಾಜ್ಯದ ಸಚೀವ ಸಂಪುಟಕ್ಕೂ ಎಲ್ಲ ಕೇಂದ್ರ ವಾರ್ತಾ ಇಲಾಖೆ, ಕನ್ನಡ ಸಂಸ್ಕೃತಿ ಇಲಾಖೆ, ಗ್ರಂಥಾಲಯಗಳಿಗೆ ಎಲ್ಲ ವಿಶ್ವವಿದ್ಯಾಲಯಗಳಿಗೂ ನೀಡುವದರಿಂದ ನಮ್ಮ ಕೊಂಕಣಿ ಭಾಷೆ-ಕಲೆ-ಸಾಹಿತ್ಯ ಇತಿಹಾಸ ಅರಿಯಲು ಸುಲಭವಾಗುವದು ಕೊಂಕಣಿ ಭಾಷಾಭಿಮಾನಿಗಳು, ಶುಭಚಿಂತಕರು ದಾನಿಗಳು ತಮ್ಮಿಂದಾದಷ್ಟು ಪ್ರಾಯೋಜಕತ್ವ ನೀಡಿ ಸಹಾಯ ಹಸ್ತನೀಡಿ ಆಶೀರ್ವಾದಿಸಿದ್ದಾರೆ. ಈ ಪುಸ್ತಕ ಹೊರಬರಲು ನನ್ನೊಂದಿಗೆ ಪ್ರಮುಖವಾಗಿ ಈ ಗಂಥವನ್ನು ಸರಿಯಾದ ಸಮಯಕ್ಕೆ ಅತ್ಯುತ್ತಮವಾಗಿ ಮುದ್ರಣ ಮಾಡಿಕೊಟ್ಟ ಕಾರವಾರದ ಶ್ರೀ ಸಾಯಿ ಪ್ರಿಂಟರ್ಸ್‌ದ ಶ್ರೀ ಉದಯ ನಾಯ್ಕ ಹಾಗೂ ಅವರ ಸಿಬ್ಬಂದಿಗಳಿಗೂ ಸದಾಶಿವಗಡದ ಶ್ರೀ ಸಾಯಿ ಸ್ಟುಡಿಯೊದ ಶ್ರೀ ವಿವೇಕ ಕಾಂಬಳೆ ಹಾಗೂ ಅವರ ಸಿಬ್ಬಂದಿಗೂ ಕೊನೆಯುದಾಗಿ ವಿಷಯುದ ವಾಸ್ತವಿಕತೆಯೊಂದಿಗೆ ಮುನ್ನಡಿಯಾಗಿ ಬರೆದ ಶಿಕ್ಷಕ ಶ್ರೀ ಗಣೇಶ ಬಿಷ್ಟಣ್ಣನವರಿಗೂ ನನ್ನ ಅನಂತ ಧನ್ಯವಾದಗಳು.

ಕೇರಳಾ-ಮಹಾರಾಷ್ಟ್ರ-ಗೋವಾರಾಜ್ಯದ ಹಲವಾರು ಕೊಂಕಣಿಗರು ಈ ಕಾರ್ಯಮೆಚ್ಚಿ ಸ್ಪೂರ್ತಿ ನೀಡಿದ್ದಾರೆ ಜೊತೆಗೆ ಇದನ್ನು ದೇವನಾಗರಿ ಹಾಗೂ ಇಂಗ್ಲೀಷದಲ್ಲೂ ಮುದ್ರಿಸಿ ಹೊರತಂದರೆ ರಾಷ್ಟ್ರ ಅಂತರಾಷ್ಟ್ರೀಯ ಮಟ್ಟದಲ್ಲಿ ಉಪಯೋಗವಾಗುವದೆಂದು ಸಲಹೆ ನೀಡಿದ್ದಾರೆ. ಎಲ್ಲರ ಸಹಕಾರ ದೊರೆತರೆ ಅದನ್ನು ಮಾಡಲು ನಾನು ಉತ್ಸುಕನಾಗಿದ್ದೇನೆ.

ಕಳೆದ 52 ವರ್ಷದಿಂದ ಕೊಂಕಣಿ ಭಾಷೆ-ಕಲೆ-ಸಾಹಿತ್ಯದ ಸೇವೆ ಮಾಡುತ್ತ 2017ರಲ್ಲಿ ನನ್ನ ಪರಿಕಲ್ಪನೆಯಿಂದ ಕೊಂಕಣಿ ಮಾತಾ ಭಾವಚಿತ್ರ ಅನಾವರಣಗೊಂಡು ಲೋಕಾರ್ಪಣೆಗೊಂಡಿದೆ. ಅದರಂತೆ ಕೊಂಕಣಿಗರ ಪ್ರೀತಿ ವಿಶ್ವಾಸ ಸಹಕಾರ-ಆಶೀರ್ವಾದ ಜೊತೆಗೆ ದೇವರ ಅನುಗೃಹದಿಂದ ಈ ಕೊಂಕಣಿ ಸಂಗ್ರಹಗ್ರಂಥ ತಮ್ಮ ಕೈ ಸೇರುತ್ತಲಿದೆ. ತಮಗೆಲ್ಲರಿಗೂ ದೇವರು ಆಯುರಾರೋಗ್ಯ ಸಂಪತ್ತು ಸಮಧಾನ ನೀಡಲೆಂದು ನಾನು ಆಶೀಸುತ್ತೇನೆ.

ಇದು ಕೊಂಕಣಿಯ ಸಮಗ್ರ ಮಾಹಿತಿಗಳ ಕನ್ನಡದಲ್ಲಿ ಬರೆದ ವಿಶ್ವದಲ್ಲಿ ಪ್ರಥಮ ಪುಸ್ತಕ, ಇದು ಕೊಂಕಣಿ ವಿಷಯದ ಬಗ್ಗೆ ಅಧ್ಯಯನ ಮಾಡುವವರಿಗೂ ಎಂ.ಎ ಕೊಂಕಣಿ ಕಲೆಯುವ ವಿದ್ಯಾರ್ಥಿಗಳಿಗೂ ಕರ್ನಾಟಕದ ಎಲ್ಲಾ ಗ್ರಂಥಾಲಯಗಳಿಗೂ ವಾರ್ತಾ ಇಲಾಖೆಗೂ ನೀಡುವುದರಿಂದ ಪತ್ರಿಕಾ ಮಾಧ್ಯಮದವರಿಗೆ ಪ್ರಚಾರ ಮಾಡಲು ಅನುಕೂಲವಾಗಿದೆ.



**ಸಂಪಾದಕ-ಲೇಖಕ-ಶೋಧಕರು:**

**ಡಾ. ವಸಂತ ಎಸ್. ಬಾಂದೇಕರ**

◆◆◆◆

# ಅನುಕ್ರಮಣಿಕೆ

# 1. ಕೊಂಕಣಿ ಭಾಷೆ ಹಿನ್ನೆಲೆ

■ ಡಾ॥ ವಸಂತ ಶಾಂತರಾಮ ಬಾಂದೇಕರ, ಕಾರವಾರ



ಮಹಾರಾಷ್ಟ್ರದ ರತ್ನಗಿರಿಯಿಂದ ಗೋವಾ ಕರ್ನಾಟಕದ ಹಾಗೂ ಕೇರಳದ ಕೊಚ್ಚಿಯವರೆಗಿನ ಪಶ್ಚಿಮಘಟ್ಟ ಹಾಗೂ ಅರಬ್ಬೀ ಸಮುದ್ರದ ಮಧ್ಯದ ಪ್ರದೇಶದಲ್ಲಿ ಕೊಂಕಣ ಕರಾವಳ, ಈ ಪ್ರದೇಶದಲ್ಲಿ ವಾಸಿಸುವ ಬಹುತೇಕ ಜನರ ಮಾತೃಭಾಷೆ ಕೊಂಕಣಿ. ಹತ್ತನೇ ಶತಮಾನದ (ಕ್ರಿ.ಶ.983) ಶ್ರವಣ ಬೆಳಗೋಳದ ಗೊಮ್ಮಟ ಪ್ರತಿಮೆಯ ಬುಡದಲ್ಲಿ 'ಶ್ರೀ ಚಾವುಂಡರಾಜೇ ಕರವಿಯಲೆ' ಎಂಬ ಶಾಸನವಾಕ್ಯವು ಕೊಂಕಣಿಯದ್ದೆಂದು ಅದರ ಬುಡದಲ್ಲಿ 1118 ಶ್ರೀ ಗಂಗಾರಾಜೆ ಸುತ್ತಾಲೆ ಕರವಿಯಲೆ ತಜ್ಞರ ಅಭಿಪ್ರಾಯ. ಕ್ರಿ.ಶ. 1290ರಲ್ಲಿ ರಚಿತವಾದ ಸಂತ ಜ್ಞಾನೇಶ್ವರರ 'ಜ್ಞಾನೇಶ್ವರಿ' ಗ್ರಂಥದಲ್ಲಿ ಕೊಂಕಣಿ ಶಬ್ದಗಳು ಹೇರಳವಾಗಿ 1474ರಲ್ಲಿ ಬಾಂದಿವಡೆಯ ನಾಗೇಶ ದೇವಸ್ಥಾನದಲ್ಲಿನ ಶಾಸನದ ಮೇಲೆ ಕೊಂಕಣಿ ಬರಹ ಕಂಡು ಬಂದಿದೆ. 1556ರಲ್ಲಿ ಮೊದಲ ಮುದ್ರಣಯಂತ್ರ ಗೋವಾಕ್ಕೆ ಬಂದಾಗ ಮಿಶನರಿ ಫಾದರ ಥಾಮಸ ಸ್ಟೀಫನ್ ಎಂಬುವವರ 'ಆರ್ಟೆದ ಲಿಂಗ್ವಾ ಕೆನರೀಮ್' ಎಂಬ ರೋಮನ (ಇಂಗ್ಲೀಷ) ಲಿಪಿಯ ಕೊಂಕಣಿ ವ್ಯಾಕರಣ ಪುಸ್ತಕವು ಭಾರತೀಯ ಭಾಷೆಗಳ ಪ್ರಥಮ ಮುದ್ರಿತ ವ್ಯಾಕರಣ ಎಂಬ ಖ್ಯಾತಿಗೆ ಪಾತ್ರವಾಗಿದೆ. ಕ್ರಿ.ಶ. 1616ರಲ್ಲಿ ಗೋವೆಯ ಸೆಂಟಪಾಲ ಚರ್ಚಿನ ಫಾದರ ಥೋಮಸ್ ಸ್ಟಿಫನ್ನರೇ 'ಕ್ರಿಸ್ತ ಪುರಾಣ' ಎಂಬ ಓವಿ ಬದ್ಧ ಕೊಂಕಣಿ ಗ್ರಂಥವನ್ನು ರೋಮಿ ಲಿಪಿಯಲ್ಲಿ ಮುದ್ರಿಸಿದ್ದಾರೆ. 1678ರಲ್ಲಿ ಕೇರಳದ ಮಲಬಾರ ಪ್ರಾಂತದಲ್ಲಿದ್ದ ಡಚ್ ಗವರ್ನರ್ ಹೆನ್ರಿಕ್ ವ್ಯಾನ ರೀಡ್ ಪ್ರಕಟಿಸಿದ 'ಹೊರ್ಟಸ್ ಮಲಬಾರಿಕಸ್' ಆಯುರ್ವೇದ ಗ್ರಂಥದಲ್ಲಿ ದೇವನಾಗರಿ ಲಿಪಿಯಲ್ಲಿ ಕೊಂಕಣಿ ಭಾಷೆಯಲ್ಲಿ ಸಹಸ್ರಾರು ಔಷಧಿ ಸಸ್ಯಗಳ ಹೆಸರುಗಳನ್ನು ನಮೂದಿಸಲಾಗಿದೆ.

ಕ್ರಿ.ಶ. 1510ರಲ್ಲಿ ಪೋರ್ಚುಗೀಜರು ಕೊಂಕಣಕ್ಕೆ ಕಾಲಿಟ್ಟು ಗೋವೆಯನ್ನು ಆಕ್ರಮಿಸಿಕೊಂಡು ರಾಜ್ಯ ವಿಸ್ತರಣೆ ಮತ್ತು ಧರ್ಮ ಪ್ರಸಾರದ ಧಾವಂತದಲ್ಲಿ ಆದುವರೆಗೆ ರಚಿಸಲ್ಪಟ್ಟ ಕೊಂಕಣಿ ಸಾಹಿತ್ಯವನ್ನೆಲ್ಲ ಸುಟ್ಟುಹಾಕಿದರು. ಹೀಗಾಗಿ 16ನೇ ಶತಮಾನದ ವರೆಗಿನ ಎಲ್ಲ ಕೊಂಕಣಿ ಸಾಹಿತ್ಯ ಅಗ್ನಿ ಗರ್ಭದಲ್ಲಿ ಅಡಗಿ ಹೋಯಿತು. 1560ರಲ್ಲಿ ಪೋರ್ಚುಗೀಸರು ತಂದ 'ಇಂಕ್ವಿಸಾವ್' ಎಂಬ ಕಾನೂನಿನ ದಬ್ಬಾಳಿಕೆಗೆ ಬೇಸತ್ತು ಕೊಂಕಣಿಗರು ಗೋವಾದಿಂದ ಹೊರಗಡೆ ಬಂದು ಕರ್ನಾಟಕ ಮತ್ತು ಕೇರಳ ರಾಜ್ಯಗಳಲ್ಲಿ ನೆಲೆಸಿ ಕೊಂಕಣಿ ಭಾಷೆಯ ಅಭಿವೃದ್ಧಿಗೆ ಕಾರಣರಾದರು.

**ಕನ್ನಡ ಲಿಪಿಯಲ್ಲಿ ಕೊಂಕಣಿ :-**

ಪೋರ್ಚುಗೀಸರ ಆಗಮನಕ್ಕೆ ಮೊದಲು ಕ್ರಿ.ಶ. 1000 ದಿಂದ 1260ರವರೆಗೆ ಗೋವೆಯು ಬನವಾಸಿ ಮೂಲದ ಕದಂಬರ ಆಡಳಿತಕ್ಕೊಳಪಟ್ಟಾಗ ಕನ್ನಡವೇ ಅಲ್ಲಿನ ಆಡಳಿತ ಭಾಷೆಯಾಗಿತ್ತು. ಆಗ ಕೊಂಕಣಿಗರು ತಮ್ಮ ಲೆಕ್ಕಪತ್ರಗಳನ್ನು ಕನ್ನಡಲಿಪಿಯಲ್ಲೇ ಬರೆಯುತ್ತಿದ್ದರು. ಭಾಷೆಮಾತ್ರ ಕೊಂಕಣಿಯಾಗಿರುತ್ತಿತ್ತು. ಅಂತೆಯೇ ಅವರು ಸಾಹಿತ್ಯ ರಚನೆ ಕೂಡ ಕನ್ನಡ ಲಿಪಿಯಲ್ಲೇ ಮಾಡಿದ್ದಿರಬೇಕು. ನಂತರ ಶಿಲಾಹಾರ, ಚಾಲುಕ್ಯರು, ರಾಷ್ಟ್ರಕೂಟರು, ಹೋಯ್ಸಳರು,

ವಿಜಯನಗರದ ಅರಸರು ಇವರೆಲ್ಲರ ಆಡಳಿತ ಕಾಲದಲ್ಲಿ ಆಡಳಿತ ಭಾಷೆ ಕನ್ನಡವೇ ಆಗಿದ್ದರಿಂದ ಕೊಂಕಣಿ ಭಾಷೆಗೆ ರಾಜಾಶ್ರಯ ಸಿಗದೇ ಇದ್ದರೂ ಕನ್ನಡ ಲಿಪಿಯಲ್ಲಿ ಕೊಂಕಣಿ ಸಾಹಿತ್ಯ ರಚನೆ ಮಾಡಿದ್ದು ಕಂಡು ಬರುತ್ತದೆ. 17ನೇ ಶತಮಾನದಲ್ಲಿ ಆಗಿನ ಕೊಂಕಣಿ ಭಾಷಿಕ ಸಂಸ್ಕೃತ ಹಾಗೂ ದೈವಜ್ಞ ವ್ಯಾಪಾರಸ್ಥರು ಗೋವಾದಲ್ಲಿ "ಗೊಂಯಕಾನಡಿ" ಲಿಪಿ ಬಳಸುತ್ತಿರುವುದಾಗಿ ಉಲ್ಲೇಖವಿದೆ.

ಕೊಂಕಣಿ ಲಿಪಿ ಇಲ್ಲದ ಭಾಷೆ ಎಂದು ಬಹುತೇಕರು ತಿಳಿದಿದ್ದಾರೆ. ಆದರೆ ಕೊಂಕಣಿ ಭಾಷೆಯನ್ನು ಗೋವೆಯಲ್ಲಿ ರೋಮನ್ ಅಂದರೆ ಇಂಗ್ಲಿಷನಲ್ಲಿ ಮತ್ತು ದೇವನಾಗರಿಯಲ್ಲಿ ಕರ್ನಾಟಕದಲ್ಲಿ ಕನ್ನಡದಲ್ಲಿ ಹಾಗೂ ಕೇರಳದಲ್ಲಿ ಮಳಯಾಳಂ ಮತ್ತು ದೇವನಾಗರೀ ಕೊಂಕಣಿ ಮುಸಲ್ಮಾನರು ಅರಬ್ಬೀ(ಉರ್ದು) ಲಿಪಿಯಲ್ಲಿ ಬರೆಯುತ್ತಾರೆ. ಹೀಗೆ ಕೊಂಕಣಿಗರಿಗೆ ದೇವನಾಗರಿ, ರೋಮನ್ ಕನ್ನಡ, ಮಲಯಾಳಂ ಮತ್ತು ಅರಬ್ಬಿ ಈ ಐದು ಲಿಪಿಗಳ ಸಾಂಗತ್ಯವಿದೆ.

**ಕೊಂಕಣಿ ಭಾಷೆಗೆ ಸಿಕ್ಕ ಮಾನ್ಯತೆ :-**

1. ಕ್ರಿ.ಶ. 1966ರಲ್ಲಿ ಗೋವಾದಲ್ಲಿ ಕೊಂಕಣಿ ಒಂದು ಸ್ವತಂತ್ರ ಭಾಷೆ. ಎಂಬ ಮಾನ್ಯತೆ ಸಿಕ್ಕಿತು. ಅಲ್ಲಿಯವರೆಗೆ ಅದು ಮರಾಠಿಯ ಉಪಭಾಷೆ ಎಂಬ ವಾದವಿತ್ತು.

2. 1976ರಲ್ಲಿ ಡಾ. ಸುನೀತಕುಮಾರ ಚಟರ್ಜಿಯವರು ಅಧ್ಯಕ್ಷರಾಗಿದ್ದಾಗ ಕೇಂದ್ರಸಾಹಿತ್ಯ ಅಕಾಡೆಮಿಯು ಕೊಂಕಣಿ ಭಾಷೆಗೆ "ಸ್ವತಂತ್ರ ಭಾಷೆ" ಎಂಬ ಮಾನ್ಯತೆ ನೀಡಿತು. ಇದರಿಂದಾಗಿ ಕೊಂಕಣಿ ಭಾಷೆಯ ಪುಸ್ತಕಗಳಿಗೆ ಅಕಾಡೆಮಿ ಪ್ರಶಸ್ತಿ ಲಭಿಸುವಂತಾಗಿದೆ. ಸಾಹಿತ್ಯಕ್ಕಾಗಿ ವಾರ್ಷಿಕ 50,000/- ರೂಗಳ ಪುರಸ್ಕಾರ ರೂ 10,000/-ಗಳ ಭಾಷಾಂತರ ಪುರಸ್ಕಾರ ಲಭ್ಯವಿದೆ. ಕೊಂಕಣಿ ಸಾಹಿತ್ಯ ಇತರ ಭಾಷೆಗಳಿಗೆ ಅನುವಾದವಾಗುತ್ತದೆ. ಇತರ ರಾಜ್ಯದ ಸಾಹಿತಿಗಳಿಗೆ ಭೆಟ್ಟಿಯಾಗಲು ಪ್ರಯಾಣ ಭತ್ತೆಗೆ ಅವಕಾಶವಿದೆ. ಸಾಹಿತ್ಯ ಮಂಡಳಿಯಲ್ಲಿ ಇಬ್ಬರು

ಕೊಂಕಣಿ ಸದಸ್ಯರಿಗೆ ಸ್ಥಾನ ಸಿಗುತ್ತದೆ.

3. 1980ರಲ್ಲಿ ಗೋವಾ ವಿಶ್ವವಿದ್ಯಾಲಯ ಸ್ಥಾಪನೆಯಾಗಿ ಕೊಂಕಣಿ ಭಾಷೆಯಲ್ಲಿ ಎಂ.ಎ.ವರೆಗೆ ಕಲಿಯಲು ಮತ್ತು ಪಿ.ಎಚ್.ಡಿ ಪಡೆಯಲು ಅವಕಾಶ ಪ್ರಾಪ್ತವಾಗಿದೆ.

4. 1987ರಲ್ಲಿ ಗೋವಾರಾಜ್ಯದ ರಾಜ್ಯಭಾಷೆಯಾಗಿ ಕೊಂಕಣಿಗೆ ಮನ್ನಣೆ ದೊರೆಯಿತು.

5. 20-8-1992ರಂದು ಕೇಂದ್ರ ಸರ್ಕಾರವು ಭಾರತದ ಸಂವಿಧಾನದ 8ನೇ ಪರಿಚ್ಛೇದದಲ್ಲಿ ಅಧಿಕೃತ ಭಾಷೆಯಾಗಿ ಸೇರ್ಪಡಿಸಿ ರಾಷ್ಟ್ರೀಯ ಮನ್ನಣೆ ನೀಡಿದೆ. ಅಂದಿನಿಂದ ಕೊಂಕಣಿ ರಾಷ್ಟ್ರೀಯ ಭಾಷೆಯ ಗೌರವಕ್ಕೆ ಪಾತ್ರವಾಗಿದೆ. ಇದರಿಂದಾಗಿ

(ಅ) ಸರ್ಕಾರದ ಎಲ್ಲ ಘೋಷಣೆಗಳು ಕೊಂಕಣಿ ಭಾಷೆಯಲ್ಲಿ ಆಗುತ್ತವೆ.

(ಬ) ಸಂವಿಧಾನದ ಭಾಷಾಂತರ ಕೊಂಕಣಿಯಲ್ಲಾಗಿದೆ.

(ಕ) ಸಂಸತ್ತು ಮತ್ತು ವಿಧಾನಸಭೆಯಲ್ಲಿ ಚರ್ಚೆ ನಡೆಸುವಾಗ ಕೊಂಕಣಿಯಲ್ಲಿ ಮಾತನಾಡಬಹುದು.

(ಡ) ಆರ್.ಬಿ.ಆಯ್. ಹೊರತರುವ ಎಲ್ಲ ಕರೆನ್ಸಿ ನೋಟುಗಳಲ್ಲಿ ಅದರ ಮುಖಬೆಲೆ ಕೊಂಕಣಿಯಲ್ಲಿ (ದೇವನಾಗರಿ ಲಿಪಿಯಲ್ಲಿ) ಮುದ್ರಿತವಾಗುತ್ತದೆ.

(ಇ) ದೂರದರ್ಶನ ಮತ್ತು ರೇಡಿಯೋದಲ್ಲಿ ಕೊಂಕಣಿ ಕಾರ್ಯಕ್ರಮ ಪ್ರಸಾರಕ್ಕೆ ಅವಕಾಶ ನೀಡಲಾಗಿದೆ.

(ಫ) ಕೇಂದ್ರ ಸರ್ಕಾರ ನಡೆಸುವ ವಿದೇಶಿ ಉತ್ಸವಗಳಲ್ಲಿ ಕೊಂಕಣಿ ಭಾಷೆಯ ಕಾರ್ಯಕ್ರಮಗಳಿಗೂ ಸಮಾನ ಅವಕಾಶ ಸಿಗುತ್ತದೆ.

(ಗ) ಭಾರತದಲ್ಲಿ ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಗಳಾದ ಯು.ಪಿಎಸ್.ಸಿ., ಐ.ಎ.ಎಸ್., ಐ.ಎಫ್. ಎಸ್. ಮುಂತಾದವುಗಳನ್ನು ಕೊಂಕಣಿಯಲ್ಲಿ ಬರೆಯಲು ಅವಕಾಶ ಲಭಿಸಿದೆ.

(ಹ) ಸಂಸತ್ತಿನ ಕಲಾಪಗಳನ್ನು ಕೊಂಕಣಿ ಭಾಷೆಯಲ್ಲೂ ದಾಖಲಿಸಲಾಗುತ್ತದೆ.

**ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ :-**

ಕರ್ನಾಟಕದಲ್ಲಿರುವ ಅಂದಾಜು 40ಲಕ್ಷ ಕೊಂಕಣಿ ಭಾಷಿಕ ಭಾಷಾಭಿಮಾನಿ ಹಾಗೂ ಸಾಹಿತಿ-ಕಲಾವಿದರ ನಿರಂತರ ಚಳವಳಿಯಿಂದಾಗಿ 1994ರಲ್ಲಿ ಅಂದಿನ ಕರ್ನಾಟಕ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ವೀರಪ್ಪ ಮೊಯಲಿಯವರ ಕಾಲಾವಧಿಯಲ್ಲಿ ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ ಮಂಗಳೂರಿನ ಲಾಲಬಾಗದಲ್ಲಿ ಸ್ಥಾಪನೆಯಾಯಿತು. ಅದರ ಪ್ರಥಮ ಅಧ್ಯಕ್ಷರಾಗಿ ಶ್ರೀ ವಿ.ಜೆ.ಪಿ. ಸಾಲ್ಡಾನಾ ನಂತರ ಶ್ರೀ ಬಿವಿ ಬಾಳಿಗಾ, ಶ್ರೀ ಬಸ್ತಿ ವಾಮನ ಶೆಣ್ವೆ, ಶ್ರೀ ಎರಿಕ್ ಓಂಛಾರಿಯೊ ಶ್ರೀ ಕುಂದಾಪುರ ನಾರಾಯಣ ಖಾರ್ವಿ, ಶ್ರೀ ಕಾಸರಗೊಡ ಚಿನ್ನಾ, ಶ್ರೀ ರಾಯ್ ಕಾಸ್ಟಾಲಿನೋ, ಶ್ರೀ ಆರ್. ಪಿ. ನಾಯ್ಕ ಹಾಗೂ ಸಧ್ಯ ಡಾ. ಜಗದೀಷ ಪೈಯವರು ಅಧ್ಯಕ್ಷರಾಗಿದ್ದಾರೆ.

ಸರ್ಕಾರದಿಂದ ಸಿಗುವ ವಾರ್ಷಿಕ ಅನುದಾನದಿಂದ ಕೊಂಕಣಿ ಅಕಾಡೆಮಿಯು ಕಳೆದ 25 ವರ್ಷದಲ್ಲಿ ಅನೇಕ ಅಭಿವೃದ್ಧಿ ಕೆಲಸಗಳನ್ನು ಮಾಡಿದೆ ಸಾಹಿತ್ಯ, ಸಂಗೀತ, ನಾಟಕ ಲೋಕಕಲೆ(ಜಾನಪದ) ಅಭಿವೃದ್ಧಿ ವಿವಿಧ ವಿಚಾರ ಸಂಕೀರ್ಣ ಸಮ್ಮೇಳನ, ತರಭೇತಿ ಶಿಬಿರ, ಕಾರ್ಯಗಾರ ಹಾಗೂ ವಿವಿಧ ಉತ್ಸವಗಳ ಆಚರಣೆಯಾಗಿವೆ. ಪ್ರತಿವರ್ಷ ಪುಸ್ತಕ ಪುರಸ್ಕಾರ ಜೀವಮಾನ ಸಾಧನೆಗೆ ಗೌರವ ಪುರಸ್ಕಾರ ವಿವಿಧ ಗಣ್ಯರಿಗೆ ಸನ್ಮಾನ ಮಾಡಿ ಕೊಂಕಣಿಯ ಸಾಧಕರಿಗೆ ಗೌರವಿಸಿದೆ. ಇವರೆಗೆ ಅಕಾಡೆಮಿಯಿಂದ ಕೊಂಕಣಿ ವಿವಿಧ ವಿಷಯಗಳ ಕುರಿತು 261 ಪುಸ್ತಕಗಳು ಪ್ರಕಟಗೊಂಡಿವೆ. ಕೊಂಕಣಿ ಭಾಷಿಕ ವಿವಿಧ ಸಮುದಾಯದ ಜೀವನ ಸಂಪ್ರದಾಯದ ಚಿತ್ರಣ ಮಾಡಿ ಕೊಂಕಣಿ ಗೀತ ಸಂಗೀತದ ಸಿಡಿಗಳನ್ನು ಮಾಡಿ ಪ್ರಚಾರ ಮಾಡಿದೆ.

ಇಂದು ಕೊಂಕಣಿ ಅಕಾಡೆಮಿಯ ಪ್ರಯತ್ನದಿಂದಾಗಿ ಶಾಲೆಗಳಲ್ಲಿ ಕೊಂಕಣಿಯ 6ನೇ ತರಗತಿಯಿಂದ 10ನೇ ತರಗತಿಯವರೆಗೆ ಕೊಂಕಣಿಯನ್ನು ತೃತೀಯ ಭಾಷೆಯಾಗಿ 2007 ರಿಂದ ಕಲಿಯಲು ಸರ್ಕಾರವು ಆದೇಶಿಸಿದ್ದು ಬಹಳಷ್ಟು ವಿದ್ಯಾರ್ಥಿಗಳು ಕಲಿಯುತ್ತಿದ್ದಾರೆ. ಹಾಗೂ ಮಂಗಳೂರು ವಿಶ್ವವಿದ್ಯಾಲಯದಲ್ಲಿ ಕೊಂಕಣಿ ಪೀಠದ ವತಿಯಿಂದ 2019ರಲ್ಲಿ ಪ್ರಥಮ ಬ್ಯಾಚ ಕೊಂಕಣಿ ಎಂ.ಎ. ಮಾಡಿ ಹೊರ ಬಂದಿದೆ. ಹಾಗೂ ಕರ್ನಾಟಕ ಸರ್ಕಾರವು ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ 2019 ರಿಂದ ಕೊಂಕಣಿ ಪೀಠ ನೀಡಿದೆ. ಇಂದಿನ ಸರ್ಕಾರವು ಮಂಗಳೂರಲ್ಲಿ ಕೊಂಕಣಿ ಭವನ ಕಟ್ಟಲು ರೂ. 5ಕೋಟಿ ಅನುದಾನ ಬಿಡುಗಡೆ ಮಾಡಿದೆ ಹಾಗೂ ಮಂಗಳೂರಿನ ಉರ್ವಸ್ಟೂರ್ ಬಳಿಯ ಮೂಡಕಟ್ಟಡದ ಸಮೀಪ ಅಂಬೇಡಕ್ಕರ ಭವನದ ಹಿಂಬಾಗದಲ್ಲಿ 30 ಸೆಂಟ್ಸ ಸರಕಾರಿ ಸ್ಥಳಕ್ಕೆ ಸರಕಾರದ ಮಂಜೂರಿ ದೂರಕಿದೆ ಆದಷ್ಟು ಬೇಗನೆ ಕಟ್ಟಡ ನಿರ್ಮಾಣ ಕಾರ್ಯ ಪ್ರಾರಂಭವಾಗಲಿದೆ ಹೀಗಾಗಿ ಕರ್ನಾಟಕದ ಕೊಂಕಣಿಗರ ಕೊಂಕಣಿ ಭವನದ ಕನಸು ನನಸಾಗಿದೆ. ದೆಹಲಿ ಸರ್ಕಾರವು ದಿಲ್ಲಿಯಲ್ಲಿ ಕೊಂಕಣಿ ಅಕಾಡಮಿ ಸ್ಥಾಮಿಸುತ್ತಿರುವುದು ಸ್ವಾಗತಾರ್ಹ.

**ವಿವಿಧ ಕೊಂಕಣಿ ಭಾಷಿಕ ಸಮುದಾಯಗಳು :-**

42 ವಿವಿಧ ಕೊಂಕಣಿ ಭಾಷಿಕ ಸಮುದಾಯಗಳಿದ್ದು ಅದರಲ್ಲಿ ಹಿಂದೂ, ಮುಸ್ಲಿಂ, ಕ್ರೀಶ್ಚಿಯನ್ ಮೂರು ಧರ್ಮದವರಿದ್ದಾರೆ.

1. ಗೌಡ ಸಾರಸ್ವತ ಬ್ರಾಹ್ಮಣ(ಜಿ.ಎಸ್.ಬಿ) 2.ದೈವಜ್ಞ ಬ್ರಾಹ್ಮಣ 3.ರಾಜಪುರ ಸಾರಸ್ವತ ಬ್ರಾಹ್ಮಣ(ಆರ್. ಎಸ್.ಬಿ.)

4.ಕ್ರೈಸ್ತ ಕ್ಯಾಥೋಲಿಕ್ 5. ಚಾರೋಡಿ ಕ್ರೈಸ್ತ 6.ಸಿರಿಯನ್ ಕ್ರೈಸ್ತ

7.ಕುಣಬಿ 8.ಖಾರ್ವಿ 9.ಸಿದ್ಧಿ(ಕ್ರೈಸ್ತ) 10.ಸಿದ್ಧಿ(ಮುಸ್ಲಿಂ) 11.ಸಿದ್ಧಿ(ಹಿಂದೂ) 12.ನವಾಯತ 13.ದಾಲ್ದಿ 14.ಮೆಸ್ತ

15. ಆಚಾರಿ 16.ಭಂಡಾರಿ 17.ಕುಂಬಾರ 18.ವಾಜಂತ್ರಿ

19.ವಾಡಕಾರ ಭಂಡಾರಿ 20.ವೈಶ್ಯವಾಣಿ 21.ಗೋಮಾಂತರ(ಬಾಂದಿ) 22.ಗೋಮಾಂತಕ(ದೇವಳ) 23.ಗೋಮಾಂತಕ ಕಲಾವಂತ 24.ಚಿತ್ರಾಪುರ ಸಾರಸ್ವತ

ಬ್ರಾಹ್ಮಣ 25.ಪಡ್ತಿ 26.ಮಡಿವಾಳ 27.ಕೋಮಾರಪಂಥ

28.ಗೋವ್ಳಿ 29.ಕೆಲ್ಸಿ ನಾಪಿತ 30.ಗಾಬಿತ 31. ಚೆಪ್ಟೆಕಾರ

ಸಾರಸ್ವತ 32. ಚಿತ್ಪಾವನ ಬ್ರಾಹ್ಮಣ 33.ಗುಡಿಗಾರ 34. ಮ್ಹಾರ ಯಾ ಅಂಬೆಡ್ಕರಾಯಟ್ಸ 35.ಕೊಂಕಣ ಮರಾಠಾ 36.ಜಮಾಯತ್ 37.ಗಾವಡೆ

38. ಚಾಂಬಾರ 39.ಗೋಸಾವಿ 40.ಶೇರುಗಾರ 41.ಕುಡಾಲ ದೇಶಸ್ತ (ಆದ್ಯ ಗೌಡ ಬ್ರಾಹ್ಮಣ) 42. ಬಾಲಾವಲಿಕರ ಸರಸ್ವತ ಬ್ರಾಹ್ಮಣ ಗೋವಾ ರಾಜ್ಯ ಹೊರತುಪಡಿಸಿ ಉಳಿದ ರಾಜ್ಯದಲ್ಲಿ ಕೊಂಕಣಿಗರು ಅಲ್ಪಸಂಖ್ಯಾತ ಭಾಷಿಕರಾಗಿ ರಾಜ್ಯಸರ್ಕಾರದಿಂದ ಸಿಗುವ ಎಲ್ಲಾ ಸವಲತ್ತುಗಳನ್ನು ಪಡೆಯಬಹುದಾಗಿದೆ. ಜನಗಣತಿಯ ಪ್ರಕಾರ 1991ರಲ್ಲಿ ಭಾರತದಲ್ಲಿ ಕೊಂಕಣಿ ಭಾಷಿಕರ ಸಂ-ಖ್ಯೆ 18 ಲಕ್ಷವಿತ್ತು. ಈಗ 29ವರ್ಷಗಳಲ್ಲಿ ಅಂದಾಜು 45 ಲಕ್ಷವಾಗಿರಬಹುದು. 1939ರಲ್ಲಿ ಕಾರವಾರದಲ್ಲಿ ಶ್ರೀ ಮಾಧವ ಮಂಜುನಾಥ ಶಾನಬಾಗರವರು ಸ್ಥಾಪಿಸಿದ ಅಖಿಲ ಭಾರತ ಕೊಂಕಣಿ ಪರಿಷತ್ ಇನ್ನು ಕಾರ್ಯನಿರ್ವಹಿಸುತ್ತಿದೆ. ಡಾ. ರವೀಂದ್ರ ಕೆಳಕರರವರಿಗೆ ಕೊಂಕಣಿ ಸಾಹಿತ್ಯಕ್ಕಾಗಿ ಜ್ಞಾನಪೀಠ ಪ್ರಶಸ್ತಿ ಲಭಿಸಿರುವುದು. ಕೊಂಕಣಿ ಭಾಷೆಗೆ ಕಿರಿಟ ಧರಿಸಿದಂತಾಗಿದೆ. ಅಮೇರಿಕಾ, ಕೆನಡಾ, ಆಸ್ಟ್ರೇಲಿಯಾ, ದುಬೈ, ಮಸ್ಕತ, ಪಾಕಿಸ್ತಾನ ಮುಂತಾದ ಪರದೇಶಗಳಲ್ಲೂ ಕೊಂಕಣಿ ಸಂಘಟನೆಗಳು ಕಾರ್ಯ ನಿರ್ವಹಿಸುತ್ತಿವೆ. ದಿನಾಂಕ 21-08-2017ರಂದು ಸದಾಶಿವಗಡ ಕಾರವಾರ, ಉ.ಕ. ಜಿಲ್ಲೆಯಲ್ಲಿ ಕೊಂಕಣಿ ಕಲಾಸೇವಕ ಡಾ. ವಸಂತ ಶಾಂತರಾಮ ಬಾಂದೇಕರ ತಮ್ಮ ಪರಿಕಲ್ಪನೆಯಿಂದ 42 ವಿವಿಧ ಕೊಂಕಣಿ ಭಾಷಿಕ ಸಮುದಾಯದವರ ಪರವಾಗಿ ಕೊಂಕಣ ಮಾತೆಯ ಭಾವಚಿತ್ರ ನಿರ್ಮಿಸಿ ವಿವಿಧ ಕೊಂಕಣಿ ಭಾಷಿಕ ಸ್ವಾಮಿಗಳು, ಗಣ್ಯರು ಅಕಾಡೆಮಿ ಅಧ್ಯಕ್ಷರ ಉಪಸ್ಥಿತಿಯಲ್ಲಿ ಲೋಕಾರ್ಪಣೆಗೊಂಡಿದೆ. ಕರ್ನಾಟಕದಲ್ಲಿ ವಿವಿಧ ಕೊಂಕಣಿ ಭಾಷಿಕ ಸಂಘಟನೆಗಳು ಕಾರ್ಯ ನಿರ್ವಹಿಸುತ್ತಿತ್ತು. ಅದರಲ್ಲಿ ಮುಖ್ಯವಾಗಿ ಗುರುಕಾರ ಶ್ರೀ ಎರಿಕ್ ಓಂಭಾರಿಯೊ ನೇತೃತ್ವದ ಮಾಂಡ, ಸೋಬಾಣ ಹಾಗೂ ಕೊಂಕಣಿ ಸರದಾರ ಶ್ರೀ ಬಸ್ತಿ ವಾಮನ ಶೆಣ್ವೆ ನೇತೃತ್ವದ ವಿಶ್ವ ಕೊಂಕಣಿ ಕೇಂದ್ರ (ಮಂಗಳೂರಲ್ಲಿ) ಪ್ರಮುಖವಾಗಿವೆ.

ಕೊಂಕಣಿ ಭಾಷೆಯು ಜಾನಪದ ಕಲೆಗಳಲ್ಲೂ ಶ್ರೀಮಂತವಾಗಿದೆ. ಮಹಾರಾಷ್ಟ್ರದಲ್ಲಿ ದಶಾವತಾರ ಪ್ರಸಿದ್ಧವಾದರೆ, ಕೇರಳದಲ್ಲಿ ಗೊಡ್ಡೆ ರಾಮಾಯಣ, ಗೋವಾದಲ್ಲಿ ದೇಖಣಿ-ಘುಗಡಿ-ಜಾಗೋರ-ತ್ರಿಯಾತ್ರಾ ಮಾಂಡೊ ಖೇಳ, ಸಮಯನಾಚ,

ಘೊಡೆ ಮೊಡ್ನಿ, ಮೂಸಳಖೇಳ, ಕರ್ನಾಟಕದಲ್ಲಿ ಸಿದ್ದಿ ದಮಾಯಿ ನಾಚ, ದಾಲ್ದಿ-ಡಪ್ಪನಾಚ, ಗೌಳನಾಚ, ಘುಗಡಿ, ಖೇಳ, ತೋಣ್ಯಾನಾಚ, ಸೊಂಗಾಖೇಳ, ಕ್ರಿಶ್ಚನ್ನರ - ಕಾಂತರನಾಚ, ಕಾಂತರಗೀತ ಕುಣುಬಿನಾಚ, ಗುಮಟಪಾಂಗ, ಗುಮಟಾಸುವಾರಿ ಸಂಪ್ರದಾಯ ವಿವಿಧ ಗೀತೆಗಳು. ಹೆಚ್ಚಾಗಿ ಕೊಂಕಣಿ ಭಾಷಿಕ ಸಮುದಾಯದ ಮೂಲ ದೇವರುಗಳು ಗೋವಾದಲ್ಲಿವೆ. ಶ್ರೀ ಶಾಂತಾದುರ್ಗಾ, ಮಂಗೇಶಿ, ರಾಮನಾಥ, ಶ್ರೀ ಕಾಮಾಕ್ಷಿ, ಶ್ರೀ ಮ್ಹಾಳಸಾ, ಶ್ರೀ ಸಾತೇರಿ, ಶ್ರೀ ದಾಮೋದರಿ, ಶ್ರೀ ಲಕ್ಷ್ಮೀ ನಾರಾಯಣ, ಅದರಂತೆ ಕ್ರಿಶ್ಚನ್ನರ ಚರ್ಚುಗಳಗೂ ಪ್ರಸಿದ್ಧವಾಗಿದೆ.

16ನೇ ಶತಮಾನದಿಂದ ಕೊಂಕಣಿ ಭಾಷಿಕರ ಮೇಲೆ ಪೋರ್ಚುಗೀಜರಿಂದಲೂ ಮುಸ್ಲಿಂ ರಾಜರ ಆಳ್ವಿಕೆಯಲ್ಲೂ ಕ್ರೂರಹಿಂಸೆ ಪಡೆದು ಊರಿಂದ ಊರಿಗೆ, ರಾಜ್ಯದಿಂದ ರಾಜ್ಯಕ್ಕೆ ಅಲೆಮಾರಿಗಳಾಗಿ ವಲಸೆಹೋಗಿ ತಮ್ಮ ಆಸ್ತಿಯನ್ನು ಕಳೆದುಕೊಂಡರೂ ಆತ್ಮಸ್ಥೈರ್ಯ ಬಿಡದೇ ಧರ್ಮವನ್ನು ಬಿಡದೇ ಹಠವಾದಿಗಳಾಗಿ ತಾಳ್ಮೆಯಿಂದ ಬದುಕಿ ಇಂದು ಎಲ್ಲಾ

ಕ್ಷೇತ್ರದಲ್ಲೂ ಮುಂಚೂಣಿಯಲ್ಲಿದ್ದಾರೆ. ಇದಕ್ಕೆ ಒಂದೇ ಕಾರಣವೆಂದರೆ ನಮ್ಮ ಹಿರಿಯರು ಪಾಲಿಸುತ್ತ ಬಂದಂಥ ಸಂಸ್ಕೃತಿ, ಸಂಸ್ಕಾರಗಳೆಂದು ಹೇಳಬಹುದು. ಅದನ್ನು ಈಗ ಮುಂದಿನ ಪಿಳಿಗೆ ರಕ್ಷಣೆ ಮಾಡಿಕೊಂಡು ಉಳಿಸಿ ಬೆಳೆಸಿ ಮುಂದಿನ ಜನಾಂಗಕ್ಕೆ ಸಾಗಿಸುವ ವ್ಯವಸ್ಥೆ ಮಾಡಬೇಕಿದೆ.

**ಕೊಂಕಣಿಗರ ಸೇವೆ ವಿವಿಧ ಕ್ಷೇತ್ರದಲ್ಲಿ :-**

ಕೊಂಕಣಿಗರು ವಿಶ್ವದ ಎಲ್ಲಾ ಭಾಗಗಳಲ್ಲಿ ನೆಲೆಸಿದ್ದಾರೆ. ಅಂದರೆ ಜನ್ಮಭೂಮಿ ತೊರೆದು ಕರ್ಮಭೂಮಿಯನ್ನಾಗಿ ಮಾಡಿಕೊಂಡಿದ್ದಾರೆ. ರಾಜ್ಯ-ರಾಷ್ಟ್ರ-ಅಂತರಾಷ್ಟ್ರೀಯ ಮಟ್ಟದಲ್ಲಿ ಮಿಂಚಿದ್ದಾರೆ. ಬ್ಯಾಂಕಿಂಗ, ಶಿಕ್ಷಣ, ಧಾರ್ಮಿಕ, ಕ್ರೀಡೆ, ಚಲನಚಿತ್ರ, ನೃತ್ಯ, ಸಂಗೀತ, ಕಲೆ, ಸಾಹಿತ್ಯ, ರಾಜಕೀಯ ರಕ್ಷಣೆ ಎಲ್ಲದರಲ್ಲೂ ಕಾಣಸಿಗುತ್ತಾರೆ. ಉದಾ: ಲತಾಮಂಗೇಶಕರ, ಆಶಾಭೋಸಲೆ, ಅನುರಾಧ ಪೋಡವಾಳ ರೇವೋ ಫರ್ನಾಂಡಿಸ್, ಗಿರೀಶ ಕಾರ್ನಾಡ್, ಶಂಕರನಾಗ್, ಅನಂತನಾಗ್, ದೀಪಿಕಾ ಪಡು-ಕೋಣೆ, ಪ್ರಕಾಶ ಪಡುಕೋಣೆ, ತೆಂಡೂಲ್ಕರ್, ಎಡ್ಮಿರಲ್ ನಾಡಕರ್ಣಿ, ಮನೋಹರ ಪರಿಕರ, ಮಾರ್ಗರೇಟ ಆಳ್ವಾ, ಆರ್.ವಿ. ದೇಶಪಾಂಡೆ, ಜೋರ್ಜ್ ಫರ್ನಾಂಡಿಸ್, ಮಧು ದಂಡವತೆ, ಪರಮವೀರ ಚಕ್ರ ಪ್ರಶಸ್ತಿ ವಿಜೇತ ರಾಮಾ ರಾಘೋಬಾ ರಾಣೆ, ಜ್ಞಾನಪೀಠ ಪ್ರಶಸ್ತಿ ವಿಜೇತ ರವೀಂದ್ರ ಕೆಳಕರ, ಸರಸ್ವತಿ ಪ್ರಶಸ್ತಿ ವಿಜೇತ ಮಹಾಬಳೇಶ್ವರ ಸೈಲ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಕೆನರಾ ಬ್ಯಾಂಕ್, ಸಿಂಡಿಕೇಟ್ ಕಾರ್ಪೋರೇಶನ್, ಎನ್.ಕೆ.ಜಿ.ಎಸ್.ಬಿ. ಹೀಗೆ ಸಾವಿರಾರು ಕೊಂಕಣಿಗರನ್ನು ಉಲ್ಲೇಖಿಸಬಹುದು.

♦♦♦♦



# 2. ಅಖಿಲ ಭಾರತೀಯ ಕೊಂಕಣಿ ಪರಿಷತ್ ಸ್ಥಾಪನೆ 1939

■ ಡಾ. ತಾನಾಜಿ ಹಳದಣಕರ, ಗೋವಾ

ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯ ಕಾರವಾರದಲ್ಲಿ ವಕೀಲ ವೃತ್ತಿಯನ್ನು ಮಾಡುತ್ತಿದ್ದ ಮಾಧವ ಮಂಜುನಾಥ ಶಾನಭಾಗರವರು ಮಾತೃಭಾಷೆ ಕೊಂಕಣಿಯ ಕಳಕಳಿಯಿಂದ ಭಾಷೆ-ಸಾಹಿತ್ಯ-ಕಲೆ ಅಭಿವೃದ್ಧಿಯಾಗಬೇಕೆಂದರೆ ದೇಶದಲ್ಲಿ ಎಲ್ಲ ಕೊಂಕಣಿ ಭಾಷಿಕ ಸಮುದಾಯದವರನ್ನು ಒಂದೂಗೂಡಿಸಬೇಕು ಎಂಬ ದೃಷ್ಟಿಯಿಂದ ಕಠಿಣ ಹೆಜ್ಜೆಯೊಂದಿಗೆ ಅವರು ಮುಂದೆ ಸಾಗಿದರು. 1930ರಲ್ಲಿ ಸರಿಯಾದ ವಾಹನ ಸೌಕರ್ಯಗಳು, ಫೋನ ಸಂಪರ್ಕಗಳು ಇರಲಿಲ್ಲಾ ಅಂಥದರಲ್ಲಿ ಕರ್ನಾಟಕ-ಗೋವಾ ಮಾಹಾರಾಷ್ಟ್ರ-ಕೇರಳಾ-ಗುಜರಾತ ಮುಂತಾದ ರಾಜ್ಯಗಳಿಗೆ ಭೇಟಿ ನೀಡಿ ವಿವಿಧ ಕೊಂಕಣಿ ಭಾಷಿಕ ಸಮುದಾಯದವರನ್ನು ಸಂಪರ್ಕಿಸಿದರು. ಸತತ 9 ವರ್ಷದ ಪ್ರಯತ್ನದ ನಂತರ ದಿನಾಂಕ 8, 9 ಜುಲೈ 1939ರಲ್ಲಿ ಕಾರವಾರದಲ್ಲಿ ಪ್ರಥಮ ಅಖಿಲ ಭಾರತ ಕೊಂಕಣಿ ಪರಿಷತ್ ಯಶಸ್ವಿಯಾಗಿ ಜರುಗಿತು. ಕೊಂಕಣಿ ಭಾಷಿಕ ಎಲ್ಲ ಧರ್ಮ-ಜಾತಿ-ಪ್ರದೇಶದ ಜನ ಸೇರಿ ಕೊಂಕಣಿ ಭಾಷೆಯ ಸಾಂಸ್ಕೃತಿಕ-ಸಾಮಾಜಿಕ ಸಂಘಟನೆ ಪ್ರಾರಂಭ ಇಲ್ಲಿಂದ ಆಯಿತು. ಜಾನಪದ ಕಲೆ ಸಂಸ್ಕೃತಿ ಮಾತ್ರ ಉಳಿದರೆ ಸಾಹಿತ್ಯದ ಬೆಳವಣಿಗೆಯಾಗಲಿಲ್ಲಾ. ವಿವಿಧ ಪ್ರದೇಶ ಭಾಷೆಗಳ ತೊಂದರೆಯಿಂದ ಲಿಖಿತ ರೂಪದಲ್ಲಿ ಸಾಕಷ್ಟು ಪ್ರಗತಿ ಕಾಣಲಿಲ್ಲಾ. ಕಾಲಾಂತರದಿಂದ ಈ ಭಾಷೆಗೆ ಲಿಪಿಯಿಲ್ಲ. ಸಾಹಿತ್ಯವಿಲ್ಲ ಇದು ಮರಾಠಿಯ ಉಪಭಾಷೆಯಿಂದ ಹಿಗೆಲ್ಲ ಭಾವನೆಗಳು ಸೃಷ್ಟಿಯಾದವು. ಹಾಗೂ ಸಾಮಾಜಿಕ ಭಾಷೆಯಾಗದೇ ಧರ್ಮ, ಜಾತಿ, ಪ್ರದೇಶ ಹಾಗೂ ಪರಭಾಷೆ ಮಿಶ್ರಿತ ಭಾಷೆಗಳಾದವು. 20ನೇ ಶತಮಾನದವರೆಗೂ ಇದೇ ಪರಿಸ್ಥಿತಿ ಇತ್ತು.

ಮೇಲ್ಕಾಣಿಸಿದ ಎಲ್ಲಾ ಗಂಭಿರ ಸಮಸ್ಯೆಗಳನ್ನು ಅರಿತ ಎರಡು ಮಹಾನ್ ಕೊಂಕಣಿ ವ್ಯಕ್ತಿಗಳು ಅದರ ಅಭಿವೃದ್ಧಿಗಾಗಿ ಟೊಂಕ ಕಟ್ಟಿ ನಿಂತರು. ಅವರಲ್ಲಿ ಒಬ್ಬರಾದ ಮುಂಬೈ ಶ್ರೀ ಶೆಣ್ವೆ ಗೊಯಿಬಾಬ ಹಾಗೂ ಶ್ರೀ ಮಾಧವ ಮಂಜುನಾಥ ಶಾನಬಾಗ ಕಾರವಾರ ಇವರಿಬ್ಬರ ಪ್ರಯತ್ನದಿಂದಲೇ 1939ರಲ್ಲಿ ಕಾರವಾರದಲ್ಲಿ ಪ್ರಥಮ ಅಖಿಲ ಭಾರತ ಕೊಂಕಣಿ ಪರಿಷತ್ ಸಮ್ಮೆಳನ ಜರುಗಿತು. ಹಾಗೂ ಕಳೆದ 81 ವರ್ಷದಿಂದ ಕೊಂಕಣಿಯ ಸರ್ವಾಂಗೀಣ ವಿಕಾಸವಾಗುತ್ತಲಿದೆ. ಸಾಹಿತ್ಯ ಕಲೆ ಹಾಗೂ ಸಾಮಾಜಿಕ ಪರಿಚಯವಾಗುತ್ತಲಿದೆ. ಮಾಧವ ಶಾನಭಾಗರು ಕೊಂಕಣ ರಾಜ್ಯ (ಸಾಗರಪ್ರಾಂತ) ನಿರ್ಮಾಣದ ಕನಸು ಕಂಡಿದ್ದರು. ಆದರೆ ಇವರ ಪ್ರಯತ್ನದಿಂದ ಗೋವಾ ಕೊಂಕಣಿ ಭಾಷಿಕ ರಾಜ್ಯವಾಗಲು ಸಾಧ್ಯವಾಯಿತು ಎಂದು ಹೇಳಬಹುದು. 1928ರಿಂದ ಮುಂಬೈದಲ್ಲಿ ಶೇಣ್ವಿ ಗೋಯಿಬಾಬ ಹಾಗೂ ಶ್ರೀ ಕಾಶಿನಾಥ ಬಾಬ ನಾಯ್ಕ ಇವರು ಗೋಮಾಂತಕ ಮುದ್ರಣಾಲಯ ಸ್ಥಾಪಿಸಿ ಕೊಂಕಣಿ ಭಾಷೆ ಸಾಹಿತ್ಯದ ಏಳಿಗೆಗಾಗಿ 10-12 ವರ್ಷ ಕಾರ್ಯ ನಿರ್ವಹಿಸಿದರು ಇವರೆಲ್ಲರ ಕೊಂಕಣಿ ಸೇವೆಯಿಂದ 24ನೇ ಅಧಿವೇಶನದಲ್ಲಿ ಒಂದು ನಿರ್ಣಯವಾಯಿತು ಏನೆಂದರೆ ಕೊಂಕಣಿ ಒಂದು ಭಾಷೆ, ಒಂದು ಲಿಪಿ, ಒಂದು ಸಮಾಜ, ಈ ಉದ್ದೇಶವು ಮುಂದೆ ಸಾಗಿ ಮಾಧವ ಶಾನಬಾಗರ ಕಷ್ಟದ ಫಲ ದೊರೆಯಿತು ಎಂದು ಹೇಳಬಹುದು. ಈ ಎಲ್ಲ ಪ್ರಯತ್ನಗಳಿಂದ ರಾಷ್ಟ್ರೀಯ ಸಾಹಿತ್ಯ ಅಕಾಡೆಮಿ ಮಾನ್ಯತೆ ಸಂವಿಧಾನದ 8ನೇ ಪರಿಶ್ಚೇಧದಲ್ಲಿ ಕೊಂಕಣಿಗೆ ಸ್ಥಾನಮಾನ ಗೋವಾ ಘಟಕ ರಾಜ್ಯ, ಕೊಂಕಣಿ ರಾಜ್ಯಭಾಷೆ ಗೋವಾ-ಕರ್ನಾಟಕ-ಕೇರಳಾ- ಕೊಂಕಣಿ ಅಕಾಡೆಮಿಯ ಸ್ಥಾಪನೆ ಕೊಂಕಣಿ ವಿಶ್ವಕೋಶದ ರಚನೆ ಇವೆಲ್ಲ ಕೊಂಕಣಿ ಚಳುವಳಿಯಿಂದ ದೊರೆತ ವಿಜಯ ಪುರಸ್ಕಾರಗಳು ಎಂದು ಹೇಳಬಹುದು. ಈ ಕೊಂಕಣಿ ಭಾಷೆಗಾಗಿ ಹಲವಾರು ರಾಜ್ಯದಲ್ಲಿ ಚಳುವಳಿಗಳಾದವು.

◆◆◆◆



ದಿ. ಮಾಧವ ಮಂಜುನಾಥ ಶಾನಭಾಗ



# ೩. ಗೋವಾದಲ್ಲಿ ಕೊಂಕಣಿ ರಾಜ್ಯಭಾಷೆಗಾಗಿ ಚಳುವಳಿ

■ ದಾಮೋದರ ಮೌಜೊ, ಗೋವಾ

1985ರಲ್ಲಿ ಗೋವಾ ಮುಖ್ಯಮಂತ್ರಿ ಶ್ರೀ ಪ್ರತಾಪಸಿಂಗ ರಾಣೆ ಅವರ ಆಡಳಿತದಲ್ಲಿ ಗೋವಾ ರಾಜ್ಯಭಾಷೆ ಕೊಂಕಣಿ ಆಗಬೇಕೆಂದು ವಿರೋಧ ಪಕ್ಷದ ನಾಯಕರಾದ ಶ್ರೀ ಲುಜಿನೋ ಫಾಲೊರಿನ ಇವರು ಪಟ್ಟು ಹಿಡಿದಾಗ ಮುಖ್ಯಮಂತ್ರಿಯವರು ಅದನ್ನು ಹೀನಾಯವಾಗಿ ತಿರಸ್ಕರಿಸಿದ್ದ'ರಿಂದ ಕೊಂಕಣಿ ಸಾಹಿತಿ-ಕವಿ-ಕಲಾವಿದರು-ಲೇಖಕರು-ಪತ್ರಕರ್ತರು ಒಂದುಗೂಡಿ ಒಂದು ಸಭೆಯ ಮೂಲಕ ವಿಧಾನಸಭೆಯ ಅಧಿವೇಶನದಲ್ಲಿ ಸುಮಾರು 1500 ಕೊಂಕಣಿಗರು ಸೇರಿ ಚಳುವಳ ಪ್ರಾರಂಭಿಸಿದಾಗ ವಿಧಾನಸಭೆಯಲ್ಲಿ ಹಿರಿಯರಾದ ಶ್ರೀ ಉದಯ ಭೇಂಬ್ರೆ, ಶ್ರೀ ಲುಜಿನೋ, ಶ್ರೀ ಮೊಂತಿದೆ ಕುಂಥ ಈ ಮೂವರು ಹೊರಬಂದು ಚಳುವಳಿಯಲ್ಲಿ ಭಾಗವಹಿಸಿದರು. ಚಳುವಳಿಯಲ್ಲಿ ಕೊಂಕಣಿ ಗೀತ ನೃತ್ಯಗಳು ನಡೆದವು ಇಂದಿನ ಪ್ರಸಿದ್ಧ ರೇಮೊ ಫರ್ನಾಂಡಿಸ್ ಸಂಗೀತ ತಂಡದ ನೇತೃತ್ವ ವಹಿಸಿದರು. ಪೋಲಿಸರು ಎಲ್ಲರನ್ನು ಬಂಧಿಸಿ ನಂತರ ಬಿಡುಗಡೆ ಮಾಡಿದರು.

ನಂತರ ಎಲ್ಲಾ ವಿಚಾರವಂತರು ಸೇರಿ ಒಂದು ಸಂಘಟನೆ ಮಾಡಿ ಅದಕ್ಕೆ ಕೊಂಕಣಿ ಪ್ರಜೆಚೊ ಆವಾಜ ಎಂದು ಹೆಸರಿಟ್ಟರು ಪ್ರತಿಗ್ರಾಮದಲ್ಲಿ ತಿಳುವಳಿಕೆ ಜಾಗೃತ ಮಾಡುವುದು. ಅದರ ನೇತೃತ್ವ ಹೆಸರಾಂತ ಲೇಖಕ ಶ್ರೀ ಪುಂಡಲಿಕ ನಾರಾಯಣ ನಾಯ್ಕ ಖಜಾಂಚಿಯಾಗಿ ಮಾನ್ಯಶ್ರೀ ಡಾ. ಫ್ರಾನ್ಸಿಸ್ ರೆಬೆಲೊ ಹಾಗೂ ಶ್ರೀ ದಾಮೋದರ ಮಾಜೊ ಲೇಖಕ ಹಾಗೂ ಬಿಜೆಪಿಯ ಶ್ರೀ ದತ್ತಾ ನಾಯಕ ಇವರು ತಮ್ಮ ಪಣಜಿ ಕಾರ್ಯಲಯ ಈ ಸಂಘಟನೆಗೆ ನೀಡಿದರು. ಹೆರಾಲ್ಡ ಸಂಪಾದಕ ಶ್ರೀ ರಾಜನ ನಾರಾಯಣ ಇವರು ಈ ಆಂದೋಲನದ ಪ್ರಚಾರಕ್ಕಾಗಿ ಆಯ್ಕೆಯಾದರು. ಗೋಮಾಂತಕ ಎಂಬ ಮರಾಠಿ ದೈನಿಕ ಸಂಪಾದಕ ಶ್ರೀ ನಾರಾಯಣ ಅರವತಿ ಸಹಕಾರ ನೀಡಿದರು. ಆದರೆ ಅಪಿವಾದ ಹಾಗೂ ಧಾರ್ಮಿಕ ತಂತ್ರಗಾರಿಕೆಯಿಂದ ಸುಳ್ಳುಸುದ್ಧಿ ಹಬ್ಬಿಸಿ ಈ ಸಂಘಟನೆ ಒಡೆಯುವ ಪ್ರಯತ್ನವೂ ನಡೆದವು.

14 ನವ್ಹೆಂಬರ 1985ರಂದು ಪಣಜಿ ಆಝಾದ ಮೈದಾನದಲ್ಲಿ ಜನಸಂಪರ್ಕ ಸಭೆ ಮಾಡುವುದಾಗಿ ತಿರ್ಮಾನವಾಯಿತು. ಪಣಜಿ ಕೇಣಿ ಹೊಟೇಲ ಮಾಲಿಕರಾದ ಭಾಯಿ ಕೇಣಿ ಇವರು ತಮ್ಮ ಕಾನಫರನ್ಸೆ ಹಾಲ್‌ನ್ನು ಬಿಟ್ಟು-ಕೊಟ್ಟರು ಪೂರ್ವಭಾವಿ ಸಭೆಗಳಿಗೆ ಡಾ. ಎಂ. ಡಿಸೋಜಾ, ಶ್ರೀ ಮಧಾನಿ ಸಾಲ್ಡಾನ, ಶ್ರೀ ಮೊಮಿನ ಗುಡ್ಡಿನೊ, ಶ್ರೀ ಕ್ರಷ್ಟೋಫರ ಫಾಸ್ಟಿಕಾ, ಶ್ರೀ ವಿತ್ತುರಿಯಾ ಫರ್ನಾಂಡಿಸ್, ಶ್ರೀ ರಾಜು ಮಂಗೇಶಕರ, ಶ್ರೀ ಮೊತಿ ದೇಸಾಯಿ ಇಂಥ ರಾಜಕೀಯ ಪುಢಾರಿಗಳು ಪ್ರತಿಸಭೆಗೆ ಬರಲಾರಂಭಿಸಿದರು.

ಇದರ ಪರಿಣಾಮವಾಗಿ ಅಂತಿಮ ರ್‍ಯಾಲಿಯಲ್ಲಿ ಲಕ್ಷಾಂತರ ಜನರು ಪೆಡ್ನೆಯಿಂದ ಕಾಣಕೂಣದವರೆಗೆ ಎಲ್ಲ ಕಡೆಯಿಂದ ತಮ್ಮ ಖಾಸಗಿ ವಾಹನದೊಂದಿಗೆ ಬಂದರು. ಶ್ರೀ ರೆಮೋ ಫರ್ನಾಂಡಿಸ್, ಶ್ರೀ ಉಲ್ಲಾಸ ಭುಯಾಂವ ಮುಂತಾದವರು ಪ್ರಸಂಗಾನುಸಾರ ಹಾಡು ಕಟ್ಟಿಹಾಡಿ ಆ ಸಭೆಗೆ ರಂಗ ತುಂಬಿದರು. ಒಂದು ಕಪ್ಪು ಚುಕ್ಕೆಯ ಬೊಟ್ಟು ಇಡುವಂತೆ ಕೆಲವರು ಅಂಗಡಿ ಕೆಲವಾಹನಗಳನ್ನು ಕಲ್ಲುತೂರಿ ನಾಶ ಪಡಿಸಿದರು. ಹಾಗೂ ಆಜಾದ ಪತ್ರಿಕೆಯವರು ಬಣ್ಣ ಹಚ್ಚಿ ಬರೆದರು. ಆದರೆ ಸಭೆಯು ಶಾಂತ-ಶಿಸ್ತಿನಿಂದ ಕೂಡಿತ್ತು.

ಹಲವಾರು ಲೇಖಕರು ಚಿಂತಕರು ಭಾಷಣ ಮಾಡಿದರು. ಈ ಜನಸಾಗರದ ರ್‍ಯಾಲಿ ಗೋವಾ ಇತಿಹಾಸದಲ್ಲೇ ದಾಖಲಾಯಿತು. ಮರುದಿನ ಎಲ್ಲ ಪತ್ರಿಕೆಯಿಂದಲೂ ಪ್ರಶಂಸೆ ದೊರೆಯಿತು. ಆದರೆ ದಪ್ಪ ಚರ್ಮದ ರಾಜಕಾರಣ-ಕ್ಕೆ ಈ ಲಕ್ಷಾಂತರ ಜನರ ಕೂಗು ಮುಟ್ಟಲಿಲ್ಲಾ, ಹೀಗಾಗಿ ಸಂಘಟಕರು ಬೇರೆ ಯೋಜನೆ ಮಾಡಿದರು. ಕೊಂಕಣಿ ಪ್ರಾಂತ ಆವಾಜದ ಪ್ರತಿನಿಧಿಮಂಡಳ ದಿಲ್ಲಿಗೆ ಹೋದರು. ಶ್ರೀ ಉದಯ ಭೆಂದ್ರೆ, ಶ್ರೀ ಪುಂಡಲಿಕ ನಾಯಕ, ಶ್ರೀ ತೊಮಝಿನೊ ಕಾರ್ಡೋಜ ಹಾಗೂ ಶ್ರೀದಾಮೋದರ ಮಾಜೋ ಹೀಗೆ ಈ ನಾಲ್ವರು 45 ದಿನ ದಿಲ್ಲಿಯಲ್ಲಿ ಉಳಿದು ರಾಜಕೀಯ ಗಣ್ಯರಾದ ಶ್ರೀ ರಘುನಂದನಲಾಲ ಭಾಟಿಯಾ, ಶ್ರೀ ಮಾಖಾನಲಾಲ ಫೊತೆದಾರ, ಶ್ರೀ ಪಿ. ನರಸಿಂಹರಾವ, ಶ್ರೀ ಶಂಕರರಾವ ಚೌಹಾಣ, ಶ್ರೀ ಮಧುದಂಡವತೆ ಹೀಗೆ ಅನೇಕ ಕೇಂದ್ರಿಯ ಮಂತ್ರಿಗಳನ್ನು ಭೇಟಿಯಾಗಿ ಕೊಂಕಣಿ ರಾಜಭಾಷೆ ಘಟಕರಾಜ್ಯ ಹಾಗೂ ಸಂವಿಧಾನದ 8ನೇ ಪರಿಶ್ಚೇದದಲ್ಲಿ ಕೊಂಕಣಿಗರಿಗೆ ಸ್ಥಾನಮಾನ ಹೀಗೆ 3 ಬೇಡಿಕೆಗಳನ್ನು ಇಟ್ಟರು. ಆದರೆ ಅದಕ್ಕೆ ಯಾರೂ ಲಕ್ಷ ಕೊಡಲಿಲ್ಲಾ. ಸಾಹಿತ್ಯಕಾರ ಶ್ರೀ ದತ್ತಾತ್ರೀ ನಾಯಕ ಹಾಗೂ ಶ್ರೀ ದಿಲೀಪ ಬೊರಕರ ಉಪವಾಸ ಸತ್ಯಾಗ್ರಹಕ್ಕೆ ಕುಳಿತರು ಹಾಗೂ ಒಂದುವಾರದ ನಂತರ ಉಪವಾಸ ಹಿಂದೆ ತೆಗೆದುಕೊಳ್ಳಲು ತಿಳಿಸಿದ್ದರಿಂದ ಮರಳಿ ಬಂದರು. ಶ್ರೀ ದತ್ತಾತ್ರೀ ನಾಯ್ಕ ಇವರೊಬ್ಬ ಧಾಡಸಿ ಕಾರ್ಯಕರ್ತನಾಗಿ ವಿಧಾನಸಭೆಯ ಅಧಿವೇಶನ ನಡೆದಾಗ ಪೋಲಿಸರು ಸಂಚಾರ ಬಂದು ಮಾಡಿದ್ದರಿಂದ ಮಾಂಡವಿ ನದಿಯಲ್ಲಿ ಇಜಿ ವಿಧಾನಸಭೆಗೆ ತಲುಪಿದನು. ಅವನನ್ನು

ಪೋಲಿಸರು ತಡೆ ಹಿಡಿದರು. ಇದರಿಂದ ಈ ಪ್ರಕರಣ ಇನ್ನು ಹೆಚ್ಚಿನ ಪ್ರಸಿದ್ಧಿ ಪಡೆಯಿತು. ಇದರಂತೆ ಹಲವಾರುಬಾರಿ

ರ್‍ಯಾಲಿಗಳು ಧರಣಿಗಳು ನಡೆದರೂ ಸರ್ಕಾರ ಬಗ್ಗಲಿಲ್ಲಾ. ಕಲ್ಲು ತೂರಾಟ, ಲಾಠಿ ಚಾರ್ಜಗಳಾದವು. ಕೊನೆಗೆ 19 ಡಿಸೆಂಬರ 1986 ಗೋವಾದ ಇತಿಹಾಸದಲ್ಲಿ ಒಂದು ಕರಾಳ ದಿನವೆನ್ನಬಹುದು. ಕಾರಣ ಇಡಿ ಗೋವಾ ಬಂದ ಮಾಡಲಾಯಿತು. ಲಾಠಿ ಗೋಳಿಬಾರ್‌ದಲ್ಲಿ ಎರಡು ಜನ ಹುತಾತ್ಮರಾದರು. ಮುಂದೆ 5-6 ದಿನ ಗೋವಾದಲ್ಲಿ ಎಲ್ಲವು ಬಂದಾಗಿತ್ತು. ಈ ವಿಷಯವಾಗಿ ಕೇಂದ್ರ ಸರ್ಕಾರ ಮಧ್ಯಪ್ರವೇಶಿಸಲೇಬೇಕಾಯಿತು. ಶ್ರೀ ಚಿಂತಾಮಣಿ ಪಣಿಗ್ರಹ, ಶ್ರೀ ಗುಲಾಮ ನಬಿ ಆಝಾದ ಮುಂತಾದವರು ಬಂದು ಹೋದರು.

ಫೆಬ್ರವರಿಯಲ್ಲಿ ವಿಧಾನಸಭಾ ಅಧಿವೇಶನ ಪ್ರಾರಂಭವಾದಾಗ

ಕೇಂದ್ರದಿಂದ ಶ್ರೀ ರಘುನಂದನ ಲಾಲ್ ಭಾಟಿಯಾ ಬಂದು ಹೋದರು. ಆದರೆ ಗೋವಾದ ಮರಾಠಿವಾದಿಗಳ ಹಠ ಹಿಡಿದರು. ಕೊನೆಗೆ ಶ್ರೀ ಆರ್. ಎಲ್. ಭಾಟಿಯಾ, ಡಾ. ಎಡ್ವರ್ಡ ಡಿಸೋಜಾ ಹಾಗೂ ಕಾಂಗ್ರೇಸ್ ಘುಡಾರಿಗಳ ಸೇರಿ ಒಂದು ಮಸೂದೆ ಪಾಸ ಮಾಡಿ ಕೊಂಕಣಿ ಭಾಷೆಯು ಗೋವಾದ ರಾಜ್ಯ ಭಾಷೆ ಆದರೆ ಸಂದರ್ಭ ಬಂದರೆ ಮರಾಠಿ ಭಾಷೆಯು ಉಪಯೋಗ ಮಾಡಬಹುದು ಎಂದು 07-02-1987ರಂದು ಮಂಜೂರು ಮಾಡಿದರು. ಆದರೆ ಇದು ಕೊಂಕಣಿ ಸಂಘಟನೆಗೆ ಮನ ಪೂರ್ವಕ ಒಪ್ಪಿಗೆ ಇರಲಿಲ್ಲಾ. ಆದರೆ 555 ದಿವಸ ಹೋರಾಟ ಮಾಡಿ ಪಡೆದ ಈ ಗೋವಾ ರಾಜ್ಯ ಭಾಷೆಯು ಕೊಂಕಣಿಯ ಜಯದ ವಿಜಯೋತ್ಸವ ಆಚರಿಸಿದರು.

♦♦♦♦




ಸಂಯುಕ್ತ ಕರ್ನಾಟಕ

ಶುಕ್ರವಾರ, 28, ಆಗಸ್ಟ್, 2020



ಧಾರವಾಡ ಕವಿವಿಯಲ್ಲಿ ಕೊಂಕಣಿ ಅಧ್ಯಯನ ಪೀಠದಿಂದ ನಡೆದ ಕಾರ್ಯಕ್ರಮವನ್ನು ಆರ್.ಪಿ. ನಾಯ್ಕ ಉದ್ಘಾಟಿಸಿದರು.

## ಕೊಂಕಣಿ ಭಾಷೆ ಅಭಿವೃದ್ಧಿಗೆ ಶ್ರಮಿಸಿ

**ಸಂಕ ಸಮಾಚಾರ, ಧಾರವಾಡ**

ಕೊಂಕಣಿ ಭಾಷೆ ಉನ್ನತಿಗಾಗಿ ನಾವೆಲ್ಲರೂ ಕೂಡಿ ಕೈಜೋಡಿಸಬೇಕು. ಉತ್ತರ ಕರ್ನಾಟಕದಲ್ಲಿ ಅನೇಕ ಕೊಂಕಣಿ ಸಮುದಾಯಗಳಿವೆ. ಅವುಗಳ ಅಭಿವೃದ್ಧಿಗೆ ಶ್ರಮಿಸಬೇಕು ಎಂದು ಕೊಂಕಣಿ ಸಾಹಿತ್ಯ ಅಕಾಡೆಮಿ ಮಾಜಿ ಅಧ್ಯಕ್ಷ ಆರ್.ಪಿ. ನಾಯ್ಕ ಹೇಳಿದರು.

ನಗರದ ಕರ್ನಾಟಕ ವಿಶ್ವವಿದ್ಯಾಲಯದ ಕೊಂಕಣಿ ಅಧ್ಯಯನ ಪೀಠದಿಂದ ಕೊಂಕಣಿ ಮಾನ್ಯತಾ ದಿವಸ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಮಾತನಾಡಿ, ಕೊಂಕಣಿ ಸಮುದಾಯ ಮುಖ್ಯ ವಾಹಿನಿಗೆ ಬಂದು ಕೊಂಕಣಿ ಭಾಷೆಯನ್ನು ಅಭಿವೃದ್ಧಿಪಡಿಸುವತ್ತ ಗಮನ ಹರಿಸಬೇಕಿದೆ ಎಂದರು. ಕೊಂಕಣಿ ಕುಟುಂಬಗಳು ತಮ್ಮ ತಮ್ಮಲ್ಲಿಯೇ ಕೊಂಕಣಿ ಭಾಷೆ ಮಾತನಾಡುವುದನ್ನು ರೂಢಿಸಿಕೊಂಡು ಕೊಂಕಣಿ ಪ್ರಸರಿಸಬೇಕು. ನಾವೆಲ್ಲರೂ ಕೂಡಿ ಕೊಂಕಣಿ ಅಧ್ಯಯನ ಪೀಠವನ್ನು ಬೆಳೆಸಲು ಸಕ್ರಿಯವಾಗಿ ಶ್ರಮಿಸೋಣ ಎಂದರು.

ಡಾ. ವಸಂತ ಬಾಂದೇಕರ ಮಾತನಾಡಿ, ಉತ್ತರ ಕರ್ನಾಟಕದಲ್ಲಿ ಅನೇಕ ಕೊಂಕಣಿ ಭಾಷಿಕರಿದ್ದಾರೆ. ಅವರೆಲ್ಲರೂ ಕೊಂಕಣಿ ಭಾಷೆ ಬೆಳೆಯಲು ಸಹಕರಿಸಬೇಕಿದೆ. ಅಲ್ಲದೆ ಕೊಂಕಣಿ ಭಾಷಿಕರನ್ನು ಗುರುತಿಸಿ ಅವರನ್ನು ಗೌರವಿಸಬೇಕಿದೆ. ಇಂದು ಕೊಂಕಣಿ ಭಾಷಿಕರು ತಮ್ಮ ಭಾಷೆಯನ್ನು ಮರೆತಿರುವುದು ವಿಷಾದವಾಗಿದ್ದು ತಮ್ಮ ಕುಟುಂಬಗಳಲ್ಲಿ ಕೊಂಕಣಿ ಕಲಿಸುವುದರ ಮೂಲಕ ಭಾಷಾಭಿಮಾನ ಬೆಳೆಸಬೇಕು ಎಂದರು.

ಸುರೇಶ ಶೇಟ್ಯೆ ಅರಗೋಡ ಮಾತನಾಡಿ, ಕೊಂಕಣಿ ಭಾಷೆ ನಾಮನಿರ್ದೇಶನಕ್ಕೆ ಮಾತ್ರ ಆಗಬಾರದು. 42 ಪಂಗಡಗಳು ಕೊಂಕಣಿ ಭಾಷೆ ಮಾತನಾಡುತ್ತಾರೆ. ಹಾಗೆಯೇ ಪ್ರಕೃತಿ ತಮ್ಮ ಸೌಂದರ್ಯವನ್ನು ಹೇಗೆ ಬೆಳೆಸುತ್ತದೆ ಅದರಂತೆ ಕೊಂಕಣಿ ಭಾಷೆಯನ್ನು ನಾವೆಲ್ಲರೂ ಕೂಡಿ ಬೆಳೆಸೋಣ ಎಂದರು.

ಕೊಂಕಣಿ ಭಾಷೆಯ ಅಭಿವೃದ್ಧಿ ಕುರಿತು ಡಾ. ಸರಯೂ ಪ್ರಭು ಉಪನ್ಯಾಸ ನೀಡಿದರು. ಕೊಂಕಣಿ ಅಧ್ಯಯನ ಪೀಠದ ಸಂಯೋಜಕ ಡಾ. ಉದಯ ರಾಯಕರ ಅಧ್ಯಕ್ಷತೆ ವಹಿಸಿದ್ದರು. ಡಾ. ಇಸವೆಲ್ಲಾದಾಸ ಝೇವಿಯರ್, ಸುರೇಂದ್ರ ಪಾಲನಕರ, ಸಹನಾ ಪಾಲನಕರ, ಸಂಗೀತಾ ಪಾಲನಕರ, ಸಂತೋಷ ಮಹಾಲೆ, ಲಕ್ಷ್ಮೀಕಾಂತ ಪ್ರಭು, ಕೃಷ್ಣಾನಂದ ಮಹಾಲೆ ಇದ್ದರು.

# 4. ಕರ್ನಾಟಕದಲ್ಲಿ ಕೊಂಕಣಿ ಚಳುವಳಿ

■ ರೆಂ.ಫಾ. ಮಾರ್ಕ ವಾಲ್ಡಾರ

ಕರ್ನಾಟಕದಲ್ಲಿ ಕೊಂಕಣಿ ಚಳುವಳಿಯು ಇತಿಹಾಸ ಕಳೆದ 150 ವರ್ಷ ಹಿಂದಿನಿಂದ ಇದೆ. ಸಾವಿರಾರು ನೂರಾರು ಲೇಖಕರು, ಸಾಹಿತಿಗಳು, ಕವಿಗಳು, ಪತ್ರಕರ್ತರು, ನಾಟಕಕಾರರು, ಸಂಗೀತಕಾರರು, ಸಂಘಟಕರು ಕೊಂಕಣಿ ಜನರಲ್ಲಿ ಮಾತ್ರ ಭಾಷೆಯ ಪ್ರೀತಿ-ಅಭಿಮಾನ ಮೂಡಿಸಲು ವಿಸ್ತರಿಸಲು ಪ್ರಯತ್ನಸಿದ್ದಾರೆ 19ನೇ ಶತಮಾನದ ಕೊನೆಯಲ್ಲಿ ಕೊಂಕಣಿ ಭಾಷೆಯ ಅಭಿವೃದ್ಧಿಗಾಗಿ ಮಂಗಳೂರಿನ ಕವಿ ಸಾಹಿತಿಗಳಾದ ಮಾ.ಅಂಜಿಲೊ ಪ್ರಾನ್ಸಿಸ ಮಾಫಾಯಿ, ಮಾ ಮಿಂಗೇಲ ಪ್ಲಾಸಿದ ಕುಲಾಸ ಮಾ. ರೇಮಂಡ ಮಸ್ಕಾರನಿಸ ಮುಂತಾದವರು ಕೊಂಕಣಿ ಭಾಷೆ ಜಾಗೃತ ಮಾಡಿದರು. ಧಾರ್ಮಿಕ ಪ್ರಾರ್ಥನೆಯ ಪುಸ್ತಕ ಬೈಬಲದ ಕೆಲಭಾಗ ಕೊಂಕಣಿ ಭಾಷಾಂತರ ಮಾಡಿ ಕೊಂಕಣಿ ಸಾಹಿತ್ಯಕ್ಕೆ ಅಡಿಪಾಯ ಹಾಕಿದರು. ಶ್ರೀ ಮಾಫೆಯಬಾಪರಿಂ ಕೊಂಕ್ಣಿ ಶಬ್ಧಕೋಶ ತಯಾರಿಸಲ್ಪಟ್ಟಿತು. 1912ರಲ್ಲಿ ಕವಿ ಶ್ರೀ ಲುಯಿ ಮಸ್ಕಾರನೀಸ ಹಾಗೂ ಸರ್ದಾರ ಲುಯಿಸ್ ಕಣ್ಣಪ್ಪ ಸೇರಿ ಕೊಂಕಣಿ ದಿರ್ವೆ ಪತ್ರಿಕೆ ಪ್ರಾರಂಭಿಸಿದರು. 1940ರವರೆಗೆ ಜಾತ್ಯಾತೀತವಾಗಿ ಲೋಕವೇದ ಕವಿತೆ-ಕಥೆ-ನಿಬಂಧ ಭಾಷಾಂತರ ಸಾಹಿತ್ಯವನ್ನು ಪ್ರಕಟಿಸಿ ಕರ್ನಾಟಕ ಹೊರತಾಗಿ ಮುಂಬೈ, ಚನ್ನೈ ಮುಂತಾದೆಡೆ ರವಾನಿಸಿ ಕೊಂಕಣಿ ಜಾಗೃತ ಮಾಡಿದರು. ಇದೇ ಸಂದರ್ಭದಲ್ಲಿ ಬಂಟ್ವಾಳದ ಶ್ರೀ ಬೇಳಂತೂರು ಕೃಷ್ಣಪ್ರಭು ಎಂಬುವವರು ಕೊಂಕಣಿ ಗೀತಾನಾಟಕ ರಚಿಸಿ ಕೊಂಕಣಿ ಪ್ರಚಾರ ಮಾಡಿದರು. ಇದರಂತೆ ಕರ್ನಾಟಕದ ವಿವಿಧ ಭಾಗಗಳಾದ ಮೈಸೂರು, ಬೆಂಗಳುರು, ಕಾರವಾರದಲ್ಲೂ ಪ್ರಯತ್ನಗಳು ನಡೆದವು.

ಮಂಗಳೂರಿನ ಮಾ. ಸಿಲ್ವಾ ಮೆನೆಜಿಸ್ ರವರು 1938ರಲ್ಲಿ ರಾಕ್ಲೋಸಾತೇಳು ಕಾರವಾರದಲ್ಲಿ ಶ್ರೀ ಮಾಧವ ಮಂಜುನಾಥ ಶಾನಭಾಗರ ಅಖಿಲಭಾರತ ಕೊಂಕಣಿ ಸಾಹಿತ್ಯ ಪರಿಷತ್ ಶ್ರೀ ಎನ್. ವ್ಹಿ. ಕುಡ್ಡಾರವರ "ಸಾರಸ್ವತ", ಶ್ರೀ ಬಿ.ವ್ಹಿ ಬಾಳಿಗಾರವರ "ಪಂಚಕದಾಯಿ", ಶ್ರೀ ಜೊಕಿ ಸಂತಾನ ಆಲ್ವಾರಿಸರವರ "ಮಿತ್ರ" ಇವೆಲ್ಲ ಸೇರಿ 1940 ರಿಂದ 1970ನೇ ಸಾಲಿನವರೆಗೂ ಅಭಿವೃದ್ಧಿಯತ್ತ ಸಾಗಿದವು. ಶ್ರೀ ಎಂ.ಪಿ ಡೆಸಾ, ಶ್ರೀ ಚಾಫ್ರಾದ ಕೇಸ್ತಾ, ಶ್ರೀ ಸೈಮಿನ ಡಿಸಿಲ್ವಾ ಇವರೆಲ್ಲಾ ಸೇರಿ ಕೊಂಕಣಿ ನಾಟಕದಿಂದ ಭಾಷೆ ವಿಸ್ತರಿಸಿದರು. ಹಾಗೂ ಕೊಂಕಣಿ ನಾಟಕ ಜನರ ಪ್ರೀತಿಯ ಆಕರ್ಷಣಿಯವಾಯಿತು. ಹೆಸರಾಂತ ಕಾದಂಬರಿ ಕರ್ತರಾದ ಶ್ರೀ ಜೇ. ಸಾ. ಆಳ್ವಾರಿಸ್, ಶ್ರೀ ಎಜೆ.ಪಿ ಸಾಲ್ಡಾನಾ, ಶ್ರೀ ಎ.ಟಿ. ಲೇಬೋ, ಶ್ರೀ ವಡ್ಡಿನ ಜೆ. ಎಸ್. ಡಿಸೋಜಾ, ಶ್ರೀ ವಿಕ್ಟರ್ ರೊಡ್ರಿಗ್ಸ ಮುಂತಾದವರು ಕಾದಂಬರಿ ಮೂಲಕ ಕೊಂಕಣಿ ಭಾಷೆಯ ಪ್ರೇಮವನ್ನು ತೋರಿದರು. ಅದರಂತೆ ರೆಫಿಲೊ, ಕಾಣಿಕ, ಆಮ್ಚಿಮಾಯ, ಜೆಜುರಾಯ, ಸಮಾಜಾ ಜೊದಿವೊ ವಿಶಾಲಕೊಂಕಣ, ಮಾಯಗಾಂವ ಜೀವಿತವಾವ್ರಾ ಚಾಂಚೊತಾಳೊ ಕುಂದಾಪುರದ ಜೈಕೊಂಕಣ ಹುಬ್ಬಳ್ಳಿ ಸರಸ್ವತಿ ಪ್ರಭಾ ಮುಂತಾದ ವಾರ-ತಿಂಗಳ ಪತ್ರಿಕೆಗಳು 70-80ರ ದಶಕದಲ್ಲಿ ಕೊಂಕಣಿ ಜಾಗೃತ ಮಾಡಲು ಪ್ರಯತ್ನಿಸಿದವು. ನಾವು ಕೊಂಕಣಿಗರು ಎಂದೂ ನೆನಪು ಹಾರಬಾರದು.

**ಕರ್ನಾಟಕದಲ್ಲಿ ಕೊಂಕಣಿ ಚಳವಳಿಯಲ್ಲಿ ಭಾಗವಹಿಸಿದ ಸಂಘಟನೆಗಳು :-**

1939ರಲ್ಲಿ ಕಾರವಾರದ ದಿ. ಶ್ರೀ ಮಾಧವ ಮಂಜುನಾಥ ಶಾನಭಾಗರು ಪ್ರಾರಂಭಿಸಿದ ಅಖಿಲಭಾರತ ಕೊಂಕಣಿ ಸಾಹಿತ್ಯ ಪರಿಷತ್ ಪ್ರತಿ ಎರಡು ವರ್ಷಕೊಮ್ಮೆ ಭಾರತ ದೇಶದಲ್ಲಿ ಹರಿದು ಹಂಚಿಹೋದ ಕೊಂಕಣಿ ಭಾಷಿಕ ಕವಿ-ಸಾಹಿತಿ-ಕಲಾವಿದರನ್ನು ಒಂದೇ ವೇದಿಕೆಯಲ್ಲಿ ತರುವ ದೃಷ್ಟಿಯಿಂದ ಮಾಡಿದ ಚಳುವಳಿ ಯಶಸ್ವಿಯಾಗಿ ಕಾರವಾರ-ಉಡುಪಿ-ಮಂಗಳೂರು-ಮೈಸೂರ-ಬೆಂಗಳೂರು-ಧಾರವಾಡ ಮುಂತಾದ ಶಹರಗಳಲ್ಲಿ ಕೊಂಕಣಿ ಚಳುವಳಿಯಿಂದ ಹೊಸ ಕವಿ ಸಾಹಿತಿ ಕಲಾವಿದರಿಗೆ ಸ್ಪೂರ್ತಿ ದೊರೆಯಿತು. 1974ರಲ್ಲಿ ಚಾಫ್ರಾದಕೊಸ್ತಾ, ಓಸ್ಟಿನ ಡಿಸೊಜಾ ಪ್ರಭು, ಶ್ರೀ ಲೊರೆನ್ಸ ಲೊಬೊ ಶ್ರೀ ಬಿ.ವಿ.ಬಾಳಿಗಾ ಮಂಗಳೂರ ಕೊಂಕಣಿ ಭಾಷಾ ಮಂಡಳ ಸ್ಥಾಪಿಸಿದರು. ಇದಕ್ಕೆ ಮಣಿಪಾಲ ಟಿ.ಎಮ್.ಎ. ಪೈ ಹಾಗೂ ಶ್ರೀ ಕೆ.ಕೆ. ಪೈರವರು ಆಶೀರ್ವಾದ ಮಾಡಿದರು. ಇದಕ್ಕೂ ಮೊದಲು 1943 ರಲ್ಲಿ ಶ್ರೀ ಜಸ್ಟಿತ ಪುರ್ವಿಕ ಜೊರ್ಜ ಅಲ್ಬುಕರ್ಕ ಪೈ ಹಾಗೂ ಇತರರು ಸೇರಿ ಡೊನಬಾಸ್ಕೊ ಕೊಂಕಣಿ ನಾಟಕಸಭಾ ನಾಟಕದ ಮೂಲಕ ಪ್ರಾರಂಭಿಸಿದ್ದು, ಧಳಿ ಚಳುವಳಿ ಇಂದಿಗೂ ಪ್ರಾರಂಭವಿದೆ.

**ಧಾರವಾಡದಲ್ಲಿ ಕೊಂಕಣಿ ಚಳುವಳಿ :-**

ಧಾರವಾಡವು ಮೊದಲು ಮುಂಬೈ ಪ್ರಾಂತದಲ್ಲಿತ್ತು. 1956ರ ನಂತರ ಕರ್ನಾಟಕಕ್ಕೆ ಸೇರಿತು. ಇಲ್ಲಿ ಮಾರಾಠಿ-ಕನ್ನಡ ಕೊಂಕಣಿ ಭಾಷಿಕರು ಇದ್ದರು. ಧಾರವಾಡದ ಸಾರಸ್ವತ ಪುರದಲ್ಲಿ ಹೆಚ್ಚಾಗಿ ಜಿ.ಎಸ್.ಬಿಜನರು ವಾಸಿಸುತ್ತಿದ್ದರು. ಪ್ರಖ್ಯಾತ ಗಿರಿಶ ಕಾರ್ನಾಡ, ಲಿನಾಚಂದಾವರಕರ ಮುಂತಾದವರು ಇಲ್ಲಿಯೇ ವಾಸವಾಗಿದ್ದರು. ಧಾರವಾಡ ಪೋಲಿಸ ಇಲಾಖೆಯಲ್ಲಿ 60-70 ಕಾರವಾರದ ಕೊಂಕಣಿ ಭಾಷಿಕ ಕುಟುಂಬಗಳಿದ್ದವು. ಸೆಂಟ್ ಜೊಸೆಫ್ ಚರ್ಚ್ ಹಾಗೂ ಸ್ಕೂಲ್ ಪ್ರೆಜೆಂಟೇಶನ ಕಾನ್ವೆಂಟ್ ಸ್ಕೂಲ್ ಇವೆಲ್ಲ ಕೊಂಕಣಿ ಭಾಷಿಕ ಕ್ಯಾಥೊಲಿಕ್ ಕ್ರೀಶ್ಚನ ಧರ್ಮದವರಾಗಿದ್ದವು.

ಹೀಗಾಗಿ ಇಲ್ಲಿಯು ಆಕಾಶವಾಣಿ ಧಾರವಾಡದಲ್ಲಿ 60ರ ದಶಕದಲ್ಲಿ ಗುಲ್ವಾಡಿ ಎಂಬ ಆಕಾಶವಾಣಿ ಕೊಂಕಣಿ ಭಾಷಿಕ ನಿರ್ದೇಶಕರ ಸಂದರ್ಭದಲ್ಲಿ ತಿಂಗಳಿಗೆ ಒಂದು ದಿನ ಕೊಂಕಣಿ ಜಾಯಿ ಜುಯಿ ಕಾರ್ಯಕ್ರಮ ಪ್ರಸಾರವಾಗುತ್ತಿತ್ತು.

ಅದು ಇಂದಿಗೂ ಸಾಗಿಬಂದಿದೆ. ಅಂಕೋಲಾ ಮೂಲದ ಹರಿ ಮಹಾಲೆ ಅವರ ಮಗ ದಿ. ಗಜಾನನ ಹರಿ ಮಹಾಲೆ (ರಾಜ್ಯೋತ್ಸವ ಪ್ರಶಸ್ತಿ ವಿಜೇತ) ಕುಟುಂಬದವರು ಧಾರವಾಡದಲ್ಲಿ ಕಾರವಾರ ಹೇರಕಟಿಂಗ್ ಸಲೂನ ನಡೆಸುತ್ತಿದ್ದಾಗ ಪ್ರತಿವರ್ಷ ಅವರ ಕುಟುಂಬ ಸದಸ್ಯರೆಲ್ಲ ಕೂಡಿ ಧಾರವಾಡದ ಕೊಂಕಣಿಗರಿಗಾಗಿ ಕೊಂಕಣಿ ನಾಟಕ ಆಡುತ್ತಿದ್ದರು. ಜಿ.ಎಸ್.ಬಿ ಸಮಾಜದ ಗಣೇಶೋತ್ಸವ ಸಂದರ್ಭದಲ್ಲಿ ಕೊಂಕಣಿ ಕಾರ್ಯಕ್ರಮಗಳು ನಡೆಯುತ್ತಿದ್ದವು. ಆಕಾಶವಾಣಿ ಧಾರವಾಡದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಪ್ರಭಾ ಶಿರೂರ, ಚೇತನ ಕುಮಾರ ನಾಯ್ಕ ಗಜಾನನರಾವ ಹೆರಂಜಾಲ, ನಾಗೇಶ ಶಾನಭಾಗ ಇವರೆಲ್ಲರೂ ಆಕಾಶವಾಣಿ ಧಾರವಾಡದಲ್ಲಿ ಕೊಂಕಣಿ ಕಾರ್ಯಕ್ರಮಕ್ಕೆ ಹೆಚ್ಚು ವತ್ತು ನೀಡುತ್ತಿದ್ದರು. ಸುಪ್ರಸಿದ್ಧ ಆಕಾಶವಾಣಿ ಗಾಯಕಿ ಅನುರಾಧ ಧಾರೇಶ್ವರ ಇಲ್ಲಿಂದಲೇ ಪ್ರಸಿದ್ಧರಾದರು. ಇಂದು ಗಿನ್ನಜದಾಖಲೆ ಮಾಡಿದ ಕಾರವಾರದ ಡಾ. ವಸಂತ ಶಾಂತರಾಮ ಬಾಂದೇಕರ 1968ರಲ್ಲಿ ಆಕಾಶವಾಣಿ ಧಾರವಾಡದಿಂದ ಕೊಂಕಣಿ ಕಾರ್ಯಕ್ರಮ ನೀಡಿ ಕಲಾಸ್ಪೂರ್ತಿ ಪಡೆದವರಾಗಿದ್ದಾರೆ. ಹೀಗಾಗಿ 60 ರಿಂದ 90ರ ದಶಕದವರೆಗೂ ಧಾರವಾಡದಲ್ಲಿ ಕೊಂಕಣಿ ಉಚ್ಛಾಯ ಸ್ಥಿತಿಯಲ್ಲಿತ್ತೆಂದು ಹೇಳಬಹುದು. ಹುಬ್ಬಳ್ಳಿಯಲ್ಲೂ ದೈವಜ್ಞ ಹಾಗೂ ಜಿ.ಎಸ್.ಬಿ.ಸಮಾಜದವರ ಕೊಂಕಣಿ ಕಾರ್ಯಕ್ರಮಗಳು ಆಗುತ್ತಿದ್ದವು. 1982ರಲ್ಲಿ ವಸಂತ ಬಾಂದೇಕರರು ಕೊಂಕಣಿ ಗೀತಗಾಯನ ಆರ್ಕೆಷ್ಟ್ರಮಾಡಿ ಯಶಸ್ವಿಯಾಗಿದ್ದರು.

1984ರಲ್ಲಿ ಬೆಂಗಳೂರು ಹಾಗೂ 1986ರಲ್ಲಿ ಮಣಿಪಾಲದಲ್ಲಿ ಅಖಿಲಭಾರತ ಕೊಂಕಣಿ ಪರಿಷತ್‌ನಲ್ಲಿ ಟಿ.ಎಂ.ಎ.ಪೈ ಪೌಂಡೇಶನ ಬೆಂಗಳೂರು ಕೊಂಕಣಿ ಭಾಷಾ ಮಂಡಳ, ಮೈಸೂರ ಕೊಂಕಣಿ ಸಂಘಟನೆಯಲ್ಲಿ ಮುಖಂಡರಾದ ಮಾ.ಬಾ.ಅ. ಅಲೆಕ್ಸಾಂಡರ ಸೂಚ್, ಶ್ರೀ ಎರಿಕ್ ಓಂಭಾರಿಯೊ ಶ್ರೀ ಪಾವ್ಲಮೊರಾಯಿಸ್, ಶ್ರೀ ವಲ್ಲಿವಗ್ಗಾ, ಶ್ರೀ ಬಸ್ತಿವಾಮನ ಶೇಣ್ವೆ, ಶ್ರೀ ನಾರಾಯಣ ಖಾರ್ವಿ ಮುಂತಾದವರು ಚಳುವಳಿಯಲ್ಲಿ ಭಾಗವಹಿಸಿದ್ದರು.

**ಮಾಂಡ ಸೋಬಾಣ ಸಂಸ್ಥೆ – ಮಂಗಳೂರು**

ಕರ್ನಾಟಕದಲ್ಲಿ ಕೊಂಕಣಿ ಭಾಷೆ ಸಾಹಿತ್ಯ ಸಂಗೀತ ಹಾಗೂ ಜಾನಪದ ಕಲೆ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಲು ಶ್ರೀ ಎರಿಕ್ ಓಂಭಾರಿಯಾ ನೇತೃತ್ವದಲ್ಲಿ 1985ರಲ್ಲಿ ಶ್ರೀ ಚಾಫ್ರಾ ಡಿಕೊಸ್ಟಾ, ಶ್ರೀ ಮೇಲ್ವಿನ ರೊಡ್ರಿಗ್ಸ, ಮುಂತಾದವರು ಸೇರಿ ಮಂಗಳೂರಿನ ಶಕ್ತಿನಗರದ ಮಕಾಳೆಯಲ್ಲಿ ಕಲಾಂಗಣವನ್ನು ನಿರ್ಮಿಸಿದರು. ಮಾಂಡಸೋಬಾಣ ಪಂಗಡವು ಅಖಿಲಭಾರತ ಮಟ್ಟದಲ್ಲಿ ಕೊಂಕಣಿ ಸಾಂಸ್ಕೃತಿಕ ಕಾರ್ಯಕ್ರಮ ಪರಬ ಸಾಂತ, ಮಾಂಡೊ, ಫೆಸ್ತ, ಲೋಕವೇದನಾಚ, ಪರಬ, ಮುಂತಾದವುಗಳನ್ನು ಆಚರಿಸಿ ಹಲವು ದಾಖಲೆ ನಿರ್ಮಿಸಿತು. ಹಲವು ನೃತ್ಯ, ಸಂಗೀತ, ನಾಟಕ ಕಲಾವಿದರನ್ನು ಸೃಷ್ಟಿಸಿದರು. ಸಾಮೂಹಿಕ ಗಾಯನಕ್ಕೆ ಗಿನ್ನಿಜ ದಾಖಲೆಯೂ ದೊರೆಯಿತು. 2010ರಲ್ಲಿ ಪ್ರಥಮ ವಿಶ್ವ ಕೊಂಕಣಿ ಸಾಂಸ್ಕೃತಿಕ ಮಹಾಮೇಳ ಸತತ 25ದಿವಸ ಆಚರಿಸಿದರು ಸಧ್ಯ ಜಾಗತಿಕ ಕೊಂಕಣಿ ಮ್ಯೂಜಿಯಂ ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದಾರೆ. **ಕೊಂಕಣಿ ಭಾಸ ಆನಿ ಸಂಸ್ಕೃತಿ ಪ್ರತಿಷ್ಠಾನ –**

ಶ್ರೀ ಬಸ್ತಿವಾಮನ ಶೆಣ್ವೆ ನೇತೃತ್ವದಲ್ಲಿ ಕೊಂಕಣಿ ಭಾಸ ಆನಿ ಸಂಸ್ಕೃತಿ ಪ್ರತಿಷ್ಠಾನ ಸಂಸ್ಥೆ ಪ್ರಾರಂಭವಾಗಿ 1995ರಲ್ಲಿ ಪ್ರಥಮ ವಿಶ್ವ ಕೊಂಕಣಿ ಸಮ್ಮೆಳನ ಸತತ 8 ದಿನ ಜರುಗಿತು. ಪದಾಧಿಕಾರಿಗಳಾಗಿ ಶ್ರೀ ಲೊರೆನ್ಸ ಲೊಬೊ, ಶ್ರೀ ಎರಿಕ್ ಓಂಭಾರಿಯಾ ಮುಂತಾದವರು ಆಸಕ್ತಿಯಿಂದ ಆಚರಿಸಿದ ಈ ಸಮ್ಮೆಳನಕ್ಕೆ ಪರದೇಶದ ವಿವಿಧ ಕೊಂಕಣಿ ಭಾಷಿಕರು ಬಂದು ಸಹಕಾರ ನೀಡಿದರು.

**ವಿಶ್ವಕೊಂಕಣಿ ಕೇಂದ್ರ –**

ಮಂಗಳೂರು ಕೊಂಕಣಿ ಭಾಸ ಆನಿ ಪ್ರತಿಷ್ಠಾನ(ರಿ) ಇದರ ಅಧ್ಯಕ್ಷರಾದ ಶ್ರೀ ಬಸ್ತಿವಾಮನ ಶೆಣ್ವಯವರ ನಿರಂತರ ಪ್ರಯತ್ನದಿಂದ ಮಂಗಳೂರಿನ ಶಕ್ತಿನಗರದಲ್ಲಿ 3ಎಕರೆ ಭೂಮಿಯಲ್ಲಿ ದಿ. 5 ಸೆಪ್ಟೆಂಬರ್ 2005 ರಂದು ಭೂಮಿ ಪೂಜನ ಮಾಡಿ ಶೀಲಾನ್ಯಾಸ ಕಾರ್ಯಕ್ರಮ ನೇರವೇರಿತು. ಇದರಲ್ಲಿ ಕರ್ನಾಟಕದ ಶ್ರೀ ಆರ್.ವಿ.ದೇಶಪಾಂಡೆ ಕೇಂದ್ರಿಯ ಮಂತ್ರಿಗಳಾದ ಶ್ರೀ ಒಸ್ಕರ್ ಫರ್ನಾಂಡಿಸ್ ಕೊಂ. ಭಾಷಾ ಮಂಡಳದ ಅಧ್ಯಕ್ಷರಾದ ಫಾ. ಏರಿಕ್ ಕಾಸ್ತಾ ಶ್ರೀ ಬೆಲಸಿಯಸ್ ಎಂ ಡಿಸೋಜಾ ಶಾಸಕರಾದ ಶ್ರೀ ಯೊಗೇಶ ಭಟ್ಟ ಮುಂಬಯಿಯ ಶ್ರೀ ಎನ್. ಎಸ್. ರಾವ್ ಇವರ ಸಮ್ಮುಖದಲ್ಲಿ ಬಿಲ್ಡರ್ ಶ್ರೀ ದಯಾನಂದ ಪೈರವರು ಶಿಲಾನ್ಯಾಸ ಮಾಡಿದರು. ಹಾಗೂ 25 ಲಕ್ಷ ರೂ ದೇಣಿಗೆ ಘೋಷಣೆ ಮಾಡಿದರು. ಹಾಗೂ ಹಲವಾರು ದಾನಿಗಳಿಂದ ವಿಶ್ವ ಕೊಂಕಣಿ ಕೇಂದ್ರಹಂತ ಹಂತವಾಗಿ ಬೆಳೆಯ ತೊಡಗಿತು. ಬೆಂಗಳೂರಿನ ಪ್ರಸಿದ್ಧ ಎನ್. ಆರ್. ಆಯ್. ಶ್ರೀ ರೊನಾಲ್ಡ ಕೊಲಾಸೊರವರು ಕೊಂಕಣಿ ರಿಸರ್ಚ ಸೆಂಟರಗಾಗಿ ರೂ 30ಲಕ್ಷ ದಾನ ಮಾಡಿದರು. ಕಾರ್ಪೋರೇಶನ ಬ್ಯಾಂಕನವರು ರೂ. 20 ಲಕ್ಷ ಮ್ಯೂಜಿಯಂ ಮಾಡಲು ಕ್ಯಾನರಾ ಬ್ಯಾಂಕಿನವರು 25ಲಕ್ಷ ವಿಶ್ವಕೊಂಕಣಿ ಗ್ರಂಥಾಲಯಕ್ಕಾಗಿ ಅಬುಧಾಬಿಯ ಶ್ರೀ ಎಸ್.ಎ. ರಾವ್‌ರವರು 25 ಲಕ್ಷ ನೀಡಿದರು. ಮೈಸೂರಿನಲ್ಲಿ ನೆಲೆಸಿರುವ ಮಂಗಳೂರ ಗಣೇಶ ಬೀಡಿ ಮಾಲಿಕರಾದ ಶ್ರೀ ಎ. ಜಗನ್ನಾಥ ಶೆಣ್ವೆಯವರು ಚಿಕ್ಕ ಸಭಾ ಗೃಹಕ್ಕಾಗಿ ರೂ 25 ಲಕ್ಷ ನೀಡಿದರು. ಗೋವಾ ಸರ್ಕಾರದಿಂದ ರೂ 25

ಕ್ಷ ದೇಣಿಗೆ ಎಸ್.ಎಲ್. ಶೇಠ ಜುವ್ವೆಲರ್ಸನ ರೂ 5ಲಕ್ಷ ಾರಸ್ವತ ಬ್ಯಾಂಕ ರೂ 20ಲಕ್ಷ ಹೀಗೆ ಬಹಳಷ್ಟು ದಾನಿಗಳು ಾನಮಾಡಿದ್ದಾರೆ. ಹೀಗೆ ವಿವಿಧ ಕೊಂಕಣಿ ಭಾಷಿಕ ಾನಿಗಳು ನೀಡಿದ ಅಂದಾಜು ರೂ 31/2 ಕೋಟಿಯಲ್ಲಿ ದಿ. 7-1-2009 ರಂದು ಗೋವಾದ ಮುಖ್ಯ ಮಂತ್ರಿಗಳಾದ ಗಂಬರ ಕಾಮತರವರು ವಿಶ್ವ ಕೊಂಕಣಿ ಕೇಂದ್ರದ ಉದ್ಘಾಟನೆ ಮಾಡಿದರು. ಆ ಸಮಯದಲ್ಲಿ ಗೋವಾದ ಮಾಜಿ ಮುಖ್ಯಮಂತ್ರಿ ಲುಯಿಜಿನೊ ಫೆಲೆರೊ ತರಂಗ ಪತ್ರಿಕೆಯ ಸಂಪಾದಕರಾದ ಸಂಧ್ಯಾ ಎಸ್. ಪೈ, ಉದ್ಯಮಿ ರೊನಾಲ್ಡ್ ಕುಲಾಸೊ, ಬೆಂಗಳೂರಿನ ಸೆಂಚುರಿ ಬಿಲ್ಡರನ ಪಿ. ದಯಾನಂದ ಪೈ ಮುಂತಾದವರು ಉಪಸ್ಥಿತರಿದ್ದರು ಇದೆ. ಸಂದರ್ಭದಲ್ಲಿ ವಿಶ್ವಕೊಂಕಣಿ ಕೇಂದ್ರದ ರುವಾರಿಯಾದ ಅಧ್ಯಕ್ಷ ಬಸ್ತಿವಾಮನ ಶೆಣೈಯವರನ್ನು ಸನ್ಮಾನಿಸಲಾಯಿತು.

♦♦♦♦

**MANGALORE UNIVERSITY**

**ವಿಶ್ವವಿದ್ಯಾನಿಲಯ ಸಂಧ್ಯಾ ಕಾಲೇಜು, ಮಂಗಳೂರು**

**UNIVERSITY EVENING COLLEGE, MANGALORE**

**(A Constituent College of Mangalore University)**

# ಕೊಂಕಣಿ ವಿಶಿಷ್ಟ ಶ್ರೀಮಂತ ಭಾಷೆ: ಡಾ। ಬಾಂದೇಕರ



ಸಂವಾದ ಕಾರ್ಯಕ್ರಮದಲ್ಲಿ ಸಂಪನ್ಮೂಲ ವ್ಯಕ್ತಿಗಳು ಮಾತನಾಡಿದರು.



# 5. ಕೇರಳ ರಾಜ್ಯದಲ್ಲಿ ಕೊಂಕಣಿ ಚಳವಳಿ

■ ದಿ. ಪುರುಷೋತ್ತಮ ಮಲ್ಯಾ ಕೇರಳಾ

ಕೇರಳದಲ್ಲಿ ನೆಲೆಸಿರುವ ಎಲ್ಲ ಕೊಂಕಣಿ ಭಾಷಿಕ ಸಮುದಾಯದವರು 1560ರಲ್ಲಿ ಗೋವಾದಿಂದ ಪೋರ್ತುಗೀಜರ ಅತ್ಯಾಚಾರ ಧಾರ್ಮಿಕ ಹಿಂಸೆಯಿಂದ ಬೇಸತ್ತು ಅಲ್ಲಿ ಹೋಗಿ ನೆಲೆಸಿದರು. ಗೋವಾ ಕೇರಳದ ಕೊಂಕಣಿಗರ ಮಾತೃಭೂಮಿಯಾಗಿದೆ. ಕೇರಳದಲ್ಲಿ 1663–1795ರವರೆಗೆ ಡಚ್ಚರ ಆಳ್ವಿಕೆಯಲ್ಲಿತ್ತು. ಅವರ ಆಳ್ವಿಕೆಯಲ್ಲಿ ಕೊಂಕಣಿ ಸಾಹಿತ್ಯದ ಅಭಿವೃದ್ಧಿಯಾಯಿತು. ಉದಾಹರಣೆಯಾಗಿ ಗಿಡಮೂಲಿಕೆ ಔಷಧಿಗಳ ಮಾಹಿತಿಯ ಪುಸ್ತಕ 12 ಭಾಗಗಳಲ್ಲಿ ಮುದ್ರಣವಾಗಿ “ಹೊರ್ಟಸ ಇಂಡಕಸ್ ಮಲಬಾನಿಕ್ಸ ಎಂಬ ಹೆಸರಿನ ಪುಸ್ತಕ ಕೋಚಿನದ ಗವರ್ನರ್ ಹೆನರಿಕ್ ವಾನ್ಡ ರಿಫೆ ಪ್ರಕಟ ಮಾಡಿದರು. ಶ್ರೀ ರಂಗಾಭಟ್ಟ ವಿನಾಯಕ ಪಂಡಿತ ಹಾಗೂ ಶ್ರೀ ಆ.ಪೂ. ಭಟ್ಟ 3 ಜನ ಕೊಂಕಣಿ ಭಾಷಿಕರು ಆಯುರ್ವೇದಿಕ ವೈದ್ಯರು ಈ ಪುಸ್ತಕ ಹೊರಬರಲು ಸಹಕಾರ ನೀಡಿದರು. ಅದೂ ಸಹಿತ ದೇವನಾಗರಿ ಲಿಪಿಯಲ್ಲಿದೆ. ಇದು 1678ರಲ್ಲಿ ಪ್ರಕಟವಾದ ಪ್ರಥಮ ಪುಸ್ತಕವಾಗಿದೆ. ಇದರಲ್ಲಿ ಪ್ರತಿ ಔಷಧದ ಹೆಸರನ್ನು ವಿವಿಧ ಭಾಷೆಯಲ್ಲಿ ಬರೆದಿದ್ದು ಅದರಲ್ಲಿ ಕೊಂಕಣಿಯೂ ಒಂದಾಗಿದೆ. ಅದರಂತೆ ಶ್ರೀ ವೆಂಕಟೇಶ ಕಲ್ಯಾಣಕಾವ್ಯ, ಗೊಡ್ಡೆ ರಾಮಾಯಣ ಕಾವ್ಯ ಮುಂತಾದವು.

ಕೊಂಕಣಿ ಸಮುದಾಯದವರ ಪ್ರಮುಖ ದೇವರಗುಡಿ ಕೊಚಿನದ ತಿರುಮಲ (ಶ್ರೀ ವೆಂಕಟೇಶ್ವರ) ದೇವಸ್ಥಾನವಾಗಿದೆ. ಆದರೆ ಕೊಂಕಣಿಗರ ಏಳಿಗೆಯನ್ನು ಸಹಿಸದ ರಾಜನಾದ ಶ್ರೀ ರಾಮವರ್ಮಾ ಸನಾತನ ಧಾಮಪುರಾ ಆ ಗುಡಿಯನ್ನು ಕೆಡವಿ ನಾಶಮಾಡಿ ದೇವಸ್ಥಾನ ಆಡಳಿತ ವರ್ಗದವರನ್ನು ಕೊಂಕಣಿಗರನ್ನು ಹಿಂಸೆ ನೀಡಿದ್ದ-ರಿಂದ ಅವರೆಲ್ಲ ಅಲ್ಲಿಂದ ದೂರ ಚದುರಿ ಹೋದರು. ಆದರೆ ದೂರ ಹೊದವರೆಲ್ಲ 1887ರಲ್ಲಿ ಮತ್ತೆ ಬಂದು ದೇವಸ್ಥಾನ ಪುನರನಿರ್ಮಾಣ ಮಾಡಿದರು. ಹಾಗೂ ಹಲವಾರು ಭಕ್ತಿಗೀತೆಗಳನ್ನು ರಚಿಸಿ ಹಾಡತೊಡಗಿದರು. (1851-1902)ರಲ್ಲಿ ಶ್ರೀಮತಿ ಅಮ್ಮುಲಕಾ ಶಿನಾಯ ಎಂಬುವವರು ಹಲವಾರು ಕೊಂಕಣಿ ಭಕ್ತಿಗೀತೆಗಳನ್ನು ರಚಿಸಿದರು.

1887ರಲ್ಲಿ ಕೊಂಕಣೀಗರು ಇಂಗ್ಲೀಷ ಹಾಗೂ ಮಲಯಾಳದಲ್ಲಿ ಶಾಲೆ ಕಲೆಯುತ್ತಿದ್ದರು. ಶ್ರೀ ನಾರಾಯಣ ನರಸಿಂಹ ಪೈ ಎಂಬುವರು ಹಲವು ಕೊಂಕಣಿಗರಿಗಾಗಿ ಕೊಂಕಣಿ ಸಾಹಿತ್ಯ ರಚಿಸಿದರು. (1879–1959) 1926ರಲ್ಲಿ ಪ್ರಲ್ಹಾದ ಚರಿತ್ರಂ, ಭಗವತಗೀತಾ ಸರಮ, ಸತ್ಯವಾನ ಸಾವಿತ್ರಿ ಮುಂತಾದವುಗಳು ದಿ.ಆರ್.ಜಿ ಶರ್ಮಾ ಎಂಬುವರು 25 ಭಕ್ತಿಗೀತೆ ಕೊಂಕಣಿ ಕವನ ಸಂಕಲನ ಹೊರತಂದರು ಶ್ರೀ ನಾರಾಯಣ ಅನಂತ ಭಟ್ ಎಂಬುವರು 1949ರಲ್ಲಿ ಕೋಚಿನದಲ್ಲಿ ಕೊಂಕಣಿ ಪಾಠಶಾಲಾ ಪ್ರಾರಂಭಿಸಿದರು. “ಗೋಮಾಂತಾ ಪ್ರಕೃತಿ” ಎಂಬ ಬುಕಲೇಟ್ ತಯಾರಿಸಿ ಕೊಂಕಣಿ ಹಾಗೂ ಸಂಸ್ಕೃತದಲ್ಲಿ ಭಾಷಾಂತರಿಸಿದರು.

ಎಸ್. ಪ್ರಸನ್‌ಕುಮಾರ ಮಲ್ಯಾ, ಶ್ರೀಧರ ಶೆನಾಯ ಗೋಕುಲದಾಸ ಪ್ರಭು, ಶೇಠ ಬಲರಾಜ, ಕೆ. ನಾರಾಯಣ ನಾಯ್ಕ, ಎನ್. ಪುರುಷೋತ್ತಮ ಮಲ್ಯಾ, ಪಿ.ಎಸ್.ಶಿವಾನಂದ ಶೇನಾಯ, ಕೆ.ಅನಂತ ಭಟ್ಟ, ಶರತಚಂದ್ರ ಶೇನಾಯ, ವಿ.ವಿ. ಸದಾನಂದ ಪ್ರಭು, ಎನ್.ಎನ್. ಅನ್ನನಂದನ, ಶ್ರೀ ಮತಿ ವತ್ಸಲಾ ಮಂಜುನಾಥರಾವ್ ಸೂರ್ಯಅಶೋಕ, ಸುಶೀಲಾ ಟಿ.ಭಟ್, ಆರ್.ಎಸ್.ಭಾಸ್ಕರ, ಪ್ರೋ ಆರ್.ಕೆ.ರಾವ್, ಡಾ. ಸುನೀತಾಬಾಯಿ, ಡಾ. ಬಿ.ಎಸ್. ಆಶಾ, ಡಾ. ಹರೀಂದ್ರ ಶರ್ಮಾ.

1954ರಲ್ಲಿ ಭಾರತ ಸರ್ಕಾರ 1951ರ ಜನಗಣತಿ ಪ್ರಕಾರ ಕೊಂಕಣಿಯು ಮರಾಠಿ ಭಾಷೆಯಿಂದ ಬಂದಂತಹದೆಂದು ಪ್ರಕಟಮಾಡಿತ್ತು.ಆದರೆ ಪುರುಷೋತ್ತಮ ಮಲ್ಯಾರವರು ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆ ಮುಖಾಂತರ ಭಾರತ ಸರ್ಕಾರದ ತಿರ್ಮಾನ ತಪ್ಪು ಎಂದು, ಕೊಂಕಣಿ ಭಾಷೆ ಸ್ವತಂತ್ರ ಎಂದು ವಾದಿಸಿದ್ದರಿಂದ ಮುಂದೆ ಭಾರತ ಸರ್ಕಾರ 1961ರ ಜನಗಣತಿಯಲ್ಲಿ ಕೊಂಕಣಿ ಸ್ವತಂತ್ರ ಭಾಷೆಯೆಂದು ಪ್ರಕಟಿಸಿತು.

ಡಾ. ಸತೀಶಕುಮಾರ ಚಟರ್ಜಿ – ಅಧ್ಯಕ್ಷರು  
ಡಾ. ಟಿ.ಪಿ. ಮೀನಾಕ್ಷಿ ಸುಂದರಂ – ಸದಸ್ಯರು  
ಡಾ. ಟಿ.ಬಿ. ಪಂಡಿತ – ಸದಸ್ಯರು  
ಡಾ. ಬಾಬುರಾಮ ಸಕ್ಸೆನಾ – ಸದಸ್ಯರು  
ಡಾ. ಎ.ಎಮ್. ಘಾಟಗೆ – ಸದಸ್ಯರು

ಈ ಸಮಿತಿಯ ಈ ವಿಷಯವಾಗಿ ಗೋವಾ-ದಮನ್-ದೀವ-ಕರ್ನಾಟಕ-ಮಹಾರಾಷ್ಟ್ರ-ಕೇರಳಾ ರಾಜ್ಯ ಸರ್ಕಾರಗಳನ್ನು ಸಂಪರ್ಕಿಸಿತು. ಅಕಾಡೆಮಿ ಸ್ಥಾಯಿಸಮಿತಿ ಸದಸ್ಯರು 3-12-1974ರಂದು ಸಭೆಯಲ್ಲಿ ತಿರ್ಮಾನ ಮಾಡಿ ಕೊಂಕಣಿ ಭಾಷೆಗೆ ನ್ಯಾಯ ನೀಡಲು ಸರ್ವ ಸದಸ್ಯರ ಸಭೆಗೆ ಅನುಮೋದನೆ ನೀಡಿ ಕಳುಹಿಸಿತು.

26-12-1974 ಗೋವಾ ಕೊಂಕಣಿ ಭಾಷಾ ಮಂಡಳದ ದಿ. ಚಂದ್ರಕಾಂತ ಕೇಣಿ ಹಾಗೂ ದಿ. ಡಾ. ಮನೋಹರ ಸರ ದೇಸಾಯಿರವರು ಒಂದು ಠರಾವ ಪಾಸ ಮಾಡಿ ಅಖಿಲಭಾರತ ಕೊಂಕಣಿ ಪರಿಷತ್ ಮುಖಾಂತರ ಸುಮಾರು 70 ಸದಸ್ಯರ (ಕನ್ಯಾಕುಮಾರಿಯಿಂದ ಕಾಶ್ಮೀರದವರೆಗಿನ) ರುಜುವಾತದೊಂದಿಗೆ ದೆಹಲಿಗೆ ಕಳಿಸಿ ಕೊಡಲಾಯಿತು. ನಂತರ ಗೋವಾ ಕಂಪನಿಗಳ ಪರವಾಗಿ ಸಾಹಿತಿಗಳಾದ ಶ್ರೀ ರವೀಂದ್ರ ಕೇಳಕರ ಹಾಗೂ ಶ್ರೀ ಉದಯ ಭೇಂದ್ರೆರವರು ಕೊಂಕಣಿಯಲ್ಲಿ ಅತ್ಯುತ್ತಮ ಬರಹದ ಸಾಹಿತ್ಯ ವಿವಿಧ 70 ಪುಸ್ತಕಗಳನ್ನು ತೆಗೆದುಕೊಂಡು ದೆಹಲಿ ಅಕಾಡೆಮಿಗೆ ಅಲ್ಲಿಯ ಸರ್ವ ಸದಸ್ಯರ ಸಮ್ಮುಖದಲ್ಲಿ ಸಭೆಯಲ್ಲಿ ಇಡಲು ಹೋದರು. ಹಾಗೂ ಅದಕ್ಕಾಗಿ ಅವರಿಬ್ಬರು ಬಹಳಷ್ಟು ದಿನ ದಿಲ್ಲಿಯಲ್ಲಿ ಉಳಿಯಬೇಕಾಯಿತು.

ಅಲ್ಲಿಂದ ಡಾ. ಕೆ.ಜಿ. ಮಹಾಲೆ, ಜವಾಹರಲಾಲ್ ನೆಹರು ವಿಶ್ವವಿದ್ಯಾಲಯದ ದೀನ ಹಾಗೂ ಶ್ರೀ ಪುರುಷೋತ್ತಮ ಕಾಕೊಡಕರ ಎಂ.ಪಿ. ಗೋವಾ ಹಿಂದಿ ಸಾಹಿತಿ ಡಾ. ನಮವಾರ ಸಿಂಗ ಮುಂತಾದವರ ಸಹಕಾರ ಪಡೆದರು. ಸರ್ವಸದಸ್ಯರ ಸಭೆ 26-02-1975ರಂದು ಜರುಗಿ-ತು. ಆಗ ಶ್ರೀ ಬೇಂದ್ರೆ ಹಾಗೂ ಸರ್ ದೇಸಾಯಿಯವರು ಮುಖ್ಯ ದ್ವಾರದಲ್ಲಿ ನಿಂತು ಸಬೆಗೆ ಬರುವ ಎಲ್ಲ ಸದಸ್ಯರಿಗೂ ಕೊಂಕಣಿ ಪುಸ್ತಕಗಳನ್ನು ನೀಡಿದರು. ಆದರೆ ಮರಾಠಿ ಸಾಹಿತಿಗಳು ಕೊಂಕಣಿಯು ಮರಾಠಿ ಭಾಷೆ ಮೂಲ ಎಂದು ವಾದಿಸಿದ್ದರಿಂದ ಸ್ವಲ್ಪ ಹಿನ್ನೆಡೆಯಾಯಿತು. ಮತ್ತೆ ಕೊಂಕಣಿ ಭಾಷಾ ಮಂಡಳ 21-02-1976ರಂದು ಜರುಗುವ ಅಕಾಡೆಮಿಯ ಸರ್ವಸದಸ್ಯರ ಸಭೆಯಲ್ಲಿ ಇನ್ನೂ ಹೆಚ್ಚಿನ ಮಾಹಿತಿಯೊಂದಿಗೆ ತಮ್ಮ ವಿಚಾರಗಳನ್ನು ಮಂಡಿಸಿದರು. ಈ ಸಲ ಬಹಳಷ್ಟು ಸದಸ್ಯರಿಗೆ ಕೊಂಕಣಿ ಭಾಷೆಯ ಬಗ್ಗೆ ಪೂರ್ಣ ಮಾಹಿತಿ ಇದ್ದುದರಿಂದ 8 ಜನ ಮರಾಠಿ ಸಾಹಿತಿಗಳ ಆಕ್ಷೇಪಣೆ ಹೊರತಾಗಿ ವಿವಿಧ ಸದಸ್ಯರ ಬಹುಮತ ದೊರೆತು ಕೊಂಕಣಿ ಸಾಹಿತ್ಯಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯಲ್ಲಿ ಸ್ಥಾನ ದೊರೆಯಿತು. ದೇವನಾಗರಿ ಲಿಪಿಯಲ್ಲಿ ಅದರ ಕಾರ್ಯ ಕಲಾಪಗಳಿಗೆ ಅನುಮತಿ ದೊರೆಯಿತು. ಆದರೆ 6 ವರ್ಷದ ನಂತರ 1981ರಲ್ಲಿ ಮತ್ತೆ ದೇವನಾಗರಿ ಒಂದೇ ಲಿಪಿ ಏಕೆ ಎಂದು ಆಕ್ಷೇಪಣೆ ಬಂದಿತು. ಅದನ್ನು ಏಡವೈಜರಿ ಬೋರ್ಡ ಆಫ್ ಕೊಂಕಣಿ ಸಮಿತಿಗೆ ಕಳುಹಿಸಲಾಯಿತು. ಹಾಗೂ 21-11-1981ರಲ್ಲಿ ಕೊಂಕಣಿ ಭಾಷೆಯಲ್ಲಿ ದೇವನಾಗರಿ ಲಿಪಿಯಲ್ಲಿ ಬರೆದ ಸಾಹಿತ್ಯಕ್ಕೆ ಮಾತ್ರ ಕೇಂದ್ರ ಸಾಹಿತ್ಯ ಪ್ರಶಸ್ತಿ ದೊರೆಯುವುದೆಂದು ತಿರ್ಮಾನವಾಯಿತು. ಅಂತಿಮವಾಗಿ 05-1-1982ರಲ್ಲಿ ಕೇಂದ್ರ ಅಕಾಡೆಮಿ ತಮ್ಮ ಸಭೆಯಲ್ಲಿ ಠರಾವು ಪಾಸ ಮಾಡಿತು.

2. ಭಾರತದ ಸಂವಿಧಾನದಲ್ಲಿ ಕೊಂಕಣಿ ಭಾಷೆಯ ಸ್ಥಾನಮಾನ - ಭಾರತದ ಸಂವಿಧಾನ 8ನೇ ಪರಿಶ್ಚೇದದಲ್ಲಿ ಕೊಂಕಣಿ ಭಾಷೆಗೆ ರಾಷ್ಟ್ರೀಯ ಮನ್ನಣೆ ದೊರೆಯಲು ಹಲವಾರು ಕೊಂಕಣಿ ಸಂಘಟನೆಗಳು ಹಲವಾರು ವರ್ಷ ಚಳುವಳಿ ಮಾಡಿದವು.

1986ರಲ್ಲಿ ಗೋವಾದ ಸಂಘಟನೆಯ ಕೊಂಕಣಿ ಪ್ರಜಾ ಆವಾಜ್ 3 ಬೇಡಿಕೆಗಳನ್ನು ಇಟ್ಟಿತು.

1. ಗೋವಾ ರಾಜ್ಯದ ಆಡಳಿತ ಭಾಷೆ ಕೊಂಕಣಿ ಆಗಬೇಕು.

2. ಸಂಪೂರ್ಣ ಗೋವಾರಾಜ್ಯವಾಗಿರಬೇಕು.

3. ಭಾರತದ ಸಂವಿಧಾನದ 8ನೇ ಪರಿಶ್ಚೇದದಲ್ಲಿ

ಕೊಂಕಣಿ ಭಾಷೆಯ ಸೆರ್ಪಡೆಯಾಗಬೇಕು. ಮೊದಲನೇಯ ಬೇಡಿಕೆ ಗೋವಾ ಸರ್ಕಾರದೊಂದಿಗೆ ಇತ್ತು. ಉಳಿದ ಎರಡನ್ನು ಭಾರತ ಸರ್ಕಾರಕ್ಕೆ ರವಾನಿಸಿತು. ಮೊದಲನೆಯ ಬೇಡಿಕೆ 4-2-1987ರಂದು ಇಡೇರಿದರೆ ಎರಡನೇಯದು 30-5-1987ರಂದು ಇಡೇರಿತು. ಆದರೆ ಮೂರನೇಯದಕ್ಕೆ ಬಹಳವರ್ಷ ಕಾಯಬೇಕಾಯಿತು.

ಗೋವಾ ಸಂಘಟನೆಯವರು ಅಂದಿನ ಕೇಂದ್ರ ಸರ್ಕಾರದ ಮಾನವ ಹಕ್ಕು ಆಯೋಗದ ಸಚಿವರಾದ ಶ್ರೀ ಪಿ.ವಿ. ನರಸಿಂಹರಾವ್‌ರವರನ್ನು ಸಂಪರ್ಕಿಸಿದಾಗ ಅವರು ತಮ್ಮ ಸಹಮತಿ ನೀಡಿದರು. 5-9-1987ರಂದು ಅಂದಿನ ಪ್ರಧಾನಮಂತ್ರಿ ಮಾನ್ಯ ರಾಜೀವಗಾಂಧೀಜಿಯವರ ಅಮೃತಹಸ್ತದಿಂದ ಶ್ರೀ ರವೀಂದ್ರ ಕೇಳಕರ ಬರೆದ ಕೊಂಕಣಿ ಮಹಾಭಾರತ ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ಕೊಂಕಣಿಗೆ 8ನೇ ಪರಿಶ್ಚೇದದಲ್ಲಿ ಸ್ಥಾನಮಾನ ಸಿಗಬೇಕೆಂಬ ಬಯಕೆಯನ್ನು ಇಟ್ಟರು. ಆಗ ಶ್ರೀ ರಾಜೀವಗಾಂಧೀಜಿಯವರು ಶ್ರೀ ಪಿ. ವಿ. ನರಸಿಂಹರಾವ್‌ರವರನ್ನು ಸಂಪರ್ಕಿಸಲು ತಿಳಿಸಿದಂತೆ ಅಂದಿನ ಗೋವಾದ ಕೊಂಕಣಿ ಅಕಾಡೆಮಿ ಅಧ್ಯಕ್ಷರಾದ ಪುರುಷೋತ್ತಮ ಕಾಕೋಡರವರ ತಂಡ ಶ್ರೀ ಪಿ. ವಿ. ನರಸಿಂಹರಾವ್‌ರವರನ್ನು ಭೇಟಿಯಾಗಿ ಎಲ್ಲವನ್ನು ವಿವರಿಸಿದರು. ಶ್ರೀ ಪಿ. ವಿ. ನರಸಿಂಹರಾವ್‌ರವರು ಅಂದಿನ ಗೃಹಮಂತ್ರಿ ಶ್ರೀ ಎಸ್.ಬಿ.ಚೌಹಾಣರನ್ನು ಎಲ್ಲ ಪಕ್ಷದ ಪ್ರಮುಖರನ್ನು ಒಂದು ಸಭೆ ಏರ್ಪಡಿಸಲು ತಿಳಿಸಿದರು. ಅಂದು 8 ವಿವಿಧ ಭಾಷಿಕರು 8ನೇ ಪರಿಶ್ಚೇದದಲ್ಲಿ ತಮ್ಮ ಭಾಷೆಯನ್ನು ಸೇರಿಸಲು ಪ್ರಯತ್ನಿಸುತ್ತಿದ್ದರು. ಆದರೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಯಾದಿಯಲ್ಲಿರುವ ಭಾಷೆಗಳು ಹಾಗೂ ರಾಜ್ಯ ಭಾಷೆ ಹೊಂದಿರುವ ಭಾಷೆಗಳಿಗೆ ಮಾತ್ರ 8ನೇ ಪರಿಶ್ಚೇದದಲ್ಲಿ ಸೇರ್ಪಡಿಸಲು ತಿರ್ಮಾನವಾಗಿದ್ದರಿಂದ ಬರೀ ಮೂರು ಭಾಷೆಗಳಾದ ಕೊಂಕಣಿ, ಮಣಿಪುರಿ ಹಾಗೂ ನೇಪಾಳಿಗೆ ಮಾತ್ರ ಅನುಮೋದನೆ ದೊರೆಯಿತು.

ಭಾರತದ ಸಂವಿಧಾನದಲ್ಲಿ ಸೇರ್ಪಡೆಯಾಗಬೇಕಾದರೆ ಸಂಸದ ಅಧಿವೇಶನದಲ್ಲಿ ಅದರ ಕಾರ್ಯವಾಗಬೇಕಿತ್ತು ಶ್ರೀ ಪುರುಷೋತ್ತಮ ಕಾಕೋಡಕರರವರ ವಿನಂತಿಯಂತೆ ಅವರಿಗೆ ಮಾರ್ಗದರ್ಶನ ನೀಡಲು ಶ್ರೀ ಉದಯ ಬೇಂಬ್ರೆ ದಿಲ್ಲಿಗೆ ಹೋದರು. 20 ಅಗಸ್ಟ್ 1992 ಕೊಂಕಣಿ

ವಿಜಯೋತ್ಸವಕ್ಕೆ ಪ್ರಮುಖವಾಗಿ ಎರಡು ಐತಿಹಾಸಿಕ ಮೈಲುಗಲ್ಲುಗಳಿವೆ. ಪ್ರಥಮವಾಗಿ ಕೇಂದ್ರ ಸಾಹಿತ್ಯ ಅಕಾಡೆಮಿಯಲ್ಲಿ ಕೊಂಕಣಿ ಸಾಹಿತ್ಯಕ್ಕೆ ಸ್ಥಾನಮಾನ ಹಾಗೂ ಎರಡನೇಯದಾಗಿ ಭಾರತದ ಸಂವಿಧಾನದಲ್ಲಿ ಕೊಂಕಣಿ ಭಾಷೆಗೆ ಸ್ಥಾನಮಾನ ಇದಕ್ಕಾಗಿ ಹಲವಾರು ವರ್ಷದಿಂದ ಗೋವಾ-ಕರ್ನಾಟಕ-ಮಹಾರಾಷ್ಟ್ರ-ಕೇರಳಾದಲ್ಲಿ ಸತತ ಪ್ರಯತ್ನಗಳು ನಡೆದವು. 1962ರಲ್ಲಿ ಗೋವಾ ಸ್ವತಂತ್ರವಾದಾಗ 8ನೇ ಅಖಿಲ ಭಾರತ ಪರಿಷತ್ ಮಡಗಾಂವದಲ್ಲಿ ಜರುಗಿದಾಗ ಒಂದು ಠರಾವ ಪಾಸ ಮಾಡಿ ಕೇಂದ್ರ ಸಾಹಿತ್ಯ ಅಕಾಡೆಮಿ ದೆಹಲಿಗೆ ರವಾನಿಸಲಾಯಿತು. ಆಗ ಕೇಂದ್ರ ಸಾಹಿತ್ಯ ಅಕಾಡೆಮಿ ಕೆಲ ಪದಾಧಿಕಾರಿಗಳನ್ನು ಸೇರಿಸಿ ಈ ಕೆಳಗಿನಂತೆ ಒಂದು ಸಮಿತಿಯನ್ನು ರಚಿಸಲಾಯಿತು. ಕೊನೆಯ ದಿನವಾಗಿತ್ತು. ಕಾರ್ಯವಾಗುವ ಸೂಚನೆ ಕಂಡು ಬರುತ್ತಿರಲಿಲ್ಲ. ಉದಾರರಾಗಿದ್ದ ಶ್ರೀ ಕಾಕೋಡಕರ, ಎಡ್ವರ್ಡ್ ಫೊಲೇರೊ ಯೂನಿಯನ್ ಮಿನಿಸ್ಟರ್ ಎಚ್. ಶಾಂತರಾಮ ಎಲ್. ನಾಯ್ಕ ಮುಂತಾದವರು ಗೃಹಮಂತ್ರಿಯವರಿಗೆ ಆ ದಿನ ಬಿಲ್ ಪಾಸ್ ಮಾಡಲು ವಿನಂತಿಸಿದರು. ಆದರೆ ವಿರೋಧ ಪಕ್ಷದ ನಾಯಕರ ಅನುಮತಿಯೂ ಬೇಕಾಗಿತ್ತು. ಸಮಯ ಬಹಳ ಕಡಿಮೆಇತ್ತು. ಆಗ ಶ್ರೀ ಕಾಕೋಡಕರರವರು ತಮಗೆ ಪರಿಚಯವಿದ್ದ ಎಲ್ಲಾ ಕಾಂಗ್ರೆಸ್ ಸಂಸದರನ್ನು ಭೇಟಿಮಾಡಿ ಮನವಲಿಸಿದರೆ ಶ್ರೀ ಉದಯ ಬೇಂದ್ರೆ ವಿರೋಧ ಪಕ್ಷದ ಸಂಸದರಾದ ಶ್ರೀ ವ್ಹಿ.ಪಿ. ಸಿಂಗ, ಶ್ರೀ ಎಲ್.ಕೆ. ಅದವಾನಿ, ಶ್ರೀ ಚಂದ್ರಜೀತ್ ಯಾದವ ಶ್ರೀ ಪಿ. ಉಪೇಂದ್ರ ಮುಂತಾದವರನ್ನು ಭೇಟಿಯಾಗಿ ಅವರ ಅನುಮೋದನೆ ಪಡೆದರು.

ಸಂವಿಧಾನದ 71ನೇ ತಿದ್ದುಪಡಿ ಮಸೂದೆ 1992 ಲೋಕಸಭೆಯಲ್ಲಿ 11-30 ಗಂಟೆಗೆ 20-8-1992ರಂದು ಸ್ಪೀಕರ ಶ್ರೀ ಶಿವರಾಜ ಪಾಟೀಲರು ಪಾಸ್ ಮಾಡಿದರು. ತಕ್ಷಣ ರಾಜ್ಯಸಭೆಯಲ್ಲೂ ಪಾಸ್ ಮಾಡಲಾಯಿತು. ಹಾಗೂ ಕೊಂಕಣಿಗರು 20-8-1992ರಂದು ವಿಜಯೋತ್ಸವ ಆಚರಿಸಿದರು.

♦♦♦♦



# 6. ಕರ್ನಾಟಕದಲ್ಲಿ ವಿಜಯೋತ್ಸವ

## 20-08-1993

■ ಡಾ. ವಸಂತ ಬಾಂದೇಕರಕಾರವಾರ

ಸಂವಿಧಾನದ 8ನೇ ಪರಿಶ್ಚೇದದಲ್ಲಿ ಕೊಂಕಣಿ ಭಾಷೆಗೆ ಮನ್ನಣೆ ಸಿಕ್ಕ ಪ್ರಥಮ ವರ್ಷಾಚರಣೆ ದಿನಾಂಕ 20-08-1993ರಂದು ಮಂಗಳೂರಿನ ಪುರಭವನದಲ್ಲಿ ಕೊಂಕಣಿ ಭಾಷಾ ಮಂಡಳ ಹಾಗೂ ಮಾಂಡಸೋಬಾಣ ಸಂಸ್ಥೆಯಿಂದ ವಿಜೃಂಭಣೆಯಿಂದ ಅಖಿಲ ಕರ್ನಾಟಕ ಮಟ್ಟದ "ಸಂಭ್ರಮ" ಎಂಬ ಕಾರ್ಯಕ್ರಮ ಯಶಸ್ವಿಯಾಗಿ ಜರುಗಿತು. ವಿವಿಧ ಕೊಂಕಣಿ ಭಾಷಿಕ ಸಮುದಾಯದವರು ಆಚರಿಸಿದ ಈ ಕಾರ್ಯಕ್ರಮದಲ್ಲಿ ರಾಜ್ಯದ ವಿವಿಧ ಭಾಗದಿಂದ ಸುಮಾರು 625 ಕೊಂಕಣಿ ಕಲಾವಿದರು ಪ್ರತಿಭಾಸ್ಪರ್ಧೆಯಲ್ಲಿ ಭಾಗವಹಿಸಿದರು. ಕಾರ್ಯಕ್ರಮವನ್ನು ಮಾಜಿ ಅಧ್ಯಕ್ಷರು ಸಿಂಡಿಕೇಟ್ ಬ್ಯಾಂಕ್ ಹಾಗೂ ಟಿ.ಎಂ.ಎ. ಪೈ ಪ್ರತಿಷ್ಠಾನದ ಶ್ರೀ ಕೆ.ಕೆ. ಪೈರವರು ಉದ್ಘಾಟಿಸಿದರು. ವೇದಿಕೆಯ ಮೇಲೆ ಗಣ್ಯರಾದ ಮಹಿಳಾ ಮೇಯರ್ ಶ್ರೀಮತಿ ಯುನಿಸ್ ಬ್ರಿಟ್ಟೊ, ಶ್ರೀ ಬಿ. ಗಣಪತಿ ಪೈ, ರೆ.ಫಾ. ಅಲೆಕ್ಸಾಂಡರ್ ಡಿಸೋಜಾ ಎಡ್ವಿನ್, ಡಿ.ಎಸ್. ಡಿಸೋಜಾ, ಕದ್ರಿ ಜಗದೀಶ ಪೈ, ಶ್ರೀ ಕೆ. ಜಿ. ನಾಯಕ ಕೊಂಕಣಿ ಭಾಷಾ ಮಂಡಳದ ಶ್ರೀ ಬಸ್ತಿವಾಮನ ಶೇಣ್ವೈ ಹಾಗೂ ಮಾಂಡಸೋಬಾಣದ ಗುರುಕಾರ ಶ್ರೀ ಎರಿಕ್ ಓಂಛಾರಿಯಾ ಮುಂತಾದವರಿದ್ದರು. ಪ್ರ. 625 ಕಲಾವಿದ ಪ್ರತಿಭಾ ಸ್ಪರ್ಧೆಯಲ್ಲಿ ಕಾರವಾರದ ಕಲಾವಿದ ವಸಂತ ಬಾಂದೇಕರ ಪ್ರಥಮ ಸ್ಥಾನ ಪಡೆದರು. ಮಾಂಡಸೋಬಾಣರವರ ರಾಜ್ಯಮಟ್ಟದ ಅತ್ಯುತ್ತಮ ನಟ ಪ್ರಶಸ್ತಿ ಕಾರವಾರದ ವಸಂತ ಬಾಂದೇಕರ ಹಾಗೂ ಮಂಗಳೂರಿನ ಕುಮಾರಿ ಪ್ರೀಯಾ ರೊಡ್ರಿಗ್ಸ್‌ರವರಿಗೆ ನೀಡಲಾಯಿತು.

♦♦♦♦

**ಉದಯವಾಣಿ : ದಿನಾಂಕ: 25/08/1993**

**'ಸಂಭ್ರಮ್' ಉತ್ಸಾಹ ಮುಂದುವರಿಯಲಿ : ಕೆ. ಕೆ. ಪೈ**



**ದಿ: 20/08/1992 ರಂದು ಕೊಂಕಣಿ ಭಾಷೆಗೆ ಸಂವಿಧಾನದಲ್ಲಿ ರಾಷ್ಟ್ರೀಯ ಭಾಷೆ ಎಂದು ಮನ್ನಣೆ ದೊರೆತ ಬಗ್ಗೆ ಮಂಗಳೂರಿನಲ್ಲಿ ಜರುಗಿದ ವಾರ್ಷಿಕ ಸಂಭ್ರಮಾಚರಣೆ (ದಿ: 20/08/1993)**



# 7. ಉತ್ತರಕನ್ನಡದಲ್ಲಿ ಕೊಂಕಣಿ ಚಳುವಳಿ

■ ಅರುಣ ಉಭಯಕರ, ಕುಮಟಾ

ಕೊಂಕಣಿ ಭಾಷಿಕರಲ್ಲಿ ಅಂದಾಜು 42 ವಿವಿಧ್ ಸಮುದಾಯಗಳಿದ್ದು ಅದರಲ್ಲಿ ಅಂದಾಜು 35 ವಿವಿಧ ಸಮುದಾಯಗಳು ಉತ್ತರಕನ್ನಡ ಜಿಲ್ಲೆಗಳಲ್ಲಿವೆ. ಅದರಲ್ಲೂ ವಿಶಿಷ್ಟವಾದ ನವಾಯುತ ಜಮಾಯುತ-ದಾಲ್ಡಿ-ಸಿದ್ದಿ-ಗೌಳ ಇವುಗಳಾಗಿವೆ. ಕೊಂಕಣಿ ಚಳುವಳಿಯ ಇತಿಹಾಸದಲ್ಲೆ ಉತ್ತರಕನ್ನಡ ಜಿಲ್ಲೆಗೆ ಪ್ರಥಮ ಸ್ಥಾನವಿದೆ. 1889ರಲ್ಲಿ ಕುಮಟಾದ ಹೆರವಟ್ಟಾ ಗ್ರಾಮದಲ್ಲಿ ಜನಿಸಿದ ಶ್ರೀ ಮಾಧವ ಮಂಜುನಾಥ ಶಾನಭಾಗರವರು ಮುಂದೆ ಕಾರವಾರದಲ್ಲಿ ವಕೀಲ ವೃತ್ತಿ ಮಾಡುವಾಗ ಭಾರತದಲ್ಲಿ ಹರಿದು ಹಂಚಿಹೋದ ಎಲ್ಲಾ ಕೊಂಕಣಿಗರನ್ನು ಒಂದೇ ವೇದಿಕೆಗೆ ತರುವ ದೃಷ್ಟಿಯಿಂದ ಅಂದಿನ ಕಠಿಣ ದಿನಗಳಲ್ಲು ಕರ್ನಾಟಕ-ಮಹಾರಾಷ್ಟ್ರ-ಗೋವಾ-ಕೇರಳಾ ರಾಜ್ಯದ ವಿವಿಧ ಕೊಂಕಣಿ ಭಾಷಿಕರನ್ನು ಸಂಪರ್ಕಿಸಿ 1939ರಲ್ಲಿ ಕಾರವಾರದಲ್ಲಿ ಜುಲೈ 8-9ರಂದು ಪ್ರಥಮ ಅಖಿಲ ಭಾರತ ಕೊಂಕಣಿಯ ಅಧಿವೇಶನ ಆಯೋಜಿಸಿದರು. ಅಂದಿನಿಂದ ಇಂದಿನವರೆಗೂ ಪ್ರತಿ ಎರಡು ವರ್ಷಕ್ಕೊಮ್ಮೆ ಸಮಾವೇಶಗಳು ಜರುಗುತ್ತವೆ. ಕೊಂಕಣಿ ಭಾಷೆಗೆ ಸಂವಿಧಾನದಲ್ಲಿ ರಾಷ್ಟ್ರೀಯ ಭಾಷೆಯೆಂದು ಮನ್ನಣೆ ದೊರೆಯಲು ಕಾರಣವಾಗಿದೆ ಎಂದು ಹೇಳಬಹುದು. ಗೋಕರ್ಣ ಬಂಕಿಕೊಡ್ಲ ಗ್ರಾಮದ ಬಂಕನಾಥೇಶ್ವರ ದೇವಸ್ಥಾನದಲ್ಲಿದ್ದ ಶ್ರೀ ಶಿವರಾಮಸ್ವಾಮಿ ಇವರು ಅನೇಕ ಭಕ್ತಿಗೀತ ಕೊಂಕಣಿಯಲ್ಲಿ ರಚನೆ ಮಾಡಿದರು. ಕುಮಟಾ ಮಲ್ಲಾಪುರದ ಶ್ರೀಮತಿ ಆವಡಿಬಾಯಿ ಎಂಬುವವರು ಸುಧಾಮಕೃಷ್ಣ ಭಕ್ತಿಪರ ಗೀತರಚನೆ ಮಾಡಿದರು. 1932ರಲ್ಲಿ 55 ತಾರಮಕ್ಕಿ ಎಂಬುವವರು ಊರುರು ತಿರುಗಿ ದೇವನಾಗರಿಯಲ್ಲಿ ಕೊಂಕಣಿ ವಡಪು ಅಮರವಾಣಿಗಳನ್ನು ಸಂಗ್ರಹ ಮಾಡಿ ಪುಸ್ತಕ ರೂಪದಲ್ಲಿ ಹೊರತಂದರು. ಕೊಂಕಣಿ ಭಾಷಿಕ ಕ್ರಿಶ್ಚನ್ ಬಾಂಧವರು ತಮ್ಮ ಜಾನಪದ ಕಲೆ ಮುಂತಾದವುಗಳನ್ನು ಪಾರಂಪರಿಕವಾಗಿ ಜೀವಂತವಾಗಿಟ್ಟರು. ಅದರಂತೆ ವಿವಿಧ ಕೊಂಕಣಿ ಭಾಷಿಕರು ಸಹಿತ ಪ್ರಯತ್ನ ಮಾಡಿದರು.

ಕಾರವಾರ ಸದಾಶಿವಗಡದ ಏಕಪಾತ್ರ ಅಭಿನಯ ಹಾಸ್ಯ ಕಲಾವಿದರು ಡಾ. ವಸಂತ ಬಾಂದೇಕರ 1987ರಿಂದ 1997ರವರೆಗೆ ಸತತವಾಗಿ 10ವರ್ಷ ಉ.ಕ ಜಿಲ್ಲಾ ವಾರ್ತಾಇಲಾಖೆ, ಆರೋಗ್ಯ ಇಲಾಖೆಯ ಜಿಲ್ಲಾ ಪಂಚಾಯಿತಿಯ ವಿವಿಧ ಯೋಜನಾ ಪ್ರಚಾರಕ ಕಲಾವಿದನಾಗಿ ಆಯ್ಕೆಯಾಗಿ ಕಾರವಾರ ತಾಲೂಕಿನ ಅಂದಾಜು 40 ಕೊಂಕಣಿ ಭಾಷಿಕ ಗ್ರಾಮಗಳಲ್ಲಿ ಕೊಂಕಣಿಯಲ್ಲಿ ಸ್ವರಚಿತ ಗೀತಗಾಯನ, ಏಕಪಾತ್ರಭಿನಯ, ಹಾಸ್ಯ ಚಟಾಕಿಯೊಂದಿಗೆ ಸುಮಾರು 700 ಕಾರ್ಯಕ್ರಮಗಳನ್ನು ಮಾಡಿದ್ದು ಕೊಂಕಣಿ ಪ್ರತಿಭಾ ಸ್ಪರ್ಧೆಯಲ್ಲಿ ರಾಜ್ಯಮಟ್ಟದ ಪ್ರಥಮ ಪ್ರಶಸ್ತಿ ರಾಷ್ಟಮಟ್ಟದ ದ್ವಿತಿಯ ಪ್ರಶಸ್ತಿ ವಿವಿಧ ಸಂಗೀತ ವಾದ್ಯಗಳ ಅನುಕರಣೆ ಗಿನ್ನಸ ದಾಖಲೆ ಹಲವಾರು ರಾಜ್ಯದ ಕೊಂಕಣಿ ಸಂಘಟನೆಗಳ ವತಿಯಿಂದ 100 ನಿಮಿಷ ಏಕವ್ಯಕ್ತಿ ಹಾಸ್ಯ ಕಲಾ ಪ್ರದರ್ಶನ ಅಂದಾಜು 1200 ಕಾರ್ಯಕ್ರಮ ಮಾಡಿ ರಂಜಿಸಿದ್ದಾರೆ. ಕಲಾ ಸೇವೆಗಾಗಿ ಯುನಿವರ್ ಸಟಿ ಆಫ್ ಸಾಧ್ಯ ಅಮೇರಿಕಾದಿಂದ ಗೌರವ ಡಾಕ್ಟರೇಟ್ ಪಡೇದ ಪ್ರಥಮ ಕೊಂಕಣಿ ಕಲಾವಿದರಾದ ಇವರು ಎರಡು ಬಾರಿ ಕೊಂಕಣಿ ಅಕಾಡೆಮಿ ಸದಸ್ಯರಾಗಿ ಯಶಸ್ವಿ ಸೇವೆ ನೀಡಿದ್ದಾರೆ. ಕಾರವಾರದಲ್ಲಿ ಪ್ರತಿ ವರ್ಷ ಕೊಂಕಣಿ ಮಾನ್ಯತಾ ದಿನಾಚರಣೆ ಆಚರಿಸುತ್ತಾ ಬಂದಿರುವ ಇವರು 21-8-2017ರಂದು ಇವರು ಪರಿಕಲ್ಪನೆಯಿಂದ ಕೊಂಕಣಿ ಮಾತಾ ಭಾವಚಿತ್ರ ಲೋಕಾರ್ಪಣೆ ಗೊಂಡಿದ್ದು ವಿಶೇಷ ಹಾಗೂ ಲೇಖಕರಾಗಿ 6-7 ಕೊಂಕಣಿ ಪುಸ್ತಕಗಳು ಪ್ರಕಟಗೊಂಡಿವೆ.

ಕುಮಟಾದಲ್ಲಿ 1989ರಲ್ಲಿ ಕೊಂಕಣಿ ಪರಿಷತ್ ಪ್ರಾರಂಭವಾಯಿತು. ಶ್ರೀ ಅರುಣ ಉಭಯಕರ, ಡಾ. ಶಿವರಾಮ ಕಾಮತ ಮುಂತಾದವರು ಪ್ರತಿವರ್ಷ ಹಲವಾರು ಕಾರ್ಯಕ್ರಮ ಆಚರಿಸುತ್ತಾ ಬಂದಿದ್ದಾರೆ. 1989ರಲ್ಲಿ ಶ್ರೀ ವ್ಹಿ. ಎಸ್. ಸೊಂದೆಯವರ ನೇತೃತ್ವದಲ್ಲಿ ಶಿರಸಿಯಲ್ಲಿ ಸಹಿತ ಕೊಂಕಣಿ ಪರಿಷತ್ ಪ್ರಾರಂಭವಾಗಿ ಕಳೆದ 25 ವರ್ಷದಿಂದ ಅತ್ಯುತ್ತಮ ಕಾರ್ಯನಿರ್ವಹಿಸುತ್ತಾ ಬಂದಿದೆ. 1992ರಲ್ಲಿ ಕಾರವಾರದ ಶ್ರೀ ದೀಪಕ ಗಾಂವಕರ ನೇತೃತ್ವದಲ್ಲಿ ಕೊಂಕಣಿ ಭಾಸ ಆನಿ ಸಂಸ್ಕೃತಿ ಕೇಂದ್ರ 7,8 ಫೆಬ್ರುವರಿ 1992ರಂದು ಕಾರವಾರದಲ್ಲಿ ಯಶಸ್ವಿ 11ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನ ಜರುಗಿತು.

1997 ಸದಾಶಿವಗಡದಲ್ಲಿ ಶ್ರೀಮತಿ ಉಷಾ ರಾಣಿಯವರ ಅಧ್ಯಕ್ಷತೆ ಹಾಗೂ ಡಾ. ವಸಂತ ಬಾಂದೇಕರರ ಉಪಾಧ್ಯಕ್ಷತೆಯಲ್ಲಿ ಕೊಂಕಣಿ ಸಂಸ್ಕೃತಿ ಮಂಡಳ ಸ್ಥಾಪಿಸಿ ಸತತ 10ವರ್ಷ ಹಲವಾರು ಕಾರ್ಯಕ್ರಮಗಳು ಜರುಗಿದವು ಹೊನ್ನಾವರದ ಮೇರಿಮೇಕರ್ಸ ಅಸೋಸಿಯೇಶನ್ ಪ್ರತಿವರ್ಷ ಕೊಂಕಣಿ ರಂಗೋತ್ಸವ ಆಚರಿಸುತ್ತ ಬಂದಿದೆ. ಸದಾನಂದ ನಾಯ್ಕ ಕೋಡಿಬಾಗ ಇವರು ಸ್ಥಾಪಿಸಿದ ನರಸಿಂಹ ಕಲಾಕುಂಜ ಹಳೆಯ ನಾಟಕ ಕಂಪನಿಯಾಗಿದೆ. ಕಳೆದ 40 ವರ್ಷದಿಂದ ಪ್ರತಿ ವರ್ಷ ನಾಟಕ ಮಾಡುತ್ತ ಬಂದಿದ್ದಾರೆ. ಶಿರಸಿಯ ದಿ. ಆರ್.ಎಂ. ಶೇಠರ ವಿವಿಧ ಕೊಂಕಣಿ

ಪುಸ್ತಕಗಳು ಪ್ರಕಟವಾಗಿವೆ. ಯೋಧ ದಾಂಡೇಲಿಯ ದಿ. ಶ್ರೀ ಕೆ. ಎನ್. ರಾವ್. ರವರು ಮಚ್ಚೇ ಎಂಬ ಕವನಸಂಕಲನ ಹಾಗೂ ಭಾರತಯಾತ್ರಾ (ಪ್ರವಾಸಕಥನ) ಸಿದ್ಧಾಪುರದ ಪ್ರೋ. ಕೆ. ಎಸ್. ಭಟ್ಟರ ಭಾವಗೀತೆ ಸಂಕಲನ ದಿನಕರ ದೇಸಾಯಿ ಅವರ (ದಿನಕರಾಲಿ ಕವನ) ಗೌರೀಶ ಕಾಯ್ಕಿಣಿಯವರ (ಮಿನಾಕ್ಷಿ) ಶ್ರೀ ವ್ಹಿ. ಆರ್. ಶಿಬಾಡರವರ (ಸೌರಭ) ವಾಸುದೇವ ಶಾನಭಾಗರವರ (ಭಾವಸಂಗಮ) ಅರುಣ ಉಭಯಕರರವರ (ಮಂಥನ) ಶ್ರೀ ನಾಗೇಶ ಅಣ್ವೇಕರರವರ ಶ್ರೀ ಜೆ. ಡಿ ಪಾಲೇಕರರವರ ಚುಟುಕು ಸಾಹಿತ್ಯ ಹಾಗೂ ಕೇಂದ್ರ ಸಾಹಿತ್ಯ ಪುರಸ್ಕಾರದ ಶ್ರೀ ಮಹಾಬಳೇಶ್ವರ ಸೈಲ ಶ್ರೀ ದೇವಿದಾಸ ಕದಮ್, ಶ್ರೀಮತಿ ಶೈಲಾ ಕೊಳಂಕರ ಕೊಂಕಣಿ ಖೇಳ ರುವಾರಿಗಳಾದ ವಸಂತ ಸೈಲ್, ರಾಜೇಶ ಸೈಲ್, ಗಣಪತಿ ನಾಯ್ಕ, ಗುರುದಾಸ ಪ್ರಸಿದ್ಧ ಕಿರ್ತನಾಕಾರರಾಗಿ ಹೋದ ಬಾಬಾಕರ್ವೆ ಸಂಗೀತಗಾರರಾದ ದಿನೇಶ ಗಡಕರ, ಪ್ರೇಮಾನಂದ ಗಡಕರ ಪ್ರದೀಪ ಮಹಾಲೆ, ಶ್ರೀ ರಾಮಾಬಾಂದೇಕರ, ನಾಟಕ ಕಲಾವಿದೆ ಶ್ರೀಮತಿ ಕುಮುದಾ ಗಡಕರ ಕವಿ ಕೃಷ್ಣಾನಂದ ಬಾಂದೇಕರ ಸಾಹಿತಿ ವಿಠಲರಾಯ ಭಟ್, ಮುಂತಾದವರ ಸೇವೆ ಸಾಹಿತ್ಯದ ಮೈಲುಗಲ್ಲುಗಾಳಗಿವೆ.

**ಉತ್ತರ ಕನ್ನಡದಲ್ಲಿ ಕೊಂಕಣಿ ನಾಟಕಗಳು–**

ಹಿಂದುಗಳ ಹಲವಾರು ಜಾತ್ರೆ ಉತ್ಸವ ಸಂದರ್ಭದಲ್ಲಿ ಕೊಂಕಣಿ ನಾಟಕಗಳ ಪ್ರದರ್ಶನವಾಗುತ್ತ ಬಂದಿವೆ. ಮನರಂಜನೆಗಾಗಿ ಹೆಚ್ಚಿನ ಹಾಸ್ಯ ಪ್ರಧಾನ ಸಾಂಸಾರಿಕ–ಸಾಮಾಜಿಕ–ನಾಟಕಗಳೇ ಇದ್ದವು ಇತ್ತಿತ್ತಲಾಗಿ ಅವು ಕಡಿಮೆ ಆಗುತ್ತಿವೆ. ಹೊನ್ನಾವರದ ಹೊಸಾಡ ಬಾಬುಟ ನಾಯಕರವರ ಜಿಲ್ಲೆಯ ಪ್ರಸಿದ್ಧ ನಾಟಕಕಾರರೆಂದು ಹೇಳಬಹುದು. ಇವರು ಬರೇದ "ಆಡಕಾಂತ್ರಿತುಲೆ ಮೊಪ್ಪಳ", ಲಗ್ನಾಚೆ ಪಿಶೆ, ವರದಕ್ಷಿಣೆ ಹಾವತೆಕ್ಕಾ ಚಲದಿನಾ, ಗಂಧರ್ವ ವಿವಾಹ ಇವು ಪ್ರಸಿದ್ಧವಾಗಿವೆ. ಶಿರಸಿಯ

ಶ್ರೀ ಆರ್. ಎಂ. ಶೇಠ ಇವರ ಕಾಮಾ ಪೂರ್ತಿ ಮಾಮ ಪ್ರಸಿದ್ಧವಿದೆ. ಶ್ರೀ ಗೌರೀಶ ಕಾಯ್ಕಿಣಿಯವರ ಅಂಬಾ, ಧ್ರುವಕುಮಾರ, ಇವು ಪ್ರದರ್ಶನ ಕಂಡಿವೆ. ಕುಮಟಾದ ಅರುಣ ಉಭಯಕರರವರ <u>ನಂದುರಾಯಾಲೆ</u> ದರ್ಬಾರ ಹಾಗೂ ಭಟ್ಟಾನಕೇಲಿ ಭಾಂದಗಡ ಪ್ರದರ್ಶನಗೊಂಡಿವೆ. ಶಿರಸಿಯ ಅನಿಲ ಪೈ ಇವರ ಮಾಯಸೂನ ಹಾಗೂ ಆದರ್ಶ ಪ್ರಕಟಗೊಂಡಿವೆ. ಕೂಡ್ಲ ಆನಂದ ಶಾನಭಾಗ ಇವರ ವಿಧಿ ಇಚ್ಛಾ, ಶಾಂತಿಅಕ್ರಾಂತಿ, ಹಾವಎಕ ನಾಟಕ ಖೆಳ್ಳೊ ಪ್ರದರ್ಶನಗೊಂಡಿವೆ. ವಾಸುದೇವ ಶಾನಭಾಗರವರ ಘರಮಾಲಕ ಹಾಗೂ ದೆವಾಲಿ ತಕರಾರ ಪ್ರದರ್ಶನಗೊಂಡಿವೆ. ಕಾರವಾರದ ಉದಯಕಾಂತ ಅಣ್ವೇಕರ ಲಾಕಾತ್ಲೊ ಎಕ ನ್ಹವರೋ ಗೋವಾ–ಮಹಾರಾಷ್ಟ್ರ–ಕರ್ನಾಟಕದ ವಿವಿಧ ಭಾಗಗಳಲ್ಲಿ ಯಶಸ್ವಿ ಪ್ರದರ್ಶನಗೊಂಡು ಸಿಡಿಗಳು, ಪುಸ್ತಕಗಳು ಮಾರಾಡವಾಗಿವೆ. ಸದ್ಯ ಕಾರವಾರದ ಸಾಕಾರ ನಾಟ್ಯಾಸಂಘ ಯಶಸ್ವಿ ನಾಟಕಗಳನ್ನು ಕೊಡುತ್ತಲಿದೆ.

♦♦♦♦



# ೮. ಕೊಂಕಣಿ ಲೋಕಕಲಾ (ಜಾನಪದ ಕಲೆ)

■ ಡಾ. ವಸಂತ ಬಾಂದೇಕರ, ಕಾರವಾರ

ಜಾನಪದದ ಬದುಕಿನ ರೀತಿಯನ್ನು ಬಿಂಬಿಸುವ ಜೀವಂತ ವ್ಯವಸ್ಥೆಯೇ ಜಾನಪದ ಸಂಸ್ಕೃತಿಯ ಒಂದು ಅಂಗ. ಜನಪದದದ ನಂಬಿಕೆ, ನಡುವಳಿಕೆ, ವೇಷ ಕುಣಿತಗಳು, ಹಬ್ಬ ಹರಿದಿನಗಳ ಆಚರಣೆಗಳೆಲ್ಲವನ್ನು ಒಳಗೊಂಡಿದ್ದು ಜಾನಪದದ ವಿಸ್ತಾರ ಬದುಕಿನಷ್ಟೆ ವಿಶಾಲ ಜಾನಪದದಲ್ಲಿ ಕಲೆ ಒಂದು ರೂಪ. ಈ ಕಲೆಯು ಶಬ್ಧಮೂಲವಾಗಿದ್ದಿರಬಹುದು.ಶಬ್ಧವಿಲ್ಲದೆಂ ತೋ ಇರಬಹುದು. ತಲೆಮಾರಿನಿಂದ ತಲೆಮಾರಿಗೆ ಇದು ವರ್ಗಾಯಿಸಲ್ಪಡುತ್ತದೆ. ಜಾನಪದ ಕಲೆಗೆ ನಿಶ್ಚಿತ ರೂಪವಿಲ್ಲ. ನಿರ್ದಿಷ್ಟ ಕಟ್ಟಳೆಗಳೂ ಒಳಪಟ್ಟಿಲ್ಲ, ಸಂಪ್ರದಾಯಗಳೇ ಪ್ರಧಾನ ವಿಸ್ತಾರವಾದ ಕೊಂಕಣಿ ಜಾನಪದ ಕಲೆಗಳಲ್ಲಿ ಸಹಜವಾದ ವಿಭಿನ್ನಗಳಿವೆ. ವಿಶಿಷ್ಟಗಳಿವೆ. ಸಾಮಿಪ್ಯ ಭಿನ್ನತೆಯಿದ್ದು ಏಕತೆಯಿದೆ. ಬದುಕಿನ ಭಾರವನ್ನು ಮರೆಯಲು ಸಮೂಹಜೀವನದ ಕಟ್ಟಿನಲ್ಲಿ ಉಳಿಸಿಕೊಂಡು ಬರಲು ಕಲಾಚೈತನ್ಯಕ್ಕೆ ಒತ್ತಾಸೆ ನೀಡಲು ಜನಪದರು ಪ್ರತಿಗ್ರಾಮದಲ್ಲೂ ಕಲೆಗಳನ್ನು ಪೋಷಿಸಿಕೊಂಡು ಬಂದಿದ್ದಾರೆ.

**ಕೊಂಕಣಿ ಜಾನಪದ ಕಲೆ-ನೆಲೆ-ಹಿನ್ನೆಲೆ –**

ಸಾಹಿತ್ಯ ಕೆಲವರ ಮನಸ್ಸನ್ನು ರಂಜಿಸಿದರೆ ಕಲೆಗಳು ಸರ್ವರ ಮನಸ್ಸನ್ನು ರಂಜಿಸುತ್ತವೆ. ಕಲೆಗಳಲ್ಲಿ ವೇದೋಪನೀಷತ್ತು, ಗೀತೆಗಳ ಸಂದೇಶ ಕಾಣುತ್ತದೆ. ಈ ಕಲೆಗಳಲ್ಲಿ ಸಾಮಾನ್ಯವಾಗಿ ದೇವಕಾರ್ಯದ ಅಥವಾ ಕೈಂಕರ್ಯದ ಅಂಗವಾಗಿ ಉದಯವಾದಂತವು. ಒಂದೊಂದು ಕಲೆಯು ದೇವರಿಗರ್ಪಿಸುವ ನೈವೇದ್ಯ ದೀಪವಾಳ ನಾಚ, ಪುಗಡಿನಾಚ, ಶಿಗಮ್ಯಾನಾಚ ತದೇಕ ಚಿತ್ತದಿಂದ ಕುಣಿತದ ಮೂಲಕ ಶುದ್ಧ ಭಕ್ತಿಯನ್ನು ಪ್ರದರ್ಶಿಸುತ್ತಾರೆ. ಅವರಿಗೆ ಅದೊಂದು ತಪಸ್ಸು. ಅದರ ಫಲವಾಗಿ ಅವರಿಗೆ ಮನಶಾಂತಿ ಲಭಿಸುತ್ತದೆ. ನೊಡುಗರ ಮನಸ್ಸು ಸಹ ಅವರ ಕುಣಿತ ಮೆರೆತಗಳಲ್ಲಿ ಲಯವಾಗುತ್ತದೆ. ಅವರಿಗೆ ತಾವೇ ಕುಣಿಯುತ್ತಿರುವಂತೆ ಭಾಸವಾಗುತ್ತದೆ. ಇವನ್ನೆಲ್ಲ ಉಪಸನಾ ಕಲೆಗಳೆಂದು ಕರೆಯಬಹುದು. ಗ್ರಾಮೀಣ ಕಲೆಗಳು ಅವರ ಬದುಕಿನ ಅವಿಭಾಜ್ಯ ಅಂಗವಾಗಿ ಜೀವನ ಮೌಲ್ಯಗಳ ನೆಲೆಗಟ್ಟಾಗಿ ಸಹಸ್ರಾರು ವರ್ಷಗಳಿಂದ ಚಾಲ್ತಿಯಲ್ಲಿದೆ. ಇಂದಿನ ಶಿಷ್ಟಕಲೆಗಳ ಬೇರು ಅವುಗಳ ಗರ್ಭದಲ್ಲಿ ಹುದುಗಿವೆಯೆಂಬುದು ಸತ್ಯ ಸಂಗತಿ. ಇಂದಿಗೂ ಅವು ಜ್ಞಾನ ಸಂಸ್ಕೃತಿಗಳ ಪ್ರಸಾರ ಮಾಧ್ಯಮವಾಗಿ ಶ್ರೀ ಸಾಮಾನ್ಯನ ಬದುಕಿನ ಅವಶ್ಯಕತೆಗಳನ್ನು ಪೂರೈಸುತ್ತಿವೆ. ಪ್ರತಿಯೊಂದು ಕಲೆಯ ಸ್ವರೂಪ ಲಕ್ಷಣೋದ್ದೇಶಗಳು ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಾಗುತ್ತದೆ. ಅಂತೆಯೇ ಅವುಗಳ ಪ್ರದರ್ಶನದಲ್ಲಿ ಬಳಸುವ ಉಪಕರಣಗಳು ಭಿನ್ನವಾಗಿರುತ್ತವೆ. ಆಯಾಯಾ ಪ್ರದೇಶದ ರೀತಿ-ನೀತಿ ಅಭಿರುಚಿ ಮನೋಧರ್ಮಗಳು ಅಲ್ಲಲ್ಲಿಯ ಜನತೆಯ ಸೌಂದರ್ಯ ಪ್ರಜ್ಞೆ ಆ ಕಲೆಗಳಲ್ಲಿ ಪ್ರತಿಬಿಂಬಗೊಳ್ಳುತ್ತದೆ. ಒಂದೊಂದು ಭಾಗದಲ್ಲೂ 30-40 ಮೈಲಿಗಳ ಅಂತರದಲ್ಲಿ ವ್ಯತ್ಯಾಸಗಳನ್ನು ಗುರುತಿಸಬಹುದಾಗಿದೆ.

ಜಾನಪದಕಲೆಗಳು ಹೆಚ್ಚಾಗಿ ಅಚಿತವಾಗಿರದೆ ಪಾರಂಪರಿಕವಾಗಿ ನಾಲಿಗೆಯಿಂದ ನಾಲಿಗೆಗೆ ವರ್ಗಾವಣೆ ಆಗುತ್ತ ಬಂದಿದ್ದರಿಂದ ಇದಕ್ಕೆ ನಾಲಿಗೆಯ ಮೇಲಿನ ಸಾಹಿತ್ಯವೆಂದು ಕರೆಯುತ್ತಾರೆ. ಅದರಲ್ಲಿ ಈ ಕೆಳಗಿನಂತೆ 3 ಭಾಗಗಳನ್ನಾಗಿ ಮಾಡಬಹುದು.

ಅ. ಗದ್ಯಗಳಲ್ಲಿ – ಪುರಾಣಕಥೆ, ದಂತಕಥೆ, ಲೋಕಕಥೆ

ಬ. ಪದ್ಯಗಳಲ್ಲಿ – ಮಂತ್ರಗೀತೆ, ಲೋಕಗೀತೆ, ಗೀತಪದ್ಯ

ಕ. ಇತರೆ – ಓಡಪು, ಒಗಟು, ಗಾದೆಮಾತು ಇತ್ಯಾದಿ.

ಡ. ಗದ್ಯಪುರಾಣ ಕಥೆಗಳಲ್ಲಿ – ಪ್ರಾಣಿ ಪಕ್ಷಿಗಳ ಕಥೆ, ದೇವರ ಕಥೆಗಳು, ಸೂರ್ಯ, ಚಂದ್ರ ನಕ್ಷತ್ರ ಕಥೆಗಳು, ದಂತಕಥೆಗಳು-ರಾಜಾ-ರಾಣಿಕಥೆಗಳು ಲೋಕಕಥೆ – ಬಂಗಾರದ ನೀರು, ಮಾತನಾಡುವ ಗಿಳಿ, ಕಪ್ಪೆ ಹಾಗೂ ರಾಜಕನ್ಯೆ ಹಲವಾರು ನೀತಿಕಥೆ, ಹಾಸ್ಯಕಥೆಗಳು ಮಹಿಳೆಯರ ಗೀತೆಗಳು – ಶಿಶುಗೀತೆಗಳು, ವಿಧಿಗೀತೆಗಳು, ನೃತ್ಯಗೀತೆಗಳು, ವೃತಗೀತೆಗಳು, ಜೋಗುಳ ಗೀತೆಗಳು, ಪಾರಂಪರಿಕ ಗೀತೆಗಳಾದ – ಸಂಪ್ರದಾಯ (ಬೀಸುವ-ಕುಟ್ಟುವ) ಪುರುಷರ ಗೀತೆಗಳು – ಶಿಗಮೊ(ಹೋಳಿ) ಗೀತೆಗಳು, ರಾಮಾಯಣ, ಮಹಾಭಾರತದ ಇತರೇ ದೇವರ ಬಗ್ಗೆ ರಚಿಸಿದ ಹಾಡುಗಳು ಇದಕ್ಕೆ ಚಾರಂಗಿ ಎಂದು ಕ-ರೆಯುತ್ತಾರೆ. ಅದರಲ್ಲೂ ತಳಯಗೀತ, ಆರತೀಗೀತ, ನಮನಗೀತೆಗಳಿವೆ ಜೋಡುಗೀತೆ – ಮಾಂಡೊ – ಎರಡು ತಂಡಗಳು ಕೂಡಿ ಹಾಡುವ ಪ್ರಕಾರಗಳು ಗೀತಕಥೆ – ರಾಜಾರಾಣಿ ಬಗ್ಗೆ ಹೇಳುವ ಕಲಾಪ್ರಕಾರಗಳು ಇತರೇ ಗೀತೆಗಳು – ಮ್ಹಣಿ-ಗಾದೆಮಾತು, ಉಮ್ಹಾಣೆ-ಒಗಟು, ಉಖಾಣೆ-ಓಡಪು

**ಮಹಿಳೆಯರ ನೃತ್ಯ (ವ್ಯವಸಾಯಿಕ) –**

(ಕಲಾವಂತಾಚೇ ನಾಚ) ದೀಪ ಮಾಳನಾಚ ಕಲಾವಂತ ಸಮುದಾಯ(ದೇವದಾಸಿ) ಪಾರಂಪರಿಕವಾಗಿ ಆ ಮನೆತನದ ಮಹಿಳೆಯರು ದೇವರ ಪಲ್ಲಕ್ಕಿಯ ಮುಂದೆ ದೀಪಮಾಳ (ಪಣತಿ, ಎಣ್ಣೆ ಬತ್ತಿಯ) ಬಿದರಿನಿಂದ ಮಾಡಿದ ಬುಟ್ಟಿಯಂತ ತಟ್ಟೆಯನ್ನು ತಲೆಯ ಮೇಲೆ ಹೊತ್ತುಕೊಂಡು ಪಂಚವಾದ್ಯದ ಸಂಗೀತದ ತಾಳಕ್ಕೆ ತಕ್ಕಂತೆ ಹೆಜ್ಜೆ ಹಾಕುತ್ತಾ ಸಾಗುತ್ತಾಳೆ. ಅವಳ ಜೊತೆಗೆ ಕೈಯಲ್ಲಿ ತಲವಾರ ಹಿಡಿದು ಒಬ್ಬ ಕಲಾವಿದನೂ ಕುಣಿಯುತ್ತಿರುತ್ತಾನೆ. ಪಲ್ಲಕ್ಕಿ ಆ ಭಾಗದ ಓಣಿಯ ಜನರ ಪ್ರತಿಯೊಬ್ಬರ ಅಂಗಳದಿಂದ ಹಾದು ಹೋಗುವಾಗ ಶೇಗಣಿಯಿಂದ ಸಾರಿಸಿದ ಅಂಗಳದಲ್ಲಿ ರಂಗೋಲಿ ಹಾಕಿ ತಳರು ತೋರಣ ಕಟ್ಟಿ ದೇವಿಯ ಪಲ್ಲಕ್ಕಿಗಾಗಿ ದೇವರ ದರ್ಶನಕ್ಕಾಗಿ ಭಕ್ತಾಧಿಗಳು ಕಾಯುತ್ತಿರುತ್ತಾರೆ. ಎಲ್ಲಕ್ಕೂ ಮುಂದೆ ನರ್ತಕಿಯ ಆ ನೃತ್ಯ ಎಲ್ಲರಿಗೂ ಆಕರ್ಷಿಸುತ್ತದೆ.

ಅದರ ಹಿಂದೆ ಭಕ್ತಾಧಿಗಳು ಅಲಂಕೃತವಾದ ಪಲ್ಲಕ್ಕಿ ಹೊತ್ತುಕೊಂಡು ಬರುತ್ತಾರೆ. ಅಲಂಕೃತವಾದ ಆ ದೇವರ ಪಲ್ಲಕ್ಕಿಗೆ ಜನರ ಕೆಟ್ಟದೃಷ್ಟಿ ತಾಗಬಾರದೆಂಬ ದೃಷ್ಟಿಯಿಂದ ದೇವದಾಸಿಯ ನರ್ತನವು ಒಂದು ಕಾರಣವೆಂದು ಪ್ರತೀಕವಾಗಿದೆ. ಈ ಹಿಂದೆ ಗೋವಾದ ಕಾರವಾರದ ಕೆಲ ದೇವಸ್ಥಾನದಲ್ಲಿ ಈ ನೃತ್ಯ ನೋಡಲು ಸಿಗುತ್ತಿತ್ತು. ಕಾರವಾರದ ಶ್ರೀ ಮಾಹಾಮಾಯಾ ದೇವಸ್ಥಾನದಲ್ಲಿ 2015ವರೆಗೂ ಚಾಲನೆಯಲ್ಲಿತ್ತು. ಆದರೆ ಆ ಮನೆತನದ ದೇವದಾಸಿಯ ನೃತ್ಯ ಈಗ ನಿಲ್ಲಿಸದ್ದರಿಂದ ನಿಂತು ಹೋಗಿದೆ. ಆದರೆ ಡಾ. ವಸಂತ ಬಾಂದೇಕರ ನೇತೃತ್ವದ ಶ್ರೀಮತಿ ಕುಮುದ ಗಡಕರ ತಂಡ ಇದನ್ನು ಜಾನಪದ ಉತ್ಸವದಲ್ಲಿ ಪ್ರದರ್ಶಿಸುತ್ತ ಬಂದಿದೆ. 2017ರಲ್ಲಿ ವಿಶ್ವ ಕೊಂಕಣಿ ಕೇಂದ್ರದಿಂದ ಮುಂಬೈದಲ್ಲಿ ಜರುಗಿದ ಶಿಗ್ಮೋತ್ಸವದಲ್ಲಿ ಪ್ರದರ್ಶಿಸಿತ್ತು.

ಧಾಲೊ ಈ ಕಲಾಪ್ರಕಾರವನ್ನು ಪೌಶ್ಯ ತಿಂಗಳಲ್ಲಿ ಆಚರಿಸುತ್ತಾರೆ. ಆ ತಿಂಗಳ ಯಾವುದೇ ಒಂದು ರವಿವಾರ ಊರಿನ ಮಹಿಳೆಯರು ಒಂದು ಪವಿತ್ರಸ್ಥಳದಲ್ಲಿ(ಮಾಂಡಾರ) ಸೇರುತ್ತಾರೆ. ಹಿಂದೂ ಸಮುದಾಯದ ಎಲ್ಲ ಸ್ತ್ರೀಯರು ಆ ಸ್ಥಳವನ್ನು ಶೇಗಣಿಯಿಂದ ಸಾರಿಸಿ ಶುದ್ಧ ಮಾಡಿ ಕೊಳ್ಳುತ್ತಾರೆ. ಒಮ್ಮೆ ಶುದ್ಧ ಮಾಡಿದ ನಂತರ ಅಲ್ಲಿ ಯಾವುದೇ ತರಹದ ಮೈಲಿಗೆಯಾಗಬಾರದು.

ಧಾಲೊ ನೃತ್ಯಕ್ಕೆ ಮಹಿಳೆಯರು ಎರಡು ಪಂಗಡ ಮಾಡಿಕೊಂಡು ಪ್ರತಿಯೊಂದು ಪಂಗಡದ ಮಹಿಳೆಯರು ಪ್ರತಿಯೊಬ್ಬರ ಸೊಂಟಕ್ಕೆ ಕೈಯಿಂದ ಬಳ್ಳಿಯಂತೆ ಹಿಡಿದು–ಕೊಂಡು ಎರಡೂ ಪಂಗಡದ ಮಧ್ಯೆ ಎರಡು ಗೆರೆ(ರೇಖೆ) ಎಳೆಯುತ್ತಾರೆ. ಹಾಗೂ ಎರಡೂ ಪಂಗಡಗಳು ಎದುರು ಬದರಾಗಿ ನಿಲ್ಲುತ್ತವೆ. ಧಾಲೊ ನೃತ್ಯದ ಸಮಯದಲ್ಲಿ ಕೈಗಳ ಹಾವಭಾವವಾಗುವುದಿಲ್ಲ. ಕಾರಣ ಪ್ರತಿಯೊಬ್ಬರ ಎರಡೂ ಕೈಗಳು ಪಕ್ಕದವಳ ಸೊಂಟಕ್ಕೆ ಬಿಗಿದಿರುತ್ತದೆ. ಆದರೆ ಇವರ ಹೆಜ್ಜೆಗಳು ಮಾತ್ರ ಗೀತೆಯ ಜೊತೆಗೆ ಕಾರ್ಯ ನಿರ್ವಹಿಸುತ್ತವೆ. ಒಂದೇ ಸ್ಥಳದಲ್ಲಿ ಎಲ್ಲರೂ ಹಾಡುತ್ತ ಮುಂದೆ ಎಳೆದಗೆರೆ(ರೇಖೆ)ಯವರೆಗೆ ಹೋಗಿ ಮರಳಿ ಬರುತ್ತಾರೆ. ಅದರಂತೆ ಎದುರಿನ ಪಂಗಡದವರು ಸಹಿತ ಇವರ ಹದ್ದಿನ ಗೆರೆಯವರೆಗೆ ಹಾಡುತ್ತ ಬಂದು ಮರಳಿ ಹೋಗುತ್ತಾರೆ. ಇವರ ಗೀತೆಗಳು ತಮ್ಮ ಗ್ರಾಮದ ಎಲ್ಲ ದೇವರ ವಿಷಯವಾಗಿ (ತುಳಸಿ–ದುರ್ಗಾದೇವಿ ಇತ್ಯಾದಿ) ಹೀಗೆ ಅಹೋರಾತ್ರಿಯವರೆಗೆ ಈ ನೃತ್ಯ ನಡೆಯುತ್ತದೆ. ಈ ನೃತ್ಯಕ್ಕೆ ಸಂಗೀತದ ಹಿಮ್ಮೆಳವಿಲ್ಲಾ. ಧಾಲೊ ನೃತ್ಯದ ಪ್ರಾರಂಬದಲ್ಲಿ ಕೆಲ ವಿಧಿಗಳನ್ನು ಮಾಡುತ್ತಾರೆ. ಮೊದಲು ಆ ಸ್ಥಳದಲ್ಲಿ ಒಂದು ಹಣತೆ ಹಚ್ಚಿ ಎಲೆ, ಅಡಿಕೆ, ವಿಳ್ಯವಿಟ್ಟು ತೆಂಗಿನಕಾಯಿ ಒಡೆಯುತ್ತಾರೆ. ನಂತರ ಮಹಿಳೆಯರಿಗೆಗಂಧ ನೀಡಿದ ನಂತರ ಆ ಸ್ಥಳದಲ್ಲಿ 3 ಗೇರೆಗಳನ್ನು ಎಳೆದು ನೃತ್ಯ ಪ್ರಾರಂಭಿಸುತ್ತಾರೆ.

ಧಾಲೊ ಪಂಗಡದವರು ಹೆಜ್ಜೆ ಹಾಕುತ್ತ ಹಾಡುತ್ತ ಮುಂದೆ ಹೋದಂತೆ ಅದೇ ರೀತಿ ಮರಳಿ ಹಿಂದೆ ಹೆಜ್ಜೆ ಹಾಕುತ್ತ ಮರಳಿ ತಮ್ಮ ಸ್ವಸ್ಥಾನಕ್ಕೆ ಬರುತ್ತಾರೆ. ಧಾಲೊ ನೃತ್ಯ ವಾರಾನೂಗಟ್ಟಲೆ ಪ್ರತಿರಾತ್ರಿ ನಡೆಯುತ್ತದೆ. ಪ್ರಥಮರಾತ್ರಿ ಎಲ್ಲಿಗೆ ನಿಲ್ಲಿಸಿದ್ದರೂ ಎರಡನೇಯ ರಾತ್ರಿ ಅಲ್ಲಿಂದಲೇ ಪ್ರಾರಂಭಿಸುತ್ತಾರೆ. ಪ್ರಥಮ ಪ್ರಾರಂಭದಿನ ಕಾರ್ಯಕ್ರಮದ ಯಜಮಾನಿ ಅಡುಗೆ ಮಾಡಿ ದೇವರಿಗೆ ನೈವೇದ್ಯ ನೀಡಿ ಎಲ್ಲರಿಗೂ ಪ್ರಸಾದ ನೀಡುತ್ತಾಳೆ. ಆ ನೈವೇದ್ಯದ

ಅಡಿಗೆಗೆ ಎಲ್ಲ ಮಹಿಳೆಯರೇ ತಮ್ಮ ತಮ್ಮ ಮನೆಯಿಂದ ಬೆಲ್ಲ ಅಕ್ಕಿ ಮುಂತಾದವುಗಳನ್ನು ತರುತ್ತಾರೆ.ನೃತ್ಯದ ಕೊನೆಯ ದಿನ ಮತ್ತೊಮ್ಮೆ ಎಲ್ಲ ಹಾಡುಗಳ ಉಜಳಣೆ ಮಾಡಿ ನಂತರ ಬೇರೆ ಬೇರೆ ಆಟಗಳನ್ನು ಆಡಿ ಒಬ್ಬರಿಗೊಬ್ಬರು ಸಂತೋಷದಿಂದ ಆಲಿಂಗನ ಮಾಡಿ ತಮ್ಮ ತಮ್ಮ ಮನೆಗೆ ತೆರಳುತ್ತಾರೆ. ಈ ಧಾಲೊನೃತ್ಯವನ್ನು ಆ ಉತ್ಸವದ ನಂತರ ಮಧ್ಯ ಎಂದೂ ಆಚರಣೆ ಮಾಡುವುದಿಲ್ಲಾ. ಆದರೆ ಇಂದು ಆ ವಿಧಿ ವಿಧಾನ ನೃತ್ಯಗಳು ನಶಿಸಿ ಹೋಗುತ್ತವೆ. ಆದರೆ ಸದಾಶಿವಗಡದಲ್ಲಿ ಕೆಲಭಾಗದಲ್ಲಿ ಉಳಿದುಕೊಂಡಿದೆ.

**ಘುಗಡಿ ನೃತ್ಯ –**

ಇದು ಗಾಯನದ ಜೊತೆಗೆ ನೃತ್ಯಕಲೆಯಾಗಿದೆ. ಈ ನೃತ್ಯದಲ್ಲಿ ಕೈ–ಕಾಲು, ಸೊಂಟ ಲಯಬದ್ಧವಾಗಿ ಚಲನವಲನವಾಗುತ್ತದೆ. ಇದ–ಕ್ಕೆ ವಿಶೇಷವಾಗಿ ಯಾವುದೇ ವಾದ್ಯವಿಲ್ಲಾ ಆದರೂ ತಾಳಕ್ಕಾಗಿ ತಾಳ, ಗುಮಟೆವಾದ್ಯವನ್ನು ಬಳಸುತ್ತಾರೆ. ಈ ನೃತ್ಯವು ಪ್ರಾರಂಭದಲ್ಲಿ ಸಾವಕಾಶವಾದರೂ ನಂತರ ಜೋರಾಗಿ ಸಾಗುತ್ತದೆ. ಆಗ ಕಲಾವಿದರಿಗೆ ತಲೆಸುತ್ತುವುದು. ಆಗ ಅವರಿಗೆ ಘುಗಡಿ ಲಾಗಲಿ ಅನ್ನುತ್ತಾರೆ. ಅಂದರೆ ಘುಗಡಿ ಹತ್ತಿತು ಎಂದರ್ಥ. ಈ ನೃತ್ಯ ವಿಶೇಷವಾಗಿ ಗಣೇಶೋತ್ಸವ, ನಾಗಪಂಚಮಿ, ಮಂಗಳಗೌರಿ ಹಾಗೂ ಶ್ರಾವಣ ಮಾಸದ

ರವಿವಾರದಂದು ನೋಡಲು ಸೀಗುತ್ತದೆ. ಇದರಲ್ಲಿ ಹಲವಾರು ಪ್ರಕಾರಗಳಿವೆ.

**ಸಾದಾ ಘುಗಡಿ** – ಇದರಲ್ಲಿ ಮಹಿಳೆಯರು ಎದ್ದುನಿಂತು ಹಾಗೂ ತಮ್ಮ ಎಡಬಲದಲ್ಲಿ ಲಯಬದ್ಧವಾಗಿ ಚಪ್ಪಾಳೆ ತಟ್ಟುತ್ತಾ ಮುಂದೆ ಸಾಗುತ್ತಾರೆ. ಅವರ ಹೆಜ್ಜೆಗಳು ತಾಳಕ್ಕೆ ತಕ್ಕಂತೆ ಹಿಂದೆ ಮುಂದೆ ಬೀಳುತ್ತವೆ. ನೃತ್ಯ ಮಾಡುವ ಮಹಿಳೆಯರ ವರ್ತುಲ ತಿರುಗುತ್ತ ಇರುತ್ತದೆ.

**ಭವರಿ ಘುಗಡಿ (ವರ್ತುಲ ಘುಗಡಿ)** –

ಈ ಘುಗಡಿಯಲ್ಲಿ ಮಹಿಳೆಯರು ಎರಡು ವರ್ತುಲ ಮಾಡಿಕೊಂಡು ಒಬ್ಬರ ಎದುರು ಬದುರಾಗಿ ನಿಂತು ಗಾಯನದ ತಾಳಕ್ಕೆ ತಕ್ಕಂತೆ ಏಡಬಲ ಚಪ್ಪಾಳೆ ತಟ್ಟುತ್ತಾ ತಮ್ಮ ಸುತ್ತ ವರ್ತುಲ ಮಾಡಿಕೊಳ್ಳುತ್ತಾರೆ. ಕುಣಿಯುತ್ತ ಬಂದು ವರ್ತುಲದ ಮಹಿಳೆಯರ ಇನ್ನೊಂದು ವರ್ತುಲಕ್ಕೆ ಬರುತ್ತಾರೆ.

**ಬೆಬಕೆ ಘುಗಡಿ (ಕಪ್ಪೆ ಘುಗಡಿ)** –

ಮಹಿಳೆಯರು ಕೆಳಗೆ ಕೂತು ಗಾಯನಕ್ಕೆ ತಕ್ಕಂತೆ ಕಪ್ಪೆಯಂತೆ ಕುಣಿಯುತ್ತ ಜಿಗಿಯುತ್ತ ಸಾಗುತ್ತಾರೆ.

**ಜೊಡಿ ಘುಗಡಿ (ಜೊಡು ಘುಗಡಿ)** –

ಎರಡು-ನಾಲ್ಕು-ಆರು-ಎಂಟು ಹೀಗೆ ಜೋಡಿಯಿಂದ ವರ್ತುಲದಲ್ಲಿ ನಿಂತು ಗಾಯನಕ್ಕೆ ತಕ್ಕಂತೆ ತಮ್ಮ ಕೈಯನ್ನು ತಮ್ಮ ಭುಜಕ್ಕೆ ಕಟ್ಟಿಕೊಂಡು ನಂತರ ಮುಂದೆ ಜಿಗಿದು ತನ್ನ ಜೋಡಿದಾರನ ಕೈಗೆ ಮುಟ್ಟಿ ಮತ್ತೆ ಹಿಂದಕ್ಕೆ ಬರುತ್ತಾರೆ. ಇದು ತೀವ್ರಗತಿಯ ನೃತ್ಯವಾಗಿದೆ.

*** ರಗಡೊ ಘುಗಡಿ (ರುಬ್ಬುಕಲ್ಲ ಘುಗಡಿ)** –

ಇದರಲ್ಲಿ ನೃತ್ಯಗಾರ್ತಿ ಕೆಳಗೆ ಕುಳತು ತನ್ನ ಎರಡೂ ಕೈಯಲ್ಲಿ ತನ್ನ ಕಾಲಿನ ಹೆಬ್ಬೆರಳು ಗಟ್ಟಿ ಹಿಡಿದು ಗಾಯನ ತಾಳಕ್ಕೆ ತಕ್ಕಂತೆ ರುಬ್ಬುಕಲ್ಲಿನಂತೆ ಉರಳುತ್ತಾಳೆ. ಇದರಂತೆ 5-6 ಜನರೂ ಮಾಡಬಹುದು.

*** ಕಳಶಿ ಘುಗಡೆ (ಕೊಡಪಾನ ಘುಗಡಿ)** –

ತಾಮ್ರದ ಕೊಡ ಯಾ ಹಿತ್ತಾಳೆಯ ಕೊಡವನ್ನು ಕೈ ಮೇಲೆ ಕುಣಿಸುತ್ತ ಅದರೊಳಗೆ ಘೂ ಘೂ ಎಂದು ಊದುತ್ತ ಈ ನೃತ್ಯ ಮಾಡುತ್ತಾರೆ. ಈ ನೃತ್ಯದಲ್ಲಿ ಮಹಿಳೆಯರು ವರ್ತುಲ ಆಕಾರದಲ್ಲಿ ಎದ್ದು ನಿಲ್ಲುತ್ತಾರೆ. ಕುಣಿಯುತ್ತ ಕುಣಿಯುತ್ತ ವರ್ತುಲ ತಿರುಗುತ್ತಿರುತ್ತದೆ. ಕೊಡದಲ್ಲಿ ಊದೂವ ಘೂ ಘೂ ಎಂಬ ಶಬ್ಧದ ನಾದದ ಸಂಗೀತದ ತಾಳದ ಮೇಲೆ ಈ ನೃತ್ಯ ರಂಗೇರುತ್ತದೆ. ಇದರಂತೆ ಹಲವಾರು ಘುಗಡಿಗಳಿವೆ. ಆದರೆ ಇಂದು ಇವೆಲ್ಲ ಕಡಿಮೆಯಾಗುತ್ತ ಸಾಗಿವೆ. ಆದರೆ ಸದಾಶಿವಗಡದಲ್ಲಿ ವಸಂತ ಬಾಂದೇಕರ ನೇತೃತ್ವದ ಕಲಾತಂಡಗಳಾದ ಶ್ರೀಮತಿ ಮೀನಾ ಗುರವ, ಪ್ರಭಾ ನಾಯ್ಕ, ರೇಖಾ ಮುಂತಾದವರು ವಿವಿಧ ಉತ್ಸವದಲ್ಲಿ ಕಾರ್ಯಕ್ರಮ ನೀಡಿತ್ತಾ ಬಂದಿದ್ದಾರೆ. ಈ ಘುಗಡಿ ನೃತ್ಯಗಳನ್ನು ಸಿಧ್ಧಿ, ಖಾರ್ವೆ, ಭಂಡಾರಿ ಗೋಮಾಂತರ, ಕೋಮಾರಪಂತ ಕೊಂಕಣ ಮರಾಠಾ ಸಮುದಾಯದವರು ಮಾಡುತ್ತಾರೆ. ಆದರೆ ಒಂಬತ್ತು ಮಳದ ಸೀರೆಉಟ್ಟು ಕಚ್ಚೆಹಾಕಿ ತಲೆ ತುಂಬಾ ಹೂ ಮೂಡಿದು ಮಾಡುವ ಈ ಸುಮಧುರ ನೃತ್ಯ ಇಂದಿನ ಯುವಪೀಳಗೆ ಇದರ ಕಡೆ ಆಸಕ್ತಿ ತೋರಿಸುತ್ತಿಲ್ಲಾ.

*** ಪುರುಷರ ನೃತ್ಯಗಳು** –

ಕೊಂಕಣಿ ಪುರುಷರ ನೃತ್ಯಗಳು ಹೆಚ್ಚಾಗಿ ಹೋಳಿಸಮಯದಲ್ಲಿ ನೋಡಲು ಸೀಗುತ್ತದೆ. ಧಿಂಡಲ್ಯಾಚೆ ನಾಚ (ತುರಾಯಿ ನೃತ್ಯ) ಸುಗ್ಗಿ ಕುಣಿತ ಅಲಂಕರಿಸಿದ ತುರಾಯಿಯನ್ನು ಎರಡು ಜನ ಹಿಡಿದುಕೊಂಡು ಶೆಗಣಿಯಿಂದ ಸಾರಿಸಿದ ಅಂಗಳದಲ್ಲಿ ಕುಣಿಯುತ್ತಾರೆ. ಆದರೆ ಕೈಯಲ್ಲಿ ತುರಾಯಿ ಇರುವದರಿಂದ ಕಾಲಿನ ಹೆಜ್ಜೆಯ ಮೇಲೆ ನೃತ್ಯವಾಗುತ್ತದೆ. ಈ ನೃತ್ಯಕ್ಕೆ ಉಳಿದ ಸಹಪಾಠಿಗಳು ತಾಳ ಹಾಗೂ ಚಪ್ಪಾಳೆಯೊಂದಿಗೆ ಗೀತವನ್ನು ಹಾಡುತ್ತ ಸಹಕಾರ ನೀಡುತ್ತಾರೆ.

*** ಶಿಗಮ್ಯಾ ಮೆಳಾಚಿನಾಚ (ಹೋಳಿ ಸಮೂಹ ನೃತ್ಯ)** – ಬದುಕಿನ ಕಷ್ಟ-ನಷ್ಟ, ಸುಖ-ದುಃಖ ಪವಿತ್ರ-ಮಂಗಲ ಎಲ್ಲದರ ದರ್ಶನ ಈ ಹೋಳಿ ಸಮೂಹ ನೃತ್ಯದಲ್ಲಿ ದೊರೆಯುತ್ತದೆ. ಇದು ನಿಜವಾದ ಗ್ರಾಮೀಣ ಬದುಕಿನ ಚಿತ್ರಣವಿದ್ದಂತೆ. ಇದರ ಪ್ರಮುಖ ಆಕರ್ಷಣೆಯೆಂದರೆ ಧೊಲ ಝೂಂಜ ಇತ್ಯಾದಿ ವಾದ್ಯಗಳಿಲ್ಲದಿದ್ದರೆ ನೃತ್ಯ-ಕ್ಕೆ ಸ್ಪೂರ್ಥಿಯೇ ದೊರೆಯದು. ಈ ಹೋಳಿ ಸಮೂಹ ತಂಡ ಮನೆ-ಮನೆ ಅಂಗಳದಲ್ಲಿ ಬಂದು ನಿಂತಾಗ ಧೊಲ-ಝೂಂಜ ಸಪ್ಪಳದಲ್ಲಿ ನೃತ್ಯ ಮಾಡುತ್ತ ಶಭೈ ಹಾಕುತ್ತಾರೆ ಕುಣಿಯುವಾಗ ಕಾಲನ್ನೂ ಎಬ್ಬಿಸಿ ಸೊಂಟದವರೆಗೂ ಒಯ್ದು ಕುಣಿಯುತ್ತಾರೆ. ಸಂಗೀತ ಸಪ್ಪಳಕ್ಕೆ ತಕ್ಕಂತೆ ಜೋರಾಗಿ ಕುಣಿಯುತ್ತಾರೆ. ಹಾಗೂ ಶಭೈ ಶಭೈ, ಭಲೆ ಭಲೆ, ಶಭೈ ಅನ್ನುತ್ತ ಹಾಡುತ್ತಾರೆ. ರಾತ್ರಿ ಸಮಯದಲ್ಲಿ ದೀವಟಿಗೆಯನ್ನು ಕೈಯಲ್ಲಿ ಹಿಡಿದು ಕುಣಿಯುತ್ತಾರೆ. ಈ ಸುಂದರ ದೃಶ್ಯ ನೋಡಲು ಆನಂದವಾಗುತ್ತದೆ. ಹೋಳಿ ಕುಣಿತದಲ್ಲಿ ಕೋಲಾಟ, ಗೋಪು ನೃತ್ಯ, ಕೀಲುಕುದುರೆ ನೃತ್ಯ ಸಹಿತ ಮಾಡುತ್ತಾರೆ.

*** ತೋಣ್ಯಾನಾಚ (ಕೋಲಾಟ)** –

ಕೋಲಾಟ ನೃತ್ಯದವರು ತಮ್ಮ ಎರಡೂ ಕೈಯಲ್ಲಿ ಕಟ್ಟಿಗೆಯ ಒಂದೊಂದು ಕೋಲನ್ನೂ ಹಿಡಿದು ಒಬ್ಬಬ್ಬರ ಕೋಲಿನ ಮೇಲೆ ತಾಳಕ್ಕೆ ತಕ್ಕಂತೆ ಬಾರಿಸುತ್ತ ಆಕರ್ಷಕ ಪದ್ಧತಿಯಿಂದ ಕುಣಿಯುತ್ತಾರೆ. ಈ ಚಲನ ವಲನದ ಜೊತೆಗೆ ಕಾಲಿನ ಹೆಜ್ಜೆ ಕುಣಿತವೂ ಅಷ್ಟೇ ಮಹತ್ವದ್ದಿದೆ. ಈ ಕುಣಿತದ ಕಲಾವಿದ ಅತೀ ಚುರುಕಿನಿಂದ ತನ್ನ ಪ್ರತಿ ಅಂಗಾಂಗಗಳನ್ನು ಅಲ್ಲಾಡಿಸಬೇಕು. ಕಲಾವಿದ ಒಮ್ಮೆ ಎರಡು ಹೆಜ್ಜೆ ಮುಂದೆ ಹಾಕಿದ್ರೆ ಒಮ್ಮೆ ತನ್ನ ಸುತ್ತ ತಿರಗುತ್ತಾನೆ. ಒಮ್ಮೊಮ್ಮೆ ತನ್ನ ಸಹಪಾಠಿ ಬಿಟ್ಟು ಬೇರೆಯವರ ಹತ್ತಿರ ಹೋಗುತ್ತಾನೆ. ಒಮ್ಮೊಮ್ಮೆ ನೆಲದ ಮೇಲೆ ಕೂತು ಯಾ ಮಲಗಿ ಸಹಿತ

ಆಟವಾಡುತ್ತಾನೆ. ತಂಡದ ಪ್ರತಿಕಲಾವಿದನು ಬಣ್ಣ ಬಣ್ಣದ ಪೋಷಾಕು ತೊಟ್ಟಿರುವುದರಿಂದ ಅದು ನೋಡಲು ಇನ್ನು ಸುಂದರವಾಗಿ ಕಾಣುತ್ತದೆ.

*** ಗೋಪನೃತ್ಯ (ದೊರೆನಾಚ) –**

ಈ ನೃತ್ಯಕ್ಕಾಗಿ ಅಂಗಳದಲ್ಲಿ ಒಂದು ಕಟ್ಟಿಗೆ ಬಡಿಗೆ ಹುಗಿದು ಅದಕ್ಕೆ 8–10–12 ಹೀಗೆ ವಿವಿಧ ಬಣ್ಣದ ಹಗ್ಗವನ್ನು ಆ ಬಡಿಗೆ ಮೆಲ್ಗಡೆಕಟ್ಟಿ ಆ ಹಗ್ಗದ ಒಂದು ತುದಿಯನ್ನು ಕೆಳಗಡೆ ಭೂಮಿಗೆ ಬಿಡುತ್ತಾರೆ. ಕೋಲಾಟ ಆಡುವ ಪ್ರತಿಯೊಬ್ಬ ಕಲಾವಿದ ಒಂದೊಂದು ಹಗ್ಗವನ್ನು ಕೈಯಲ್ಲಿ ಹಿಡಿದು ಕುಣಿಯುತ್ತ ಆ ಬಣ್ಣ ಬಣ್ಣದ ಹಗ್ಗವನ್ನು ಹೆಣೆಯುತ್ತಾರೆ. ಹಾಗೂ ಮತ್ತೆ ಕುಣಿದು ಆ ಹೆಣೆದ ಹಗ್ಗವನ್ನು ಎಳೆ ಎಳೆಯಾಗಿ ಬಿಚ್ಚುತ್ತಾರೆ. ಈ ಕಲೆ ಪ್ರದರ್ಶಿಸಲು ಬಹಳ ತೀಕ್ಷ್ಣವಾಗಿ ಚುರುಕುತನದಿಂದ ಎಳ್ಳಷ್ಟು ತಪ್ಪು ಮಾಡದಂತೆ ಆಟವಾಡಬೇಕು ಕಾರಣ ಒಬ್ಬರು ತಪ್ಪಿದರೂ ಆ ಹೆಣಿಗೆ ತಪ್ಪು ಹೋಗುತ್ತದೆ. ಇಂದು ಈ ಕಲೆ ನಶಿಸಿ ಹೊಗುತ್ತಲಿದೆ.

*** ಕ್ರೈಸ್ತ ಸಮುದಾಯ (ಕ್ಯಾಥೋಲಿಕ್) ನೃತ್ಯಗಳು –**

ಈ ಸಮುದಾಯದ ಮಹಿಳೆಯರು ಥಾಲೊನಾಚ ಮಾಡುತ್ತಾರೆ. ಪುರುಷರು ಇಂತ್ರುಜಾಚೊ(ಹೋಳ ಹಬ್ಬದಂತೆ) ಧೊಲ–ತಾಸೆ ಝಾಂಜ ಸಂಗೀತದ ಜೊತೆಗೆ ನೃತ್ಯ ಮಾಡುತ್ತಾರೆ. ಇಂದು ಈ ಕಲೆಯು ನಶಿಸಿ ಹೋಗುತ್ತಲಿದೆ.

*** ಸಂಜಾವ್ಯಾಚೇ ನಾಚ (ಸಂಜಾವ ನೃತ್ಯ)**

ಸಂಜಾವಪೆಸ್ತ (ಹಬ್ಬದ) ದಿನ ಕುಣಿಯುವ ಈ ನೃತ್ಯ ಪ್ರತಿವರ್ಷ ಜೂನ್ 24ರ ಮಳೆಗಾಲದ ಸಮಯದಲ್ಲಿ ಈ ಕ್ರಿಶ್ಚನ್ ಹಬ್ಬ ಬರುತ್ತದೆ. ಸಂಜಾವ ಎಂದರೆ (ಸಂತಜ್ಞಾನ್) St. John ತಲೆಗೆ ಎಲೆಬಳ್ಳಿ ಸುತ್ತಿ ಕೈಯಲ್ಲಿ ತೆಂಗಿನಮರದ ಗರಿಯನ್ನು ಹಿಡಿದು ಪ್ರತಿ ಮನೆಯ ಅಂಗಳಕ್ಕೆ ಹೋಗಿ ಮಳೆಗಾಲದ ಆ ರಾಡಿಯಲ್ಲಿ ಆ ತೆಂಗಿನ ಗರಿಯನ್ನು ರಪ್ ಎಂದು ಜೋರಾಗಿ ನೆಲಕ್ಕೆ ಅಪ್ಪಳಿಸಿ ಹಾಡನ್ನು ಹಾಡುತ್ತಾರೆ.

**ಲೋಕನಾಟಕ (ಜಾನಪದ ನಾಟಕ)**

ಇದರಲ್ಲಿ 3 ಪ್ರಕಾರಗಳಿವೆ

1. ಕಾಲೊ 2. ಜಾಗರ 3. ಖೇಳ

**1. ಕಾಲೋ** – ಇದರಲ್ಲಿದಶಾವತಾರ ಕಾಲೊ ಪ್ರಸಿದ್ಧವಾಗಿದೆ. ಈ ಕಲೆಯಲ್ಲಿ ಹರಿದಾಸರ ಪಾತ್ರ ಮುಖ್ಯವಾಗಿದೆ. ಅವನೇ ಸೂತ್ರಧಾರ ಇದರಲ್ಲಿಯ ಪಾತ್ರಧಾರಿಗಳು ತಮ್ಮ ತಮ್ಮ ಅಲಂಕಾರಗಳನ್ನು ಬಣ್ಣಗಳನ್ನು ತಾವೇ ತಯಾರಿಸಿಕೊಳ್ಳುತ್ತಿದ್ದರು ಹಾಗೂ ಸ್ತ್ರೀ ಪಾತ್ರಗಳನ್ನು ಪುರುಷರೇ ಮಾಡುತ್ತಿದ್ದರು. ಒಂದು ಕಾಲದಲ್ಲಿ ಎತ್ತರದ ಸ್ಥಳ ಯಾ ಸ್ಟೇಜ ಪರದೆಗಳು ಇರಲಿಲ್ಲ ಬರಿ ಒಂದು ಅಡ್ಡ ಬಟ್ಟೆ ಕಟ್ಟಿ ಆಟವಾಡುತ್ತಿದ್ದರು.

ಇದರಲ್ಲಿ ವಿಷ್ಣುವಿನ 10 ಅವತಾರದಲ್ಲಿ ಯಾವುದಾದರೊಂದು ಅವತಾರ ಆಯ್ಕೆ ಮಾಡಿ ಅದರಂತೆ ರಚಿಸಿ, ಸಾದರ ಪಡಿಸುತ್ತಿದ್ದರು. ಆದ್ದರಿಂದ ಇದಕ್ಕೆ ದಶಾವತಾರಿ ಕಾಲೊ ಎಂಬ ಹೆಸರು ಬಂದಿದೆ. ಇಂದು ಬರೀ ಶಂಕಾಸುರನ ಒಂದು ಆಖ್ಯಾನ ಆಯ್ದು ಅದನ್ನು ಮಾಡಿ ಮುಗಿಸುತ್ತಾರೆ.

ಪ್ರಾರಂಭದಲ್ಲಿ ಗಣಪತಿಯ ಪೂಜೆ ಮಾಡಿ ಸಮಾಜಕ್ಕೆ ಐತಿಹಾಸಿಕ ವಿಷಯದ ಮೇಲೆ ಒಂದು ಚಿಕ್ಕ ನಾಟಕವಾಡಿ ನಂತರ ಕೊನೆಗೆ ಶಂಕಾಸುರನ ವಧೆ ಮಾಡಿದ ಮೇಲೆ ಕಾಲೊ ಮುಕ್ತಾಯವಾಗುತ್ತದೆ.

ಈ ದಶಾವತಾರ ಕಾಲೊದಲ್ಲಿ ಪ್ರಾರಂಭದಲ್ಲಿ ರಂಗಮಂಚದ ಮೇಲೆ ಹರಿದಾಸ ಎಂದರೆ ಕಾಲೋದ ಸೂತ್ರಧಾರ ಮೈಮೇಲೆ ಉದ್ದವಾದ ಜುಬ್ಬಹಾಕಿ ದೊತರ ತೊಟ್ಟು ತಲೆಗೆ ಪಗಡಿ ಹಾಕಿಕೊಂಡು ಭುಜದ ಮೇಲೆ ಶಾಲು ಹೊತ್ತು ಹಣೆಗೆ ಗಂಧದ ತಿಲಕವಿಟ್ಟು ಕೊರಳಿಗೆ ಹೂವಿನ ಮಾಲೆ ಧರಿಸಿ, ಕೈಯಲ್ಲಿ ತಾಳಹಿಡಿದು ಬಾರಿಸುತ್ತ ಪ್ರವೇಶಿಸುತ್ತಾನೆ. ಮಂಗಲಸ್ತುತಿ ಚರಣ ಹಾಡಿ ದೇವರ ಸ್ತೂತಿ ಮಾಡುತ್ತಿರುವಾಗ ವಿದೂಶಕನು ಆಗಮಿಸುತ್ತಾನೆ. ಇವರಿಬ್ಬರಲ್ಲಿ ಪ್ರಶ್ನೋತ್ತರ ಮಾತುಗಾರಿಕೆ ನಡೆಯುತ್ತದೆ. ನಂತರ ಗಣಪತಿಯೊಂದಿಗೆ ರಿದ್ಧಿ–ಸಿದ್ಧಿಗಳು ಬರುತ್ತಾರೆ. ಭಟ–ಜಿಯು ಗಣಪತಿ ಪೂಜೆ ಮಾಡುತ್ತಾನೆ. ಪೂಜೆಯ ಸಮಯ ಒಂದು ಬದಿ ವಿದೂಶಕನ ಹಾಸ್ಯ ಹಾವಭಾವಗಳಿರುತ್ತವೆ. ಗಣಪತಿ ಆಶೀರ್ವಾದ ನೀಡಿ ಹೋದನಂತರ ಕಾಲೂ (ಆಟದ) ಮುಖ್ಯ ಭಾಗ ಪ್ರಾರಂಭವಾಗುತ್ತದೆ. ನಂತರ ಸರಸ್ವತಿ ದೇವಿ, ಶಿವಪಾರ್ವತಿಯವರೂ ಆಶೀರ್ವಾದ ಮಾಡಲು ವೇದಿಕೆಗೆ ಬಂದು ಹೋಗುತ್ತಾರೆ. ನಂತರ ಆಖ್ಯಾನದಂತೆ ಕಾಲೋ ಪ್ರಾರಂಭವಾಗುತ್ತದೆ. ಕಾಲೋ ಮುಗಿಸುವಾಗ ಹರಿದಾಸ ಬಂದು ಹಾಡು ಹಾಡುತ್ತಾನೆ. ರಾತ್ರಿ ಸುರು ಆದ ಈ ಕಾಲೋ ಬೆಳಗಿನ ಜಾವ ಸಾಮಾಪ್ತವಾಗುತ್ತದೆ.

**2. ಜಾಗರ** – ಇದನ್ನು ಕೆಲವೊಂದು ಸಮುದಾಯದಲ್ಲಿ ಮಾತ್ರ ಆಚರಿಸುತ್ತಿದ್ದರು. ಈಗ ಅದೂ ಸಹಿತ ಬರಬರುತ್ತ ಕಡಿಮೆಯಾಗುತ್ತಲಿದೆ. ಇದನ್ನು ಆ ಗ್ರಾಮದ ದೇವರ ಉತ್ಸವದಲ್ಲಿ ಆಚರಿಸುತ್ತಿದ್ದರು. ಪ್ರಥಮವಾಗಿ ಹಣತೆ ಹಚ್ಚಿ ಶ್ರೀ ಗಣಪತಿ ಪೂಜೆ ಮಾಡುತ್ತಾರೆ. ನಂತರ ವೇದಿಕೆ ಮೇಲೆ ಅಧಿತಿ, ಮಂತ್ರವಾದಿ, ಭಟಜಿ ಹೀಗೆ ಹಲವಾರು ವೇಶಗಳು ಬಂದು ಹೋಗುತ್ತವೆ. (ಪುರಾಣದ ಮಧು ಕೊಟಮ ರಾಕ್ಷಸ ಅವನನ್ನು ಇಲ್ಲಿ ಎರಡು ಸಹೋದರರ ರೂಪದಲ್ಲಿ ತೋರಿಸುತ್ತಾರೆ. ಈ ರಾಕ್ಷಸರ ವಧೆಯನ್ನು ಶಕ್ತಿದೇವಿ ಮಾಡಿದಳಂತೆ) ಈ ಎರಡೂ ರಾಕ್ಷಸರು ಭಯಂಕರ ಹಾವಭಾವ ಮಾಡುತ್ತ ರಂಗ ಮಂಚದ ಮೇಲೆ ಪ್ರವೇಶಿಸುತ್ತಾರೆ. ನಂತರ ಈ ರಾಕ್ಷಸರಿಗೆ ಸಂಹಾರ ಮಾಡಲು ಒಬ್ಬ ಮುದಿಕೆ (ಗಂಡಸು ಹೆಣ್ಣಿನ ಪಾತ್ರದಲ್ಲಿ) ಬಂದು ಕೊಲ್ಲುತ್ತಾಳೆ. ಅಲ್ಲಿಗೆ ಜಾಗರ ಮುಗಿಯುತ್ತದೆ.

**3. ಖೇಳ (ಆಟ)** – ಹವ್ಯಾಸಿ ಕಲಾವಿದರು ಸೇರಿಮಾಡುವ ಆಟ ಇದಾಗಿದೆ. ಧೋಲು, ರಥಾಂಜ, ಗುಮ್ಮಟೆ ಸಂಗೀತದ ತಾಳದಲ್ಲಿ ಸಾಮಾಜಿಕ

ಸಮಸ್ಯೆಗಳ ಕುರಿತು ಆಟವಾಡುತ್ತಿದ್ದರು. ಮೂಲ ಲಿಖಿತ ಕಥೆ ಇರದೆ ಪಾತ್ರಧಾರಿಗಳು ವೇದಿಕೆಯ ಮೇಲೆ ಪ್ರಸಂಗಕ್ಕೆ ತಕ್ಕಂತೆ ಸಂವಾದ ಮಾಡಿ ಆಟಕ್ಕೆ ರಂಗುತರುತ್ತಾ-ರೆ. ಈ ಆಟದಲ್ಲಿ ಕವನ ಕಾಂತರ-ಗೀತಗಾಯನ ಇರುತ್ತದೆ. ಇದನ್ನು ಬೆಳಗಿನ ತನಕ ಆಡುತ್ತಾರೆ ಈ ಆಟವನ್ನು ಹಿಂದು ಹಾಗೂ ಕ್ರಿಶ್ಚನ್ ಕೊಂಕಣಿ ಭಾಷಿಕರು ಆಡುತ್ತಾರೆ.

**4. ಸೊಂಗಾಖೇಳ(ಮುಖವಾಡ ಆಟ) –**

ಪಾತ್ರಗಳು ಆಕರ್ಷಣಿಯವಾಗಿ ಕಾಣಲು ಹಾಗೂ ಪ್ರಸಾದನ ಮೇಕಪ್ ಮಾಡಲು ತೊಂದರೆಯಾಗಬಾರದೆಂಬ ದೃಷ್ಠಿಯಿಂದ ಆಯಾ ಪಾತ್ರಗಳ ಕಟ್ಟಿಗೆ ಮುಖವಾಡಗಳನ್ನು ತಯಾರಿಸಿ (ಕಟ್ಟಿಗೆ ಹುಳು ಹಿಡಿಯಲಾರದಂತ ಗಿಡದ) ಅದಕ್ಕೆ ತಕ್ಕಂತೆ ಬಣ್ಣ ಬಳದು ತಯಾರಿಸಿಕೊಳ್ಳುತ್ತಿದ್ದರು. ಜೊತೆಗೆ ಅದಕ್ಕೆ ತಕ್ಕಂತೆ ವೇಶಭೂಷ ಧರಿಸಿಕೊಂಡು ವೇದಿಕೆ ಮೇಲೆ ಬರುತ್ತಿದ್ದರು. ಆದರೆ ಇಲ್ಲಿ ಪ್ರತಿಪಾತ್ರಗಳ ಸಂಭಾಷಣೆಯನ್ನು ಹರಿದಾಸರೇ ಹೇಳುತ್ತಿದ್ದರು. ಈ ಆಟವನ್ನು ಕಡವಾಡದ ದಿ. ಲಕ್ಷ್ಮೀಕಾಂತ ಭಟ್ಟರು ಕಳೆದ 60 ವರ್ಷದಿಂದ ಮಾಡುತ್ತ ಬಂದಿದ್ದರು. ಇತ್ತಿಚೆಗೆ 2016ರಲ್ಲಿ ಮರಣ ಹೊಂದಿದರು.

**ಲೋಕ ಸಂಗೀತ (ಜಾನಪದ ಸಂಗೀತ) –**

ಲೋಕಸಂಗಿತವು ಲೋಕಕಲೆಯ ಪ್ರಾಣವಿದ್ದಂತೆ ಲೋಕಸಂಗೀತ ವಾದ್ಯಗಳೆಂದರೆ – ಧೋಲ, ತಾಸೆ, ಗುಮ್ಮಟ ನಗಾರಿ, ಧೋಲಕ ಶಿಮಳ, ಜಾಂಗಟ, ತಬಲಾ ಪಕವಾಜ ಶಂಖ ಇತ್ಯಾದಿ.

ಊದುವ ವಾದ್ಯಗಳು – ಕೊಂಬು, ಕಹಳೆ, ಸ್ಪೂರ್ತಿ ಶಹನಾಯಿ ಇತ್ಯಾದಿ ಬೆರಳನಿಂದ ಬಾರಿಸುವ ವಾದ್ಯಗಳು – ತಂಬೂರಿ, ಎಕತಾರಿ, ತಿಕ್ಕುವವಾದ್ಯ, ತಾಳ, ಕಂಸಾಳೆ ಈ ವಾದ್ಯಗಳು ಹೆಚ್ಚಾಗಿ ಮದುವೆ-ಮುಂಜಿ, ಜಾತ್ರೆ ಉತ್ಸವಕ್ಕೆ ಬಳಸುತ್ತಾರೆ. ಪಂಚವಾದ್ಯ ಕಲಾವಿದರು (ವಾಜಂತ್ರಿ) ಉಪಯೋಗಿಸುತ್ತಾರೆ.

**ಗುಮ್ಟಾ – ಗುಮ್ಮಟ –**

ಇದೊಂದು ಮಣ್ಣಿನಿಂದ ಮಾಡಿದ ವಾದ್ಯ ಗಡಿಗೆ-ಯಂತೆ ಇದ್ದು ಒಂದು ಬಾಯಿ ಖುಲ್ಲಾ ಹಾಗೂ ಇನ್ನೊಂದು ಬಾಯಿಗೆ ಉಡದ ಚರ್ಮವನ್ನು ಕಟ್ಟಿ ಕೈಯಿಂದ ಬಾರಿಸಿದಾಗ ಉತ್ತಮ ಸಂಗೀತ ಉತ್ಪನ್ನವಾಗುವುದು. ಈ ವಾದ್ಯ ಬಳಸುವ ಪದ್ಧತಿ ಗೋವಾದಲ್ಲಿ ಕೊಂಕಣಿಗರು 1600ನೇ ಶತಮಾನದಿಂದಲೇ ಉಪಯೋಗಿಸುತ್ತಿದ್ದರು. ಆದರೆ ಪೋರ್ತುಗೀಜರು ಈ ವಾದ್ಯ ಹಾಗೂ ಹಾಡುಗಳಿಗೆ ಕಲಾ ಪ್ರದರ್ಶನಕ್ಕೆ ದಿಗ್ಬಂಧನ ಮಾಡಿದ್ದರಿಂದಲೂ ಚಿತ್ರಹಿಂಸೆ ನೀಡಿದ್ದರಿಂದ ಕೊಂಕಣಿ ಭಾಷಿಕ ವಿವಿಧ ಸಮುದಾಯದವರು ಗೋವಾ ತೊರೆದು ಕರ್ನಾಟಕ-ಮಹಾರಾಷ್ಟ್ರದ ಕೊಂಕಣ ಪಟ್ಟಿಯಿಂದ ಕೇರಳಾದವರೆಗೂ ಹೋದರು ಹೋಗುವಾಗ ತಮ್ಮ ಸಂಗಡ ಈ ಪಾರಂಪರಿಕ ವಾದ್ಯವನ್ನು ತೆಗೆದುಕೊಂಡು ಹೋದರು. ಹೀಗಾಗಿ ಇಂದು ಪ್ರತಿಯೊಬ್ಬರ ಮನೆಯಲ್ಲಿ ಈ ವಾದ್ಯಗಳು ನೋಡಲು ಸಿಗುತ್ತವೆ. ಹೀಗಾಗಿ ಕರ್ನಾಟಕದ ಸಿದ್ದಿ, ಖಾರ್ವಿ, ಕುಣಬಿ, ಗೋಮಾಂತರ, ಕೋಮಾರಂತ ಪಡ್ತಿ, ಭಂಡಾರಿ, ಕೊಂಕಣ ಮರಾಠಾ, ದೈವಜ್ಞ ಜಿ.ಎಸ್.ಬಿ. ಕ್ಯಾಥೊಲಿಕ್ ಮುಂತಾದ ಸಮುದಾಯದವರು ತಮ್ಮ ವಿವಿಧ ಕಲಾಪ್ರಾಕಾರಗಳಾದ ಖೇಳ-ಕೋಲಾಟ-ಗುಮಟಾವಾದನ, ಗೋಪನಾಚ, ಮುಂತಾದವುಗಳಿಗಾಗಿ ಬಳಸುತ್ತಾರೆ.

## ಕ್ರಿಶ್ಚನ್ ಸಮುದಾಯದ ರೊಸಾಚ್ಯಾ ಮಾಟ್ವಾಂತ್ ಘುಮಟಾ

ಅಂದರೆ ಕ್ಯಾಥೊಲಿಕ್ ಕ್ರಿಶ್ಚನ್ ಮದುವೆ ಸಂದರ್ಭದಲ್ಲಿ ಮಧುಮಗಳ ಮನೆಯಲ್ಲಿ ಮದುವೆ ಮುನ್ನಾ ರಾತ್ರಿ ಅಡುಗೆಮನೆ (ರಾಸಾಯಿಘರ)ಅಡಿಗೆ ತಯಾರಿ ರಾತ್ರಿ ಇಡೀ ಆಗುತ್ತಿತ್ತು. ಪಲ್ಲೆ ಹೆಚ್ಚುವಾಗ, ರುಬ್ಬುವಾಗ ಬೀಸುವಾಗ, ಕುಟ್ಟುವಾಗ ಮಾಂಸ ತಯಾರಿಸುವಾಗ ಮೀನು ಸ್ವಚ್ಛ ಮಾಡುವ ಇವರೆಲ್ಲರಿಗೂ ನಿದ್ದೆ ಬರಬಾರದೆಂಬ ದೃಷ್ಠಿಯಿಂದ ಸ್ಪೂರ್ತಿ ಬರಲು ಗುಮಟಾ ಹಾಡುಗಳನ್ನು ವಾದನ ಬಾರಿಸುತ್ತಾ ಹಾಡುತ್ತಿದ್ದರು. ಅಲ್ಲಿ ಸೇರಿದ ಮಹಿಳೆ-ಪುರುಷ-ಮಕ್ಕಳು ಸೇರಿ ನೃತ್ಯ ಮಾಡುತ್ತಿದ್ದರು. ಈ ಪ್ರಕ್ರಿಯೆ ಬೆಳಗ್ಗೆ ತನಕ ನಡೆಯುತ್ತಿತ್ತು. ಜೊತೆಗೆ ಅಡಿಗೆಯೂ ತಯಾರಾಗುತ್ತಿತ್ತು. ಇಂದು ಈ ಪ್ರಕಾರಗಳು ಇನ್ನೂ ಉಳದುಕೊಂಡಿವೆ ಹಾಗೂ ಉಳಿಸಿಕೊಂಡು ಹೋಗಬೇಕಾಗಿದೆ.

## ಕೊಂಕಣಿಗರ ಸಂಪ್ರದಾಯ ಗೀತೆಗಳು (ವೊವ್ಯಿ) –

ಹಾಡುಗಾರಿಕೆ ಜಾನಪದದ ಜೀವ, ಜೀವಾಳ ಬಹುಶ ಮಾನವನ ಹುಟ್ಟಿನಷ್ಟೆ ಪ್ರಾಚಿನತೆ ಈ ಹಾಡಿಗಾರಿಕೆಗೆ ಇದೆ. ಹಾಡದ ಜನರಿಲ್ಲ, ಜನಾಂಗವಿಲ್ಲ, ಕೊಂಕಣಿಗರ ಬೀಸುವ, ಕುಟ್ಟುವ, ಜೋಗುಳದಪದಗಳು ಸಾಕಷ್ಟಿವೆ. ಆದರೆ ಇಂದು ಇತರೇ ಭಾಷಿಕ ಜಾನಪದ ಕಲೆಗಳಂತೆ ನಶಿಸಿ ಹೋಗುತ್ತಲಿವೆ. ಪ್ರತಿದಿನ ಬೀಸುವ ಹಾಗೂ ಮದುವೆಯ ಸಂದರ್ಭದಲ್ಲಿ 5-6ದಿನ ಮುಂಚಿತ ಓಣಿಯ ಹಲವಾರು ಮಹಿಳೆಯರು ಸೇರಿ ಬೀಸುವ ಕುಟ್ಟುವ ಹಾಡುಗಳಿದ್ದವು. ಅದಕ್ಕೆ ಕೊಂಕಣಿಯಲ್ಲಿ ವೊವ್ಯಿ ಎಂದು ಕರೆಯುತ್ತಾರೆ. ಮದುವೆಯಲ್ಲಿ ಅರಿಷಿಣ ಹಚ್ಚುವಾಗ, ಮದುವೆಯಲ್ಲಿ ಹಂದರ ಹಾಕುವಾಗ, ಮದುವೆಯಾದ ಸಂಜೆ ತಾಮ್ರದ ಕೊಡದಲ್ಲಿ ನವದಂಪತಿಗಳು ಉಂಗುರ ಹುಡುಕುವಾಗ ಮದುವೆಯ ಆರತಿ ಮಾಡುವಾಗ, ಒಗಟುಗಳು, ಗಾದೆ ಮಾತುಗಳು, ಜೋಗುಳ ಪದ ಹೊಲದಲ್ಲಿ ಮಹಿಳೆಯರು ಕೆಲಸ ಮಾಡುವಾಗ ಆಯಾಸವಾಗಬಾರದೆಂದು ಹಾಡುವ ಶ್ರಮಗೀತೆಗಳು ಇತ್ಯಾದಿ.

**ಪಂಚವಾದ್ಯ** – ಕೊಂಕಣಿ ಭಾಷಿಕ ಎಲ್ಲ ಸಮುದಾಯದವರ ಯಾವುದೇ ಹಿಂದೂ ಧಾರ್ಮಿಕ ಕಾರ್ಯಗಳಾದ ಮದುವೆ-ಮುಂಜಿವೆ ಜಾತ್ರೆ

ಗೃಹಪ್ರವೇಶಗಳಲ್ಲಿ ಮಂಗಲವಾದ್ಯ ತಂಡ ಅಂದರೆ ಪಂಚವಾದ್ಯ "ವಾಜಂತ್ರಿ" ಕಡ್ಡಾಯವಾಗಿ ಪಾರಂಪರಿಕವಾಗಿ ಉಪಯೋಗಿಸುತ್ತಾ ಬಂದಿದ್ದಾರೆ. ಅದರಲ್ಲಿ ಶಹನಾಯಿ, ಶೃತಿ, ಘೊಲ, ತಾಶೆ, ತಾಳ ಇತ್ಯಾದಿ.

**ಬ್ರಾಸಭ್ಯಾಂಡ** – ಬ್ರಾಸಭ್ಯಾಂಡ ಕೊಂಕಣಿ ಭಾಷಿಕ ಕ್ರಿಶ್ಚನ್ ಕ್ಯಾಥೊಲಿಕ್ ಸಮುದಾಯದ ಮದುವೆಯ ಔತಣಕೂಟದಲ್ಲಿ ಉಪಯೋಗಿಸುತ್ತಾರೆ.

ಅವರ ಸುಮಧುರ ಸಂಗೀತದ ತಾಳಕ್ಕೆ ಎಲ್ಲರೂ ಸೂಟು–ಬೂಟು ಧರಿಸಿ ಜೋಡಿ ಸಂಗಾತಿಗಳು ಮಿತ್ರರು, ಹಿತೈಶಿಗಳು ಹೆಣ್ಣು ಗಂಡು ಎಂಬ ಬೇಧ–ಭಾವ ಮರೆತು ನೃತ್ಯ ಮಾಡುತ್ತಾರೆ.

**ಸಿದ್ಧಿ ದಮಾಮಿ ನೃತ್ಯ** – ಈ ನೃತ್ಯವನ್ನು ಉ.ಕ. ಜಿಲ್ಲೆಯಲ್ಲಿ ನೆಲೆಸಿರುವ ಸಿದ್ಧಿ ಜನಾಂಗದವರು ಯಲ್ಲಾಪುರ, ಮುಂಡಗೋಡ, ಹಳಿಯಾಳ ತಾಲೂಕಿನಲ್ಲಿ ಹೆಚ್ಚಾಗಿದ್ದು (ಹಿಂದೂ, ಮುಸ್ಲಿಂ, ಕ್ರಿಶ್ಚನ್) 3 ಸಮುದಾಯಕ್ಕೆ ಸಂಬಂಧ ಪಟ್ಟಿದ್ದಾರೆ. ಭಾರತವನ್ನು ಬ್ರಿಟಿಷರು ಆಳುವ ಸಂದರ್ಭದಲ್ಲಿ ತಾವು ಕಾಡಿಗೆ ಶಿಕಾರಿಗೆ ಹೋದಾಗ ತಮಗೆ ಸಹಾಯವಾಗಲೆಂದು ಆಫ್ರೀಕಾದಿಂದ ಈ ಸಿದ್ಧಿ ಜನಾಂಗದವರನ್ನು ತಂದಿದ್ದರು. ಎತ್ತರ ಮೈಕಟ್ಟು, ಕಪ್ಪು ಬಣ್ಣ, ಗುಂಗುರು ಕೂದಲು ಇವರು ಎಲ್ಲಾ ದೃಷ್ಟಿಯಿಂದ ಗಟ್ಟಿ ಜೀವಿಗಳು. ಇವರು ತಮ್ಮ ಪಾರಂಪರಿಕ ಹಬ್ಬ, ಜಾತ್ರೆ, ಉತ್ಸವದಲ್ಲಿ ದಮಾಮಿ ನೃತ್ಯ ಮಾಡುತ್ತಾರೆ. ಇವರ ಪ್ರಮುಖ ವಾದ್ಯವೆಂದರೆ ಕಾಡಿನ ಕಟ್ಟಿಗೆ ಬೊಡ್ಡೆಯ ಮಧ್ಯಭಾಗವನ್ನು ಪೊಳ್ಳು ಮಾಡಿ ಎರಡು ಬಾಯಿಗೆ ಕಾಡಿನ ಪ್ರಾಣಿಯ ಚರ್ಮವನ್ನು ಕಟ್ಟಿ ಕೆಳಗೆ ಕುಳಿತು ಎರಡೂ ಕಾಲಿನ ಮಧ್ಯೆ ಹಿಡಿದು ಎರಡು ಬದಿಗೆ ಎರಡು ಕೈಯಿಂದ ಜೋರಾಗಿ ಬಾರಿಸುತ್ತಾಹಾಡುತ್ತಾರೆ. ಅವರ ತಾಳಕ್ಕೆ ಸಂಗೀತ ನಾದಕ್ಕೆ ಮಹಿಳೆ ಪುರುಷರು ನರ್ತನ ಮಾಡುತ್ತಾರೆ. ಅವರ ವೇಷ–ಭೂಷ ಎಲ್ಲವೂ ಕಾಡಿನ ಪರಿಸರಕ್ಕೆ ಸಂಬಂಧಿಸಿದ್ದೆ ಇರುವುದರಿಂದ ನೋಡಲು ಒಂದು ವಿಶಿಷ್ಟವಾಗಿ ಕಾಣುವುದು. ಗೋವಾ ಕಲಾ ಅಕಾಡೆಮಿ ಸಂಸ್ಕೃತಿ ಇಲಾಖೆಯ ವತಿಯಿಂದ ಹಲವಾರು ಉತ್ಸವಗಳಲ್ಲಿ ಕಾರ್ಯಕ್ರಮ ನೀಡುತ್ತಲ್ಲಿದ್ದಾರೆ.

**ದೇಕನಿ ನೃತ್ಯ** –

ದೇಕನಿ ಎಂದರೆ ನೋಡುವದು ಇದನ್ನು ಗೋವಾದ ಸುಂದರ ಸ್ತ್ರೀಯರು ಹಾಡು ಹಾಡುತ್ತ ನೃತ್ಯ ಮಾಡುತ್ತಾರೆ. ಹಾಡಿನಲ್ಲಿ ಭಾರತದ ಇಂಪು ಹಾಗೂ ಪಾಶ್ಚಾತ್ಯ ಸಂಗೀತ ಸೇರಿದೆ. "ಹಾವ ಸಾಹೆಬಾ ಪಲ್ತಡಿ ವಯತಾ" ಈ ಹಾಡಿನ ರಾಗ ಭಾರತದಲ್ಲಿ ರಾಜಕಪೂರರವರ ಬಾಬಿ ಸಿನೇಮಾದಿಂದ "ಘೆಘೆರೆ ಸಾಹೇಬಾ" ಇದು ಇಂದಿಗೂ ಗೋವಾದ ಎಲ್ಲ ಶಾಲಾಕಾಲೇಜ ವಾರ್ಷಿಕೋತ್ಸವದಲ್ಲಿ ಮಾಡುವುದುಂಟು.

**ಘೊಡೆಮೊಡ್ನಿ (ಕೀಲ ಕುದುರೆ ನೃತ್ಯ)** –

ಇದೊಂದು ಕ್ಷತ್ರೀಯ ರಾಜರ ಕಾಲದ ಸೈನಿಕರ ನೃತ್ಯವಾಗಿದ್ದು ಇದೊಂದು ಪುರಾತನ ಜಾನಪದ ಕಲೆಯಾಗಿದೆ. ಇವರು ಸೈನಿಕರ ವೇಶಭೂಷ ಹಾಕಿ ಒಂದು ಕೈಯಲ್ಲಿ ಕುದುರೆಯ ಮುಖವಾಡದ ಲಗಾಮು ಹಿಡಿದು ಇನ್ನೊಂದು ಶೈಲಿಯಲ್ಲಿ ಖಡ್ಗವನ್ನು ಹಿಡಿದುಯುದ್ಧ ಆಡುವ ಶೈಲಿ ನಿಜವಾಗಿ ನೋಡುವವರಿಗೆ ಯುದ್ಧದ ಸನ್ನಿವೇಶ ಕಂಡು ಬರುತ್ತದೆ. ಆ ಸಂದರ್ಭದಲ್ಲಿ ಅವರ ಕಾಲಲ್ಲಿ ಕಟ್ಟಿದ ಗೆಜ್ಜೆಗಳ ನಾದ ಧೊಲ–ತಾಶೆಯ ಸಂಗೀತದ ತಾಳಕ್ಕೆ ಕೇಳಲು ಸುಂದರ ಎನಿಸುತ್ತದೆ.

**ಮಾಂಡೊ** –

ಇವು ಪ್ರೇಮದ ಗಾಯನಗಳು ಗೋವಾದ ಕ್ಯಾಥೊಲಿಕ್ ಸಮುದಾಯದ ಹಾಡುಗಳಾಗಿದ್ದು ಕೇಳಲು ಆಕರ್ಷಣೀಯವಾಗಿವೆ. ಮಾಂಡೊ ಇದು ಭಾರತೀಯ ಹಾಗೂ ಪಾಶ್ಚಾತ್ಯ ಸಂಗೀತದ ಸಂಗಮವಾಗಿದೆ. ಅದರಂತೆ ಹಿಂದೂ ಸಮುದಾಯದವರು ಭಜನ ಸಂಗೀತ ಆರತಿಹಾಡುಗಳು ಮಾಂಡೊಗೆ ಸಂಬಂಧಪಟ್ಟಿವೆ.

**ಮರಕಾಲ ಕುಣಿತ (ಗಾವಡಾಜಾಗರ)**– ವಿಜಯನಗರ ಸಾಮ್ರಾಜ್ಯದ ರಾಜಾ ಶ್ರೀ ಹರಿಹರನು ಚೋಳಾ ರಾಜನ ಮೇಲೆ ಯುದ್ಧದಲ್ಲಿ ಗೆದ್ದ ಸಂತೋಷ ಪ್ರತೀಕವೆಂದು ಪಾಲ್ಗುಣ ತಿಂಗಳ ಹುಣ್ಣಿಮೆ ರೀತಿಯಲ್ಲಿ ಆಟವಾಡುತ್ತಾರೆ ಈ ಯುದ್ಧವು ಗೋವಾದ ಚಾಂದರ(ಚಂದ್ರಪುರದಲ್ಲಿ) ಆಗಿತ್ತು.

ಗೋವಾದ ಗಾವಡಿ ಸಮುದಾಯದವರು ಈ ಪುರಾತನ ಜಾನಪದ ಕಲೆ ಪ್ರದರ್ಶೀಸುತ್ತಿದ್ದು ಇತ್ತಿತ್ತಲಾಗಿ ಇದು ಕಡಿಮೆಯಾಗುತ್ತ ಬಂದಿದೆ. ಇದರಲ್ಲಿ ವೇಶಭೂಷ ಅಲಂಕಾರದಿಂದ ನೋಡಲು ಆಕರ್ಷಣೀಯವಾಗಿದೆ.

**ತೋಣ್ಯಾಮೇಳ (ಸುಗ್ಗಿ ಕುಣಿತ)** –

ಈ ಜಾನಪದ ನೃತ್ಯವು ಹೊಲದಲ್ಲಿ ಉತ್ತಮ ಫಸಲು ಬಂದಾಗ ಎಲ್ಲರೂ ಸಂತೋಷಗೊಂಡಾಗ ಪ್ರಕೃತಿದೇವಿಯನ್ನು ಸ್ಮರಿಸುತ್ತಾ ಎಲ್ಲರೂ ಕೈಯಲ್ಲಿ ಕೋಲುಗಳನ್ನು ಹಿಡಿದು ಹಾಡುತ್ತ ಸಂತೋಷ ಭರಿತರಾಗಿ ಕುಣಿಯುತ್ತಾರೆ.

**ಮುಸಳಖೇಳ (ಒನಕೆಆಟ)** –

ಇದೊಂದು ಹಾಡು ಹಾಗೂ ನೃತ್ಯದ ಸಂಗಮವಾದಕಲೆ. ಇದನ್ನು ಹೆಚ್ಚಾಗಿ ಕ್ರಿಶ್ಚನ್ ಸಮುದಾಯದ ಕಲಾವಿದರು ಕೈಯಲ್ಲಿ ಒಣಕೆ ಹಿಡಿದು ಹಾಡುತ್ತ ನೃತ್ಯ ಮಾಡುತ್ತಾರೆ ಇದು 14ನೇ ಶತಮಾನದಲ್ಲಿ

ವಿಜಯನಗರ ಸಾಮ್ರಾಜ್ಯದ ರಾಜಾ ಶ್ರೀ ಹರಿಹರನು ಚೋಳಾ ರಾಜನ ಮೇಲೆ ಯುದ್ಧದಲ್ಲಿ ಗೆದ್ದ ಸಂತೋಷ ಪ್ರತೀಕವೆಂದು ಫಾಲ್ಗುಣ ತಿಂಗಳ ಹುಣ್ಣಿಮೆ ರೀತಿಯಲ್ಲಿ ಆಟವಾಡುತ್ತಾರೆ ಈ ಯುದ್ಧವು ಗೋವಾದ ಚಾಂದಾರ (ಚಂದ್ರಪುರದಲ್ಲಿ) ಆಗಿತ್ತು.

◆◆◆◆

# ೯. ಕರ್ನಾಟಕದಲ್ಲಿ ಕೊಂಕಣಿ ಪತ್ರಿಕೋದ್ಯಮ



■ ದಿ. ಪಾವ್ಲ ಮೊರಾಯಸ್‌-ಮಂಗಳೂರು, ಕೊಂಕಣಿ ಸಂಶೋಧಕ

ಕೊಂಕ್ಣಿ ಪತ್ರಿಕೋದ್ಯಮ ಕರ್ನಾಟಕದ ಕನ್ನಡ ಲಿಪಿಯಲ್ಲಿ 1912ನೇ ಇಸವಿಯಿಂದ ಪ್ರಾರಂಭವಾಗಿದೆ. ಮಂಗಳೂರಿನ ಶ್ರೀ ಲುಯಿಸ ಮಸ್ಕರನೀಸ ಹಾಗೂ ಲೂವಿಸ ಕಣ್ಣಪ್ಪ ಎಂಬ ಎರಡು ಯುವಕರು 1912ರಲ್ಲಿ "ಕೊಂಕ್ಣಿ ದಿರ್ವೆಂ" ಎಂಬ ಕೊಂಕಣಿ ಪತ್ರಿಕೆ ಮೊದಲು ಹೊರತಂದು ಇತಿಹಾಸ ಮಾಡಿದರು. 1912 ರಿಂದ 1937ರವರೆಗೆ 25ನೇ ವರ್ಷ ಬೆಳ್ಳಿ ಹಬ್ಬವನ್ನು ಆಚರಿಸಿದರು. ಇದರಿಂದ ಹಲವಾರು ಕವಿ-ಸಾಹಿತಿ-ಲೇಖಕರು ಬೆಳಕಿಗೆ ಬಂದರು.

ನಂತರ ಶ್ರೀ ಸಿ. ಪಿ. ಗೊನ್ಸಾಲಿಸ ಜೆಜ್ಜಿತ ಎಂಬವರು ಮಾಸಿಕ ಆಧ್ಯಾತ್ಮಿಕ ಪತ್ರಿಕೆ "ಜೆಜ್ಯುತ್ಯಾ ಪವಿತ್ರ ಕಾಳಜಾಚೋ ಆಂಜ"ಎಂಬುದನ್ನು ಹೊರತಂದರು 1971ರಲ್ಲಿ ತನ್ನ 55ನೇ ವರ್ಷಾಚರಣೆ ಆಚರಿಸಿ ನಂತರ ಸ್ಥಗಿತಗೊಂಡಿದೆ. 1938ರಲ್ಲಿ ರಾಣ ಎಂಬ ಪತ್ರಿಕೆ ಶ್ರೀ ಮೇ. ಬಾ. ಸಿಲೆಸ್ಟರ್ ಮೆನೆಜಿಸ್‌ರವರ ಸಂಪಾದಕತ್ವದಲ್ಲಿ ಪ್ರಾರಂಬವಾಗಿ ನಿರಂತರ 17 ವರ್ಷ 1955ರವರೆಗೆ ನಡೆಯಿತು. ಸಂಪಾದಕ ಮೆನೆಜಿಸ ಒಬ್ಬ ಉತ್ತಮ ಕವಿ-ಸಾಹಿತಿ-ಲೇಖಕ ಕ್ರೀಯಾತ್ಮಕವಾಗಿದ್ದರಿಂದ 1967ರಲ್ಲಿ ಕೊಂಕಣಿ-ಇಂಗ್ಲಿಷ ಶಬ್ಧಕೋಶ ಹೊರ ತಂದರು ರಾಕ್ಲೋ ಪತ್ರಕೆ ಸುವರ್ಣ ಉತ್ಸವವನ್ನು ಆಚರಿಸಿತು.

ಕ್ರಿಶ್ಚನ್ ಕೊಂಕಣಿಗರು ವಿವಿಧ ಕೊಂಕಣಿ ಪತ್ರಿಕೆ ಹೊರತಂದಂತೆ ಹಿಂದೂ ಕೊಂಕಣಿ ಭಾಷಿಕ ಗೌಡ ಸಾರಸ್ವತ ಸಮುದಾಯದವರು ಮಂಗಳೂರಲ್ಲಿ 1906ರಲ್ಲಿ ಸಭೆ ಸೇರಿ ಒಂದು ಕೊಂಕಣಿ ಪತ್ರಿಕೆ ಹೊರತರಲು ಚರ್ಚಿಸಿದರು ಹಾಗೂ ಸರಸ್ವತ ಎಂಬ ಪತ್ರಿಕೆ ಹೊರಡಿಸಿದ್ದು 1924 ಹಾಗೂ ಒಂದು ವರ್ಷದ ನಂತರ ಒಂದು ವಿಶೇಷ ಸಂ-ಚಿಕೆ "ಹೇಮಂತ ಸಂಖ್ಯಾ" ಎಂಬುದನ್ನು ಹೊರತಂದರು ಅದರ ಪ್ರತಿ ಬಿಡುಗಡೆಯು ಮಹಾತ್ಮಾಗಾಂಧಿ ಸ್ಮಾರಕ ಕಾಲೇಜಿನ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾತ್ಮಕ ಗ್ರಂಥಾಲಯದಲ್ಲಿದೆ. ಇದರ ಸಂಪಾದಕರು ಶ್ರೀ ವ್ಹಿ. ಎಸ್. ಕುಡವ ಹಾಗೂ ಮುಲ್ಕಿ ಮಾವಿನ ಕುಡ್ವರವರಿದ್ದರು.

ಬಂಟ್ವಾಳದ ಶ್ರೀ ವಾಸುದೇವ ಬಾಳೊ, ಬಿ.ವ್ಹಿ. ಬಾಳಿಗಾ ಎಂಬ ಹೆಸರಿನಿಂದ ಪ್ರಖ್ಯಾತರಾದರು 1967ರಲ್ಲಿ ಜನವರಿ 15 ರಂದು ಪಂಚಕದಾಯ ಎಂಬ ಪತ್ರಿಕೆ ಪ್ರಾರಂಭಿಸಿದರು. ಅದು 1992ರಲ್ಲಿ 25ರ ರಜತೋತ್ಸವ ಆಚರಣೆ ಮಾಡಿದರು. 1995ರಲ್ಲಿ ಕುಂದಾಪುರದ ಶ್ರೀ ಯು.ಎಸ್. ಶೇಣ್ವೆ ಇವರ ಸಂಪಾದಕತ್ವದಲ್ಲಿ ಜೈ ಕೊಂಕಣಿ ಮಾಸಪತ್ರಿಕೆ ಪ್ರಾರಂಭವಾಗಿದ್ದು ಚಾಲನೆಯಲ್ಲಿದೆ. 1999ರಲ್ಲಿ ಮಮತಾ ಹೊನ್ನಾವರ ಸಂಪಾದಕತ್ವದಲ್ಲಿ ಕೊಂಕಣಿ ತ್ರೈಮಾಸಿಕ ಕೊಂಕಣಿ ಸೌರಭ ಪ್ರಾರಂಭವಾಯಿತು. 1989ರಲ್ಲಿ ಹುಬ್ಬಳ್ಳಿಯ ಶ್ರೀ ಸುರೇಶ ಶೇಣ್ವೆರವರು ಸರಸ್ವತಿ ಪ್ರಭಾ ಎಂಬ ಮಾಸಿಕ ಪತ್ರಿಕೆ 30ನೇ ವರ್ಷಾಚರಣೆ ಆಚರಿಸಿ ಮತ್ತೆ ಮುಂದುವರಿದಿದೆ. ಮಾವಿನಕುರ್ವೆ ವೆಂಕಟೇಶ ಬಾಳಿಗಾರವರ ಕೊಡಿಯಾಳ ಖಬರ ಎಂಬ ಪತ್ರಿಕೆ 2017ರಲ್ಲಿ ದಶಮಾನೋತ್ಸವ ಆಚರಿಸಿದೆ. 2000ನೇ ಇಸವಿಯಿಂದ ಕಾರ್ಕಳದ ಸಂಸ್ಕಾರ ಬೇಧ ಎಂಬ ಮಾಸಿಕ ಪತ್ರಿಕೆ ಎಂ ಜಯವಂತ ನಾಯಕ ಇವರ ಸಂಪಾದಕತ್ವದಲ್ಲಿ ಹೊರ ಬರುತ್ತಲಿದೆ. ಕೊಂಕ್ಣಿ ಭಾಷಿಕ ಕ್ರಿಶ್ಚನ ಸಮುದಾಯದ ವಿವಿಧ ಧಾರ್ಮಿಕವಾಗಿ ಮಾಸಿಕ, ದ್ವೀಮಾಸಿಕ, ತ್ರೈಮಾಸಿಕ, ಷಣ್ಮಾಸಿಕ ಪತ್ರಿಕೆಗಳು ಪ್ರಕಟವಾಗುತ್ತಲಿದ್ದು ಅವುಗಳ ಹೆಸರುಗಳು ಈ

ಕೆಳಗಿನಂತಿವೆ. ಆಂಜೆಲೊರ್ಥ್ಯೊ ಆಂಚ್-ಬಜಾಲಾಂಚೆ ಕಿರಣಾ-ಬಜ್ಯಾಂಚೆ ಆಮ್ಚೆ ಶ್ವೆತ ಬಾರ್ಕೂರ್ಥಿ ಪೆದ್ರುಚಿ ಚಾಪಿ ಬಿಕರ್ನಕಟೆಯ ಬಾಳೊಕ ಬೆಂದುರಚೋ ತಾಳೊ – ಹೀಗೆ ಚರ್ಚಗಳಲ್ಲಿ ಹಾಗೂ ಖಾಸಗಿ ಸಂಸ್ಥೆಗಳಲ್ಲಿ ಕೊಂಕಣಿ ಪತ್ರಿಕೆಗಳು ಚಾಲ್ತಿಯಲ್ಲಿದ್ದು ಕೊಂಕಣಿ ಭಾಷೆಯ ಸೇವೆಗಾಗಿ ಈ ಪತ್ರಿಕೋಧ್ಯಮ ಅಪಾರ ಕೆಲಸ ಮಾಡಿದೆ ಎಂದು ಹೇಳಬಹುದು.

◆◆◆◆



# 10. ಕರ್ನಾಟಕದಲ್ಲಿ ಕೊಂಕಣಿ ರಂಗಭೂಮಿ

■ ಡಾ. ಜಯಂತ ನಾಯಕ-ಮಂಗಳೂರು ವಿಶ್ವವಿದ್ಯಾನಿಲಯ

ಮಾಹಿತಿ ಲಭ್ಯವಿರುವಂತೆ ಪ್ರಥಮ ಕೊಂಕಣಿ ನಾಟಕ ರಂಗಮಂಚದ ಮೇಲೆ ಪ್ರದರ್ಶಿತಗೊಂಡಿದ್ದು 1912ರಲ್ಲಿ "ಚಂದ್ರಹಾಸ" ಎಂಬ ನಾಟಕ ಕೊಂಕಣಿ ರಂಗಭೂಮಿಯ ಭೀಷ್ಮರೆಂದೇ ಕರೆಯಲ್ಪಡುವ ಮಂಗಳೂರು ಬಂಟವಾಳದ ಬೊಳಂತೂರು ಕೃಷ್ಣ ಪ್ರಭು ಎಂಬುವರು ತಾವೇ ಬರೆದು ಪುಸ್ತಕ ಪ್ರಕಟಿಸಿ ತಮ್ಮದೇ ನಿರ್ದೇಶನದಲ್ಲಿ ಈ ಪೌರಾಣಿಕ ನಾಟಕ ಅಂದಿನ ದಿನದಲ್ಲಿ ಬಹಳ ಪ್ರಸಿದ್ಧಿ ಪಡೆಯಿತು. ಸ್ವಂತ ಪಾತ್ರಧಾರಿಯಾಗಿಯೂ ಅವರು ಬರೆದ ಹಲವಾರು ನಾಟಕಗಳಲ್ಲಿ "ಪ್ರಲ್ಹಾದ ಚರಿತ್ರ" "ದ್ರೌಪದಿವಸ್ತ್ರಾಹರಣ""ಧ್ರುವಚರಿತ್ರಾ" ಶ್ರೀ ಕೃಷ್ಣಾ ಜನ್ಮಾಷ್ಟಮಿ ನಳಚರಿತ್ರೆ ಶ್ರೀ ಕೃಷ್ಣಬೂಮಿಸಂವಾದ ಮುಂತಾದವು. ಅದರಂತೆ 1914ರಲ್ಲಿ ಶ್ರೀ ನರಸಿಂಹ ಲಕ್ಷ್ಮಣ ನಾಯಕ ಎಂಬವರು "ಸಾವಿತ್ರಿಸತ್ಯಾವನ" ಎಂಬ ನಾಟಕ ಶ್ರೀ ಜಿ.ಎನ್. ಲಕ್ಷ್ಮಣ ಪೈ ಎಂಬುವರು ಆಮ್ಗೇಲೆ ಸಾಮಾಜ ಎಂಬ ಸಾಮಾಜಿಕ ನಾಟಕ ರಚಿಸಿ ಪ್ರಯೋಗ ಮಾಡಿದರು. 1919ರಲ್ಲಿ ನಾಗಪ್ಪಯ್ಯ ಶಣ್ವೆ ಇವರು ರುಕ್ಮಾಂಗದ ಚರಿತ್ರೆ ಹಾಗೂ ರತಿಕಲ್ಯಾಣ ಹೀಗೆ ಎರಡು ನಾಟಕ ಬರೆದು ಪ್ರಕಟಿಸಿದರು. 1934ರಲ್ಲಿ ಡೊಂಗರಕೇರಿಯ ಉಮಾನಾಥ ಇವರು ಬರೆದ ವಜ್ರಾಕುಡಿತ, ಬಾಳೆಂತೋಲ ಚಿಕ್ಕೊಲು, ಸ್ವನ್ನಾಂತೊಲೊ ಬುವಾ ಇವು ಮಂಗಳೂರು ಮುಂಬೈ ಶಹರಗಳಲ್ಲಿ ಯಶಸ್ವಿ ಪ್ರಯೋಗಗಳಾಗಿ ಕೊಂಕಣಿ ಪ್ರೇಕ್ಷಕರನ್ನು ಆಕರ್ಷಿಸಿದವು.

ಅದರಂತೆ ಉಳ್ಳಾಳದ ಸುಂದರರು ಬರೆದ ಮಾಮಾಲಿಮ್ಮೆನಾ, ಚೊರಿಕೊಣಾಲಿ, ಭರತಭಾಗ್ಯ ಹಾಗೂ ಬೈಂದೂರ ದೇವರಾಯರ ದೊನಿ ಹೊರಾ ಸೊಯರಿಕೆ ಸಂಭ್ರಮ, ದುಡುವಾಚೆ ಧ್ಯಾನ ಆಮುಲೆ ಅಥರ್ವಣ ಇತ್ಯಾದಿ. ರಂಗಮಂಚದ ಮೇಲೆ ಆಕರ್ಷಿಸಿದವು. ಆ ಸಮಯದಲ್ಲಿ ಕಾಯ್ಕಿಣಿ ದತ್ತಾರಾಮ ರಮಾಕಾಂತ ಕಲ್ಯಾಣಪುರ ನರಹರಿ, ಶಿವರಾಯ ಹೆಮ್ಮಾಡಿ ಪ್ರಭಾಕರ, ಬೆನಗಲ ಶ್ರೀಧರ ಬೀಲಿಕೇರೆ ಸುಂದರಗೋಪಾಲ, ಗಣೇಶತ್ರಾಸಿ ನಟ-ನಿರ್ದೇಶಕರಾಗಿ ಕೊಂಕಣಿ ರಂಗಭೂಮಿಯಲ್ಲಿ ಅಜರಾಮರರಾಗಿದ್ದಾರೆ. ಕರ್ನಾಟಕದ ಮೂಲದ ಶ್ರೀ ಕೆ.ಜಿ. ಕಾಮತ, ಆರ್.ಡಿ. ಕಾಮತ ಬೈಂದೂರ ದೇವರಾಯ ಐಗಳ ಇವರು ಮುಂಬೈ ಶಹರದಲ್ಲಿ ನಾಟಕ ಪ್ರಯೋಗ ಮಾಡಿ ಕೊಂಕಣಿ ರಂಗಭೂಮಿಯ ಸ್ಥಾನಮಾನ ಎತ್ತರಕ್ಕೇರಿಸಿದ್ದಾರೆ.

ಸ್ವಾತಂತ್ರ್ಯ ಪೂರ್ವದಲ್ಲಿ ಕೊಂಕಣಿ ರಂಗಭೂಮಿ ಗೌಡಸಾರಸ್ವತ ಹಾಗೂ ಸಾರಸ್ವತ ಸಮುದಾಯದವರು ಹಾಗೂ ಕ್ಯಾಥೊಲಿಕ್ ಕ್ರಿಶ್ಚನ್ ಸಮುದಾಯದವರು ಸಹಿತ ಅಂದು ಪ್ರಸಿದ್ಧ ಶೆಕ್ಸಪಿಯರ್ ನಾಟಕಗಳನ್ನು ಕೊಂಕಣಿಗೆ ಅನುವಾದ ಮಾಡಿ ಯಶಸ್ವಿ ಪ್ರಯೋಗ ಮಾಡಿದ್ದಾರೆ. ಜೆಪ್ಪಲಾಲೂರ್ಡ್ ಯೂನಿಯನ್ ಹೆಸರಿನ ಸಂಸ್ಥೆ ಯಶಸ್ವಿ ನಾಟಕಗಳನ್ನು ಮಾಡಿತು. ಈ ಸಂಸ್ಥೆಯ ಹೆಸರಾಂತ ಕಲಾವಿದರೆಂದರೆ ರಾಯ್ಮಂಡ ಮೆಂದೊಸ, ಜಿಮ್ಮಿ ಫರ್ನಾಂಡಿಸ್ ಥಾಮಸ್ ಸೂಜ, ಎಂ.ವೆ. ಡೆಸಾ ಅಲ್ಬರ್ಟ ಡಿಸಿಲ್ವಾ, ವಿಕ್ಟರ್‌ಸೂಜ ಮುಂತಾದವರು "ಉತ್ತಮ ಘಾರಿಕ್ವಣ" ಹಾರ್ಮಬೆಲ್ಡ ಕುರ್ಡೊರಾಯ ಕುವರ, ಸಿಸಿಲಿಗಾವಚೊ ರೊಬರ್ಟರಾಯ ಹಾಗೂ ಮಾಲ್ಡಿಸಾಂವ ಇವು ಪ್ರಸಿದ್ಧ ನಾಟಕಗಳು 1920-30ರ ಸಂದರ್ಭದಲ್ಲಿ ಕೊಡಿಯಾಳ-ಮಂಗಳೂರಿನ ಕೊಡಿಯಾಲಬೈಲ ಡ್ರಾಮಾಟಿಕ ಸೊಸೈಟಿ, ಸಂತಜೂಜೆ ನಾಟಕಸಂಘ ಜೆಪ್ಪು ಹೆಸರಿನ ಸಂಸ್ಥೆಗಳು ಹಲವಾರು ಸಾಮಾಜಿಕ ನಾಟಕ ಪ್ರದರ್ಶಿಸಿದವು. 1940ರ ಸುಮಾರಿಗೆ ಕಂಕನಾಡಿಯ ಪೆದ್ರು ಜುಜಾಂವ ಸೂಜ ಬಿಜೆ-ಯ ಫಾಸ್ಕಲ ಸಿಕ್ವೆರಾ ಹಾಗೂ ಒಜಪೇಯ ಬೊನಾವೆಂಚರ ಪ್ರಮುಖರಾಗಿದ್ದಾರೆ. ಸಂತ ಜೋಷೆಫ್ ನಾಟಕ ಸಂಘ ಕಂಕನಾಡಿಯ, ಸಂತ ಫೆಲೂಮಿನಾ ಯೂನಿಯನ್ಬೈಂದೂರ ಚರ್ಚಿನ ಕ್ಯಾಥೋಲಿಕ್ ಮಾನತ ಸಂಘ ನಂತೂರಿನ ಖುರ್ಸಾಲಾಗಿಚೆ ಹೋಲಿ ಕ್ರಾಸ್ ಯೂನಿಯನ್ ಇವೆಲ್ಲ ಅಂದಿನ ಕೊಂಕಣಿ ನಾಟಕ ಸಂಘಟನೆಗಳಾಗಿವೆ.

1943ರಲ್ಲಿ ಮಂಗಳೂರಲ್ಲಿ ಕೊಂಕಣಿ ನಾಟಕಸಂಘ ಪ್ರಾರಂಭವಾಯಿತು. ಫಾದರ ಫಿಲಿಪಸೇರಿ ಇವರ ಪ್ರಯತ್ನದಿಂದ "ಡಾನಬಾಸ್ಕೊ" ಸಭಾಗೃಹ ಕಟ್ಟಿ ಕಳೆದ 60 ವರ್ಷದಿಂದ ಕೊಂಕಣಿ ನಾಟಕ ಸಭೆಯ ಆಶ್ರಯದಲ್ಲಿ ಪ್ರಸಿದ್ಧ ನಾಟಕಕಾರರಾದ ಎಂ.ಪಿ. ಡೇಸಾ, ಶ್ರೀ ಎಸ್. ಎಸ್. ಪ್ರಭು ಶ್ರೀ ಆನಂದಕುಮಾರ ಶ್ರೀ. ಸಿ.ಪಿ. ಫರ್ನಾಂಡಿಸ್ ಇವರೆಲ್ಲಾ ಬರೆದ ಸುಮಾರು 175 ಸಾಮಾಜಿಕ ಹಾಗೂ ಧಾರ್ಮಿಕ ಕೊಂಕಣಿ ನಾಟಕಗಳು ಯಶಸ್ವಿಯಾಗಿ ರಂಗಮಂಚದಲ್ಲಿ ಪ್ರದರ್ಶಿತಗೊಂಡವು ಅದರಲ್ಲಿ ಪ್ರಮುಖವಾದ ಸೊಮಿಯಾಚೊ ಪಾಶಾಂವ ಘತಿಮಾಚಿ ಸಾಯ್ಬಿಣ, ಶ್ರೀ ಸ್ತಾಂಚೆ ಜನನ, ನಿರ್ಭಾಗಿ ಕಾಜರ ಘರಾಣೆ, ಧೊತ, ಪುನರ್ಜಿವನ ಇತ್ಯಾದಿ ಮಂಗಳೂರಲ್ಲಿ ಕೊಂಕಣಿ ರಂಗಭೂಮಿ ಹೆಸರನ್ನು ಬೆಳೆಸಿದವರು ಶ್ರೀ ಚಾಫ್ರಾ ಡಿಕೋಸ್ಟಾ, ಶ್ರೀ ಲ್ಯಾನ್ಸಿ ಪಿಂಟೊ

ನಾಯಕ, ಜೆ.ಬ. ರೆಸೊಯೆನ, ಶ್ರೀ ಜೋ.ಸ. ಆಳ್ವಾರಿಸ್, ಶ್ರೀ ಲೂವಿನೆಟ್ಟೊ, ಎಂ.ಟಿ. ಲೋಬೊ, ಜಸ್ಟಿನ್ ಡಿಸೋಜಾ ಪ್ರಭು ಇವರು ಪ್ರಮುಖರು ಶ್ರೀ ವಿಲ್ಲಿ ರೆಂಬಟಸ ಹಾಗೂ ಮೀನಾ ರೆಂಬಬಾಸ ದಂಪತಿಗಳು ನಿರ್ದೇಶನದಲ್ಲಿ "ಮಾಯಮಾಕಾ ಅಡ್ವೊನಾಕಾ"ಮಾರ್ಡನನ್ವವ್ರೋ ತಿಸ್ರಿಚಿಟ ರೇಡಿಬೊನಾ ಬಿ.ಎ. ಇತ್ಯಾದಿ ನಾಟಕಗಳು ಪ್ರೇಕ್ಷಕರ ಮನಗೆದ್ದವು ಇವರಿಗೆ ಕೊಂಕಣ ಮೈನಾ ಹಾಗೂ ಕೊಂಕಣಿ ಕೋಗುಳ ಹೀಗೆ ಬಿರುದುಗಳು ಲಭಿಸಿದವು. ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ ಪ್ರಥಮ ಅಧ್ಯಕ್ಷರಾದ ಖ್ಯಾತ ಲೇಖಕ ಡಾ.ವಿ.ಜೆ.ಪಿ. ಸಾಲ್ಡಾನಾ ಇವರು 1943ರಿಂದ ಹಲವಾರು ಕೊಂಕಣಿ ನಾಟಕ ನೀಡಿದ್ದಾರೆ. ಅದರಲ್ಲಿ ಭಾವನಾತ್ಲೊ ಗುಲಾಬ್, ತಿರ್ಮಾಣೆ ರಕ್ತಾಚಿ ರಥಡ್ತಿ ಘುಟಿ ಹಿಂಡಾಕ ಎಡಸಾಚಿ ಕಾಣಿಕ, ಕಾಲ್ಯಾವಾಂಚೊ ಖೇಳ ಇತ್ಯಾದಿ ಅದರಂತೆ ಶ್ರೀ ಸಿ ಜೇಸೆ ತಾಕೊಡೆ, ಶ್ರೀ ಗಿರಿ, ಶ್ರೀ ಜೆ.ಬಿ. ಡಿಸೋಜಾ ಕುಲಶೇಖರ ಇವರೂ ಚಿರಪರಿಚಿತರು. ಡೊಲ್ಲಿ ಕಾಸಿಯಾ ಎಂಬುವರು ಬರೆದ ನಾಟಕ ದಿ ಮಾಕಾ ಭೊಗ್ಯಾಣೆ ನೂರಾರು ಪ್ರಯೋಗ ಕಂಡಿದೆ. ಶ್ರೀ ಹೆನ್ರಿ ಡಿಸಿಲ್ವಾ ವಿದ್ಯಾವರ ಹಾಗೂ ಶ್ರೀ ರಿಚ್ಚಿ ಫೆರೆರಾ ಇವರು ಉಡುಪಿಯಲ್ಲಿ ರಂಗಭೂಮಿಯ ಕ್ಷೇತ್ರದಲ್ಲಿ ಹೆಸರು ಮಾಡಿದ್ದಾರೆ.

*** ಮಹಿಳಾ ಕೊಂಕಣಿ ನಾಟಕಕಾರರು –**

ಕರ್ನಾಟಕದಲ್ಲಿ ಕೊಂಕಣಿ ರಂಗಭೂಮಿಗೆ ಮಹಿಳೆಯರೂ ಸಹಿತ ಕೈ ಜೋಡಿಸಿದ್ದಾರೆ ಹುಬ್ಬಳ್ಳಿಯ ಶ್ರೀಮತಿ ಡಾ. ರೋಹಿಣಿ ಪ್ರಭುರವರ ಭಾಷಾಗೊಂಧೊಳು, ಮಾಂಯೆಲೊ ಸಂಘ ವರದಕ್ಷಿಣೆ, ಘರಾಗೊಷ್ಟಿ, ಘಾರೆನಪಿಶೇ ಎಂಬ 5 ನಾಟಕಗಳ ಗೊಂಚಲನ್ನು ಅರ್ಪಣೆ ಮಾಡಿದ್ದಾರೆ. ಅದರಂತೆ ಶ್ರೀಮತಿ ಗೀತಾ ನಾಯಕ, ಶ್ರೀಮತಿ ಮೀರಾ ಭಟ್, ಶ್ರೀಮತಿ ಆಲೂಬಾಯಿ ಕಾಮತ ಶ್ರೀಮತಿ ಲತಾ ಯು ಪೈ ಇವರೆಲ್ಲ ಕೊಂಕಣಿ ನಾಟಕ ರಚನೆ ಮಾಡಿ ಚಿರಪರಿಚಿತರಾಗಿದ್ದಾರೆ. ಸಾರಸ್ವದ ಸಮುದಾಯದವರ ಕೊಡುಗೆ ಅಪಾರವಿದೆ. ಶ್ರೀ ಎಂ. ವೆಂಕಟೇಶ ಪ್ರಭುರವರ ಜಾಂವಯನೀ

ಭಾಚ್ಚೊ, ಎಕಗೇಣಿ, ಸಂತ ಪುರಂದರದಾಸ ಪಿಸ್ರೂಡಪದ್ಮ, ಕೋಣ ಹರಿಜನ, ರಗಡ್ಯಾ ರಂಗಪ್ಪು ಇವೆಲ್ಲ ಇವರ ಹೆಸರಾಂತ ನಾಟಕಗಳು ಇವರ ಸಾಧನೆಗೆ 2000ರ ಕೊಂಕಣಿ ಸಾಹಿತ್ಯ ಅಕಾಡೆಮಿ ವಿಶೇಷ ಪುರಸ್ಕಾರ ಲಭಿಸಿದೆ. ಅದರಂತೆ ಶ್ರೀ ರಮಾನಂದಚಾರ್ಯರು ಬರೆದ ದೋನಿಫಡಿ ಹಾಸೂನಕಾಡಿ ನಾಟಕ 100 ಪ್ರಯೋಗ ಕಂಡಿದೆ. ಕೊಂಕಣಿ ಕಳೊ ಬಿರುದಾಂಕಿತ ಶ್ರೀ ಬಿ. ವ್ಹಿ. ಬಾಳಿಗಾರವರ ಭರತಭೇಟಿ ಸಂತತುಕಾರಾಮ ಹಾಗೂ ಗಿರಿಜಾ ಅಪಹರಣ ಹೀಗೆ 3 ಕೊಂಕಣಿ ನಾಟಕ ಬರೆದು ಅರ್ಪಣೆ ಮಾಡಿದ್ದಾರೆ. ಶ್ರೀ ಗುಲ್ವಾಡಿ ಶಿವಾನಂದ ಭಟ್ಟ, ಉಡುಪಿ ವಾಸುದೇವ ಶೇಣ್ವೆ ಬಂಟ್ವಾಳ ಅನಂತ ಮಾಸ್ತರ, ಶ್ರೀ ಎನ್. ಆರ್. ಬಂಟವಾಳಕರ ಇವರು ಶ್ರೀ ವೆಂಕಟರಮಣ ಸ್ವಾಮಿ ಥ್ರಿಯೆಟ್ರಿಕಲ್ ಕಂಪನಿ ಸ್ಥಾಪಸಿ ಪ್ರಸಿದ್ಧರಾದರು. ಶ್ರೀ ಬಾಬುರಾವ್ ಕಾಮತರ ಬ್ರೊಕರ ಕಿಟ್ಟಿ ಹಾಗೂ ಮ್ಹಾಲ್ಗಡಿನಾಕಾ ದಾಳ್ಜಜಾಯ ಹಾಸ್ಯ ಪ್ರಧಾನ ನಾಟಕಗಳು ಜನಪ್ರಿಯವಾದವು.

ಶ್ರೀ ಎನ್. ಬಿ. ಕಾಮತರು ಬರೆದ ಪದ್ದೊಂತಿ ಡಯುಟ, ಜಾಕಪಾಟಜನ್ನಾ ದೇವುಗತಿ, ರೇಡಿಮೇಡ ಜಾಂವಯ ಇವು ಪ್ರಸಿದ್ಧವಾದವು ಇವರಿಗೆ 2020ರಲ್ಲಿ ಕೊಂಕಣಿ ಸಾಹಿತ್ಯ ಅಕಾಡೆಮಿ ವಿಶೇಷ ಪುರಸ್ಕಾರ ನೀಡಿತು. ಶ್ರೀ ಹೆರಂಜಾಳ ಗಜಾನನರಾವ್ ಸಹಿತ ಹಲವಾರು ನಾಟಕ ಬರೆದು ಕೊಂಕಣಿ ರಂಗಭೂಮಿಗೆ ಚಿರಪರಿಚಿತರು ಇವರಿಗೆ 1999ರಲ್ಲಿ ಕೊಂಕಣಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆಯಿತು.

ಕುಂದಾಪುರದ ಶ್ರೀ ಕೆ. ಬಾಳಕೃಷ್ಣ ಪೈ ಕೊಂಕಣಿ ರಂಗ ಭೂಮಿಯ ವಾಮನಮೂರ್ತಿ ಎಂದು ಹೇಳಬಹುದು. ಉತ್ತಮ ರಚನೆ ನಿರ್ದೇಶನ ಸಂಘಟನೆಗಾಗಿ ಎತ್ತಿದ ಕೈ ಇವರಿಗೆ ಅಭಿಮಾನದಿಂದ ಜನ "ಕುಳ್ಳಪ್ಪು" ಎಂದು ಕರೆ-ಯುತ್ತಾರೆ. ಮೂರ್ತಿ ಚಿಕ್ಕಾದಾದರೂ ಕೀರ್ತಿ ದೊಡ್ಡದೆಂಬಂತೆ ಬರಿ 41/2 ಪುಟಿನ ಎತ್ತರದ ಈ ವ್ಯಕ್ತಿ ಸಾವಿರಾರು ಕೊಂಕಣಿ ನಾಟಕಗಳ ಪ್ರಯೋಗ ಮಾಡಿದ ಎತ್ತರದ ವ್ಯಕ್ತಿ. ಇವರು ಬರೆದ ಮೂರುರತ್ನ ನಾಟಕ 500 ಪ್ರಯೋಗ ಕಂಡಿತು. ಕುಂದಾಪುರದಲ್ಲಿ ರೂಪರಂಗ(1951) ರೂಪಕಲಾ(1972) ಬಾಲಕೃಷ್ಣ ಮಿತ್ರಮಂಡಳ(1972) ಶ್ರೀ ಲಕ್ಷ್ಮೀ ವೆಂಕಟೇಶ ನಾಟಕ ಸಭಾ ಹೀಗೆ ಹಲವಾರು ಸಂಘ ಕಟ್ಟಿ ರಂಗಭೂಮಿ ಸೇವೆ ಮಾಡಿದ್ದಾರೆ. ಸುಮಾರು 25 ಕೊಂಕಣಿ ನಾಟಕ ಬರೆದ ಇವರು ಧಾಕ್ಲಿ ಬಾಯ್ಲು – ಶಿಕ್ಕಲಿ ಚಲಿ – ಚೆಲ್ಲಿ ಮಾಕಾನಾಕಾ ಅಕ್ಜೆಎಕ ಜಾವ್ಜೆಎಕ – ದೇವಾ ಲೊಖೇಳು – ಹೀಗೆ ಹಲವಾರು ಪ್ರಸಿದ್ಧಿಯಾಗಿವೆ. ಇವರ ಸೇವೆ ಪರಿಗಣಿಸಿ 1996–97ನೇ ಸಾಲಿನಲ್ಲಿ ಕೊಂಕಣಿ ಅಕಾಡೆಮಿಯಿಂದ ವಿಶೇಷ ಪುರಸ್ಕಾರ ಲಭಿಸಿದೆ. ಕೊಂಕಣಿ ರಂಗಭೂಮಿಯು ಮತ್ತೊಂದು ಪ್ರಸಿದ್ಧ ಹೆಸರೆಂದರೆ ಶ್ರೀ ಕೆ. ಜಿ. ಕಾಮತ ಇವರಿಗೆ ನಾಟಕ ಸಾಮ್ರಾಟ ಬಿರುದು ಇದೆ. ನಿಶ್ಚಯತಾಂಬೂಲ – ಗೊಂದ್ಲಾಂತು ಗೋವಿಂದ ಬಂದೂಕಬಾಳೊ – ವಾಂಚೂಕಿಮರು – ವಿಲಾಯ್ತಿ ಹೊರೆತು ಇವರ ನಾಟಕಗಳು ದೇಶದ ವಿವಿಧ ಭಾಗದಲ್ಲಿ ಪ್ರದರ್ಶಿತಗೊಂಡಿದೆ. ಕಾಸರಗೋಡ ಚಿನ್ನಾ ನಾಟಕದಲ್ಲಿ ಹೆಸರು ಮಾಡಿದವರು ಕಾಂಚನಗಂಗಾ ಎಂಬ ಬಂಗಾಲಿನಾಟಕ ಕೊಂಕಣಿಗೆ ಅನುವಾದ ಮಾಡಿ ಗಾಂಟಿ ಎಂಬ ಹೆಸರಿನಿಂದ ಹಲವಾರು ಪ್ರಯೋಗ ಮಾಡಿದ್ದಾರೆ. ಉತ್ತರಕನ್ನಡ ಜಿಲ್ಲೆಯ ರಂಗಭೂಮಿದಿಗ್ಗಜರೆಂದರೆ ಹೊಸಾಡ ಬಾಬುಟಿ ನಾಯಕ ಹೊನ್ನಾವರದವರು ಹಲವಾರು ನಾಟಕ ರಚಿಸಿದ್ದು ಅದರಲ್ಲಿ ಅಶಿಕೆಲಾರಕಶ್ಯಿ – ಭಿಕುಮಾಮಲೆ

ವೈರಾಗ್ಯ - ಹೂನಉದಕಾ ಘೋಟ - ಹಾವತೇಕಾ ಚೆಲ್ಲಿದಿನಾ- ಋಣಾನುಬಂಧ, ಜೈ ಅಲಕ ನಿರಂಜನ, ಜಾವಚೆ ಪೂರಾ ಬರೆ, ವಾಸುದೇವ ಭಟ್ಟಲೆ ಜ್ಯೋತಿಷ್ಯ, ಗರುಡ ಪುರಾಣ, ನಾಗರಪಂಚಮಿ, ಗೋಪ್ರಸವ ಶಾಂತಿ, ಆಡಕಾತ್ರಿಂತುಲೆ ಪೊಪ್ಪಳ-ಫಜೀತಿ, ಭಾನಗಡೆಲಗ್ನಾ ಮುಂತಾದವು ಇವರ ನಾಟಕಗಳನ್ನು ಶಿರಸಿಯ ಶ್ರೀ ಅನಿಲ ಪೈ ಕೊಡ್ಲ ಅನಂತ ಶಾನಭಾಗ, ವಾಸುದೇವ ಶಾನಭಾಗ, ಹೊಸಾಡ ಪಿ.ಟಿ. ನಾಯಕ ಅರುಣ ಉಭಯಕರ, ಮೋಹನ ಭಂಡಾರಕರ ಮುಂತಾದವರು ನಾಟಕ ಪ್ರದರ್ಶನ ಮಾಡಿದ್ದಾರೆ.

ಶಿರಸಿಯ ಅನಂದ ಗೋಪಾಲಕೃಷ್ಣ ಕಾಮತರು ಸರ್ವೇಜನಾ ಕಾಂಚನಂ ಆಶ್ರಯಂತೆ - ಹೊಡ್ವಣಾಸುಖ - ಸ್ವಾರ್ಥದೇವೊಭವ ಬ್ರಹ್ಮಗಾಂಟಿ - ಸಿಮೊಲಂಘನ ಇತ್ಯಾದಿ ನಾಟಕ ಬರೆದು ರಾಷ್ಟ್ರವ್ಯಾಪ್ತಿ ಪ್ರಯೋಗ ಮಾಡಿದ್ದಾರೆ. ಇವರಿಗೆ 2003ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ ಲಭಿಸಿದೆ.

ಬೆಂಗಳೂರಿನಲ್ಲಿ ಶ್ರೀ ಕೋಟಾ ನರಸಿಂಹ ಪೈರವರು ರಂಜನಾ ಆರ್ಟ್ಸ ಎಂಬ ಸಂಸ್ಥೆ ಕಟ್ಟಿ 1975ರಲ್ಲಿ ಜಗ್ಗಾಲಿ ರಭಾಂಕಿ, ಮಾಕಾ ದೆಣೆ ನಾಕಾ - ಬಾಪ್ಪಾಲಿಗಾಂಟಿ ಬೆಂಗಳೂರಿನಲ್ಲಿ ಪ್ರದರ್ಶನಗೊಂಡಿವೆ. ಇವರಿಗೆ 2000ನೇ ಇಸವಿಯಲ್ಲಿ ಕೊಂಕಣಿ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

ಅವರಂತೆ ಶ್ರೀ ಆರ್.ಎಸ್ ಕೊಡಂಗೆ ಶ್ರೀ ಸಂಜೀವ ಕೇಳ್ಕರ, ಶ್ರೀ ನರೇಂದ್ರನಾಥ ಕಲ್ಯಾಣಪುರ ಎ.ವ್ಹಿ.ರೇಗೊ ಹೆನ್ರಿ ಪಿಂಟೊ ಇತ್ಯಾದಿಯವರು ಬೆಂಗಳೂರಿನಲ್ಲಿ ಕೊಂಕಣಿ ನಾಟಕಗಳನ್ನು ಮಾಡಿದ್ದಾರೆ.

ಕಾರವಾರದಲ್ಲಿ ನರಸಿಂಹ ಕಲಾಕುಂಜ ಸದಾನಂದ ನಾಯ್ಕರ ನೇತೃತ್ವದ ತಂಡ ಸುಮಾರು 50 ವರ್ಷ ಹಿಂದಿನಿಂದ ಮಾಡುತ್ತ ಬಂದಿತು. ಕಾರವಾರ ಸದಾಶಿವಗಡದ ಡಾ. ವಸಂತ ಬಾಂದೇಕರ 1995ರಲ್ಲಿ ತಮ್ಮ ನೇತೃತ್ವದ ತಂಡದೊಂದಿಗೆ ಅಖಿಲಭಾರತ ಕೊಂಕಣಿ ನಾಟಕ ಸ್ಪರ್ಧೆಯಲ್ಲಿ ಭಾಗವಹಿಸಿದ್ದರು. ಉದಯಕಾಂತ ಅಣವೇಕರ ಲಖಾತ್ಲೊ ನ್ಹವರೋ ಕೊಂಕಣಿ ಭಾಷಿಕ ಹಲವಾರು ರಾಜ್ಯದಲ್ಲಿ ಸಂಘಟನೆ ಮೂಲಕ ಯಶಸ್ವಿ ಪ್ರದರ್ಶನಗೊಂಡಿದೆ. ಸಧ್ಯ ಕಳೆದ 8-10 ವರ್ಷದಿಂದ ಸಾಕಾರ ನಾಟ್ಯ ಸಂಘ ಹಣಕೂಣ ಯಶಸ್ವಿ ನಾಟಕಗಳನ್ನು ಕೊಡುತ್ತಲಿದೆ.

**ಕರ್ನಾಟಕದಲ್ಲಿ ಕ್ರೀಯಾಶಿಲವಾಗಿ ಇಂದಿಗೂ ಕೊಂಕಣಿ ನಾಟಕ ಸಂಘಟನೆಗಳೆಂದರೆ -**

1. ಕೊಂಕಣಿ ಭಾಸ ಆನಿ ಪ್ರತಿಷ್ಠಾನ - ವಿಶ್ವಕೊಂಕಣಿ ಕೇಂದ್ರ ಶಕ್ತಿ ನಗರ ಮಂಗಳೂರ ಅಧ್ಯಕ್ಷರು ಶ್ರೀ ಬಸ್ತಿ ವಾಮನ ಶೇಣ್ವೆ
2. ಕೊಂಕಣಿ ನಾಟಕಸಭಾ ಡಾನಬಾಸ್ಕೊ ಹಾಲ - ಮಂಗಳೂರು
3. ಸೆಂಟಜೊಶಫ್ ನಾಟ್ಯಾಸಂಘ ಜೆಪ್ಪು ಮಂಗಳೂರು
4. ಡಾ. ಟಿ. ಎಮ್. ಎ. ಪೈ ಪೌಂಡೆಶನ ಸಿಂಡಿಕೇಟ್ ಹೌಸ್ - ಮಣಿಪಾಲ
5. ರಂಜನಾ ಆರ್ಟ್ಸ್ - ವಿಲ್ಸನ್‌ಗಾರ್ಡನ ನೇತ್ರಾವತಿ ನಿಲಯ - ಬೆಂಗಳೂರು
6. ವಿದ್ಯಾರಂಗ ಚಿತ್ರ ಮಂಡಳ - ಕುಂದಾಪುರ
7. ರಂಗಚಿನ್ನಾರಿ ಮಂಗಳೂರು
8. ಮಾಂಡ ಸೋಬಾಣ ಶಕ್ತಿನಗರ - ಮಂಗಳೂರು
9. ಕ್ಯಾನರಾ ಯೂನಿಯನ್ ಮಲ್ಲೆಶ್ವರಂ - ಮಂಗಳೂರು
10. ಕೊಂಕಣ ಕಲಾಮಂಡಳ - ಶಿರ್ಶಿ
11. ಶ್ರೀ ಲಕ್ಷ್ಮೀ ವೆಂಕಟೇಶ ನಾಟಕ ಸಭಾ - ಕುಂದಾಪುರ
12. ಸಾಕಾರ ನಾಟ್ಯಸಂಘ ಹಣಕೂಣ ಕಾರವಾರ

♦♦♦♦

# 11. ಮುಂಬೈದಲ್ಲಿ ಕೊಂಕಣಿ ರಂಗಭೂಮಿ

■ ಡಾ. ಚಂದ್ರಶೇಖರ ಶೆಣೈ–ಮುಂಬೈ

ಮುಂಬಯಿ ವಡಾಲಾ ಕಿಂಗಸರ್ಕಲ್ ಭಾಗದಲ್ಲಿ ಶ್ರೀ ಕಾಸರಗೋಡ ಗೋಪಿನಾಥ ಕಾಮತ ಇವರು ಬಹಳ ನಾಟಕ ಬರೆದು ಪ್ರಯೋಗ ಮಾಡಿದರು. ವಿಲಾಯತಿ ವ್ಹರೇತು, ಗೃಹಿಣಿ ಗೃಹ ಮಚ್ಚತೆ, ದೇವಾನ ಸಾಕ್ಷಿದಿಲ ಇವು ಸಂಗೀತ ಪ್ರಧಾನ ನಾಟಕಗಳಾಗಿದ್ದವು. ಕಾಮತರು ಸ್ವತ ಗಾಯಕ ಸಂಗೀತಕಾರರಾಗಿದ್ದರಿಂದ ಅವರ ನಾಟಕದಲ್ಲಿ ಸಂಗೀತ ಗಾಯನ ಇರುತ್ತಿತ್ತು. ಅದರಂತೆ ಹಾಸ್ಯನಾಟಕ ಸೊಯರೆ ಎತ್ತಿತ ಜಾಗೃತ – ಸನ್ಮಾನ – ಅಬಲ ಸಬರಿ ಹೀಗೆ ಸಾಮಾಜಿಕ ಬೋಧನಾ ನಾಟಕಗಳು ಮಾನಶ್ಯಾಸ್ತ್ರ ಆಧಾರಿತ ನ್ಯನಂಗಡ ಇವು ಇಂದಿಗೂ ಜನಪ್ರಿಯವಾಗಿವೆ. ಇದೇ ಸಂದರ್ಭದಲ್ಲಿ ಕೊಂಕಣಿ ಸಾಹಿತ್ಯ ಸಮಿತಿ ಎಂಬ ಸಂಸ್ಥೆ ಪ್ರತಿವರ್ಷ 4–5 ನಾಟಕ ಮಹೋತ್ಸವ ಆಚರಿಸುತ್ತಿತ್ತು. ಆಗ ಮುಂಬಯಿಗೆ ಗೋವಾ–ಮಂಗಳೂರಿನ ನಾಟ್ಯಾ ತಂಡಗಳೂ ಬರುತ್ತಿದ್ದವು. ಅದರಲ್ಲಿ ಮುಕ್ತಿ ಹಾಗೂ ಪಾನಾ ಆಡಿಚೆ ಫೂಲ ಈ ಎರಡು ರೂಪಾಂತರದಲ್ಲಿ ಪ್ರಮುಖ ಪಾತ್ರವನ್ನು ಚಿತ್ರನಟ ಅನಂತನಾಗರು ವಹಿಸಿದ್ದರು. ಹಲವು ನಾಟಕಗಳಲ್ಲಿ ಅವರ ತಮ್ಮ ಶಂಕರನಾಗರೂ ಪಾತ್ರವಹಿಸಿದ್ದರು.

1950ರಿಂದ ಇಂದಿನವರೆಗೆ ಮುಂಬಯದಲ್ಲಿ ಕೊಂಕಣಿ ನಾಟಕಕ್ಕೆ ಹೆಸರುಮಾಡಿದವರೆಂದರೆ ಶ್ರೀ ಅನಂತ ಕಾಮತ ನಟ ನಿರ್ದೇಶಕನಾಗಿ ಹಲವಾರು ನಾಟಕಮಾಡಿ 1980ರಲ್ಲಿ ಕೊಂಕಣಿ ತ್ರಿವೇಣಿ ಕಲಾಸಂಗಮ ಸ್ಥಾಪಿಸಿ ಪ್ರಸಿದ್ಧ ನಾಟಕಗಳಾದ ಸರ್ವೆಜನಂ ಕಾಂಚನಂ ಆಶ್ರಯತೆ–43 ಪ್ರಯೋಗ ಸ್ವಾರ್ಥದೇವೊಭವ–ಸಾಕ್ಷಾತ್ಕಾರ ಬ್ರಹ್ಮಗಾಂಟಿ–ವಾಸುದೇವ ನಾಯಕಾಲಿ ಗಂಡಾ–ಗುಂಡಿ ಭಕ್ತಿಶ್ರದ್ಧಾ ವಿಶ್ವಾಸ ಉತಾ ಚಲ್ಯಾನೊ ಜಾಗೃತಜಾಯಾ – ಹಾಸ್ಪಿಟಲ್ ದರ್ಶನ – ತಾಳ ತೆಕ್ಕಾ ಮೇಳಾ ಮುಖ್ಯಾಂತಲೊ ಮ್ಹಾರು ಪ್ರಸಿದ್ಧವಾಗಿವೆ.

ಶ್ರೀ ಮಂಜುನಾಥ ಪ್ರಭುರವರು ವ್ಯಾವಸಾಯಿಕ ನಾಟಕದ ಪ್ರಯೋಗಮಾಡಿ ಶ್ರೀ ಪ್ರಸಾದ ಸಾವಕಾರ – ಶ್ರೀ ಅಶೋಕ ಸರಾಫ ಮರಾಠಿ ರಂಗಭೂಮಿ ಹಾಗೂ ಚಿತ್ರನಟರನ್ನು ಸೇರಿಸಿ ಸ್ವರಧಾಂಬಲೆ ಮೈಫಿಲೆಚೆ ಎಂಬ ಕೊಂಕಣಿ ಸಂಗೀತ ಮುಂಬಯಿ ಕರ್ನಾಟಕದಲ್ಲಿ ಹಲವಾರು ಆದವು.

1980ರಲ್ಲಿ ಸ್ಥಾಪಿತ ಕೊಂಕಣಿ ತ್ರಿವೇಣಿ ಕಲಾಸಂಗಮ ಕಳೆದ 35 ವರ್ಷದಿಂದ ಸಕ್ರಿಯವಾಗಿ ಕಾರ್ಯ ನಿರ್ವಹಿಸುತ್ತದೆ. ದಿಲ್ಲಿ–ಬಡೊದಾ–ಹೈದ್ರಾಬಾದ್–ಗೋವಾ–ಮಹಾರಾಷ್ಟ್ರ ಕರ್ನಾಟಕದ ವಿವಿಧ ಭಾಗದಲ್ಲಿ ಅಭಿಯಾನ ಮಾಡಿದೆ. ಇತ್ತಿಚಿಗೆ ನಂದಾದೀಪ (ದಿವಾಜಳುದೆ ಸಾರಿರಾತ ಮರಾಠಿ ರುಪಾಂತರ) ಇದರ 50 ಪ್ರಯೋಗಗಳಾದವು. ವಸಂತ ನಾಡಕರ್ಣಿ ನಿರ್ಮಿತ ಕಾಂಚನಮೃಗ ಎಂಬ ನಾಟಕ ಕೆನರಾ ಸಾರಸ್ವತ ಅಸೋಶಿಯೇಷನ್‌ದವರು ಸಾದರ ಪಡಿಸಿದರು.

ಮುಂಬೈಯಲ್ಲಿ ಸಧ್ಯ ಸಕ್ರೀಯವಾದ ನಾಟ್ಯ ಸಂಘಗಳೆಂದರೆ ಕೆನರಾ ಸಾರಸ್ವತ ಅಸೋಸಿಯೇಷನ್ 26 ವರ್ಷ ಕೊಂಕಣಿ ತ್ರಿವೇಣಿ ಕಲಾಸಂಗಮ – 36ವರ್ಷ ಮಾಟುಂಗಾ ಮಿತ್ರಮಂಡಳ 34 ವರ್ಷ ಅದರಂತೆ ವಿರಾಠ–ಭಾಯಿಂದರ ಮೀರಾರೂಡ ಇಲ್ಲಿಯ ಕ್ಯಾಥೋಲಿಕ್ ಕ್ರಿಶ್ಚನ್ ಬಾಂಧವರು ತ್ರಿಯಾತ್ರಾ ಜಾಗೋರ ಮಾಡುತ್ತಾರೆ. ಮುಂಬಯಯಂತಾ ಸಮಯವಿಲ್ಲದ ಬದುಕಿನಲ್ಲೂ ಕೊಂಕಣೀಗರು ನಾಟಕಗಳನ್ನು ಮಾಡಿ ಆಡಿ ಕೊಂಕಣಿ ಭಾಷೆ–ಕಲೆ–ಸಾಹಿತ್ಯ ಸಂಗೀತವನ್ನು ಜಾಗೃತವಾಗಿಟ್ಟು ಕೊಂಡಿರುವದಕ್ಕೆ ಮೆಚ್ಚಲೇಬೇಕು.

♦ ♦ ♦ ♦

# 12. ಗೋವಾ ಕೊಂಕಣಿ ಅಕಾಡೆಮಿ

■ ಶ್ರೀ ಅವಿನಾಶ ತ್ರಾಸಿ-ಗೋವಾ

ಇದರ ಸ್ಥಾಪನೆ 1986ರಲ್ಲಿ ಆಯಿತು. ಶ್ರೀ ಪುರುಷೋತ್ತಮ ಕಾಕೊಡಕರ ಪ್ರಥಮ ಸ್ಥಾಪಿತ ಅಧ್ಯಕ್ಷರಾಗಿ ಸತತ 3ಸಲ ಅಂದರೆ

1996ರವರೆಗೆ ಉಳಿದರು. ಕಳೆದ 32 ವರ್ಷದಿಂದ ಗೋವಾ ಕೊಂಕಣಿ ಅಕಾಡೆಮಿ ಕೊಂಕಣಿ ಕಲೆ-ಸಾಹಿತ್ಯ ಸಂಸ್ಕೃತಿಗಳ ಅಭಿವೃದ್ಧಿಗಾಗಿ ದುಡಿಯುತ್ತ ಸಾಗಿದೆ.

**ಗೋವಾದಲ್ಲಿ ಆಧುನಿಕ ಕೊಂಕಣಿ ರಂಗಮಂಚ -**

ನಾಟಕವು ಗೋವಾದವರ ರಕ್ತದಲ್ಲೇ ಕರಗತವಾಗಿದೆ ಎಂದು ಹೇಳಬಹುದು. ಚಿಕ್ಕ ರಾಜ್ಯವಾದ ಗೋವಾದಲ್ಲಿ ಪ್ರತಿವರ್ಷ ಸುಮಾರು 3000ನಾಟಕಗಳು ಜರಗುತ್ತವೆ. ಪ್ರತಿ ದೇವಸ್ಥಾನದ ಎದುರುಗಡೆ ಒಂದು ರಂಗಮಂಚವಿದ್ದು ಪ್ರತಿ ಜಾತ್ರೆ ಉತ್ಸವಗಳಲ್ಲಿ ಧಾರ್ಮಿಕ ದೃಷ್ಟಿಯಿಂದ ಸಾಂಸ್ಕೃತಿಕವಾಗಿ ನಾಟಕಗಳು ಜರಗುತ್ತವೆ. ಅದಕ್ಕೆ ಉತ್ಸವ ರಂಗಮಂಚವೆಂದು ಕರೆಯುತ್ತಾರೆ. ಇವು ನಿಮಗೆ ಭಾರತದ ಇನ್ನಾವುದೇ ರಾಜ್ಯದಲ್ಲಿ ನೋಡಲು ಸಿಗದು. ಇಲ್ಲಿ ವಿವಿಧ ಬಗೆಯ ನಾಟಕ-ಜಾಗೋರ-ರನಮಲೆ ಬೇಳು ತಾಳಗಡಿ-ದಶಾವತಾರ ಹಾಗೂ ಲಲಿತ ಹೀಗೆ ಪ್ರದರ್ಶನಗೊಳ್ಳುತ್ತವೆ. ಶೇಣೈ ಗೋಯಬಾಬ ಬರೆದ ಮೊಗಾಚೆಲಗ್ನ 1913ರಲ್ಲಿ ಪ್ರಥಮ ಬರೆದು ಪ್ರಕಟಿಸಿ ರಂಗ ಪ್ರವೇಶ ಮಾಡಿದ ನಾಟಕವಾಗಿದೆ. 1927ರಲ್ಲಿ ಮುಂಬೈದಲ್ಲೂ ಪ್ರದರ್ಶನಗೊಂಡಿತು. 1933ರಲ್ಲಿ ಕದಂಬರ ಕಾಲದ ಗೋವಾದ ಇತಿಹಾಸವುಳ್ಳ ಜೆಲ್ವಾರಾನೊ ಎಂಬ ನಾಟಕ ಬರೆದು ಅದು ಗೋವಾದ ಎಲ್ಲ ಜನರ ಮೇಲೆ ಪರಿಣಾಮ ಬೀರಿತು. ಆಚಾರ್ಯ ರಾಮಚಂದ್ರ ಶಂಕರ ನಾಯ್ಕ ಬರೆದ ಚವತಿಚೋ ಚಂದ್ರ ಎಲ್ಲರನ್ನೂ ಆಕರ್ಷಿಸಿತು. 1950 ರಿಂದ 1960ರವರೆಗೆ ಬಹಳ ಉತ್ತುಂಗ ಸ್ಥಿತಿಯಲ್ಲಿತ್ತು.

ಮುಂಬೈದಲ್ಲಿ ಒಂದಂಕಿನ ಮರಾಠಿ ನಾಟಕಗಳು ಬಹಳ ಪ್ರಸಿದ್ಧವಾಗಿದ್ದವು. ಅದರಿಂದ ಕೊಂಕಣಿಗರು ಆಕರ್ಷಿತರಾಗಿ ಕೊಂಕಣಿ ನಾಟಕ ರಚಿಸ ತೊಡಗಿದರು. ಆಕಾಶವಾಣಿ ಮುಂಬಯಿದಿಂದಲೂ ಕೊಂಕಣಿ ನಾಟಕ ಪ್ರಸಾರವಾಗ ತೊಡಗಿದವು. ಮುಂಬೈದಲ್ಲಿ ನಾಟಕ ಸ್ಪರ್ಧೆಗಳು ಪ್ರಾರಂಭವಾದವು. ಕಾಲೇಜಗಳಲ್ಲೂ ಸ್ಪರ್ಧೆಗಳು ನಡೆಯ ತೊಡಗಿದವು. ಕೊಂಕಣಿ ಸಾಹಿತ್ಯದಲ್ಲಿ ಅಂದು ಹೆಸರಾಂತ ಸಾಹಿತಿಗಳಾದ ಶಂಕರ ಭಂಡಾರ, ಸುಮಂತ ಕೆಲೆಕರ ಹರದತ್ತಾ ನೆವ್ರೆಕರ ಕೊಂಕಣಿ ನಾಟಕಗಳಿಗಾಗಿ ದುಡಿಯುತ್ತಿದ್ದರು. ಪೋರ್ತುಗೀಜರ ಆಳ್ವಿಕೆಯಲ್ಲಿ ಗೋವಾದಲ್ಲಿ

ಕೊಂಕಣಿಗರಿಗೆ ತಮ್ಮ ಅಭಿಮತ ವ್ಯಕ್ತ ಪಡಿಸಲು ಸಾಹಿತ್ಯ ಸ್ವತಂತ್ರವಿರಲಿಲ್ಲಾ. ಅವರು ಮುಂಬೈದಲ್ಲಿ ವಲಸಿಗರಾಗಿ ಉಳಿದು ಗೋವಾ ಸ್ವಾತಂತ್ರ್ಯ ಪಡೆಯಲು ಅಭಿಯಾನ ಪ್ರಾರಂಭಿಸಿದರು. ಡಾ. ಮನೋಹರ ಸರದೇಸಾಯಿಯವರು "ಆಜರೆ ಥೊಲಾರಪಲ್ಲಿ ಬಡಿ" ಎಂಬ ಸಂಗೀತಮಯ ನಾಟಕ ರಚನೆ ಗೋವಾ ಸ್ವತಂತ್ರ್ಯ ಹೊಂದಲು 7 ತಿಂಗಳು ಮಾತ್ರ ಉಳಿದಾಗ ಕಂಸನನ್ನು ಕೊಲ್ಲುವ ಶ್ರೀ ಕೃಷ್ಣನ ಅವತಾರ ಆಧಾರಿತ ಕೊಂಕಣಿ ನಾಟಕ ಗೋವಾ ಹಳ್ಳಿ ಹಳ್ಳಿಗಳಲ್ಲಿ ಜನರನ್ನು ಜಾಗೃತ ಮಾಡಿತು. ಹಾಗೂ ಸ್ವತಂತ್ರ್ಯ ಪಡೆಯಲು ಅನುಕೂಲವಾಯಿತು. ಗೋವಾದ ಶ್ರೀ ಪುಂಡಲಿಕ ನಾರಾಯಣ ದಾಂಡೆ ಎಂಬುವರು 1955ರಲ್ಲಿ ಡ್ರಾಮಾತಾಚಿ ಕರಾಮತ ಎಂಬ ನಾಟಕ ಜನರನ್ನು ಆಕರ್ಷಿಸಿತು. ಮಧ್ಯಮ ವರ್ಗದವರ ಮೇಲೆ ಆಧಾರಿತ ನಾಟಕ ಇದಾಗಿತ್ತು. ನಿಮಿತ್ತ ಕಾರಣ ಎಂಬ ನಾಟಕವೂ ರಂಜಿಸಿತು. ಗೋವಾ ಸ್ವತಂತ್ರ್ಯ ನಂತರ 1970ರಲ್ಲಿ ಕಲಾ ಅಕಾಡೆಮಿ ಸ್ಥಾಪನೆಯಾಗಿ ನಾಟಕದ ಜೊತೆಗೆ ವಿವಿಧ ಕೊಂಕಣಿ ಸಾಂಸ್ಕೃತಿಕ ಕಲಾ ಪ್ರಕಾರಗಳ ಅಭಿವೃದ್ಧಿಯಾಗ ತೊಡಗಿದವು. ಎಲ್ಲಾ ವರ್ಗ ಎಲ್ಲಾ ಧರ್ಮದವರನ್ನು ಪ್ರೋತ್ಸಾಹಿಸಿ ಮರಾಠಿ ಕೊಂಕಣಿ ನಾಟಕ ಸ್ಪರ್ಧೆಗಳು ಜರುಗ ತೋಡಗಿದವು. ನಾಟಕದ ಜೋತೆಗೆ ತ್ರಿಯಾತ್ರಾಗಳಿಗೂ ಅವಕಾಶ ದೊರೆಯಿತು. ಕಲಾ ಅಕಾಡೆಮಿ ಸಾಹಿತ್ಯದಲ್ಲಿ 1992ರಲ್ಲಿ ರಂಗಮೇಳಾ ಸ್ಥಾಪಿಸಿ ಶಾಲಾ ಮಕ್ಕಳಿಗೂ ಸ್ಥಳೀಯ ಕಲಾವಿದರಿಗೂ ಅವಕಾಶ ದೊರೆಯ ತೋಡಗಿದವು. ಕೊಂಕಣಿ ಮರಾಠಿ ಜೋತೆಗೆ ಹಿಂದಿ ಇಂಗ್ಲೀಷಿಗೂ ಅವಕಾಶ ದೊರೆಯಿತು. ಅಕಾಡೆಮಿಯು ತರಭೇತಿ-ಸಭೆ-ಕಾರ್ಯಗಾರ-ಚಿಂತನ-ಮಂಥನ ಕಾರ್ಯಕ್ರಮ ಆಯೋಜಿಸ ತೋಡಗಿತು.

ಈ ನಾಟಕಗಳಿಗಾಗಿ ಸಂಗೀತ ನಾಟಕ ಅಕಾಡೆಮಿ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾ ಸಾಹಿತ್ಯ ಅಕಾಡೆಮಿ ಗೋವಾ ಕೊಂಕಣಿ ಅಕಾಡೆಮಿ ಹಾಗೂ ಸರ್ಕಾರೇತರ ವಿವಿಧ ಸಂಘ ಸಂಸ್ಥೆಗಳಾದ ಗೋಮಾಂತರ ವಿಧ್ಯಾನೀಕೇತನ, ಸಂಕಲ್ಪ ಥೇಟರ್ ಕೊಂಕಣಿ ಭಾಷಾ ಮಂಡಳ ಡಾ. ಟಿ. ಎಮ್.

ಎ. ಪೈ ಫೌಂಡೇಷನ ಗೋಮಾಂತರ ಮರಾಠಿ ಅಕಾಡೆಮಿ ಮುಂತಾದವುಗಳು ಸಹಕಾರ ನೀಡತೊಡಗಿದವು.

1975ರಲ್ಲಿ ಕೊಂಕಣಿ ಭಾಷೆ ಸಾಹಿತ್ಯಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ದಿಲ್ಲಿಯ ಮಾನ್ಯತೆ ನೀಡಿದ್ದರಿಂದ ಕಲಾ ಅಕಾಡೆಮಿಯು ಕೊಂಕಣಿ ನಾಟಕ ಸ್ಪರ್ಧೆ ಆಯೋಜಿಸಿ 13 ನಾಟ್ಯ ತಂಡಗಳು ಯಶಸ್ವಿ ಪ್ರದರ್ಶನ ನೀಡಿದವು. ಅಂದಿನಿಂದ ಇಂದಿನವರೆಗೂ ಸುಮಾರು 500 ಹೊಸ ನಾಟಕಗಳ ರಚನೆಯಾಗಿ ಪ್ರಯೋಗ ಕಂಡಿವೆ. ದೇಶದ ವಿವಿಧ ಭಾಷೆಯ ನಾಟಕಗಳ ಕೊಂಕಣಿಗೆ ಭಾಷಾಂತರವಾಗಿವೆ. ಶ್ರೀ ಪುಂಡಲೀಕ ನಾಯ್ಕ ಪ್ರಸಿದ್ಧ ಕೊಂಕಣಿ ನಾಟಕಕಾರರು ಇವರೆಗೆ ಸುಮಾರು 25 ನಾಟಕಗಳನ್ನು ರಚಿಸಿದ್ದಾರೆ. ಕೆಲವುಗಳಲ್ಲಿ ಪಾತ್ರ ಹಾಗೂ ನಿರ್ದೇಶನ ಮಾಡಿದ್ದಾರೆ. ಅದರಲ್ಲಿ ಚೌರಂಗ ಎಂಬ ನಾಟಕಕ್ಕೆ 1984ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ದೊರಕಿದೆ. ಇವರು ಬರೆದ ಇನ್ನೊಂದು

ನಾಟಕ ಶ್ರೀ ವಿಚಿತ್ರ ಜಾತ್ರಾ ಇದರ ಹಿಂದಿ ಅನುವಾದಕ್ಕೆ 1988ರಲ್ಲಿ ಆಕಾಶವಾಣಿ ಕೇಂದ್ರದಿಂದ ಪ್ರಶಸ್ತಿ ದೊರಕಿದೆ. ಪುಂಡಲೀಕ ನಾಯ್ಕರ ಕೆಲ ನಾಟಕಗಳೆಂದರೆ ಪರಿಕ್ರಮ ರಾಖಾಣ – ಮುಕ್ತಾತಾಯಿ – ಪ್ರೇಮ ಯುದ್ಧ – ದವಜ – ಆತ್ಮ ವಂಚನ – ದಿಸ್ತಾ ದೌಲತ ದೇವಾಧನ್ಯ – ಶಿರಿಗೆಶಿರಿ ಆಧಾನಂತರಿ – ಕಾಳಜಾಚಿ ಕಾಣಿ – ದಿವ್ಯಾ ದಿವ್ಯಾ ದೀಪತಕರ – ಅಂತಘರಾ ಭಗವಂತಾ – ತೀರಂಗಿ ಚಕ್ರಾ ಚಕ್ರಿ – ಕಾನಸುಲೊ ಇವರು ಕೊಂಕಣಿ ರಂಗಭೂಮಿಯ ಆಸ್ತಿ ಎಂದು ಹೇಳಬಹುದು. ಶ್ರೀ ಅನಿರುದ್ಧ ಬರಾಲಿಸ ಉಪೇಂದ್ರ ಟೆಂಬಲೆ 1978–89 ಸಮಯದಲ್ಲಿ ಹಲವಾರು ನಾಟಕಗಳನ್ನು ಬರೆದರು. ಅದರಲ್ಲಿ ಖೈದಿ, ವಿಶ್ವ ಮಂಥನ, ವಿನಾಶ ಚಕ್ರ ಇತ್ಯಾದಿ.

ಆಧುನಿಕ ಕೊಂಕಣಿ ರಂಗಮಂಚದಲ್ಲಿ ಶ್ರೀ ದತ್ತಾರಾಮ ಕಾಮತ ಬಾಂಬೊಲೆಕರ ಹಾಗೂ ವಿಷ್ಣು ಸೂರ್ಯವಾಗ ಈ ಎರಡು ಯುವ ಕಲಾವಿದರು ಬಹಳ ಹೆಸರು ಮಾಡಿದರು. ದತ್ತಾರಾಮ ಬಾಂಬೋಲೆಕರ ಸುಮಾರು 14 ನಾಟಕ ಬರೆದರು. ಅದರಲ್ಲಿ ಶನಿಲೊಗಣು ಬಹಳ ಪ್ರಸಿದ್ಧಿ ಪಡೆಯಿತು. ಮಹಿರಾವನ – ವಿಕವಕಲತಾ – ವೇದಂಘರ ಜೀವನಮುಖ – ಡ್ಯಾಡಿ ರಾಥೊಸವಾ – ಸತ್ಯ ಮಾಡ್ಡಿತಾ ಮಾಡ್ಡಿತಾ ರಂಗಯಾತ್ರಾ ಇತ್ಯಾದಿ.

ಶ್ರೀ ವಿಷ್ಣು ಸೂರ್ಯವಾಘ 20ನೇ ಶತಮಾನದಲ್ಲಿ ಬರೆದ ಅವರ ಪ್ರಸಿದ್ಧ ನಾಟಕ ಸುವರಿ ಗೋವಾದಲ್ಲಿ ಇತಿಹಾಸ ನಿರ್ಮಿಸಿತು.

ಕಾರಣ 450 ವರ್ಷದಿಂದ ಪೋರ್ತುಗೀಜರ ಆಳ್ವಿಕೆಯಲ್ಲಿ ಗುಲಾಮರಾಗಿ ಬಾಳ ಬದುಕಿದ ಕೊಂಕಣಿಗರ ಚಿತ್ರಣವಿದೆ. ಅವರ ಇತರ ನಾಟಕಗಳೆಂದರೆ "ಧರಂಗಜ" – ಪಂಟೇಡಘುಲ – ಪೆದ್ರು ಪಡ್ಲೊ ಬಾಯಿತ ಹಾಗೂ ಡೊಂಗರಾ ಮಾತ್ಯಾಕಾ ಪೆಟ್ಲಾ ಉಜೋ ಶ್ರೀ ಎನ್. ಶಿವದಾಸ ಹಾಗೂ ದಿಲೀಪ ಬೊರಕರ ಎರಡು ಜನಸಾಹಿತಿಗಳಲ್ಲಿ ಎನ್. ಶಿವದಾಸರ ಪ್ರಿನ್ಸ್ ನಾಟಕ ಹಾಗೂ 1978ರಲ್ಲಿ ಪಿಸಾಂತ ನಾಟಕ ಪ್ರಸಿದ್ಧವಾದವು. ದಿಲೀಪ ಬೊರ್ಕರರು ಸಾಮಾಜಿಕ ಜೀವನದ ಮೇಲೆ ಬರೆದ ನಾಟಕಗಳಾದ ವರ್ಗಶತ್ರು – ಭಾರತೆಭರ – ಅಂಟಿಲಿಗಾಡಿ – ಆಜ ಆಮಚೆ ರಾಜ ಆಯಲೆ ಮುಂತಾದವು. ಸತ್ಯ ಘಟನಾವಳಿಯಿಂದ ಕೂಡಿವೆ. ಜನಪದದ ಮೇಲೆ 1981ರಲ್ಲಿ ಕಾಣಿ ಕಾಣಿ ಕಾತ್ವಾ ಎಂಬ ವಿನಾಯಕ ಖಾಡೆಕರರವರ ನಾಟಕ ಪ್ರಸಿದ್ಧಿ ಪಡೆಯಿತು. 1983ರಲ್ಲಿ ಗೋವಾದ ಜಾನಪದ ಮರುಕಳಿಸಿದ ನಾಟಕ ಚ್ಯಾಚಿಪಾತಿ ತ್ಯಾಚಿ ನಾತಿ ಹಾಗೂ ಖಾಣಿ (ಗೋವಾ ಜಾಗೋರ ಎಂಬ ಶೈಲಿಯ ಜಾನಪದ ಆಧಾರಿತ) ಇದು ರಾಷ್ಟ್ರೀಯ ನಾಟಕ ದೆಹಲಿ ಉತ್ಸವದಲ್ಲಿ ಜನರನ್ನು ಆಕರ್ಷಿಸಿತು. 1986 ರಲ್ಲಿ ಶ್ರೀ ಉದಯ ಚಯವರ ಕರ್ಣಪರ್ವ ಶ್ರೀಧರ ಕಾಮತ ಬಾಂಬೊಲೆಕರ ನಿರ್ದೇಶನದಲ್ಲಿ ಪೂರ್ಣಾನಂದ ಚಾರಿಯವರ ಸಂಗೀತ ಸಂಯೋಜನೆಯಲ್ಲಿ ಯಶಸ್ವಿ ಪ್ರಯೋಗಗಳಾದವು. ಶ್ರೀ ದೇವದಾಸ ಬಾಬುಯವರು ಆಷಾಢ–78 ಘುಗುಮರಡತಾ ಪೈಸಘರದೇವತಿ ಹಾಗೂ ವಡಲಾಕಲೆ ಸುವತಜಾಯ ರಚನೆ ಮಾಡಿದರು. ಶ್ರೀ ಅವಿನಾಶ ಚಾರಿ ಬರೆದ ನಾಟಕಗಳು ಎಕನವ್ಯಾ ವಿಚಾರಚೆ ಸುರವಾತ 1995 ಆಯತಾರಾ ಹೊಡಿ 1999 ವಾದಚಕ್ರ 1994 ಕಾಣಿ ಎಕ ಕನ್ಯೆಚಿ 2000 ಶ್ರೀ ಪ್ರಕಾಶ ವಾಚ್ರೆಕರ ಬರೆದ ನಾಟಕ ಆನಿ ಎಕ ಬುಟೋ ಘೊಲ್ಲೊ ಘಟನಖಂಚೆ(2001) ಕಾಣಿತಶಿ ಜುನಿಚಪಣ(2002) ಸಾದ ಅಂತರಮಂಚೊ(2002) ಈ ನಾಲ್ಕು ನಾಟಕಗಳು ನಾಟಕ ಸ್ಪರ್ಧೆಯಲ್ಲಿ ಪ್ರಶಸ್ತಿಗಳನ್ನು ಬಾಚಿಕೊಂಡವು. ಶ್ರೀ ದತ್ತಾ ಎಸ್. ನಾಯಕರ ಎಕರೂಕ ಚಾರ ರೂಪಾ ಶ್ರೀ ತೋಮಜಿನ ಕಾರ್ಡೋಜಾರ ಅಪರಾಧಿ ಶ್ರೀ ಅಶೋಕ ರಾಮತಾರ ಬಂದಖಣಿಚಿ ದೇವಳಾ ಜಾಅಮ, ಉಲ್ಲಾಸ ಭುವಾಯಾರ ಹಂಗಾಖೂನಜಾಲಾ, ಶ್ರೀ ಅರುಣ ಹೆಬಳಕರರ ಜಾನಿಮ್ಹಾಜ್ಯಾ ರವೀಂದ್ರ ನಮೂಸಿರವರ ತಾಲ್ಲಕೊಟ ಭರತ ನಾಯ್ಕರ ಯುಗಾಂತ ದಿಲೀಪ ನಾಯ್ಕರ ಜೈತಆತಾ ಪೈಸನಾ

ಂಯೋಶ ನಾಯ್ಕರ ಧರಣಿದೇಗೆರ ಸುಭಾಷ ನಾಯ್ಕರ ಸತ್ಯಮೇವವಿದೆಂತ ಉಲ್ಲಾಸ ನಾಯ್ಕ (ಉಡೇತ) ಶ್ರೀಧರ ಕಾಮತರ ಗಜಾಲಿಜಿನೆಚ್ಯೋ ಮರಣೇಚ್ಯೋ ಕಮಲಾಕರ ಮ್ಹಾಳಸಿಯುವರ ಬಸಂಗೊರಜಾ ಪ್ರಸಾದಲೊಲೆಕರ ಅಂತ್ರಯಮಾ

ರಾಮಕೃಷ್ಣ ಜುವಾರಕರರ ಸರಳಾ ಜಯರಾಮ ಗಾವಂಕರ ರೋವದಿರೊ ರಾಜಯಪವಾರರ ಜಮಲೆರೆಜಮತ ಇತ್ಯಾದಿಗಳು.

**ಕೊಂಕಣಿ ತ್ರಿಯಾತ್ರಾ**

ಗೋವಾದಲ್ಲಿ ತ್ರಿಯಾತ್ರಗೆ ಸುಮಾರು 100 ವರ್ಷದ ಇತಿಹಾಸವಿದೆ ಮುಂಬಯಿಯಲ್ಲಿ ಶ್ರೀ ಲಂಕಾಸಿನ್ಹೊ ರಿಬೇರಿಯಾ ಇಟಲಿಯನ್ ಭುಗೋರ್ ಎಂಬ ಪ್ರಥಮ ಪ್ರಾಯೋಗಿಕ ತ್ರಿಯಾತ್ರಾ ನಾಟಕ ರಚನೆ 7-4-1892ರಲ್ಲಿ ಪ್ರಥಮ ಪ್ರಯೋಗ ಮಾಡಿದರು.

ಇದು ಇಟಲಿಯನ್ ಶೈಲಿಯಲ್ಲಿತ್ತು. ರಿಬೇರಿಯಾ ರಂಗಮಂಚದ ಹಿಂದುಗಡೆ ಉಳಿದ ತ್ರಿಯಾತ್ರಾದ ವ್ಯವಸ್ಥೆ ಮಾಡಿದರು. ಆದ್ದರಿಂದ

ಅವರಿಗೆ ತ್ರಿಯಾತ್ರಾದ ಜನಕರೆಂದು ಕರೆಯುತ್ತಾರೆ.

ಮುಂದೆ ಗೋವಾದ ಪ್ರತಿ ಹಳ್ಳಿಗಳಲ್ಲೂ ತ್ರಿಯಾತ್ರಾಗಳು ಜರುಗ ತೊಡಗಿದವು. ತ್ರಿಯಾತ್ರಾದಲ್ಲಿ ನೃತ್ಯ, ಸಂಗೀತ, ಹಾಸ್ಯ, ನಟನೆ, ಕಥೆ ಎಲ್ಲವೂ ನೋಡಲು ಸಿಗುತ್ತದೆ. ರಾಜಕೀಯ ಸಾಮಜಿಕ, ಧಾರ್ಮಿಕವಾಗಿ ಸಧ್ಯ ನಡೆಯುವ ಚರ್ಚಾ ವಿಷಯಗಳ ಮೇಲೆ ರಚನೆ ಮಾಡಿ ಜನರನ್ನು ರಂಜಿಸುತ್ತಾರೆ. ಜಾಗೃತ ಮಾಡುತ್ತಾರೆ. ಶ್ರೀ ಸಿ. ಆಲ್ವಾರಿಸ್ ಎಂ. ಬಾಯರ್ ಪ್ರೇಮಕುಮಾರ ಇವರೆಲ್ಲಾ ಕಳೆದ 4 ದಶಕಗಳಿಂದ ಅದೇ ವೃತ್ತಿಯಲ್ಲಿದ್ದಾರೆ. ಶ್ರೀ ಸಿ ಆಲ್ವಾರಿಸ್ ಅತಿ ಹೆಚ್ಚು ತ್ರಿಯಾತ್ರಾ ಬರೆದು ಸಾವಿರಾರು ಪ್ರದರ್ಶನ ನೀಡಿದ್ದಾರೆ. ಶ್ರೀ ಎಂ. ಬಾಯರ್ ನಟ ರಚನೆಕಾರ ಸಂಗೀತ ಸಂಯೋಜಕನಾಗಿ ಹಲವಾರು ಪ್ರಯೋಗಗಳನ್ನು ಮಾಡಿದ್ದಾರೆ. ಅದರಲ್ಲಿ ಎಕಚರಸ್ತೊ-ಘೊರದುಃಖ-ಗಾನ್ವಸುಖ-ಭುರಗಿ ಆನಿ ಬಾಂಗರ ಶ್ರೀ ಪ್ರೇಮಕುಮಾರರು ಸುಮಾರು 50 ತ್ರಿಯಾತ್ರಾ ಬರೆದಿದ್ದಾರೆ. ನಿರ್ದೇಶನ ಮಾಡಿದ್ದಾರೆ. ಪ್ರೇಕ್ಷಕರು ತ್ರಿಯಾತ್ರೆಗೆ ಖೆಳ ತ್ರಿಯಾತ್ರಾ ಎಂದರೆ ಕೆಲವರು ನಾನ್ ಸ್ಟಾಪ್ ಡ್ರಾಮಾ ಎಂದು ಕರೆಯುತ್ತಾರೆ. ಗೋವಾ ಕಲಾ ಅಕಾಡೆಮಿ ಕಳೆದ 45 ವರ್ಷದಿಂದ ಸ್ಪರ್ಧೆ ಮಾಡಿಸುತ್ತಾ ಬಂದಿದೆ. ಹೀಗೆ ಗೋವಾದಲ್ಲಿ ಕಂಪನಿ ನಾಟಕ ಜನರ ಬೇಡಿಕೆಯ ಆಕರ್ಷಣೀಯ ಮನರಂಜನಾ ಮಾಧ್ಯಮವಾಗಿ ಉಳಿದಿದೆ.

♦♦♦♦



# 13. ಕರ್ನಾಟಕ ಶಾಲೆಗಳಲ್ಲಿ ಕೊಂಕಣಿ ಶಿಕ್ಷಣ

■ ಡಾ. ವಸಂತ ಬಾಂದೇಕರ-ಕಾರವಾರ

ಕೊಂಕಣಿಗರು ದೇವನಾಗರಿ ಲಿಪಿಯನ್ನೆ ಬಳಸುತ್ತಿದ್ದಾರೆಂದು ಕ್ರಿ.ಶ.ಪೂ 981ರಲ್ಲಿ ಬಾಹುಬಲಿ ಶ್ರವಣ ಬೆಳಗೋಳದ ಗೋಮ್ಮಟೇಶ್ವರ ಮೂರ್ತಿ ಪಾದದಡಿ ಬರೆದ ಕೊಂಕಣಿ ದೇವನಾಗರಿ ಲಿಪಿಯಿಂದ ಕಂಡುಬರುತ್ತದೆ. ಗೋವಾದಲ್ಲಿ ಪೋರ್ತುಗೀಜರ ಮೊದಲು ಕದಂಬ ಮುಂತಾದ ಕನ್ನಡ ರಾಜರು ಆಳುತ್ತಿದ್ದುದ್ದರಿಂದ ಕನ್ನಡ ಲಿಪಿಯನ್ನೆ ಕನ್ನಡಿಗರು ಬಳಸುತ್ತಾ ಬಂದಿದ್ದಾರೆ. ಹೀಗಾಗಿ ಆಗ ಕನ್ನಡ ದೇವನಾಗರಿ ಎರಡು ಲಿಪಿಗಳು ಬಳಕೆಯಲ್ಲಿದ್ದವು. ಪೋರ್ತುಗೀಜರ ಸಮಯದಲ್ಲಿ ಗೋವಾದಲ್ಲಿ ಶಿಕ್ಷಣ ವ್ಯವಸ್ಥೆ ಈ ಕೆಳಗಿನಂತಿತ್ತು. ಗ್ರಾಮಿಣ ಪಾಠಶಾಲೆ(ಪ್ರಾಥಮಿಕ ಶಿಕ್ಷಣ) ಅಗ್ರಹಾರ ಪಾಠಶಾಲೆ(ಮಾಧ್ಯಮಿಕ) ಬ್ರಹ್ಮಾಪುರಿ(ವಿಶ್ವವಿದ್ಯಾಲಯ) ಅದರಲ್ಲಿ ಸಂಸ್ಕೃತಿ-ಮರಾಠಿ-ಕೊಂಕಣಿ ಮೂರು ಲಿಪಿಗಳು ದೇವನಾಗರಿಯಲ್ಲಿ ಇದ್ದವು. ಕಾರಣ ಮೂರು ಜನರಿಗೂ ಕಲಿಯಲು ಸರಳವಾಗುತ್ತಿತ್ತು. ನಂತರ ಮುಸ್ಲಿಂರಾಜರ ಕಾಲದಲ್ಲಿ ಪರ್ಸಿಯನ್ ಹಾಗೂ ಕನ್ನಡ ರಾಜರ ಕಾಲದಲ್ಲಿ ಕನ್ನಡ ಹೀಗೆ ಹಲವಾರು ಲಿಪಿಗಳನ್ನು ಕೊಂಕಣಿಗರು ಬಳಸುತ್ತಿದ್ದ ಉಲ್ಲೇಖವಿದೆ.

*** ಕರ್ನಾಟಕಕ್ಕೆ ಕೊಂಕಣಿಗರು ವಲಸೆ ಬಂದಿದ್ದು -**

ಗೋವಾದಿಂದ ಕರ್ನಾಟಕಕ್ಕೆ ವಿವಿಧ ಕೊಂಕಣಿ ಭಾಷಿಕ ಸಮುದಾಯದವರು 16ನೇ ಶತಮಾನದಲ್ಲಿ ಬಂದರು ಕಾರಣ ಪೋರ್ತುಗೀಜರು ನೀಡುವ ಕ್ರೂರಹಿಂಸೆ ದಬ್ಬಾಳಿಕೆ ಸಹಿಸಲಾರದೆ (ಹಿಂದುಗಳು ಮತಾಂತರ ಸಹಿಸಲಾರದೆ) ಕರ್ನಾಟಕ -ಕೇರಳಾ- ಹಾಗೂ ಮಹಾರಾಷ್ಟ್ರದ ಕೊಂಕಣ ಭಾಗಕ್ಕೆ ವಲಸೆ ಹೋದರು. ಜನಗಣತಿ ಆಧಾರದ ಮೇಲೆ ಭಾರತದಲ್ಲಿ ಕೊಂಕಣಿ ಭಾಷಿಕರು 18 ಲಕ್ಷ ಕರ್ನಾಟಕದಲ್ಲಿ 7ಲಕ್ಷ (1991ರ ಜನಗಣತಿ ಪ್ರಕಾರ) ಈಗ ಅಂದಾಜು 35-40 ಲಕ್ಷ ಕರ್ನಾಟಕದಲ್ಲಿದ್ದಾರೆ.

*** ಕರ್ನಾಟಕದಲ್ಲಿ ಕೊಂಕಣಿಗರು ಅಲ್ಪಸಂಖ್ಯಾತರು -**

ಭಾರತಸರ್ಕಾರವು 1956ರಲ್ಲಿ ಭಾಷಾವಾರು ರಾಜ್ಯಗಳನ್ನು ಮಾಡಿದಾಗ ಒಂದು ರಾಜ್ಯದ ಜನಸಂಖ್ಯೆಯ 50%ಕ್ಕಿಂತ ಹೆಚ್ಚು ಮಾತನಾಡುವ ಮಾತೃಭಾಷೆಯವರಿದ್ದಾರೆ. ಆ ರಾಜ್ಯಕ್ಕೆ ಆ ಭಾಷೆಯು ರಾಜ್ಯಭಾಷೆ ಪರಿಗಣಿಸಲಾಗುವುದು. ಅಕಸ್ಮಾತಗಿ ಆರಾಜ್ಯದ ಭಾಷೆಯು 30%ರಷ್ಟು ಒಂದೇ ಮಾತೃಭಾಷೆಯವರಿದ್ದರೂ ಅದಕ್ಕೂ ಸಹಿತ ರಾಜ್ಯಭಾಷೆಯೆಂದು ಪರಿಗಣಿಸಬಹುದು. ಆದ್ದರಿಂದ ಎಲ್ಲಾ ರಾಜ್ಯದಲ್ಲೂ ಕೊಂಕಣಿ ಭಾಷೆ ಅಲ್ಪಸಂಖ್ಯಾತ ಭಾಷೆಯಾಗಿ ಉಳಿಯಿತು. ಆದರೆ ಗೋವಾ ರಾಜ್ಯ 7-2-1987ರಲ್ಲಿ ಗೋವಾ ರಾಜ್ಯ ಭಾಷೆ ಕೊಂಕಣಿ ಆಯಿತು.

ಮಾತೃಭಾಷೆಯಾಗಿದ್ದರೂ ಬರಹದಲ್ಲಿ ಹೆಚ್ಚಾಗಿ ಬಳಕೆಯಾಗಿರಲಿಲ್ಲಾ. ಅದರಲ್ಲಿ ಹೆಚ್ಚಾಗಿ ರೈತಾಪಿ, ವ್ಯವಸಾಯ ಮಾಡುವವರೇ ಇದ್ದರು. 19ನೇ ಶತಮಾನದಲ್ಲಿ ಕೆಲ ಕ್ರಿಶ್ಚನ್ ಸಮುದಾಯದವರು ಶೈಕ್ಷಣೀಕ ಸಂಸ್ಥೆಗಳನ್ನು ಸ್ಥಾಪಿಸಿ ಲಭ್ಯವಿರುವ ಕನ್ನಡ ಲಿಪಿಯಲ್ಲೇ ಕೊಂಕಣಿ ಪಠ್ಯ ಪುಸ್ತಕ ರಚಿಸಿ ಶಾಲೆಗಳಲ್ಲಿ ಶಿಕ್ಷಣ ನೀಡತೊಡಗಿದರು. ಹಾಗೂ ತಮ್ಮ ಧಾರ್ಮಿಕ ಪುಸ್ತಕ-ಪತ್ರಿಕೆ-ಸಂಚಿಕೆಗಳನ್ನು ಕನ್ನಡ ಲಿಪಿಯಲ್ಲಿ ಕೊಂಕಣಿ ಬಳಸ ತೊಡಗಿದರು.

ಕೇರಳಾ ರಾಜ್ಯದಲ್ಲಿ ಕೊಂಕಣಿಗರ ಪ್ರಯತ್ನದಿಂದ 12-08-1968ರಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ಕೊಂಕಣಿ ವಿಷಯ ಕಲಿಯಲು ಅನುಮತಿ ದೊರೆತು ಕೊಂಕಣಿಗರ ಮಕ್ಕಳು ಕೊಂಕಣಿಯಲ್ಲಿ ಶಿಕ್ಷಣ ಪಡೆಯ ತೊಡಗಿದರು. ಕೊಂಕಣಿ ಗೋವಾದಲ್ಲಿ ರಾಜ್ಯಭಾಷೆಯಾಗಿ ಶಿಕ್ಷಣವನ್ನು ಕೊಂಕಣಿಯಲ್ಲಿ ಪಡೆಯುತ್ತಾ ವಿಶ್ವವಿದ್ಯಾಲಯದವರೆಗೆ ಕೊಂಕಣಿಯಲ್ಲಿ ಎಂ. ಎ. ಮಾಡಲು ಅವಕಾಶಗಳಿದ್ದವು. ಆದರೆ ಕರ್ನಾಟಕದಲ್ಲಿ ಮಾತ್ರ ಇನ್ನು ಅದರ ಬಗ್ಗೆ ಜನ ಜಾಗೃತರಾಗಿರಲಿಲ್ಲಾ. ದಕ್ಷಿಣ ಕನ್ನಡ ಜಿಲ್ಲೆಯ ಕೆಲ ಕೊಂಕಣಿ ಭಾಷಿಕ ಸಂಸ್ಥೆಗಳು ಶಿಕ್ಷಣ ಸಂಸ್ಥೆಗಳು ಸುಮಾರು 18 ಸಂಸ್ಥೆಗಳು ಸುಮಾರು 80 ಶಾಲೆಗಳನ್ನು ನಡೆಸುತ್ತಿದ್ದು ಕರ್ನಾಟಕದಲ್ಲಿ ಶಾಲೆಗಳಲ್ಲಿ ಕೊಂಕಣಿ ಶಿಕ್ಷಣ ತೃತೀಯ ಭಾಷೆಯಾಗಿ ಪಡೆಯಲು ಪ್ರಯತ್ನಿಸಿದವು. ಹಾಗೂ 2007ರಲ್ಲಿ ಕರ್ನಾಟಕ ಸರ್ಕಾರದಿಂದ ಮನ್ನಣೆ ಪಡೆಯಲು

1. ರಾಜ್ಯ ಸರ್ಕಾರ ಹಾಗೂ ನ್ಯಾಯಾಂಗಗಳಿಗೆ ಮೊರೆ ಹೋದರು.
2. ಕೊಂಕಣಿ ಕಲಿಯುವ ಮಕ್ಕಳಿಗೂ ಶಿಕ್ಷಕರಿಗೂ ಕೆಲ ರಿಯಾಯತಿ ಮಾಡಿದರು.
3. ಹಲವಾರು ಪುಸ್ತಕಗಳನ್ನು ಕೊಂಕಣಿ ದೇವನಾಗರಿ ಲಿಪಿಯಲ್ಲಿ ಮುದ್ರಣ ಮಾಡಿ ಪಠ್ಯ ಪುಸ್ತಕ ನೀಡಿದರು.
4. ಗೋವಾ ರಾಜ್ಯ ಸರ್ಕಾರದಿಂದ ಸಹಕಾರದೊಂದಿಗೆ ದೇವನಾಗರಿ ಲಿಪಿಯಲ್ಲಿ ಮುದ್ರಣ ಮಾಡಿ 2500 ಕೊಂಕಣಿ ಕಲಿಯುವ ವಿದ್ಯಾರ್ಥಿಗಳಿಗೆ ಹಂಚಿದರು.
5. 1990ರ ಹಳೆ ಶಾಲೆಗಳಾದ ಕ್ಯಾನರಾ ಹೈಸ್ಕೂಲ್

ಶ್ರೀನಿವಾಸ ಪಾಠಶಾಲಾ, ನಾಲಂದ ಶಾಲೆಯವರು ಪುಸ್ತಕಗಳನ್ನು ದೇವನಾಗರಿ-ಕನ್ನಡ ಲಿಪಿಯಲ್ಲಿ ಮುದ್ರಣ ಮಾಡಿ ಅವರಿಗೆ ವಿಧ್ಯಾಭ್ಯಾಸ ನೀಡಿ ಪರೀಕ್ಷೆ ಏರ್ಪಡಿಸಿ ಪ್ರಮಾಣ ಪತ್ರಗಳನ್ನು ನೀಡಿದ್ದರು.

6. 20-8-1992ರಲ್ಲಿ ಭಾರತ ಸಂವಿಧಾನದ 8ನೇ ಪರಿಶ್ಚೇಧದಲ್ಲಿ ಕೊಂಕಣಿ ಭಾಷೆಗೆ ರಾಷ್ಟ್ರೀಯ ಮನ್ನಣೆ ದೊರಕಿದ್ದರಿಂದ ಪ್ರತಿವರ್ಷ ಆ ದಿನ ಕೊಂಕಣಿ ಮಾನ್ಯತಾ ದಿನಾಚರಣೆ ಅಂಗವಾಗಿ ಕೊಂಕಣಿ ಪ್ರತಿಭಾ ಸ್ಪರ್ಧೆ ಏರ್ಪಡಿಸಿ ಪಾರಿತೋಷಕ ನೀಡುವ ವ್ಯವಸ್ಥೆ ಮಾಡಿದರು.

16ನೇ ಶತಮಾನದಿಂದಲೇ ಕೊಂಕಣಿಗರು ಕರ್ನಾಟಕದಲ್ಲಿ ನೆಲೆಸಿದ್ದರು. ಕೊಂಕಣಿ ಮಾಧ್ಯಮದ ಶಿಕ್ಷಣವಾಗಲು ಜನರು ಜಾಗೃತರಾಗಲು 12ನೇ ತಲೆಮಾರುಗಳು ಕಾಯುಬೇಕಾಯಿತು. ಅಂದರೆ 19ನೇ ಶತಮಾನದವರೆಗೂ ಕೊಂಕಣಿಯು ಎಲ್ಲರ 7. ನಿರಂತರವಾಗಿ ಕೊಂಕಣಿ ಕಲಿಯುವ ಶಿಕ್ಷಕರಿಗೆ ಕಾರ್ಯಗಾರದ ಮುಖಾಂತರ ತರಭೇತಿ ನೀಡಿ ಶಿಕ್ಷಣ ನೀಡಲು ಸಿದ್ಧ ಮಾಡಿದರು. 8. ಪ್ರತಿವರ್ಷ ಕೊಂಕಣಿ ಶಿಕ್ಷಣ ನೀಡುವ ಶಾಲೆಗಳಿಗೆ ಹಾಗೂ ಶಿಕ್ಷಕರಿಗೆ ಸನ್ಮಾನಿಸುವ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು.

ಶಾಲೆಗಳಲ್ಲಿ ಕೊಂಕಣಿ ಕಲಿಯಲು ಅವಕಾಶವಿದ್ದರೂ ಎದುರಿಸಿದ ಸಮಾನ ವಿವಿಧ ಕೊಂಕಣಿ ಸಂಘಟನೆಗಳ ಹಾಗೂ ಕರ್ನಾಟಕ ಕೊಂಕಣಿ ಸಂಘಟನೆಗಳ ಹಾಗೂ ಕೊಂಕಣಿ ಸಾಹಿತ್ಯ ಅಕಾಡೆಮಿ ಪ್ರಯತ್ನದಿಂದ ಶಾಲೆಗಳಲ್ಲಿ ಕೊಂಕಣಿ ತೃತೀಯ ಭಾಷೆಯಾಗಿ 6ನೇ ವರ್ಗದಿಂದ ಕಲಿಯಲು 2006ರಲ್ಲಿ ಕರ್ನಾಟಕ ಸರ್ಕಾರ ಅನುಮತಿ ನೀಡಿತು. (ಮೊದಲು ನೀಡಿದು ದೇವನಾಗರಿ ಲಿಪಿಗೆ ಮಾತ್ರ) ಆದರೆ ಕೊಂಕಣಿ ಅಕಾಡೆಮಿ ಕರ್ನಾಟಕದಲ್ಲಿ ಹೆಚ್ಚಾಗಿ ಕೊಂಕಣಿಗರು ಕನ್ನಡ ಲಿಪಿಯನ್ನು ಬಳಸುತ್ತಿರುವುದರಿಂದ ಕನ್ನಡ ಲಿಪಿಯೇ ಬೇಕೆಂದು ವಾದ ಮಾಡಿದರು. ನಂತರ ಎಲ್ಲಾ ಸಂಘಟನೆಗಳು ವಿಚಾರ ವಿನಿಮಯ ಮಾಡಿ ಒಂದು ನಿರ್ಧಾರಕ್ಕೆ ಬಂದರು ಏನೆಂದರೆ ದೇವನಾಗರಿ ಕನ್ನಡ ಎರಡೂ ಲಿಪಿಯಲ್ಲಿ ಶಿಕ್ಷಣ ಪಡೆಯುವುದು. ಆಸಕ್ತಿವುಳ್ಳ ವಿದ್ಯಾರ್ಥಿಗಳು ಪಾಲಕರು ಯಾವುದೇ ಒಂದು ಲಿಪಿಯನ್ನು ಆಯ್ಕೆ ಮಾಡಿ ಕೊಳ್ಳಬಹುದು. ಅದಕ್ಕೆ ಕರ್ನಾಟಕ ಸರ್ಕಾರ ಸಮ್ಮತಿ ನೀಡಿ 23-2-2007ರಂದು ಆದೇಶ ನೀಡಿತು.

2007 ರಿಂದ ಇಂದಿನವರೆಗೆ ಕೊಂಕಣಿ ಶಿಕ್ಷಣ ಪಡೆದು ವಿದ್ಯಾರ್ಥಿಗಳು ಮುಂದೆ ಸಾಗಿದ್ದಾರೆ. ಕರ್ನಾಟಕ ಸರ್ಕಾರ ಮಂಗಳೂರು ವಿಶ್ವವಿದ್ಯಾಲಯಕ್ಕೆ ಕೊಂಕಣಿ ಪೀಠ ನೀಡಿದ್ದರಿಂದ 2018ರಲ್ಲಿ ಕೊಂಕಣಿಯಲ್ಲಿ ಎಂ. ಎ. ಮಾಡಿದ ಪ್ರಥಮ ತಂಡ ಹೊರ ಬಿದ್ದಿದೆ. 2018ರಲ್ಲಿ ಕರ್ನಾಟಕ ಸರ್ಕಾರ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಕೊಂಕಣಿ ವಿದ್ಯಾಪೀಠ ನೀಡಿದ್ದು ಉತ್ತರ ಕರ್ನಾಟಕದ ಕೊಂಕಣಿ ವಿದ್ಯಾರ್ಥಿಗಳಿಗೂ ಅನುಕೂಲವಾಗಲಿದೆ.

♦♦♦♦

# 14. ಕೊಂಕಣಿ ಚಲನಚಿತ್ರ (ಸಿನೇಮಾ)

■ ಶ್ರೀ ವಾಸುದೇವ ಶಾನಭಾಗ-ಶಿರಸಿ



ಭಾತರದಲ್ಲಿ ಪ್ರಥಮ ಮೂಕಚಿತ್ರ ತಯಾರಾದದ್ದು ರಾಜಾ ಹರಿಶ್ಚಂದ್ರ 1931ರಲ್ಲಿ ಇದನ್ನು ನಿರ್ಮಾಣ ಮಾಡಿದವರು ದುಂಡಿರಾಜ ಗೋವಿಂದ ಫಾಲ್ಕೆ ಆದ್ದರಿಂದ ಫಾಲ್ಕೆಯವರಿಗೆ ಭಾರತೀಯ ಚಿತ್ರರಂಗದ ಪಿತಾಮಹ ಎಂದು ಕರೆಯುತ್ತಾರೆ.

14-3-1931ರಲ್ಲಿ ಮಾತನಾಡುವ ಚಿತ್ರ "ಆಲಂಆರಾ" ಬಿಡುಗಡೆಗೊಂಡಿತು. 1932ರಲ್ಲಿ ವ್ಹಿ ಶಾಂತರಾಮರ ಮುರಾರಿ ಅಯೋಧ್ಯೆ ಚಾನಿ ರಾಜಾ ಪ್ರಥಮ ಚಿತ್ರವಾದರೆ ಪ್ರಥಮ ಕನ್ನಡ ಚಲನಚಿತ್ರ ಧ್ರುವಕುಮಾರವಾಗಿದೆ. ಹಾಗೂ ಸತಿಸುಲೋಚನಾ ಕೊಂಕಣಿ ಪ್ರಥಮ ಚಲನಚಿತ್ರ 1950ರಲ್ಲಿ ಮೊಗಾಚೋಆವಂಡೋ ಬಿಡುಗಡೆಯಾಗಿದೆ. 1950 ರಿಂದ 2018 ರವರೆಗೆ ಸುಮಾರು 45-50 ಕೊಂಕಣಿ ಚಲನ ಚಿತ್ರಗಳು ತೆರೆಕಂಡಿವೆ. ಹಲವಾರು ಅರ್ಧ-ಮರ್ಧ ವಾಗಿ ವಿವಿಧ ಕಾರಣಗಳಿಂದ ಬಿಡುಗಡೆಯಾಗದೇ ಉಳಿದಿವೆ. ಮೂಕಿಯಿಂದ ಪ್ರಾರಂಭವಾಗಿ ಮಾತನಾಡುವ ಕಪ್ಪು ಬಿಳುಪು ಓರೋ ಇಷ್ಟಮಾನ್ ಕಲರ್ ಟೆಕ್ನಿಕಲರ್‌ಗೆ ಸುಧಾರಣೆಯಾಗುತ್ತಾ 16 ಎಂ.ಎಂ. 35 ಎಂ.ಎಂ. ನಂತರ 70 ಎಂ.ಎಂ. ಪರದೆಗಳಲ್ಲಿ ತೋರಿಸಹತ್ತಿದ್ದರು ಅದರಲ್ಲೂ ಸೀನೆಮಾಸ್ಕೋಪ್ ಥ್ರಿಡೈಮಾನ್‌ಶನ್ ಈಗ ಡಿಜಿಟಲ್ ಚಿತ್ರಗಳು ಬರತೊಡಗಿವೆ. ಹಿಂದಿ ಚಿತ್ರಗಳು ಪ್ರೇಕ್ಷರನ್ನು ಆಕರ್ಷಿಸಿದ ನಂತರ ಆಗ ವಿವಿಧ ಭಾಷಿಕ ಜನರು ತಮ್ಮ ತಮ್ಮ ಭಾಷೆಯಲ್ಲಿ ಚಿತ್ರ ನಿರ್ಮಾಣದ ಬಗ್ಗೆ ವಿಚಾರ ಮಾಡತೋಡಗಿದರು ಅದರಂತೆ ಹಲವಾರು ಕೊಂಕಣಿಗರು ಕೊಂಕಣಿ ಚಲನಚಿತ್ರ ಮಾಡಲು ಪ್ರಯತ್ನಿಸಿದರೂ ವಿವಿಧ ಕಾರಣಗಳಿಂದ ಸಾಧ್ಯವಾಗಲಿಲ್ಲಾ. ಒಂದು ಸಿನೇಮಾ ಮಾಡಲು ಹಲವಾರು ಸಮಸ್ಯೆಗಳಿವೆ. ಪ್ರಮುಖವಾಗಿ ಹಣಕಾಸಿನ, ಕಥಾರಚನೆ, ಕಲಾಕಾರರ ಆಯ್ಕೆ ಸಂಗೀತ ಸಂಯೋಜನೆ ಇತ್ಯಾದಿ ಹಾಗೂ ಪ್ರಾದೇಶಿಕ ಭಾಷೆಯಲ್ಲಿ ಚಲನಚಿತ್ರ ಮಾಡುವುದಾದರೆ ಹಣಗಳಿಕೆಯ ಅಪೇಕ್ಷೆ ಮರೆತೆ ಉಚಿತ ಪ್ರದರ್ಶನ ನೀಡುವ ಹುಚ್ಚು ಸಾಹಸ ಮಾಡಬೇಕಾಗಿತ್ತು. ಅಂಥದರಲ್ಲಿಯೂ ಈ 68 ವರ್ಷಗಳಲ್ಲಿ ಸುಮಾರು 50 ಸಿನೆಮಾಗಳು ಹೊರಬಂದು ಪ್ರದರ್ಶಿತಗೊಂಡಿವೆ ಎಂದರೆ ಕೊಂಕಣಿಗರಭಾಷಾಭಿಮಾನ ಮೆಚ್ಚಲೇಬೇಕು ಹಾಗಾದರೆ ಪ್ರಥಮ ಕೊಂಕಣಿ ಚಲನಚಿತ್ರ ನಿರ್ಮಾಣದ ಸಾಹಸ-ಸಾಧನೆ ಅನುಭವಿಸಿದ ಹಲವು ಸಮಸ್ಯೆ ಮುಂತಾದವುಗಳ ಮೇಲೆ ಒಂದು ಅವಲೋಕನ ಮಾಡಬಹುದಾಗಿದೆ.

**ಕೊಂಕಣಿ ಭಾಷೆಯ ಪ್ರಥಮ ಚಿತ್ರ**
**ಮೊಗಾಚೋ ಆಫಂಡೋ (ಪ್ರೀತಿಚಿ ಇಚ್ಛಾ)**

ಆಲ್ ಜೆರ್ರಿಬಾಬ್ ಬ್ರಗಾಂರ್ಝಾ ಇವರು ಮೋಗಾ ಚೋ ಆಂವ್ ಡೋ ಈ ಕೊಂಕಣಿ ಚಲನಚಿತ್ರವನ್ನು ದಿನಾಂಕ 24-04-1950 ರಂದು ಸ್ಕ್ರೀನ್ ಮೇಲೆ ತೋರಿಸಿದರು ಆದ್ದರಿಂದ ಅವರಿಗೆ ಕೊಂಕಣಿ ಚಲನಚಿತ್ರದ ಪಿತಾಮಹ ಎಂದು ಕರೆಯುತ್ತಾರೆ. ಹಾಗೂ ಆ ದಿನ ಕೊಂಕಣಿ ಚಲನಚಿತ್ರ ದಿನವೆಂದು ಆಚರಿಸುತ್ತಾರೆ. ಗೋವಾ ಮಾಪ್ಸಾ ಮೂಲದ ಅವರ ಹೆಸರು ಅಂತೊನಿಯೋ ಲಾರೆನ್ಸ್ ಜೆರ್ರಿ ಬ್ರಿಗೆಂರ್ಝಾ ಎಂದಿದೆ. ಆಲ್ ಜೆರ್ರಿ ಬ್ರಿಗೆಂರ್ಝಾ ಹಿಂದಿ ಚಲನಚಿತ್ರ ರಂಗದಲ್ಲಿ ಅಪಾರ ಅನುಭವ ಪಡೆದಿದ್ದರು. ಗೀತಾ ಪಿಕ್ಚರ್, ವಿಶ್ವಶಾಂತಿ ಫಿಲ್ಮ, ನವಕಲಾ ಫಿಲ್ಮ, ಕಂಪನಿಯಲ್ಲಿ ಸಹಾಯಕ ನಿರ್ದೇಶಕ ಹಾಗೂ ಕಾರ್ಯಕಾರಿ ನಿರ್ಮಾಪಕ ಎಂದು ಕೆಲಸ ಮಾಡಿದ್ದರು ಈ ಎಲ್ಲಾ ಅನಿಭವದೊಂದಿಗೆ ET-ICA Company ಎಂದರೆ Exchange Talkies of India China & Africa ಇದರಲ್ಲಿ ಹೆಚ್ಚಾಗಿ ಮುಸ್ಲಿಂರು ಪಾಲುದಾರರಿದ್ದರು. ಹಾಗೂ ಈ ಕಂಪನಿ ಮುಂಬೈದ ಜೋಗೇಶ್ವರಿಯಲ್ಲಿದ್ದಿತ್ತು ಈ ಕಂಪನಿ ನೇರವಿನಿಂದ ಕೊಂಕಣಿ ಪ್ರಥಮ ಚಿತ್ರ ಮೊಗಾಚೋ ಆಂವಡೊ ಜನ್ಮ ತಾಳಿತು.

ಇದರ ಪ್ರಮುಖ ಕಲಾಕಾರ ಆಲ್ ಜೆರ್ರಿ ಬ್ರಿಗೆಂಜಾ ಹಾಗೂ ಲೀನಾ ಫರ್ನಾಂಡಿಸ್ (ಈಗ ಲೀನಾ ಡಾಯಸ್ ಆಗಿದ್ದರು) ಆಲ್ ಜೆರ್ರಿ ಬ್ರಿಗೆಂಜಾ ಸುಂದರ ರೂಪ ಅತ್ಯುತ್ತಮ ಗಾಯನ ಕಂಠ ಹೊಂದಿದ್ದರು. ಅತ್ಯುತ್ತಮ ನಟನಾ ಕಲೆ ಕರಗತವಾಗಿತ್ತು. ಆದ್ದರಿಂದ ಅವರು ಪ್ರಮುಖ ಪಾತ್ರ ವಹಿಸಿದ್ದರು. ಇವರ ಕಲಾಕಾರರೆಂದರೆ ಮೇಡಂ ಲೇವಿಸ್ ರಾತುಸು ಐರಿನ್ ಅಮರಾಲ್, ಜಾಕೋಬಾ ಫರ್ನಾಂಡಿಸ್ ಎಲಿಝಾಬೆತ್ ಡಿ ಆಬ್ರಿಯೋ ಮೇರಿ ಡಿಸೋಜಾ, ಜೊಯ್ಯ ಫರ್ನಾಂಡಿಸ್ ರೋಮಿಯೋ ಪಾವ್ಲ ಹೀಗೆ ಹಲವು ಕಲಾಕಾರರಿದ್ದರು ಅಲ್‌ಫ್ರೆಡ್ ಅಲ್ಮೇಡಾ ಅವರು ಸಂಗೀತ ಸಂಯೋಜನೆ ಮಾಡಿದ್ದರು.

ಹೆಸರಾಂತ ಗಾಯಕ ಹಾಗೂ ಲೇಖಕ ಡೂಯಾಗ್ವಿನೋ ಬಾಬ್ ಡಿ.ಮೆಲ್ಲೋ ಇವರ "ಮೊಗಾಚೆ ಹೋಡ ನವಾಲ್" ಈ ಕಥೆ ಆಧಾರಿತ ಈ ಚಿತ್ರ ನಿರ್ಮಾಣವಾಗಿತ್ತು ಈ ಚಿತ್ರವು ಒಬ್ಬ ಶ್ರೀಮಂತ ಯುವಕ ಅಬೇಲಾ ಹಾಗೂ ಬಡ ಯುವತಿ ಮರಿಯಾ ಇವರ ಪ್ರೇಮದ ಮೇಲೆ ಆಧಾರಿತವಾಗಿದೆ ಈ ಚಿತ್ರದ ಪದ್ಯಗಳನ್ನು ಜೆರ್ರಿ ಬ್ರಿಗೆಂರ್ಝಾ ಹಾಗೂ ಜೆಮ್ಸ್ ಬ್ರಿಗೆಂರ್ಝಾರವರು ಹಾಡಿದ್ದಾರೆ. ಲೀನಾ ಫರ್ನಾಂಡಿಸ್‌ರು ಒಂದು ಗೀತೆಯನ್ನು ಹಾಡಿದ್ದಾರೆ. ಈ ಎಲ್ಲಾ ಗೀತೆಗಳು ಯಂಗ್ ಇಂಡಿಯಾ ಕಂಪನಿಯ ಗ್ರಾಮಫೋನ್

ರಿಕಾರ್ಡಿಂಗ್‌ದ ಮೇಲೆ ಮುದ್ರಿತ ಆಗಿವೆ.

ಈ ಚಿತ್ರದಲ್ಲಿ ವಿಶೇಷತೆ ಎಂದರೆ ಕಥೆಯಲ್ಲಿ ಹಿರೋ ಶ್ರೀಮಂತನಾಗಿದ್ದರಿಂದ ತಮ್ಮ ಪ್ರಯತ್ನಕ್ಕೆ ಇಡಿ ಗೋವಾ ದರ್ಶನ ಮಾಡಿಸುವುದಾಗಿ ಮಾಗ್ವಾನ ಮಾಡಿರುತ್ತಾನೆ. ಆ ಕಾರಣ ಈ ಚಿತ್ರದಲ್ಲಿ ಪ್ರೇಕ್ಷಕರಿಗೆಇಡೀ ಗೋವಾದ ಸುಂದರ ದೃಶ್ಯವಾದ ಗೋವಾದ ಚರ್ಚಗಳು-ವಿವಿಧ ಬೀಚ್‌ಗಳು ಮಾಂಡವಿ ನದಿ ಪುರಾತನ ಕೋಟೆಗಳು ನೋಡಲು ಸಿಕ್ಕವು 24 ಏಪ್ರಿಲ್ 1950 ರಂದು ಗೋವಾ-ಮಾಪ್ಸಾದ ದಶರಥ ಚಿತ್ರ ಮಂದಿರದಲ್ಲಿ ಹಾಗೂ ಮುಂಬೈದ ಮಾ ಟುಂಗಾದ ರಿವೋ ಹಾಗೂ ಮಂಡಗಾಂವದ ಸ್ಟಾರ್ ಥಿಯೇಟರ್‌ಗಳಲ್ಲಿ ಒಂದೇ ಕಾಲಕ್ಕೆ ಬಿಡುಗಡೆಯಾದವು.

ಧೊಬಿತಲಾವದಲ್ಲಿ ಹೆಚ್ಚಾಗಿ ಗೋವಾ ಜನರು ವಾಸಿಸುತ್ತಿದ್ದರು. ಆ ಕಾರಣ ಅಲ್ಲಿ ಸಮೀಪದಲ್ಲಿದ್ದ ಲಿಬರ್ಟ Libarty ಥಿಯೇಟರ್‌ದಲ್ಲಿ ಬೆಳಗಿನ ಆಟದ ಪ್ರದರ್ಶನ ಏರ್ಪಡಿಸಿದರೆ ಜನರು ಪ್ರತಿದಿನ ಕಿಕ್ಕಿರಿದು ತುಂಬತೊಡಗಿದರು. ಕೆಲವರು 4-5 ಸಲ ಆ ಚಿತ್ರವನ್ನು ವಿಕ್ಷಿಸಿದರು. ಈ ಚಿತ್ರ ಮುಂಬೈದಲ್ಲಿ ಬಿಡುಗಡೆಯಾದಾಗ ಗೋವಾದಲ್ಲಿ ಅಲ್ಲಿಯ ಅಂದಿನ ಕೊಂಕಣಿ ಸಾಮೂಹಿಕ ಪತ್ರಿಕೆಗಳಾದ ಸತ್ ಎಲ್ಲೈ, ದಿ ಗೋವಾ ಟೈಮ್ಸ ಇದರಲ್ಲಿ ಆ ಚಿತ್ರದ ಜಾಹಿರಾತು ಬರುತ್ತಿದ್ದು. ಅದರಂತೆ ಮುಂಬೈದ ಮರೀನ ಲೈನ್ ರೈಲ್ವೆ ಸ್ಟೇಷನದಲ್ಲಿ ಈ ಚಿತ್ರದ ಪ್ರಮುಖ ನಟಿ. ಲೀನಾ ಫರ್ನಾಂಡಿಸರು ಬಾವಿಯಿಂದ ನೀರು ಸೇದುವ ಪೋಸ್ಟರ್‌ಗಳನ್ನು ಲಗತ್ತಿಸಿರುವುದನ್ನು ಕಂಡು ಜನರು ಉತ್ಸುಕರಾಗಿ ಚಿತ್ರ ವಿಕ್ಷಿಸಲು ಬಂದರು.

ಈ ಚಿತ್ರವು ಚೆಂಬೂರ ವಿಭಾಗದ ಒಂದು ಸ್ಟುಡಿಯೋದಲ್ಲಿ ಚಿತ್ರಿಕರಣವಗಿತ್ತು ಈ ಚಿತ್ರ ಪೂರ್ಣವಾಗಿ ನಿರ್ಮಾಣಗೊಳ್ಳಲು 8 ತಿಂಗಳು ಗತಿಸಿವೆ. ಚಿತ್ರದಲ್ಲಿ ಭಾಗವಹಿಸಿದ ಕಲಾವಿದರಿಗೆ ಇಷ್ಟೇ ಸಂಭಾವನೆ ನೀಡಲಾಗಿದೆ. ನಾಯಕಿ ಲೀನಾ ಫರ್ನಾಂಡಿಸ್‌ಗೆ ತಿಂಗಳಿಗೆ ರೂ. 500/- ನೀಡಲಾಗಿದೆ. ಎಲ್ಲಾ ನಟ ನಟಿಯರಿಗೆ ದುಡ್ಡಿಗಾಗಿ ದುಡಿಯುವಾಸೆ ಸೇವಾಭಾವನೆಯಿಂದ ಸಹಕಾರ ನೀಡಿದ್ದರಿಂದಲೇ ಈ ಚಿತ್ರ ಬೆಳಕಿಗೆ ಬಂದಿತು. ಈ ಚಿತ್ರದ ಎಲ್ಲಾ ಹಾಡುಗಳನ್ನು ಸ್ವತಃ ಕಲಾಕಾರರೇ ಹಾಡಿದ್ದಾರೆ ಇದರ ಸಂಗೀತ ಸಂಯೋಜನೆ ರಿಕಾರ್ಡಿಂಗ್ ಮಾಡುವಾಗ ಖ್ಯಾತ ಸಂಗೀತಕಾರ ಜೋಯ ಪೆರ್ರಿ ಹಾಗೂ ಪೀಟರ್ ಡೆಮೆಲ್ಲೋ ರವರ ಸಂಗಡ 27 ಸಂಗೀತ ಕಲಾವಿದರು ಭಾಗವಹಿಸಿದ್ದರು. ಕಲಾಕಾರರ ಆಯ್ಕೆ ಪ್ರಕ್ರೀಯೆ ನಡೆದಾಗ ನಾಯಕಿ ಪಾತ್ರದ ಲೀನಾ ಫರ್ನಾಂಡಿಸ್ ಇವಳು 'ಯುನೈಟೆಡ್ ಆರ್ಟಿಸ್ಟ್ ಆಗಿ ಅಮೇರಿಕನ ಕಂಪನಿಯಲ್ಲಿ ಹಾಗೂ ಟೆಲಿಫೋನ್ ಆಪರೇಟರಾಗಿ ಕಾರ್ಯ್ ನಿರ್ವಹಿಸುತ್ತಿದ್ದಾಗ ಅಲ್ಲಿ ಜೆರಿ ಬ್ರಿಗೆಂಝಾ ಸಂಬಂಧಿಯು ಕಾರ್ಯ ಮಡುತ್ತಿದ್ದರು. ಆಗ ಲೀನಾಳಿಗೆ ಕೊಂಕಣಿ ಮಾತನಾಡಲು ಹಾಡಲು ಬರುವದಾಗಿ ತಿಳಿದು ಅವಳನ್ನು ಆಯ್ಕೆ ಮಾಡಲಾಯಿತು. ಪ್ರಥಮ ಕೊಂಕಣಿ ಚಿತ್ರದ ನಾಯಕಿ ಎಂದು ಸನ್ಮಾನ ದೊರೆಯಿತು. ಮುಂಬೈನ ಗೋವಾ ಮೂಲದ ಕೊಂಕಣಿಗರು ಈ ಚಿತ್ರಕ್ಕೆ ಬಹಳ ಪ್ರೋತ್ಸಾಹ ನೀಡಿದ್ದರು. ಆದರೆ ದುರ್ಧೈವದ ಸಂಗತಿ ಎಂದರೆ ಆ ಚಿತ್ರದ ಸ್ವಾದ ಅನುಭವಿಸಲು ಅದರ ಒಂದು ಪ್ರತಿಯೂ (ಪ್ರಿಂಟ್) ಲಭ್ಯವಿಲ್ಲ. ಆದರೆ ನೆನಪು ಮಾತ್ರ ಉಳಿದಿದೆ. ಕೊಂಕಣಿ ಚಲನಚಿತ್ರ ಇತಿಹಾಸದ ಒಂದು ಮೈಲಿಗಲ್ಲುವಾಗಿ ಉಳಿದಿದೆ. ಆದ್ದರಿಂದ ಅಲ್ ಬೆರ್ರಿ ಬ್ರಿಗೆಂರವಾಗ ನಮ್ಮೆಲ್ಲ ಕೊಂಕಣಿಗರ ಸಲ್ಯೂಟ ಹಾಗೂ ನಮನ.

**ಅದ ನಂತರ ಈ ಕೆಳಗಿನಂತೆ ಕೊಂಕಣಿ ಚಿತ್ರಗಳು ತೆರೆ ಕಂಡವು.**

1. 1963 – ಆಮಜೇ ನಶೀಬ (ಫ್ರಾಂಕ್ ಫಿಲ್ಮ ಗೋವಾ)
2. 1965 – ನಿರ್ಮಾಣ (ಪ್ರಾರಬ್ಧ) ನಿರ್ಮಾಪಕ ಫ್ರಾಂಕ್ ಫರ್ನಾಂಡ್ (ಇದೇ ಚಿತ್ರಮುಂದೆ ಹಿಂದಿಯಲ್ಲಿ ತಕಧೀರ ಹೆಸರಿನಲ್ಲಿ ಬಂದಿತು.)
3. 1966 – ಸುಖಚೆ ಸಪೂನ್ – ಜೇರಿ ಬಾಬ ಬ್ರಾಗೇಟರಫಾ ರವರು ನಿರ್ಮಿಸಿದರು.
4. 1969 – ಮೋಜಿ ಘರಕಾನ್ನ – ವಸಲಾಲ ನಿರ್ದೇಶನ ಮಾಡಿದರು.
5. 1970 – ಕುರ್ತಾರಮಾಚೊ ಸಂಸಾರ – ಮೂವಿಗಿಲ್ಡ ಬ್ಯಾನ್‌ರನಡಿ
6. 1972 – ಜೀವಿತ್ ಆವಮಚೆ ಫಿಲ್ಮ್ ಬ್ಯಾನರ್ ನಡಿ ಅಶೆಂ– ಅಂಬಿಕಾ ಫಿಲಂ 2 ಚಿತ್ರ
7. 1973 – ತಿಸ್ರಿ ಚಿಟ್ – ಮಂಗಳೂರು ಪ್ರಥಮ ಚಿತ್ರ
8. 1977 – ಬೊಗ್ಲಾಂಟ್ (ಆರೋಪ) ಅಂಬಿಕಾ ಫಿಲ್ಮಂ 2ಚಿತ್ರ
9. 1977 – ಮೊಗಾ ಆನಿ ಮಾಯ ಪಾಸ (ಮಂಗಳೂರಿನ ಯುನೈಟೆಡ್, ಯಂಗಸ್ಟಾರ್)
10. 1978 – ಭೂಯಾರಾಂತ್ಲೋ ಮನಿಸ ಗೋವಾ – ಫ್ರಿಸಪರಿ ಯಂಗಸ್ಟರ್ ಹಾಗೂ ಟೊನಿಕುಟನು
11. 1980 – ತಪಸ್ಟನಿ ( ಮಂಗಳೂರಿನ ಹನುಮಾನ್ ಪಿಚ್ಚರ್ಸ್)
12. 1980 – ಜನ-ಮನ – ಬೆಂಗಳೂರಿನ ಡಾ. ಕೆ. ರಮೇಶ ಕಾಮತ
13. 1983 – ಗಿರೆಸ್ತಕಾಯ (ಹೋಡಪಣ) ಅಂಬಿಕಾ ಫಿಲ್ಮ 3ನೇ ಚಿತ್ರ
14. 1995 – ಭಿೂಗ್ಸಾಣ್ (ಕ್ಷಮಾ) ಮಂಗಳೂರಿನ ರಿಚಾರ್ಡ ಕಾಸ್ಟಲಿನೋ (ರಾಜಲಕ್ಷ್ಮೀ ಫಿಲ್ಮ)
15. 1979 – ಜೇಸಸ್ – ಬೆಂಗಳೂರಿನ ವಿಯೋಗ ಎಸ್ಟಿನಸ್ಸ
16 1998 – ಡಾನ್‌ಬಾಸ್ಕೊ – ಗೋವಾದ ಡಾನ್‌ಬಾಸ್ಕೋ ಸಂಸ್ಥೆಯಿಂದ
17. 2000 – ಜೀವ ನಾಜೋ ಖೇಳ ಬೆಂಗಳೂರ

ಎ. ಎಸ್. ಮಹಾದೇವ ರಾಜ

18. 1997 - ಓ ಬಾಂಯ್ - ಔರಾಕ್ಯ ಪ್ರೋಡೆಕ್ಸನ್ ಪೋರ್ತುಗಲ್‌ದಲ್ಲಿ ಪ್ರದರ್ಶನಗೊಂಡ ಪ್ರಥಮ ಕೊಂಕಣಿ ಚಿತ್ರ

19. 2005 - ಸೂಡ್ - (ಪ್ರತಿಕಾರ) ಗೋವಾದ ಸಂಜೀವ ಪ್ರಭು

20. 2004 - ಅಲೀಶಾ - ಗೋವಾ ರಾಜೇಂದ್ರ ತಾಲಾಕ ದೇಸಾಯಿ ಕ್ರಿಯೇಸನ್ಸ್ ಹೀಗೆ ಸುಮಾರು ಈ ವರೆಗೆ 50 ಚಿತ್ರಗಳು ತೆರೆಕಂಡಿವೆ.

ಕೊಂಕಣಿ ಚಲನಚಿತ್ರ ನಿರ್ಮಾಣದ ಕೆಲ ಮೈಲಿಗಲ್ಲುಗಳು :

* ಮೊಗಾಚೊ ಆಂವಡೋ 1950ರಲ್ಲಿ ನಿರ್ಮಿತ ಪ್ರಥಮ ಕೊಂಕಣಿ ಚಿತ್ರ

* ಆಮಚೇ ನಶೀಬ ಈ ಚಿತ್ರ ಸುಮಧುರ ಸಂಗೀತ ಹಾಗೂ ಹಾಸ್ಯವಾಗಿ ಪ್ರಸಿದ್ಧಿಯಾಯಿತು.

* ನಿರ್ಮೋಣ ಚಿತ್ರಕ್ಕೆ ಕೇಂದ್ರ ಸರಕಾರದ ಪ್ರಶಸ್ತಿ ದೊರಕಿದೆ. ಹಾಗೂ ಸಿ ಆಲ್ವಾನಿಸರಿಗೆ ಬೆಸ್ಟ್ ಆಕ್ಟರ್ ಪ್ರಶಸ್ತಿ ದೊರಕಿದೆ. ಈ ಚಿತ್ರ ಇತರೆ 7 ಭಾರತಿಯ ಭಾಷೆಯಲ್ಲಿ ಡಬ್ ಆಗಿದೆ. "ತಕಧೀರ" ಎಂಬ ಹೆಸರಿನಿಂದ ಹಿಂದಿ ಫಿಲ್ಮ ನಿರ್ಮಾಣಗೊಂಡಿದೆ.

* ಬೊಗ್ಲಾಂಟ್ ಚಿತ್ರದ 8 ಗೀತೆಗಳನ್ನು ಒಂದೇ ದಿನ ರಿಕಾಂರ್ಡಿಂಗ್ ಮಾಡಿ ಆಲ್ ಫ್ರೆಡ್ ರೋಸ್ ಇವರು ವಿಕ್ರಮ ಮಾಡಿದ್ದಾರೆ.

* 1977 ರ ಮೊಗ ಆನಿಮಾಯ್ಲಾಸ ಇದು ಕೊಂಕಣಿಯ ಪ್ರಥಮ ವರ್ಣರಂಜಿತ ಚಿತ್ರ.

* 3 ಚಿತ್ರಗಳು ನಾಟಕದ ಆಧಾರದ ಮೇಲೆ ತಯಾರಾಗಿದ್ದವೆಂದರೆ . ತಿಸ್ರಿಚೀಟ, ಬೋಗ್ಲಾಂಟ ಹಾಗೂ ಪಾದ್ರಿ.

* ಪಾದ್ರಿ ಚಿತ್ರಕ್ಕೆ ಯಾವುದೇ ಅಡೆತಡೆ ಮಾಡದೇ ಸೆನ್ಸಾರ್ ಸರ್ಟಿಫಿಕೇಟ್ ದೊರಕಿದೆ. ಫ್ರಿನ್ಸ್ ಜಾಕೋಬರ ಈ ನಾಟಕಕಾರನ ' * ' ಅಕ್ಷರದಿಂದ ಪ್ರಾರಂಭವಾಗುವ 25ನೇ ನಾಟಕ ಪಾದ್ರಿ ನಾಟಕ ಆಧಾರಿತ ಚಿತ್ರವಾಗಿದೆ.

* ಭುಯೇರಾಂತ್ಲೋ ಮಾನಿಸ ಈ ಚಿತ್ರಗೀತೆಯ ಟೈಟಲ್ ಪ್ರಸಿದ್ಧ ಗಾಯಕಿ ಆಸಾ ಬೊಸ್ಲೆ ಹಾಡಿದ್ದಾರೆ.

* ಬೊಗಸಾಣೆ ಚಿತ್ರ ಅಂದಮಾನ ದ್ವೀಪದ ಮೇಲೆ ಚಿತ್ರಿಕರಣವಾದ ಪ್ರಥಮ ಚಿತ್ರವಿದು. ಅದಕ್ಕೆ ಕರ್ನಾಟಕ ಸರಕಾರದ ಪ್ರಾದೇಶಿಕ ಪ್ರಶಸ್ತಿ ದೊರಕಿದೆ.

* ಸುಜಾನಾ ಈ ಚಿತ್ರದ ಶಿರ್ಶ ಗೀತೆಯನ್ನು ಫಾದರ್ ಜಾರ್ಲಸ್ ವಾರಾ ಇವರು ಹಾಡಿದ್ದ ಈ ಚಿತ್ರದಲ್ಲಿ ಹಿಂದಿ ಚಿತ್ರರಂಗದ ಕಲಾವಿದರಾದ ನಿಲಂ ಮೇಹಣ್ಣ, ಬೆಂಜಾಮನ್ ನಿಲಾನಿ ಹಾಗೂ ಎ.ಕೆ. ಹಾನಗಲ್ ಪಾತ್ರ ಒಹಿಸಿದ್ದಾರೆ.

* ಓ ಬಾಯ್ ಈ ಚಿತ್ರ ಪೋರ್ತುಗಲ್ ಫೀಲ್ಮ ಉತ್ಸವದಲ್ಲಿಪ್ರದರ್ಶನಗೊಂಡ ಪ್ರಥಮ ಕೊಂಕಣಿ ಚಿತ್ರವಾಗಿದೆ.

* ಸೂಡ್ ಈ ಚಿತ್ರದಲ್ಲಿ ಹಿಂದಿ ನಟ ಟೋಮ ಅಲ್ಟ ಹಾಗೂ ಪರಿಕ್ಷೀತ ಸಾಹಾನಿ ಪಾತ್ರ ಮಾಡಿದ್ದಾರೆ.

* ಅಲೀಶಾ ಚಿತ್ರಕ್ಕೆ ಕೊಂಕಣಿಯ ಪ್ರಥಮ ರಾಷ್ಟ್ರೀಯ ಪುರಷ್ಕಾರ ಪ್ರಾಪ್ತವಾಗಿದೆ.

* ಅಂತರ್ನಾದ ಈ ಚಿತ್ರಕ್ಕೆ ಬೆಸ್ಟ ಸಿಂಗರ್ ಬೆಸ್ಟ ಮ್ಯೂಸಿಕ್ ಹಾಗೂ ಬೆಸ್ಟ್ ಫೀಲಂ ಅಂತಾ ಪ್ರಶಸ್ತಿ ದೊರಕಿದೆ.

* ಬ್ಲಾಕ್ ನ್ಟೆಸಪ್ ಫೆಸೆನ್ ಆತ್ತಾಂಚೇಂ ಈ ಚಿತ್ರದ ಚಿತ್ರಿಕರಣ ಕುವೆತ್‌ನಲ್ಲಿ ಆಗಿದೆ.

* ಸಾವರಿಯಾ ಡಾಟ್‌ಕಾಮ್ ಈ ಚಿತ್ರದಲ್ಲಿ ಇಂಟರ್ ನೆಟ್ಸ್ ಮೂಲಕ ಮದುವೆಯಾಗುವ ಕಥೆ ಇದೆ.

* ಪಲತಡಚೋ ಮಾನಿಸ ಈ ಚಿತ್ರಕ್ಕೆ ರಾಷ್ಟ್ರೀಯ ಪುರಸ್ಕೃತ ಹಾಗೂ ಟೋರೆಂಟೋ ಶಹರದಲ್ಲಿ ಜರುಗಿದ ಫಿಲ್ಮೋತ್ಸವದಲ್ಲಿ ಅಂತರಾಷ್ಟ್ರೀಯ ಪುರಸ್ಕಾರ ಲಭಿಸಿದೆ.

* ಮೊಗಾಚಿರ್ಝುರ ರವರ ಇದರ ಶೂಟಿಂಗ್ ನಯಾಗಾರ ಶಹರ ಹಾಗೂ ನಯಾಗಾರ ಫಾಲ್ಸದಲ್ಲಿ ಆಗಿದೆ.

* ಓ ಮಾರಿಯಾ ಚಿತ್ರದಲ್ಲಿ ಹಿಂದಿ ಕಲಾವಿದ ಶೇರನಾಂರ್ಝು ಪಟೇಲ ತಿಕೋತನಾ ಸಾಬಿಯಾ ಸುಲಭಾ ಆರ್ಯಾ ಹಾಗೂ ಅಮೇರಿಕನ ಕಲಾವಿದ ಗೋಲ್ಡ ಬರ್ಗ ಇವರು ಪಾತ್ರ ಮಾಡಿದ್ದಾರೆ.

**ಕೊಂಕಣಿ ಭಾಷಿಕರು ವಿವಿಧ ಭಾಷಿಕ ಚಲನಚಿತ್ರದಲ್ಲಿ ಪಾತ್ರ ಒಹಿಸಿದವರ ಯಾದಿ**

ಅಮೃತರಾವ-ಅನಂತನಾಗ-ಅಂಥೋನಿ ಡಿಸೋಜಾ-ಅಂತೋನಿ ಗೋನ್ಸಾಲಸ್, ಆಶಾಲತಾ, ವಾಬಾ ಗಾಂವಕರ-ಅಶೋಕ ಶರಾಫ-ಭಾಸ್ಕರ. ಚಂದಾವರಕರ ಚಂದ್ರಕಾಂತ ಕಾಕೋಡಕರ-ದತ್ತಾರಾಮ ವಾಡಕರ-ದೀಪಿಕಾ ಪಡುಕೋಣೆ ಡೊಮನಿಕ್ ಡಯಾಸ್-ದುರ್ಗಾಖೋಟೆ ಈಶಾ ಕೊಪ್ಪಿಕರ-ಎರಮಿ ಲಿಂಡಾ ಪ್ರೆಡ್ಡಾ ಪಿಂಟೊ-ಜೆನೆಯೋ ಡಿಸೋಜಾ-ಗೀರಿಶ ಕಾರ್ನಾಡ, ಗ್ಲೆನ್ ಬೇರೆಟ್ಟ ಗುರುದತ್ತ-ಹೇಮಾ ದೆಸಾಯಿ-ಹೃದಯಾನಾಥ, ಮಂಗೇಶರ ಜಯಶ್ರೀ-ಜಯಶ್ರೀ ಗಡಕರ-ಕಮಲಾ ಗೊಖಲೆ, ಕಾನನ ಕಾಶಲ ಕಾಶ್ಮೀರಾ ಶಾಹಾ-ಲತಾ ಮಂಗೇಶ್ವರ ಲಾರೆನ್ಸ್ ಡಿಸೋಜಾ ಲೀನಾ ಚಂದಾವರಕರ-ಲೊಂಗಿ ಪರ್ನಾಂಡಿಸ್ ಮರಡೋನಾನಸ್ ರೆಬೆಲ್ಲೊ-ಮೀನಾ ಮಂಗೇಶಕರ-ಮನೋರಮಾ ವಾಗಳೆ-ಎನ್. ಚಂದ್ರ (ಚಂದ್ರಶೇಕರ ನಿರ್ದೇಶಕ) ಎನ್. ದತ್ತಾ (ಸಂಗೀತಕಾರ) ರೆಮೋ ಫರ್ನಾಂಡಿಸ್-ರೋಕ್ ಗೋನ್ಸಾಲ್ವಿಸ್-ಸಚೀನ ಪಿಳಗಾಂವಕರ, ಸೆಬೆಸ್ಟಿಯನ್ (ಶಂಕರಜೈರೆಷನ್ ಅಸಿಸ್ಟಂಟ್) ಶ್ಯಾಂ ಬೆನೆಗಲ್ ಶಂಕರನಾಗ-ಸುದೇಶ ಭೋಸಲೆ-ಸುಮನ ಕುಲ್ಯಾಣಪುರ-ವರ್ಷಾಜ ಗಾಂವಕರ ಆಶಾ ಬೋಸಲೆ-ಪಂಡರಿಬಾಯಿ ಅನುರಾಧಾ ಪೋಡವಾಲ-ಮೈನಾವತಿ-ಕಾಸರಗೋಡು ಚಿನ್ನಾ-ಜಾಕಲಿನ.

♦♦♦♦



# 15. ಭಾರತದ ಅಭಿವೃದ್ಧಿಯಲ್ಲಿ ಕೊಂಕಣಿಗರ ದೇಣಿಗೆ

■ ಶ್ರೀಮತಿ ಗ್ಲ್ಯಾಡಿಸ್ ಕ್ವಾಡ್ರಸ್-ಪೆರ್ಮುದೆ (ದ.ಕ.)

ಭಾರತದಲ್ಲಿ ಅಂದಾಜು 40-50 ಲಕ್ಷ ಕೊಂಕಣಿ ಭಾಷಿಕರಿದ್ದಾರೆ ಹಾಗೂ ಅವರು ವಿವಿಧ ಕ್ಷೇತ್ರದಲ್ಲಿ ಹರಿದು ಹಂಚಿ ಭಾರತದ ಅಭಿವೃದ್ಧಿಯಲ್ಲಿ ತಮ್ಮ ದೇಣಿಗೆಯನ್ನು ನೀಡಿದ್ದಾರೆ. - ನೀಡುತ್ತಲಿದ್ದಾರೆ.

**1. ಭಾತರದ ಚಳುವಳಿ ಸಂಗ್ರಾಮದಲ್ಲಿ ಕೊಂಕ್ಣಿ ಜನರು :**

1885ರಲ್ಲಿ ಭಾರತದಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಸಮಸ್ಥಾಪನೆ ಆದ ವರ್ಷದಿಂದ ಬಹಳಷ್ಟು ಕೊಂಕಣಿಗರು ಅದರಲ್ಲಿ ಸೇವೆ ಸಲ್ಲಿಸಿದ್ದಾರೆ. ಗೋವಾದಲ್ಲಿ ಪೋರ್ಚುಗೀಸರ ವಿರುದ್ಧ ಚಳುವಳಿ ಮಾಡಿದಾಗ ಕೊಂಕಣಿಗರು ಬಹಳ ಜನ ಆಸಕ್ತಿಯಿಂದ ಭಾಗವಹಿಸಿದರು. 1947ರಲ್ಲಿ ಭಾರತಕ್ಕೆ ಸ್ವಂತಂತ್ರ್ಯ ಸಿಕ್ಕ ಮೇಲಂತು ಪೋರ್ಚುಗಿಸರನ್ನು ಗೋವಾದಿಂದ ಹೋರಹಾಕಲು 1962ರ ವರೆಗೂ ಚಳುವಳಿಯಾಗುತ್ತಲೇ ಇದ್ದವು. ಈ ಚಳುವಳಿಯಲ್ಲಿ ಲುಯಿಸದೆ ಮೆನೆಜೆಸ್ ಬ್ರಗಾಂಝಾ, ಲಕ್ಷ್ಮೀಕಾಂತ ಬೇಂದ್ರೆ, ಪುರುಷೋತ್ತಮ ಕಾಕೋಡಕರ, ನಾಗೇಶ ಕರ್ಮಳಿ, ಎ.ಜೆ. ತೆಂಡುಲ್ಕರ ವಿಶೇಷವಾಗಿ ಗಾಂಧಿವಾದಿ ರವೀಂದ್ರ ಕೇಳಕರ (ಜ್ಞಾನಪೀಠ ಪುರಸ್ಕೃತರು) ಅದರಂತೆ ದೇಶದ ಬ್ರಿಟೀಷರ ವಿರುದ್ಧದ ಆಂದೋಲನದಲ್ಲಿ ಮಂಗಳೂರಿನ ಕದ್ರೆ ಶಾಲೆಯ ಗಾಂಧೀ ಮಾರ್ಕೆಲ್ ಸೋಜ್ ಹಂಚಿನ ಕಾರ್ಖಾನೆಯ ಮಾಲಿಕರಾದ ಫೇಲಿಕ್ಸ್ ಅಲ್ಬುಕೇರ ಪೈ ತಾಂಗೆರಿಯ ಬಕ್ಟೆವಿಯಾ ಅಲ್ಬುಕರ್ಕ ಜೋನ್ ಪ್ರಾನ್ಸಿಸ್ ಪಿಂಟೋ (ಗಾಂಧೀ ಪಿಂಟೋ) ಜೆರೂಮ ಸಲ್ಡಾನ್ಸ್ ತೋಮಾಸ ಅಲ್ವಾರಿಸ್ ಹಾಗೂ ಅವರ ಪತ್ನಿ ವಾಯ್ಲೆಟ ಆಲ್ವಾ ಇತ್ಯಾದಿ. 1933 ಇಸ್ವಿಯಲ್ಲಿ ಜವಾಹಲ್‌ಲಾಲ್ ನೆಹರು ಮಂಗಳೂರಿಗೆ ಬಂದಾಗ ಅವರು ಪ್ರಥಮ ಫೆಕ್ಸ್ ಅಲ್ಬುಕರ್ಕಾ ಮನೆಗೆ ಹೋಗಿ ಅಲ್ಲಿಂದ ಸಮೂಹ ಸೇರಿಕೊಂಡರು.

ಕಾರ್ನಾಡ ಸದಾಶಿವರಾವ್ : ಕರ್ನಾಟಕದಲ್ಲಿ ರಾಷ್ಟ್ರೀಯ ಸಂಗ್ರಾಮ ಹೆಚ್ಚು ಬೆಳೆಯಲು ಕಾರಣಿಕರ್ತರಾದರು ತಮ್ಮ ಎಲ್ಲಾ ಆಸ್ತಿಯನ್ನು ಮಾರಿ ದೇಶ ಸೇವೆಗಾಗಿ ಗಾಂಧಿಜಿಯವರ ಜೊತೆಗೆ ಅವರ ತತ್ವದಂತೆ ಬದುಕು ಕಂಡರು. ಮಂಜೇಶ್ವರ ಗೋವಿಂದ ಪೈ ಸಾಹಿತಿಗಳಾಗಿಯೂ ದೇಶದ ಸ್ವಂತಂತ್ರ್ಯ ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಕಮಲಾದೇವಿ ಚಟ್ಟೊಪಧ್ಯಾಯ ತನ್ನ ಬದುಕನ್ನು ಜನಸೇವೆಗಾಗಿ ಅರ್ಪಣೆ ಮಾಡಿದಳು ಪಂಜೆ ಮಂಗೇಶರಾವ್, ಉಲ್ಲಾಳ, ಮಂಜೇಶ ಪೈ ಉಗ್ರಾಣ ಮಂಜೇಶ ಪೈ ಇವರೆಲ್ಲರೂ ದೇಶ ಸೇವೆಗಾಗಿ ತ್ಯಾಗ ಮಾಡಿದ್ದಾರೆ. ದಾಂಡೇಲಿ ಉ.ಕ. ಶ್ರೀ ಕೆ. ಎನ್. ರಾವ್‌ರವರು ಗಾಂಧೀಜಿಯವರ ಹೆಜ್ಜೆಯಲ್ಲಿ ಸಾಗಿ ದೇಶದ ಸ್ವಾತಂತ್ರ್ಯ ಸಲುವಾಗಿ ನಿರಂತರ ಸಂಘರ್ಷ ಮಾಡಿದರು.

**2. ಭಾರತದ ಸಂವಿಧಾನ ನಿರ್ಮಾಣದಲ್ಲಿ ಕೊಂಕಣಿಗರು:**

ಭಾರತ ಸಂವಿಧಾನ ರಚನೆಯಲ್ಲೂ ಕೊಂಕಣಿಗರ ಪ್ರಮುಖ ಪಾತ್ರವಿತ್ತೆಂದು ಹೇಳಲು ಅಭಿಮಾನವೆನಿಸುತ್ತದೆ. ಮಂಗಳೂರಿನ ಜೇರೂಮ ಸೋಜ್ (6-8-1897) ಜನ್ಮವಾಗಿ ಶಿಕ್ಷಣವು ಸಂತ ಲೂವಿಜ ಕಾಲೇಜ ನಂತರ ಮುಂದಿನ ಶಿಕ್ಷಣ ಮದ್ರಾಸನಲ್ಲಾಯಿತು. ಶಿಕ್ಷಣ ಸಂದರ್ಭದಲ್ಲಿ ಅವರ ಬುದ್ಧಿವಂತಿಕೆ ಅಂತಾ ಚಕ್ರವರ್ತೀ ಶ್ರೀ ರಾಜಗೋಪಾಲಚಾರಿಯವರು ಜೇರೂಮ್ ಸೋಜ್‌ರವರ ಹೆಸರನ್ನು ಜವಾಹಾಲಾಲ್ ನೆಹರೂರವರಿಗೆ ಶಿಫಾರಸ್ಸು ಮಾಡಿದರು. ಆದ್ದರಿಂದ ಭಾರತದ ಸಂವಿಧಾನ ರಚನೆಯ ಸದಸ್ಯರು ಆದರೂ ನಂತರ ಪ್ರಧಾನಿ ನೆಹರೂರವರ ಸಲಹೆಗಾರರೂ ಆದರೂ ಗೋವಾದಲ್ಲಿ ಪ್ರೋತ್ಸಹ ಗೀಜರ ಶಕ್ತಿ ಕುಂಠಿತವಾಗಲು ಸಹ ಜೇರೂಮ ಸೂಜರ ಬುದ್ಧಿವಂತಿಕೆ ಕೈವಾಡವಿದೆ.

2.1 ಅದರಂತೆ ಸಂವಿಧಾನ ಪಿತಾಮಹ ಡಾ. ಬಿ. ಆರ್. ಅಂಬೆಡ್ಕರರ ಭುಜಕ್ಕೆ ಭುಜ ಕೊಟ್ಟು ಕೆಲಸ ಮಾಡಿದರೆಂದರೆ ಬೆನಗಲ್ ನರಸಿಂಹರಾಯರು ಬ್ರಹ್ಮದೇಶದ ಸಂವಿಧಾನ ರಚನೆಯಲ್ಲೂ ಅವರ ಹಸ್ತವಿದೆ. ಅದರಂತೆ ಯು. ಶ್ರೀನಿವಾಸಮಲ್ಯ ಸಹಿತ 3ಸಲ ಉಡುಪಿ ಭಾಗದ ಸಂಸದರಾದರು.

**3. ಭಾರತೀಯ ರಾಜಕೀಯ ಆಡಳಿತದಲ್ಲಿ ಕೊಂಕಣಿ ಜನ**

3-1 ಕೊಂಕಣಿಗರಲ್ಲಿ ರಾಜಕೀಯದಲ್ಲಿ ಅತೀ ಹೆಚ್ಚು ಹೆಸರು ಮಾಡಿದವರೆಂದರೆ ಇಜೆಯ (ದ.ಕ.) ಜೊರ್ಜ ಫೆಂಧಾನ್ ಎಂದರೆ ತಪ್ಪಾಗಲಾರದು. ಬರೀ ರಾಜಕೀಯವಲ್ಲ ಸಮಾಜವಾದಿ ಸಂ. ಘಟಕ ಸಂಸದ ಯು ಶ್ರೀನಿವಾಸಮಲ್ಯ ಅವರ ಕಾಲದಲ್ಲಿ ಮಂಗಳೂರಲ್ಲಿ ಆಕಾಶವಾಣಿ ನವಿಮಂಗಳೂರ ಬಂದರ (ಎನ್. ಎಮ್. ಪಿ.ಟಿ.) ಕೆ. ಆರ್. ಇನೆ ರಾಷ್ಟ್ರಮಟ್ಟದಲ್ಲಿ ಬೆಳೆದವು.

3.2 ರಾಜಕೀಯದಲ್ಲಿ ಕುಟುಂಬವೇ ಹೆಸರು ಮಾಡಿದ್ದೆಂದರೆ ಶ್ರೀ ಜೋಕಿಮ ಆಳ್ವಾ ಹಾಗೂ ಅವರ ಪತ್ನಿ ವಾಯ್ಲಟ ಆಳ್ವಾ ಕೇಂದ್ರ ಮಂತ್ರಿಗಳಾದರು ವಾಯ್ಲಟರವರ ರಾಜ್ಯಸಭಾ ಉಪಾಧ್ಯಕ್ಷರಾದವರು

ಅವರ ಸೊಸೆ ಮಾರ್ಗರೇಟ್ ಆಳ್ವಾ ಮುಂದೆರಾಜ್ಯಸಭೆ-ಲೋಕಸಭೆಸದಸ್ಯರಾಗಿ ಕೇಂದ್ರ ಸಚೀವರಾಗಿ ಹಾಗೂ ರಾಜ್ಯಪಾಲರಾಗಿ ನಿವೃತ್ತಿಯಾದರು.

3.3 ರಾಷ್ಟ್ರ ರಾಜಕಾರಣದಲ್ಲೂ ಕರ್ನಾಟಕ-ಗೋವಾ-ಮಹಾರಾಷ್ಟ್ರ ರಾಜಕೀಯದಲ್ಲೂ ಅನೇಕ ಕೊಂಕಣಿಗರು ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಉಡುಪಿಯ (ಕರ್ನಾಟಕ) ಶ್ರೀ ಟಿ. ಎ. ಪೈ ಸಮಾಜ ಸುಧಾರಣೆಗಾಗಿ ಮಂಗಳೂರಿನ ಸಂಸದ ಹಾಗೂ ಸಚಿವರಾದ ಆಸ್ಕಾರ ಫರ್ನಾಂಡಿಸ್ ಮಂಗಳೂರಿನ ಪಿ.ಎಫ್. ರೊಡ್ರಿಗಿಸ್ ಬೆಸಿಯಾಸ್ ಡಿಸೋಜಾ ರಾಜ್ಯಸಭಾ ಸದಸ್ಯೆ ಪಡುಕೋಣೆಯ ಮೇಬಲ್ ರೆಬೆಲೊ ವಿಧಾನಸಭೆ ಸದಸ್ಯರು ಪತಿಯಾದ ಶ್ರೀ ಯೋಗೇಶ ಭಟ್ಟ ಕರ್ನಾಟಕ ವಿಧಾನ ಸಭಾ ಸದಸ್ಯರಾದ ಕಾರವಾರ ಭಟ್ಕಳದ ನವಾಯತಿ ಕೊಂಕಣಿಗ

ಶ್ರೀ ಎಸ್. ಎಂ. ಯಾಹ್ಯಾ ಕಾರವಾರದ ಸಂಸದ ಶ್ರೀ ಬಿ.ಪಿ.ಕದಂ ಶಾಸಕ ಸಚಿವರಾದ ಶ್ರಿ ಪ್ರಭಾಕರ ರಾಣೆ. ಶ್ರೀ ಆನಂದ ಅಸ್ನೋಟಿಕರ, ಶ್ರೀ ಸತೀಶ ಸೈಲ್, ಶ್ರೀಮತಿ ರೂಪಾಲಿ ಸಂತೊಷ ನಾಯ್ಕ, ಆರ್. ವಿ. ದೇಶಪಾಂಡೆ, ಜೆ.ಆರ್. ಲೊಬೋ. ಅಡ್ಡಿ ಸಲ್ಡಾನಾ ಕಾಮತ 3.4 ಗೋವಾದಲ್ಲಿ ಮಾಜಿ ಮುಖ್ಯಮಂತ್ರಿ ಹಾಗೂ ರಕ್ಷಣಾ ಮಂತ್ರಿ ಶ್ರೀ ಮನೋಹರ ಪರಿಕರ ಲುಯಜಿನೊ ಫಾಲೆರೂ ವಿಧ್ದ-ರೊ ಫೆಲೆರೂ ಪ್ರತಾಪ ಸಿಂಗರಾಣಿ ಲುಯಸ ಪೋಟೋ ಬಾರ್ಬೊನಾ ಮಾಜಿ ಮುಖ್ಯಮಂತ್ರಿ ಶ್ರೀ ದಿಗಂಬರ ಕಾಮತ, ವಿಲ್ಪ್ರೆಡ್ ಡಿಸೋಜಾ ಪ್ರನಿಸ್ಕೋ ಸಾರ್ದಿನೋ ತೊಜಮಿನ್ ಕಾಡ್ರೋಜಿ ಆಲೆಮಾವ ಚರ್ಚಿಲ, ದಾಮು ನಾಯ್ಕ, ಭಾರತ ಸರ್ಕಾರದ ರೈಲ್ವೆ ಮಂತ್ರಿ ಸುರೇಶ ಪ್ರಭಾಕರ ಫ್ರಭು ಕೊಂಕಣ ರೈಲ್ವೆ ಹರಿಕಾರ ಜೊರ್ಜ ಫನಾಂಡಿಸ್ ಮಧುದಂಡವತೆ ಮುಂತಾದವರು.

**4. ಭಾರತದ ಆಡಳಿತ ಕ್ಷೇತ್ರದಲ್ಲಿ ಕೊಂಕಣಿ ಜನರು :**

ಮಂಗಳೂರಿನ ಮುಲ್ಕಿಯ ಶ್ರೀ ಪ್ರಾನ್ಸಿಸ್ ವಿಯರ ಡಿಸೋಜಾ ಬ್ರಿಟೀಷರ ಕಾಲದಲ್ಲಿ ಇಂಡಿಯನ್ ಸಿವಿಲ್ ಸರ್ವಿಸ್ ಉಚ್ಛ ಹುದ್ದೆಯಲ್ಲಿ ದ್ದರು ನಿವೃತ್ತಿಯ ನಂತರ ಭಾರತದ ಕೇಂದ್ರಿಯ ಶಾಸನ ಸಭೆಯ ಸದಸ್ಯರಾಗಿ ಸೇವೆ ಸಲ್ಲಿಸಿದರು ಮತ್ತೊಬ್ಬ ಮಂಗಳೂರಿನ ಶ್ರೀ ಜೆ. ಎಂ. ಲೋಬೊ ಪ್ರಭು ಇವರು ಬ್ರೀಟಿಷ್ ಸರಕಾರದ ಕಾಲದಲ್ಲಿ ವಿವಿಧ ಜಿಲ್ಲೆಯ ಕಲೆಕ್ಟರ್ ಆಗಿ ಸೇವೆ ಸಲ್ಲಿಸಿದರು. ನಂತರ ಉಡುಪಿ ಭಾಗದ ಸಂಸದರೂ ಆಗಿ ಸೇವೆ ಸಲ್ಲಿಸಿದರು. ಗೋವಾದ ಎಂಜಿನಿಯರ ಮ್ಯಾನುವೆಲ್ ಮಿನಿಜಿಸ್ ಕೇಂದ್ರ ಸರ್ಕಾರದ ಪ್ರಿನ್ಸಿಪಲ್ ಸೆಕ್ರೇಟರಿ ಹುದ್ದೆಯವರೆಗೆ ತಲುಪಿದ್ದರು ಕಾರವಾರ ಸದಾಶಿವಗಡದ ಶ್ರೀ ಬಿ.ಬಿ ರಾಣೆಯವರು ಮಹಾರಾಷ್ಟ್ರ ಸರ್ಕಾರದ ಚೀಫ್ ಸೆಕ್ರೇಟರಿಯಾಗಿದ್ದರು.

4.2 ಮದ್ರಾಸ ಹೈಕೋರ್ಟ ನ್ಯಾಯಾಧೀಶರಾದ ಸಿ. ಎಲ್. ಕಲಾಸೊ ಹಾಗೂ ಅವರ ಮಗ ಶ್ರೀ ಎಫ್. ಟಿ. ಆರ್ ಆಯ್.ಪಿ ಎಸ್. ಅಧಿಕಾರಿಯಾಗಿ ನಮ್ಮ ದೇಶ ಅತ್ಯುತ್ತಮ ಸೇವೆ ನೀಡಿದ್ದಾರೆ. ಪ್ರಾನ್ಸಿಸ್ ತೋಮಾಸ ರೇಪಾಯೆ ಕೋಸು (FIR) ಕಾಶ್ಮೀರ ಹಾಗೂ ಕರ್ನಾಟಕದ ಡೈರೆಕ್ಟರ್ ಜನರಲ್ ಅಫ್ ಪೋಲಿಸರಾಗಿ ನಿವೃತ್ತಿಯಾದರು ಕುಂದಾಪುರದ ರೋನಾಲ್ಡ ಹಯ್ಸಿಂತ್ ಮೆಂಡೊನ ಮಹಾರಾಷ್ಟ್ರ ಡಿ. ಆಯ್. ಜಿಯಾಗಿ ನಿವೃತ್ತಿಯಾದರು ಮಂಗಳೂರಿನ ಮ್ಯಾಕ್ಸೆವಿಲ್ಲಿ ಫೀರೆರಾ ಆಯ್ ಪಿ. ಎಸ್ ಆ

ಸಿಕ್ಕಿಮ ರಾಜ್ಯದ ಪೋಲಿಸ್ ಕಮೀಷನರ ದಿಲ್ಲಿಯ ಜೋಂಯ್ಟ ಕಮೀಷನರ್ ಆಗಿ ನಿವೃತ್ತಿಯಾದರು ಕಾರವಾರದ ಶ್ರೀ ಬಾಬಾ ಬೋರಕರ ಕರ್ನಾಟಕದ ಡಿ ಆಯ್. ಜಿ ಯಾಗಿ ನಿವೃತ್ತರಾದರು ಕಾರವಾರದ ಶ್ರೀ ರಾಮಾ ರಾಘೋಬಾ ರಾಣೆ ಪರಮವೀರ ಚಕ್ರ ಪ್ರಶಸ್ತಿ ಪಡೆದಿದ್ದಾರೆ.

4.3 ಭಾರತದ ನೇವ್ಹಿಯಲ್ಲಿ ಹೆಸರು ಮಾಡಿದ ಸಾಹಸಿ ಕಮಾಂಡರ್ ಜೋರ್ಜ ಮಾರ್ಟಿನ್ ಇದ್ದಾರೆ. 1972ರ ಬಾಂಗ್ಲಾ ಯುದ್ಧದಲ್ಲಿ ತನ್ನ ಪರಾಕ್ರಮ ತೋರಿಸಿದ್ದಾರೆ. ಅವರಿಗೆ ವೀಚಕ್ರ ನವಸೇವಾ ಪ್ರಶಸ್ತಿ ಲಭಿಸಿದೆ. ರಮೇಶ ಸುಖಾರಾಮ ಬೆನಗಲ್ ರವರಿಗೆ ಮಹಾವೀರ ಚಕ್ರ ಲಭಿಸಿದೆ. ಭಾರತದ ನೇವಿಯ ಎಡ್ಮಿರಲ್ ಆಗಿ ಉಚ್ಛ ಪದವಿಗೆ ತಲುಪಿದ ಜಿ. ಜೆ. ನಾಡಕರ್ಣಿ ಹಾಗೂ ಆರ್ಮಿ ಜನರಲ್ ಆದ ಗೋವಾದ ಸುನೀತ ಪ್ರಾನ್ಸಿನ ರಿಡ್ರಿಗ್ಸ್ ಲೆಪ್ಟನಯನ ಜನರಲ್ ಪ್ರಾನ್ಸಿಸ್ ತಿಬರ್ತಿಯಾಸ ಡಯಾಸನ್ ಇವರಿಗೆ ಅತೀ ವಿಶಿಷ್ಟ ಸೇವಾ ಪದಕ ವೀರಚಕ್ರ ಪ್ರಾಪ್ತವಾಗಿದೆ.

**5. ಭಾರತೀಂಯ ಸಾಹಿತ್ಯ ಹಾಗೂ ಪತ್ರಿಕೋದ್ಯಮದಲ್ಲಿ ಕೊಂಕಣಿಗರು :**

ಕನ್ನಡದ ಪ್ರಥಮ ರಾಷ್ಟ್ರಕವಿ ಪ್ರಸಿದ್ಧಿ ಶ್ರೀ ಮಂಜೇಶ್ವರ ಗೋವಿಂದ ಪೈ ಇವರಿಗೆ ಕನ್ನಡ ಸಾಹಿತ್ಯದ ಯುಗ ಪ್ರವರ್ತಕರೆಂದು ನಂಬುತ್ತಾರೆ. (ಜನ್ಮ 23-3-1883) 8 ವಿವಿಧ ಕೃತಿಕಾರ ಶ್ರೀ ಯಶವಂತ ಚಿತ್ತಾಲ ಚುಟುಕು ಬ್ರಹ್ಮ ದಿನಕರ ದೇಸಾಯಿ ಹಿರಿಯ ಕವಿ ಗೌರೀಶ ಕಾಯ್ಕಿಣಿ, ಹಾಗೂ ಅವರ ಮಗ ಪ್ರಸಿದ್ಧ ಜಯಂತ ಕಾಯ್ಕಿಣಿ, ಪ್ರಶಾಂತ ಮಾಡ್ತಾ ಎಡ್ವರ್ಡ ನ್ಹರೋನಾ ಜ್ಞಾನಪೀಠ ಪ್ರಶಸ್ತಿ ವಿಜೇತ ಗಿರೀಶ ಕಾರ್ನಾಡ ಮಂಡ್ಯೂರ ನರಸಿಂಹ ಕಾಮತ, ಮೆಂಜೆ ಮಂಗೇಶರಾವ ನ್ಹೋರೋನಾ (ನಾ. ಡಿಸೋಜಾ) ಇವರೆಲ್ಲಾ ಹೆಚ್ಚಾಗಿ ಕನ್ನಡ ಸಾಹಿತ್ಯದಲ್ಲಿ ಹೆಸರು ಮಾಡಿದವರು.

5.2 ನವಾಯ್ತು ಉರ್ದು ಹಿಂದಿ ಹಾಗೂ ಇಂಗ್ಲೀಷ ಹೀಗೆ 4 ಭಾಷೆಗಳಲ್ಲಿ ಸಾಹಿತ್ಯ ರಚಿಸಿದ ಅಬ್ದುಲ್ ರಹೀಮ ಇಶ್ಯಾನ 15-5-1931ರಲ್ಲಿ ಭಟ್ಕಳದಲ್ಲಿ ಜನನ ಹೆಚ್ಚಾಗಿ ನವಾಯ್ತಿ ಕೊಂಕಣಿ ಸಾಹಿತ್ಯಕ್ಕೆ ಹೆಚ್ಚು ಒತ್ತು ಕೊಟ್ಟರು. ಭಾರತದ ಪರಂಪರೆಯನ್ನು ಅಮರ ಚಿತ್ರ ಕಥೆಯ ಮೂಲಕ ದೇಶದ ಚಿಕ್ಕ ಚಿಕ್ಕ ಮಕ್ಕಳಿಗೆ ನಮ್ಮ ಸಂಸ್ಕೃತೀಯ ಪರಿಚಯ ನೀಡಿದ್ದು ಸುಮಾರು 450 ಪುಸ್ತಕಗಳು ಪ್ರಕಟಗೊಂಡಿದ್ದು ಕಾರ್ಕಳದ ಶ್ರೀ ಅನಂತ ಪೈ ಯವರಿಂದ.

5.3 ಕೊಂಕಣಿ ಸಾಹಿತ್ಯ ಬೆಳೆಯಲು ಶೆಣೆ-

ಯ ಗೋಂಯಬಾಬ ಪ್ರಸಿದ್ಧರಾದರು. ರಘುನಾಥರಾಮ ವಾಮನರಾಮ ಎರ್ದೆ ಬಾಲವಿಕಾರ ಮಹಾಬಲೇಶ್ವರ ಸೈಲ್ ರವೀಂದ್ರ ಕೆಳಕರ, ರಘುನಾಥ ವಿಷ್ಣು ಪಂಡಿತ, ಬಾಕಿಬಾಬ ಬೋರ್ಕರ ಮನೋಹರರಾಯ ಸರದೇಸಾಯಿ ದೇವನಾಗರಿಯಲ್ಲಿ ಅತ್ಯುತ್ತಮ ಸಾಹಿತ್ಯ ಹೊರತಂದರು. ರವಿಂದ್ರ ಕೆಳಕರರು ಪ್ರಥಮ ಜ್ಞಾನಪೀಠ ಪ್ರಶಸ್ತಿ ದೊರಕಿಸಿಕೊಟ್ಟರು. ಕನ್ನಡ ಅಡಿಯಲ್ಲಿ ... ಜೊ. ಸಾ. ಅಲ್ವಾರಿಸ್ ಎಟಿಲೇಬೊ ವಿ.ಜೆ.ಪಿ ಸಾಲ್ಡಾನಾ ಚಾಫ್ರಾ ವಕೋಸ್ತಾ ಜಿ.ವಿ.ಬಾಳಗಾ ಇವರ ಸಾಹಿತ್ಯ ಅತ್ಯುತ್ತಮವಾಗಿದೆ. ಎಡ್ವರ್ಡ ಬ್ರುನೋ ಡಿಸುಜಾನ್ ರೋಮ ಕೊಂಕ್ಣಿ ಸಾಹಿತ್ಯಕ್ಕೆ ಹೆಸರು ಮಾಡಿದ್ದಾರೆ. ಕಾರವಾರದ ವಿಠ್ಠಲರಾಯ್ ಭಟ್ಟ ಸಹಿತ ಇದೆ ಸಾಲಿನಲ್ಲಿ ಬರುತ್ತಾರೆ.

5.4 ಕರ್ನಾಟಕದಲ್ಲಿ ಕೊಂಕ್ಣಿ ಪತ್ರಿಕೋಧ್ಯಮ ಬೆಳೆಯಲು ಕವಿ ಲೂಯಿಸ್ ಮ್ಹಸ್ಕರನಿಸ ಹೆಚ್ಚಿನ ದೇಣಿಗೆ ನೀಡಿದ್ದಾರೆ. ಕೊಂಕ್ಣಿಯ ದಿಕ್ಸಿಂ ಇದು ಪ್ರಥಮ ಕೊಂಕಣಿಯ ಕನ್ನಡ ಲಿಪಿಯ ಪತ್ರಿಕೆಯಾಗಿದೆ. ಅದರಂತೆ ರಾಕ್ಣೊ ಎಂಬ ವಾರಪ್ರತಿಕೆ ಸಂಪಾದಕ ಸಿಲ್ವೆಸ್ತರ ಮೇನೆಜ್‌ರವರ ಯೋಗಾದಾನವಿದೆ. ಅದರಂತೆ ಟಾಯಮ್ಸ ಸೀಲೋನ್, ದಿ ಮಾರ್ನಿಂಗ್ ಸ್ಟಾಂಡಂರ್ಡ, ಇಂಡಿಯನ್ ಎಕ್ಸ್ಪ್ರೆಸ್ ಜರ್ನಲ್, ಸಂಡೆ ಟಾಯಮ, ಇಲ್ಲ ಸ್ಟ್ರೇಟರ್ಡ ವಿಕ್ಲಿ, ಇಂತ ಪ್ರಸಿದ್ಧ ಪತ್ರಿಕೆಗಳ ಸಂಪಾದಕರಾಗಿ ಹೆಸರು ಮಾಡಿದ್ದಾರೆ. ಅವರ ಬಹಳಷ್ಟು ಪುಸ್ತಕಗಳು ದೇಶ ವಿದೇಶದಲ್ಲಿ ಪ್ರಚಲಿತವಾಗಿದೆ.

5.5 ಸುನಾಪರಂತ ಪತ್ರಿಕೆಯ ಸಂಪಾದಕರಾಗಿ ಬಹಳಷ್ಟು ವರ್ಷ ಕೆಲಸ ಮಾಡಿದ ಶ್ರೀ ಚಂದ್ರಕಾಂತ ಕೇಣಿ, ರಾಷ್ಟ್ರಮತ ಮರಾಠಿ ಪತ್ರಿಕೆಯಲ್ಲೂ ಕಾರ್ಯ ನಿರ್ವಹಿಸಿದ್ದಾರೆ. ಪತ್ರಿಕೋಧ್ಯಮ ಸೇವೆಗೆ ಅಮೇರಿಕನ್ ಪುಸ್ತಕದಿಂದ ಪ್ರಶಸ್ತಿ ಪಡೆದ ಡೊಮಮೊರಾಯಸ್ ನ್ಯೂಯಾರ್ಕ್ ಟಾಯಮ್ಸ್ ಹಾಗೂ ಸಂಡೇಮ್ಯಾಗಝೀನ್‌ಗಾಗಿ ಕಾರ್ಯ ಮಾಡಿದ್ದಾರೆ.

**6. ಭಾರತೀಯ ಬ್ಯಾಂಕಿಂಗ್ ಹಾಗೂ ಉದ್ದಿಮೆಯಲ್ಲಿ ಕೊಂಕಣಿಗರು :**

ಭಾರತೀಯ ಪ್ರಸಿದ್ಧ ಉಧ್ಯಮಿ ಸರ್ ಜಮಶೇಡಜಿ ಟಾ ಟಾ ಎಂದು ಎಲ್ಲರಿಗೂ ಗೊತ್ತಿದೆ. ಆದರೆ ಅವರಿಗೆ ಹಣಕಸಿನ ನೆರವು ಮಾಡಿದವರು ಒಬ್ಬ ದೈವಜ್ಞ ಕೊಂಕಣಿ ಸಮೂದಾಯದ ಜಗನ್ನಾಥ ಶಂಕರ ಶೇಟ ಮುಂಬೈದವರು ಎಂದು ಹೇಳಲು ಅಭಿಮಾನವಾಗುತ್ತದೆ. ಅಂದು ಆ ವ್ಯಕ್ತಿ ಅರಬರ ಜೊತೆ-ಗೂ ತನ್ನ ವ್ಯವಸಾಯ ಮಾಡುತ್ತಿದ್ದರು. ವಿವಿಧ ಶಿಕ್ಷಣ ಕ್ಷೇತ್ರಕ್ಕೂ ಸಹಾಯ ಮಾಡಿದರು. ಎಲ್ಪಸ್ಟನ್ ಎಜ್ಯುಕೇಶನಲ್ ಸೋಸಾಯಿಟಿ ಬಾಂಬೆ, ನೇಟಿವ್ ಅಸೋಶಿಯೇಷನ್, ಇಂಡಿಯನ್ ರೈಲ್ವೆ ಅಶೋಷಿಯೇಶನ್ ಇವರೆಲ್ಲರಿಗೆ ನೆರವು ನೀಡಿದ್ದಾರೆ. ಗೋಪಾಲಕೃಷ್ಣ ಗೋಖಲೆ, ಬಾಲಗಂಗಾಧರ ತಿಲಕ ಇಂದ ಕಾಂಗ್ರೇಸ್ ಮುಖಂಡರಿಗೂ ಅವರ ಸಹಾಯ ಹಸ್ತವಿತ್ತು ದಾದಾಬಾಯಿ ನವರೋಜಿ ಜೊತೆಗೂಡಿ ಬಾಂಬೆ ಅಶೋಷಿಯೇಶನ್ ಪ್ರಾರಂಭ ಮಾಡಿದ್ದರು.

6.2 ಕೊಂಕಣಿ ಜನರು ಮೂಲವಾಗಿ ಸಾಹಸಿ ಪ್ರವೃತ್ತಿಯವರು ಅಮ್ಮೆಂಬಳ ಸುಬ್ಬರಾವ ಪೈಯವರು ಕ್ಯಾನರಾ ಬ್ಯಾಂಕ್ ಪ್ರಾರಂಭಿಸಿದರೆ ಟಿ.ಎಂ.ಎ. ಪೈ ಹಾಗೂ ಉಪೇಂದ್ರ ಪೈ ರವರು ಸಿಂಡಿಕೇಟ್ ಬ್ಯಾಂಕ್ ಪ್ರಾರಂಭ ಮಾಡಿದರು. ಇಂದು ಅವು ರಾಷ್ಟ್ರೀಯ ಬ್ಯಾಂಕುಗಳಾಗಿ ಬೆಳೆದಿವೆ. ಅದರಂತೆ ಪಿ.ಎಫ್. ಎಕ್ಸ್ ಸಾಲ್ಡಾನಾರವರ ಎಂ.ಸಿ.ಸಿ. ಬ್ಯಾಂಕ್ ಜಾನ ಡಿಸಿಲ್ವಾರವರ ಸಹಕಾರಿ ಬ್ಯಾಂಕ್ ಸರಸ್ವತ ಕೋ-ಆಫ್ ಬ್ಯಾಂಕ್ ಇವೆಲ್ಲ ಕೊಂಕಣಿಗರ ಪ್ರಯಾಣಿಕತ್ವಕ್ಕೆ ಸಾಕ್ಷೀಯಾಗಿವೆ.

6.3 ಕಲ್ಸಂಕ ಕಮಲಾಕ್ಷ ಪೈ (ಕೆ.ಕೆ.ಪೈ) ಬರಿ ಬ್ಯಾಂಕಿಂಗ್ ಕ್ಷೇತ್ರವಲ್ಲದೇ ಕೊಂಕಣಿ ಭಾಷೆ ಹಾಗೂ ಸಂಸ್ಕೃತೀಯ ಬೆಳವಣಿಗೆಗೆ ಅವರ ಅಪಾರ ಯೋಗದಾನವಿದೆ. ಓರಿಯಂಟಲ ಬ್ಯಾಂಕ್ ಆಫ್ ಇಂಡಿಯದ ಕಾರ್ಯಕಾರಿ ನಿರ್ದೇಶಕರಾಗಿ ಇದ್ದ ಪ್ರಮಾಣೀಕ ಹಾಗೂ ಸರಳ ವ್ಯಕ್ತಿ ಆಲನ್ ಸಿ.ಎ. ಪೆರೆರಾ ಮುಂದೆ ಬ್ಯಾಂಕ್ ಆಫ್ ಮಹಾರಾಷ್ಟ್ರದ ಕಾರ್ಯಕಾರಿ ನಿರ್ದೇಶಕರಾಗಿ ನಿರ್ವಹಿಸಿದರು. ಕಾರ್ಕಳದಲ್ಲಿ ಜನಿಸಿ ಮುಂಬೈಯಲ್ಲಿ ಬೆಳೆದ ಜಾನ್ ಡಿಸಿಲ್ವಾ ಬಹಳಷ್ಟು ಸಹಕಾರಿ ಬ್ಯಾಂಕಗಳ ಸಂಸ್ಥಾಪಕರಾದರು. ಅಭ್ಯುದಯ ನ್ಯೂ ಇಂಡಿಯಾ ಸಿಟಿಜನ್ ಹಾಗೂ ಮೊಡೆಲ್ ಕೋ ಆಫರೇಟಿವ್ ಬ್ಯಾಂಕ್ ಅವರ ಕೊಡುಗೆಗಳು ಮುಂದೆ ಅವರು ರಿಜರ್ವ ಬ್ಯಾಂಕ್ ಆಫ್ ಇಂಡಿಯಾದ ಸಲಹೆಗಾರರಾಗಿ ಆಗ್ರಿಕಲ್ಚರ ಬ್ಯಾಂಕಿಂಗ್ ಕಾಲೇಜಿನ ವಿಸಿಟಿಂಗ್ ಪ್ರಾಪೇಸರ್ ಆಗಿ ನೇಮಕರಾದರು.

1912 ರಲ್ಲಿ ಭಾರತದ ಲೆಕ್ಕ ತಪಸಣಾ ಇಲಾಖೆಯ ಹುದ್ದೆದಾರರಾದ ಶ್ರೀ ಪಿ. ರಂಗನಾಥರಾವ ಕ್ರಮೇಣ ಭಾರತೀಯ ರೈಲಿನ ಹಣಕಾಸಿನ ಆಯುಕ್ತರಾದರು ಭಾರತೀಯ ರಿಸರ್ವ ಬ್ಯಾಂಕ್ ಸರ್ಕಾರಿ ನಿರ್ದೇಶಕ ಮುಂಬೈ ಸರ್ಕಾರದ ಅಕೌಂಟಂಟ್ ಜನರಲ್‌ರಾಗಿ ಸೇವೆ ಸಲ್ಲಿಸಿದರು.

6.4 ಆಯ್‌ಸಿ.ಆಯ್‌ಸಿ. ಆಯನೆ ಬ್ಯಾಂಕಿನ ಚುಕ್ಕಾಣಿಯನ್ನು ತನ್ನ ಕೈಯಲ್ಲಿ ಪಡೆದ ನಂತರ ಕುಂದಾಪುರದ ಕೆ.ವಿ. ಕಾಮತರು ಬ್ರೆಕ್ಸಿಟ್ ಅಂತರಾಷ್ಟ್ರೀಯ ಬ್ಯಾಂಕಿನ್ ಅಧ್ಯಕ್ಷರಾದರು. ವಿಠ್ಠಲದಾಸ ಲೀಲಾಧರ ವಿಜಯಾ ಬ್ಯಾಂಕಿನ ಚೇರಮನ್ನಾರಾಗಿ ನಂತರ ರಿಜರ್ವ್ ಬ್ಯಾಂಕ್ ಆಫ್ ಇಂಡಿಂ-ಯಾದ ಡೆಪ್ಯೂಟಿ ಗವರ್ನರ್ ಹುದ್ದೆಯನ್ನು ಅಲಂಕರಿಸಿದರು. ಅಲ್ಬರ್ಟ ತಾಮ್ರೊ ವಿಜಯಾ ಬ್ಯಾಂಕಿಂಗ್ ಅಧ್ಯಕ್ಷರಾಗಿದ್ದರು. ಅದರಂತೆ ಉ.ಕ. ಜಿಲ್ಲಾ ಮೂಲ ಹೊನ್ನಾವರದ ಶ್ರೀ ಜೊರ್ಜ ಫರ್ನಾಂಡಿಸ್ ಕಾರವಾರದಲ್ಲಿ ನೆಲೆಸಿ ನಿಂತ ಮಿಲಾಗ್ರಿಸ್ ಎಂಬ ಬ್ಯಾಂಕ್ ಸ್ಥಾಪಿಸಿ ರಾಜ್ಯದ ವಿವಿಧ ಭಾಗದಲ್ಲಿ ನೂರಕ್ಕೂ ಹೆಚ್ಚು ಶಾಖೆಗಳೊಂದಿಗೆ ಸಾವಿರಾರು ಜನರಿಗೆ ಉದ್ಯೋಗ ನೀಡಿದ್ದಾರೆ.

6.5 ನಿರುದ್ಯೋಗದವರಿಗೆ ಉದ್ಯೋಗ ನೀಡುವ ದೃಷ್ಠಿಯಿಂದ ಮಂಜುನಾಥ ಹಾಗೂ ಗಣಪತಿ

ಪೈ ಯವರು ಭಾರತ ಬಿಡಿ ೩೦ನಂ. ಬಿಡಿ ಪ್ರಾರಂಭಿಸಿ ಲಕ್ಷಾಂತರ ಜನರಿಗೆ ಗೃಹ ಉದ್ಯೋಗ ನೀಡಿದರು. ಪಿ.ವ್ಹಿ ಎಸ್. ಬಿಡಿ ಗ್ರಾಮೀಣ ಭಾಗದ ಜನರಿಗೆ ಉದ್ಯೋಗ ನೀಡಿತು. ಪುತ್ತು ವೈಕುಂಠ ಶೇಟರವರು ಗಣೇಶ ಬಿಡಿ ಪ್ರಾರಂಭಿಸಿದರು. ಬಿ ರಘುರಾಯ ಪ್ರಭು ಹಾಗೂ ಮಾಧನ ಶೇಣಾಯ ಬಂಗಾರ ವಜ್ರದ ವ್ಯಾಪಾರದಲ್ಲಿ ಹೆಸರು ಮಾಡಿದರು. ಸುಬ್ರಾಯ ಲಕ್ಷಣ ಶೇರ (ಎಸ್.ಎಲ್. ಶೇಟ) ಇವರಿಂದ ಹಲವಾರು ಜನರಿಗೆ ಕೆಲಸ ದೊರೆಯಿತು. ವಾಚು ತಯಾರಿಸಿದ ಉದ್ದಿಮೆಯಲ್ಲಿ ಪ್ರಸಿದ್ಧರಾದವರು ಮಂಗಳೂರಿನ ಶ್ರೀ ವಾಮನ ನಾಯಕ.

6.6 1868ನೇ ಇಸ್ವಿಯಲ್ಲಿ ಮಾನ್ಯ ಪಾಸ್ಕಲ ಅಲ್ಬಕರಾ "ಅಲ್ಬುಕಕ್ಕರ ಟಾಯ್ಲ್ಸ್ ಫ್ಯಾಕ್ಟರಿ ಪ್ರಾರಂಭಿಸಿದರು. ಇವರ ಕೆಂಪು ಹಂಚುಗಳು ಎಷ್ಟು ಪ್ರಸಿದ್ಧವಾದವು ಎಂದರೆ ಸರ್ಕಾರದ ಎಲ್ಲಾ ಇಮಾರತುಗಳಿಗೆ ಇದನ್ನೇ ಉಪಯೋಗಿಸಲು ಆದೇಶ ದೊರೆಯಿತು. ಮುಂಬಯಿ ವಿಕ್ಟೋರಿಯಾ ಟರ್ಮಿನಸ್ ಕಟ್ಟುವಾಗ ಇವೇ ಹಂಚುಗಳನ್ನು ಉಪಯೋಗಿಸಿದ್ದು ಇಂದಿಗೂ ಅವು ಆ ಇಮಾರತಿನ ತಲೆಯ ಮೇಲೆ ಶೋಭಿಸುತ್ತಿವೆ. 1878ರಲ್ಲಿ ಸಾಯಮನ್ ಆಲ್ವಾರಿಸ್ ಮುಂಬೈದಿಂದ ಮಂಗಳೂರಲ್ಲಿ ಹಂಚಿನ ಕಾರ್ಖಾನೆ ಪ್ರಾರಂಭಿಸಿದರು. ಮಂದೆ ಪಿ.ಎಫ್. ಎಕ್ಸ್ ನಾಲ್ಡಾನಾ ನೇತ್ರತ್ವದ ಸಲ್ಡಾನಾ ಟಾಯ್ಲ್ಯ ಲೋಬೋ ಕುಟುಂಬದ ಕಾಸ್ಮಿಯಾ ಟಾಯ್ಲ್ಯ ಕಂಪನಿ ಪಿಂಟೋ ಟಾಯ್ಲ ಹೀಗೆ ಹಲವಾರು ಕೊಂಕಣಿಗರ ಹಂಚಿನ ಕಾರ್ಖಾನೆಗಳಾದವು ಹಾಗೂ ಸಾವಿರಾರು ಜನರಿಗೆ ಉದ್ಯೋಗ ದೊರೆಯಿತು.

6.7 ಕೊಂಕ್ಣಿ ಜನ ಉದ್ಯಮದಲ್ಲಿ ಹೆಸರು ಮಾಡಿದ್ದರು. ತಮ್ಮ ಸ್ವಾರ್ಥವನ್ನು ಬಯಸದೇ ಬಂದ ಲಾಭದಲ್ಲಿ ಅಸಹಾಯಕರಿಗಾಗಿ ಸೇವೆ ಮಾಡಿದ್ದಾರೆ. ಅಂಥವರಲ್ಲಿ ರಾಷ್ಟ್ರವಾದಿ ವಿಚಾರವಾದಿ ಉದ್ಯಮಿ ಎಂ. ಗೋವಿಂದರಾವ್ ಭಟ್ಟರು ಬಟ್ಟೆಯ ಉದ್ದಿಮೆಯಲ್ಲಿ ಹೆಸರು ಮಾಡಿದ ಎ.ಆರ್. ಡಿಸೋಜಾ ರವರ ಉತ್ತಮ ವಿಚಾರ ಬಾಂಧವ್ಯದಿಂದ ಹಲವಾರು ಅಂಗಡಿಗಳು ಪ್ರಾರಂಭವಾದವು. ಅದರಂತೆ ಬಾಂಡೆಗಳಿಗಾಗಿ ಸೋಜಾ ಸಹೋದರರು ಜನರಿಗೆ ಉದ್ಯೋಗ ನೀಡಿದರು. ಅಂಗಡಿಗಳಾದ ಆಧುನಿಕ ಉದ್ಯಮದಲ್ಲಿ ಕೊಂಕ್ಣಿ ಜನ ಹಿಂದೆ ಬಿದ್ದಿಲ್ಲ. ಕಂಪ್ಯೂಟರ್ ತಂತ್ರಜ್ಞಾನದಲ್ಲಿ ಹೊಸದಿಸೆ ನೀಡಿದರೆಂದರೆ ನಂದನ ನೀಲೆಕೇಣಿ ಹಾಗೂ ಟಿ.ವಿ. ಮೋಹನದಾಸ ಪೈ ಅವರು ತಾವು ಉದ್ಯಮ ಪ್ರಾರಂಭಿಸುವುದರ ಜೊತೆಗೆ ಹಲವಾರು ಜನರಿಗೆ ಆ ಉದ್ಯಮಕ್ಕೆ ನೇರವಾದರು.

6.8 ಕೊಂಕ್ಣಿ ಜನರು ಎಲ್ಲಾ ಸೇವಾ ಕಾರ್ಯದಲ್ಲೂ ಮುಂದಿದ್ದು ಹೊಟೇಲ್ ಉದ್ಯಮದಲ್ಲಿ ತಾಜ್ ಹೊಟೇಲ್‌ವರೆಗೂ ಸೇವೆ ಸಲ್ಲಿಸಿದವರಿದ್ದಾರೆ. ರಂಗಪ್ಪ ಕಾಮತ ಕಳೆದ 60-70 ವರ್ಷಗಳ ಹಿಂದೆ ಹುಬ್ಬಳ್ಳಿಯಲ್ಲಿ ಸ್ಥಾಪಿಸಿದ್ದು ಇಂದು ಕಾಮತ ಹೊಟೇಲ್ ಹೆಸರಿನಿಂದ ಭಾರತ ಹಾಗೂ ಭಾರತದ ಹೊರಗೂ ಹೆಸರು ಮಾಡಿದೆ. ಇವರು ಮೂಲತ ಉ.ಕ. ಜಿಲ್ಲಾ ಶಿರಾಲಿಯವರು ಶ್ರೀ ಇನಾಸ್ ಫೆರೆ-ರಾ ಮಂಗಳೂರಲ್ಲಿ ಫೆರೆರಾ ಹೊಟೇಲ್ ಮಂಗಳ ಹೊಟೇಲ್ ಅದರಂತೆ ಹಲವಾರು ಸಿಹಿ ಪದಾರ್ಥಗಳನ್ನು ತಯಾರಿಸಿ ಮಾರಾಟ ಮಾಡಿದವರು ಹೆಚ್ಚಾಗಿ ಕೊಂಕಣಿಗರಿದ್ದಾರೆ. ಎಂ. ಡಿಸೋಜಾ ಎಂಡ್ ಸನ್ಸ್, ನಾಗ್ವೆಕರ್ ಬ್ರದರ್ಸ್, ಕೋಮಲ ಸ್ವೀಟ್ಸ್, ತಾಜಮಹಲ ಸ್ವೀಟ್ಸ್ ಆಯ್ಡಿಯಲ್ ಆಯಿಸ್ಕಮ ಪ್ರದೀಪ ಪೈರವರ ಹಂಗ್ಯೋ ಆಯ್ಸ್‌ಕ್ರೀಮ್ ಇತ್ತಿಚಿಗೆ ಪ್ರಸಿದ್ಧವಿದೆ.

**7. ಭಾರತೀಯ ಶಿಕ್ಷಣ ಹಾಗೂ ಸಂಶೋದನಾ ಕ್ಷೇತ್ರದಲ್ಲಿ ಕೊಂಕಣಿಗರು :**

7.1 ಭಾರತೀಯ ಇತಿಹಾಸ ಅಧ್ಯಯನದಲ್ಲಿ ಮೂಲ ಗಣಿತಶಾಸ್ತ್ರಿಯಾದ ದಾಮೋದರ ಧರ್ಮಾನಂದ ಕೋಸಾಂಬಿ1956 ಇಸಿಯಲ್ಲಿ ಎನ್ ಇಂಟ್ರೋಡಕ್ಸನ್ ಟು ದ ಇಂಡಿಯನ್ ಹಿಸ್ಟರಿ" ಪುಸ್ತಕ ಬರೆದು ಇತಿಹಾಸ ಅಧ್ಯಯನದಲ್ಲಿ ಹೊಸ ಅಧ್ಯಾಯ ಪ್ರಾರಂಭಿಸಿದರು. ಅವರಿಂದ ಹೊಸ ದಿಶೆ ದೊರೆಯಿತು. ಭಾರತೀಯ ಇತಿಹಾಸ ಅಧ್ಯಯನದಲ್ಲಿ ಮಹಾನ್ ರಾಷ್ಟ್ರೀಯವಾದಿ ಎಂದು ಖ್ಯಾತವರಾದ ರಾಮಕೃಷ್ಣ ಗೋಪಾಲ ಭಂಡಾರಕರ (ಆರ್.ಜಿ.ಭಾಂಡಾರಕರ) ಭಾರಿ ಇತಿಹಸದ ಸಂಶೋಧಕರ ಸಂಸ್ಕೃತ ಪಂಡಿತರೂ ಆಗಿದ್ದರು. ಶ್ರೇಷ್ಠರಾಗಿರದೇ ಒರಿಯಂಟ ಲಿಸ್ಟ್ ಜೋಸ ಗರ್ಸನ್ ದಕುನ್ಹ ಇವರು ಗೋವಾದಲ್ಲಿ ಜನಿಸಿದ್ದು ಪ್ರಾಗ ಇತಿಹಾಸ ವಾಸ್ತು ಶಾಸ್ತ್ರ ಭಾಶಾ ಶಾಸ್ತ್ರ, ಹಾಗೂ ನಾಣ್ಯ ಶಾಸ್ತ್ರದಲ್ಲಿ ಅವರ ದೇಣಿಗೆ ಬಹಳವಿದೆ. ಶ್ರೀ ಪ್ರಕಾಶ ಚಂಪು ಪಾಂಡುರಂಗ ಶಿರೋಡ್ಕರ ಶಿಕ್ಷಣ ತಜ್ಞರಾಗಿ ಪುರಾತತ್ವ ಅಧ್ಯಯನ ವಾಸುಶಾಸ್ತ್ರರ ಹಾಗೂ ಭಾರತ ಶಾಸ್ತ್ರಿಯಲ್ಲಿ (ಇಂಡೋಲಜಿ) ಮಹತ್ವದ ಅವರ ದೇಣಿಗೆಬಹಳವಿದೆ. ಅವರು ಸುಮಾರು 20 ಪುಸ್ತಕಗಳನ್ನು ಬರೆದಿದ್ದಾರೆ.

7.2 ಮೊ. ಸಬಸ್ತ್ರೆಯಾಂಬ್ ರುದಾಲ್ಫೋ ದಲ್ಗಾದ ಗೋವದಲ್ಲಿ ಜನಿಸಿದ್ದು, ಕೊಂಕ್ಣಿ ಪೊರ್ತುಗೀಜ ಅರ್ಥಕೋಶ ಹಾಗೂ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ದೊಡ್ಡ ಶಿಕ್ಷಾಶಾಸ್ತ್ರ ಹಾಗೂ ಭಾಷಾ ಪಂಡಿತರಾಗಿ ರೋಮಿ ಹಾಗೂ ದೇವನಾಗರಿಯಲ್ಲಿ ಬಹಳಷ್ಟು ಕೃತಿ ರಚಿಸಿದ್ದಾರೆ. ಭಾಷಾ ಶಾಸ್ತ್ರಜ್ಞ ಜೋಸ ಪೇರೇರಾ ಒಬ್ಬ ಶ್ರೇಷ್ಠ ಕೊಂಕಣಿ ಶಿಕ್ಷಣ ತಜ್ಞರು 24 ಮಹತ್ವದ ಅಧ್ಯಯನ ಪುಸ್ತಕ 145 ವಿವಿಧ ಸಂಶೋಧನಾ ಪ್ರಬಂಧ ಅವರು ಬರೆದಿದ್ದಾರೆ. 13 ಭಾಷೆ ಮಾತನಾಡುವ ಹಾಗೂ ಬರೆಯುವ ಕಲೆ ಅವರಲ್ಲಿತ್ತು ಅದರಂತೆ ಬಹುಭಾಷಾ ವಿದ್ವಾಂಸ ಹಾಗೂ ಭಾಷಾ ಶಾಸ್ತ್ರಜ್ಞ ಮಹಾನ್ ಪಂಡಿತ ಸುಮಿತ್ರ ಮಂಗೇಶ ಖತ್ರೆನ ಕೊಂಕಣಿ ಮರಾಠಿಯ ಉಪ ಭಾಷೆಯಲ್ಲಿ ಅದು ಸ್ವತಂತ್ರ ಭಾಷೆ ಎಂದು ವಾದ ಮಾಡಿದರು. ಹಾಗೂ ಅದಕ್ಕಾಗಿ ಬಹಳಷ್ಟು ಭಾರತೀಯ ಭಾಷೆಗಳ ಉಗಮ ಹಾಗೂ ಬೆಳವಣಿಗೆಯ

ಬಗ್ಗೆ ಅಧ್ಯಯನ ಮಾಡಿ ಅಂತರಾಷ್ಟ್ರೀಯ

ಖ್ಯಾತಿ ಪಡೆದರು. ಅದರಂತೆ ಕೊಂಕ್ಣಿ ವಿಷಯವಾಗಿ ಅಧ್ಯಯನ ಮಾಡಿದ ಪ್ರೊ. ಒಲಿವಿನ್ಹೋ ಗೋಮ್ಸ ಹಾಗೂ ಕನ್ನಡ ಶಿಕ್ಷಣ ಪೂರೈಸಿದ ಪ್ರೊ. ಎಡ್ವರ್ಡ ನ್ಹರೋನಾ ಸಮಾಜ ಶಾಸ್ತ್ರ, ಮಾನಶಾಸ್ತ್ರ ಭಾಷೆ ಹಾಗೂ ಸಂಸ್ಕೃತಿಯ ಬಗ್ಗೆ ಸಂಶೋಧನ ಅಧ್ಯಯನ ಮಾಡಿದರು. ಡಾ. ಸೂರ್ಯನಾಥ ಉಪೇಂದ್ರ ಕಾಮತ ಇವರು ಕರ್ನಾಟಕ ಇತಿಹಾಸ ಹಾಗೂ ಪರಂಪರೆಯ ಅಧ್ಯಯನ ಕ್ಷೇತ್ರದಲ್ಲಿ ನೀಡಿದ ದೇಣಿಗೆ ಬಹಳವಿದೆ. ಕರ್ನಾಟಕ ಗೆ.ಜೆ.ಟಿ ಯರದ ಸಂಪಾದಕರಾಗಿ ಅವರು 14 ವರ್ಷ ಸೇವೆ ಸಲ್ಲಿಸಿದ್ದಾರೆ.

7.3 ವಿಜ್ಞಾನ ಸಂಶೋಧನ ಕ್ಷೇತ್ರದಲ್ಲಿ ಜೆಜ್ವಿತ್ ಬಾಪ್ ಲಿಯೊ ಡಿಸೋಜಾರವರ ದೇಣಿಗೆ ಬಹಳವಿದೆ. ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಟ್ಟದ ಸಂಸ್ಥೆಗಳಲ್ಲಿ ಜೀವ ವಿಜ್ಞಾನ ಸಂಬಂಧ ಅವರ ಅಧ್ಯಯನದ ಮೇಲೆ ಸಂಪರ್ಕವಿದೆ. ಶ್ರೀ ಸೆಸಿಲಾ ಜೆ ಸಾಲ್ಡಾನಾ ಇವರು ಕರ್ನಾಟಕದ ಗಿಡಗಳ ಸಂಶೋಧನದಲ್ಲಿ ಜಾಗತಿಕ ಮಟ್ಟದಲ್ಲಿ ಹೆಸರು ಮಾಡಿದ್ದಾರೆ.

ಅದರಂತೆ ಭಾಷಾ ಶಾಸ್ತ್ರಜ್ಞ ವಿಲಿಯಮ್ ಮಾಡ್ತಾ ಕರ್ನಾಟಕದ ಇತಿಹಾಸ ಸಂಸ್ಕೃತಿ ಉದಯದಲ್ಲಿ ಸಂಶೋಧಕ ಮುಕುಂದಪ್ರಭು ಶಿಕ್ಷಣ ಸಂಶೋಧನೆ ಕ್ಷೇತ್ರದಲ್ಲಿ ಶಾಸನ ಅಧ್ಯಯನ ನಾಣ್ಯ ಅಧ್ಯಯನ ಮಾಡಿದ ಹೆಸರಾಂತ ಪದ್ಮಕರ ರಾಮಚಂದ್ರ ದುಭಾಷಿ ಅವರಿಗೆ ಪದ್ಮಭೂಷಣ ಪ್ರಶಸ್ತಿಯೂ ದೊರಕಿದೆ.

7.4 ಕೊಂಕಣಿಗರು ಶಿಕ್ಷಣ ಸಂಸ್ಥೆ ಕಟ್ಟುವಲ್ಲೂ ಹಿಂದೆ ಬೀಳಲಿಲ್ಲಾ . ಮಂಗಳೂರಿನ ಸಂತ ಲೂವಿಸ್ ಕಾಲೇಜು ವಿದೇಶಿಗರು ಪ್ರಾರಂಭಿಸಿದ್ದರು. ನಂತರ ಭಾರತದ ಕೊಂಕಣಿಗರ ಕೈಯಲ್ಲಿ ಅದರ ಆಡಳಿತ ಬಂದಿತು. ಹಾಗೂ ಇಂದು ಪ್ರಸಿದ್ಧವಾಗಿದೆ. ಅದರಂತೆ ಸಂತ ಆಗ್ನೇಸ್ ಕಾಲೇಜು ಇಂದು ಭಾರತದ ಹೆಸರಾಂತ ಶಿಕ್ಷಣ ಸಂಸ್ಥೆಯಾಗಿದೆ. ಅಕಾಡೆಮಿ ಆಫ್ ಜನರಲ್ ಎಜ್ಯುಕೇಶನ್ ಸಂಸ್ಥೆಯನ್ನು ಮಣಿಪಾಲದ ಪೈ ಸಹೋದರರು ಪ್ರಾರಂಭಿಸಿದರು. ಇಂದು ಪ್ರತಿಷ್ಠಿತ ಶಿಕ್ಷಣ ಸಂಸ್ಥೆಯಾಗಿದೆ. ಸುರತ್ಕಲಿನ ಪ್ರಸಿದ್ಧ ಶಿಕ್ಷಣ ಸಂಸ್ಥೆ ಕೆನರಾ ಶಿಕ್ಷಣ ಸಂಸ್ಥೆ, ಬಂಟ್ವಾಳದ ಎಸ್. ಎ. ಎಸ್ ಶಿಕ್ಷಣ ಸಂಸ್ಥೆ. ಶಿಕ್ಷಣ ಕ್ಷೇತ್ರದಲ್ಲಿ ಶ್ರೀಮತಿ ಗ್ರೇಸ್ ಪಿಂಟೊರವರ ಹೆಸರು ದೇಶವ್ಯಾಪ್ತಿ ಪ್ರಸಿದ್ಧವಾಗಿದೆ. ರಾಯನ್ ಇಂಟರ್‌ನ್ಯಾಶನಲ್ ಶಿಕ್ಷಾ ಸಂಸ್ಥೆ ಅವರು ನೀಡಿದ್ದು ಅವರ ಸೇವೆಗಾಗಿ ಹಲವಾರು ಪ್ರಶಸ್ತಿಗಳು ಅವರನ್ನೂ ಹುಡುಕಿ ಬಂದಿವೆ.

ಸಮಾಜ ಸೇವೆಯು ಶಿಕ್ಷಣದ ಸಾಲಿನಲ್ಲಿ ರೋಶನಿ ನಿಲಯ ಸ್ಕೂಲ್ ಆಫ್ ಸೋಶಿಯಲ್‌ರವರ ಹೆಸರುವಾಸಿಯಾಗಿದೆ. ಕಳೆದ 150 ವರ್ಷದ ಮೇಲ್ಪಟ್ಟು ಕ್ಯಾಥೋಲಿಕ ಸಂಸ್ಥೆಗಳು ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ನೂರಾರು ಶಾಲೆಗಳು ಶಿಸ್ತು ಬದ್ಧವಾಗಿ ನಡೆಯುತ್ತಲಿವೆ. ಕಾರವಾರ ಉತ್ತರಕನ್ನಡ ಜಿಲ್ಲೆಯಲ್ಲಿ ದಿನಕರ ದೇಸಾಯಿ ಸ್ಥಾಪಿತ ಕೆನರಾ ವೆಲಫೆರ ಟ್ರಸ್ಟ ವತಿಯಿಂದ ಉ.ಕ ಜಿಲ್ಲೆಯಲ್ಲಿ 15-20ಮಾಧ್ಯಮಿಕ ಶಾಲೆ ಹಾಗೂ ಕಾಲೇಜುಗಳಿವೆ. ಕಾರವಾರದ ಮಾಜಿ ಸಚಿವರಾದ ಶ್ರೀ ಪ್ರಭಾಕರ ರಾಣೆಯವರ ಬಾಪೂಜಿ ಗ್ರಾಮೀಣ ವಿಕಾಸ ಸಮಿತಿಯ ಹಲವಾರು ಶಾಲೆ ಕಾಲೇಜುಗಳು. ಕಾರವಾರ ತಾಲೂಕಿನ ಶಿವಾಜಿ ಶಿಕ್ಷಣ ಸಂಸ್ಥೆ ವಿವಿಧ ಶಾಲಾ ಕಾಲೇಜುಗಳು ಹಿಂದೂ ಹೈಸ್ಕೂಲ್ ಸೆಂಟ್ ಮೈಕಲ್, ಸೆಂಟ್ ಜೋಸೆಫ್, ವಿವೇಕಾನಂದ ಹೈಸ್ಕೂಲ್, ಮೋಡರ್ನ ಹೈಸ್ಕೂಲ್, ಮಾಡೆಲ್ ಹೈಸ್ಕೂಲ್ ಇತ್ಯಾದಿ.

7.5) ವಕೀಲ ವೃತ್ತಿಯಲ್ಲಿ ಕೆಲ ಹೆಸರಾಂತ ವಕೀಲರಾಗಿ ಹೋಗಿದ್ದಾರೆ. ಹಾಗೂ ಕೆಲ ನೆನಪಿನ ಛಾಪ ಮಾಡಿಸಿದ್ದಾರೆ. ಮಂಗಳೂರು ಮುನಸಿಪಾಲಿಟಿ ಚೆರಮನರಾಗಿದ್ದವರು. ಮುಂದೊಂದು ದಿನ ಮದ್ರಾಸ ಶಾಸನ ಸಭೆಯ ಸದಸ್ಯರಾಗಿ ಮೈಸೂರ ರಾಜ್ಯ ಪಾರ್ಲಿ ಮೆಂಟರಿ ಕಾರ್ಯದರ್ಶಿಯಾದ ಪೆವಲಿನ್ ಲುವಿಸ್ ಸಿಪ್ರಿಯನ್ ಪಾಯ್ಸ ಮುಂಬಯಿ ಹಾಯ್‌ಕೋರ್ಟಿನ ವಕೀಲರಾದ ಪಿ. ಎಸ್ ಕಾಮತ (ಕಾರವಾರ)

**8)ಭಾರತದ ಸಂಸ್ಕೃತಿ ಹಾಗೂ ಕ್ರೀಡಾ ಕ್ಷೇತ್ರದಲ್ಲಿ ಕೊಂಕಣಿಗರು**

8.1) ಭಾರತದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಕೊಂಕಣಿಗರು ಬಹಳ ಹೆಸರು ಮಾಡಿದವರಾಗಿದ್ದಾರೆ. ಹಾಗೂ ದೇಣಿಗೆ ನೀಡಿದವರಾಗಿದ್ದಾರೆ. ಶ್ಯಾಮ ಬೆನೆಗಲ್, ದಿಪೀಕಾ ಪಡುಕೋಣೆ, ಲೀನಾ ಚಂದಾವರಕರ, ಆಯ್ರಿನ್ ಡಿಕ್ರೂಜ್, ಜೆನೆಲಿಯಾ ಡಿಸೋಜಾ, ಲೀಶಾ ಕೊಪ್ಪಿಕರ, ಲತಾ ಮಂಗೇಶ್ಕರ, ಆಶಾ ಭೋಸಲೆ, ಅನುರಾಧಾ ಪೊಡವಾಲ, ಜಯಶ್ರೀ ಗಡಕರ ಹಲವಾರು ಪ್ರಸಿದ್ಧ ನಟನಟಿಯರು ಕೊಂಕಣಿಗರು ಎಂದು ಹೇಳಲು ಅಭಿಮಾನಿಸುತ್ತೇವೆ.

8.2) ಕನ್ನಡ ಚಲನಚಿತ್ರ ರಂಗಕ್ಷೇತ್ರದಲ್ಲಿ ಕೊಂಕಣಿಗರಾಗಿ ಉ.ಕ ಜಿಲ್ಲೆಯ ಶ್ರೀ ಅನಂತನಾಗ, ಶ್ರೀ ಶಂಕರನಾಗ, ಪಂಢರಿಭಾಯಿ, ಮೈನಾವತಿ, ಗಿರೀಶ ಕಾರ್ನಾಡ, ಕಾಸರಗೋಡ ಚಿನ್ನಾ, ವಾಸುದೇವ ಶಾನಭಾಗ ಮುಂತಾದವರು ತಮ್ಮ ಸೇವೆಯನ್ನು ಮಾಡಿದ್ದಾರೆ.

8.3) ಗೋವಾದ ಹಿಂದೂಸ್ಥಾನಿ ಸಂಗೀತಕಾರ ಜಿತೆಂದ್ರ ಅಭಿಷೇಕ ಲುವರ್ದಿನೊ ಬರೆಟ್ಟೊ, ಲೊಯಲಾಲೊಬೊ ಪ್ರಭು, ಗಾಯಕಿ ಸುಮನ ಕಲ್ಯಾಣಪುರ ಒಂದು ಸಾವಿರ ಕೊಂಕಣಿ ಹಾಡು, 250 ಸಂಗೀತ ಕಚೇರಿಗಳು, 40 ಕ್ಕೂ ಮೀರಿ ಸಿಡಿ ಕ್ಯಾಸೆಟ ಹೊರತಂದ ಗೋವಾದ ಪ್ರಸಿದ್ಧ ವಿಲ್ಫಿ ರೆಬಿಂಬಸಾಚೆಯ ಹೆಸರು ಅಮರವಾಗಿದೆ. ಪದ್ಮಶ್ರೀ ಪ್ರಶಸ್ತಿ ವಿಜೇತ ನಾಟಕ ಸಂಗೀತಕಾರ ಶಂಭು ಪ್ರಸಾದ ರಘುವೀರ ಸವ್ಕಾರ ಇತ್ಯಾದಿಗಳು.

8.4) ಭಾರತವಲ್ಲದೇ ಪರದೇಶದಲ್ಲಿ ಹೆಸರು ಮಡಿದ ಹಿಂದುಸ್ಥಾನಿ ಸಂಗೀತಕಾರರಾದ ಕಿಶೋರಿ ಅಮೋಣಕರ, ನೃತ್ಯದಲ್ಲಿ ಮಾಯಾರಾವ ವಿಶ್ವ ಕೊಂಕಣಿ ಕಲಾರತ್ನ ಏರಿಕ್ ಓರಭಾರಿಯೊ ( ಮಾಂಡಸೋಬಾಣ

ಸಂಸ್ಥಾಪಕರು)

8.5) ಯಕ್ಷಗಾನ-ಗೊಂಬೆಯಾಟದಲ್ಲಿ ಉಪ್ಪಿನಕುದ್ರು ಕೊಗ್ಗ ಕಾಮತ ಮೈಸೂರ ಸಂಸ್ಥಾನದ ಸಂಗೀತ ವಿದ್ವಾನ ಕಾರ್ಕಳದ ಬಿಡಾರು ಕೃಷ್ಣಪ್ಪ. ನಾಟಕ ಸಂಗೀತ ಕಲೆಯಲ್ಲಿ ಮಾನ್ವೆಲ್ ಸಂತಾನ ಆಗುಯೆರ್ ಜಗತ್ಪ್ರಸಿದ್ಧ ಗಾಯಕ ರೆಮೊ ಫರ್ನಾಂಡೀಸ್ ಪದ್ಮಶ್ರೀ ಪ್ರಶಸ್ತೀ ವಿಜೇತರೂ ಹೌದು. ಶಿಲ್ಪ ಕಲಾಕಾರ ರೆಂಜಾಳ ಗೋಪಾಲ ಶೇಣೆಯ.

8.6) ಪದ್ಮಶ್ರೀ ಪ್ರಶಸ್ತಿ ವಿಜೇತ ದೇಶದ ಪ್ರಸಿದ್ಧ ಅಮೂರ್ತ ಕಲವಿದರಾದ ಶ್ರೀ ವಾಸುದೇವ ಎಸ್ ಗಾಯ್ತುಂಡೆ ನಾಗ್ಪೂರದಲಿ

ಜನನ ಸರ್ ಜೆ ಜೆ ಸ್ಕೂಲ್ ಆಫ್ ಆರ್ಟದಿಂದ ಕಲಾ ಶಿಕ್ಷಣ ಪ್ರಾಪ್ತ ಮಾಡಿ ಕಲೆಯ ವಿವಿಧ ಪ್ರಕಾರದಲ್ಲಿ ಪ್ರಯೋಗ ಮಾಡಿ ಪ್ರಸಿದ್ಧರಾದವರು.

8.7) ಟೇನಿಸ್ ಆಟದಲ್ಲಿ ಹೆಸರಾಂತ ಗೋವಾದ ಲಿಯಾಂಡರ ಪಾಯ್ಸ ರಾಜೀವಗಾಂಧಿ ಖೆಲರತ್ನ, ಪದ್ಮಭೂಷಣ ಪ್ರಶಸ್ತಿ ವಿಜೆತರಾದ ಅವರು ಕೊಂಕಣಿಗರು. ದಿಲೀಪ ಸಂದೇಸಾಯಿ, ಅಂತಾವ್ಯೆ ಡಿಸೋಜಾ, ಸಪ್ನೀಲ ಅಸ್ನೋಟಿಕರ, ಸುನೀಲ ಗವಾಸ್ಕರ, ದಿಲೀಪ ವೆಂಗಾಕರ, ಸಚೀನ ತೆಂಡೂಲ್ಕರ ಈ ಕ್ರಿಕೆಟ್ ದಿಗ್ಗಜರೆಲ್ಲ ಕೊಂಕಣಿ ಭಾಷಿಕರು. ಬ್ರಹ್ಮಾನಂದ ಸಾಂತ್ವಾಳಕರ ಹಾಗೂ ಬ್ರುನೋ ಕುಟಿನೂ ಇವರಿಗೆ ಅರ್ಜುನ ಪ್ರಶಸ್ತಿ ಲಭಿಸಿದೆ.

8.8) ಆಲ್ ಇಂಗ್ಲೆಂಡ್ ಬ್ಯಾಡ್‌ಮಿಂಗಟನ್ ಪ್ರಶಸ್ತಿ ವಿಜೇತರಾದ ಶ್ರೀ ಪ್ರಕಾಶ ಪಡುಕೋಣೆ(ದೀಪಿಕಾ ಪಡುಕೋಣೆ ತಂದೆ) ಮಿಸ್ಟರ್ ಯುನಿವರ್ಸ ರೇಮಂಡ ಡಿಸೋಜಾ , ಈಜಿನಲ್ಲಿ ಸಾಹಸ ತೋರಿದ ಗೋಪಾಲ ಖಾರ್ವಿ, ದೇಹಧಾಡ್ಯ ಪ್ರದರ್ಶನದಲ್ಲಿ ಜಾಗತಿಕ ದಾಖಲೆ ಮಾಡಿದ ರೋಷನ್ ಫೆರಾವೊ ಹಾಗೂ ವಿನ್ಸೆಂಟ ಕಾರ್ಲೊ. 1952 ರ ಓಲಂಪಿಕ್‌ದಲ್ಲಿ ಭಾಗವಹಿಸಿದ ಜ್ಯಾಕ್ ಬ್ರಿಟ್ಟೊ ಹಾಕಿ ಆಟಗಾರ ಜೆ.ಎಮ್ ಕಟ್ಟಲೋಕ (ಅರ್ಜುನ ಪ್ರಶಸ್ತಿ ವಿಜೇತ) ಲಂಡನ್ ಓಲಂಪಿಕ್ಸ 1948 ರಲ್ಲಿ ಉತ್ತಮ ಗೋಲ್‌ಕೀಪರ್ ಎಂದು ಹೆಸರುವಾಸಿ ಲಿಯೋ ಪಿಂಟೋ ಇವರೆಲ್ಲ ಕೊಂಕಣಿಗರು.

8.9) ಕೊಂಕಣಿ ಮಿಮಿಕ್ರಿ :- ಕಾರವಾರ (ಉ.ಕ. ಜಿಲ್ಲೆ) ಸದಾಶಿವಗಡದ ಡಾ. ವಸಂತ ಬಾಂದೇಕರ ಕೊಂಕಣಿ ಪ್ರತಿಭಾ ಸ್ಪರ್ಧೆಯಲ್ಲಿ (1993) ರಾಜ್ಯಕ್ಕೆ ಪ್ರಥಮ. ರಾಜ್ಯ ಮಟ್ಟದ ಅತ್ಯುತ್ತಮ ನಟ ಪ್ರಶಸ್ತಿ, ರಾಷ್ಟ್ರಮಟ್ಟದಲ್ಲಿ ದ್ವಿತೀಯ ಪ್ರಶಸ್ತಿ, ರಾಜ್ಯ ಕೊಂಕಣಿ ಅಸಾಧಾರಣ ವ್ಯಕ್ತಿ ಪ್ರಶಸ್ತಿ, 30 ವಿವಿಧ ಸಂಗೀತ ವಾದ್ಯಗಳ ಅನುಕರಣೆಗೆ ಗಿನ್ನಿಜ್ ದಾಖಲೆ ಹಾಗೂ 58 ವರ್ಷ ನಿರಂತರ ಕಲಾಸೇವೆಗಾಗಿ ಯುನಿವರ್ಸಿಟಿ ಆಫ್ ಸೌಥ ಅಮೆರಿಕಾದಿಂದ ಗೌರವ ಡಾ-ಕ್ಟರೇಟ ಪ್ರಶಸ್ತಿ ಪಡೆದ ಏಕೈಕ ಕೊಂಕಣಿ ಕಲಾವಿದ . ಕಳೆದ 33 ವರ್ಷದೀಂದ 100 ನಿಮಿಷ ತಡೆರಹಿತ ಏಕ ವ್ಯಕ್ತಿ. ಕೊಂಕಣಿ ಹಾಸ್ಯ ಕಲಾ ಪ್ರದರ್ಶನದ ಮೂಲಕ ಮಹಾರಾಷ್ಟ್ರ, ಗೋವಾ, ಕೇರಳ, ಕರ್ನಾಟಕ ರಾಜ್ಯದ ಸುಮಾರು 1300 ಸಂಘಟನೆ ವತಿಯಿಂದ ಕೊಂಕಣಿ ಯಶಸ್ವಿ ಕಾರ್ಯಕ್ರಮ ಹಾಗೂ ವಿವಿಧ ಸನ್ಮಾನ ಸತ್ಕಾರಗಳು. ಇವರಂತೆ ಬೆಂಗಳೂರಿನ ರಿಚಾರ್ಡ ಲುಯಿಸ್ ಹಾಗೂ ಮಂಗಳೂರಿನ ಶ್ರೀಮತಿ ಸಂಧ್ಯಾ ಶೆಣೈ ಪ್ರಸಿದ್ಧರಾಗಿದ್ದಾರೆ.

8.10) ವಿವಿಧ ಭಾಷಿಕ ಸಿನೇಮಾದಲ್ಲಿ ಕೊಂಕಣಿ ಕಲಾವಿದರು

01) ಅಮೃತಾರಾವ್, 02) ಅನಂತನಾಗ, 03) ಅಂತೋನಿ ಡಿಸೋಜಾ, 04) ಅಂತೋನಿ ಗೊನ್ಸಾಲ್ವಿಸ್, 05) ಆಶಾಲತಾ

ವಾಜಗಾಂವಕರ, 06 ) ಅಶೋಕ ಸರಾಫ, 07) ಭಾಸ್ಕರ ಚಂದಾವರಕರ, 08) ಚಂದ್ರಕಾಂತ ಕಾಕೋಡಕರ್ 09) ದತ್ತರಾಮ ವಾಡಕರ, 10) ದುರ್ಗಾ ಖೋಟೆ, 11) ಪ್ರೆಡ್ಡಾ ಪಿಂಟೊ, 12) ಗಿರೀಶ ಕಾರ್ನಾಡ, 13) ಗ್ಲೆನಬೆರೆಟ್ಟೊ, 14) ಗುರುದತ್ತ, 15) ಹೇಮಾ ಸರದೇಸಾಯಿ, 16) ಹೃದಯನಾಥ ಮಂಗೇಶಕರ, 17) ಇಲಿಯನ್ ಡಿ ಕ್ರೂರರು 18) ಜಯಶ್ರೀ, 19) ಜಯಶ್ರೀ ಗಡಕರ, 20) ಕಾನನ ಕೌಶಲ, 21) ಕಾಶ್ಮೀರ ಶಾಹಾ, 22) ಲತಾ ಮಂಗೇಶಕರ,

23) ಲಾರೆನ್ಸ ಡಿಸೋಜಾ, 24) ಲೊಂಗಿನಸ್ ಫನ್, 25) ಮಂಡೇನಾ ರೆಬೆಲ್ಲೊ, 26) ಮೀನಾ ಮಂಗೇಶಕರ,

27) ಮನೋರಮಾ ವಾಗಳೆ, 28) ಎನ್. ಚಂದ್ರಾ, 29) ಎನ್. ದತ್ತಾ, 30) ರಾಕ್ ಗೊನ್ಸಾಲ್ವಿಸ್, 31) ಸಚಿನ ಪಿಳಗಾಂವಕರ, 32) ಸೆಬಿಸ್ಟಿಯನ್, 33) ಶಂಕರನಾಗ, 34) ಸುದೇಶ ಭೋಸಲೆ, 35) ಉಷಾ ಮಂಗೇಶಕರ, 36) ವರ್ಷಾ ಎಜಗಾಂವಕರ, 37) ಆಶಾ ಭೋಸಲೆ, 38) ಫಂಡರಿಬಾಯಿ, 39) ಅನುರಾಧಾ ಪೊಡವಾಳ, 40) ಮೈನಾವತಿ, 41) ಕಾಸರಗೋಡ ಚಿನ್ನಾ.

**9) ಭಾರತೀಯ ವೈದ್ಯಕೀಯ ಹಾಗೂ ತಾಂತ್ರಿಕ ಕ್ಷೇತ್ರದಲ್ಲಿ ಕೊಂಕಣಿಗರು**

9.1) ದೊ.ಟಿ.ಎಂ.ಎ. ಪೈ ಯವರು ಸುರತ್ಕಲದಲ್ಲಿ ಸ್ಥಾಪಿಸಿದ ಕಸ್ತೂರಬಾ ಮೆಡಿಕಲ್ ಕಾಲೇಜು ಇಂದು ಜಗತ್ಪ್ರಸಿದ್ಧ ವೈದ್ಯಕೀಯ ಶಿಕ್ಷಣ ಕೇಂದ್ರವೆಂದು ಖ್ಯಾತಿ ಪಡೆದಿದೆ. ಶಿವಮೊಗ್ಗದಲ್ಲಿ ಅಪ್ಪು ಅಶೋಕ ಪೈ ಯವರು ಮಾನಸಿಕ ಚಿಕಿತ್ಸೆ ಕೇಂದ್ರದಿಂದ ಚಿರಪರಿಚಿತರು ಹಾಗೂ ಅದಕ್ಕೆ ಸಂಬಂಧಿಸಿದ ಹಲವಾರು ಪುಸ್ತಕ ಬರೆದಿದ್ದಾರೆ. ಅವರ ಒಂದು ಪುಸ್ತಕ ಕಾಡಿನ ಬೆಂಕಿ ಯಶಸ್ವಿ ಹೆಬಳಕರ ನಿರ್ದೇಶನದ ಚಿತ್ರವೂ ಆಗಿದೆ.

9.2) ಮಂಗಳೂರಿನ ಫಾದರಮುಲ್ಲಾ ಆಸ್ಪತ್ರೆಯ ಡಾ. ಲೋರ್‍ಯಾಬ ಇವರೆಲ್ಲ ಕೊಂಕಣಿ ಭಾಷಿಕರು.

ಹೈದ್ರಾಬಾದದಲ್ಲಿ ಜನಿಸಿದ ಚಾರ್ಲ್ಸ್ ಕೊರಿಯಾ ಕಟ್ಟಡ ವಿನ್ಯಾಸ ತಂತ್ರಜ್ಞಾನದಲ್ಲಿ ಹೆಸರುವಾಸಿಯಾದ ಕೊಂಕಣಿ ವ್ಯಕ್ತಿ. ಇವರ ಉತ್ರಮ ನಾಗರೀಕರಣ ವ್ಯವಸ್ಥೆಗಾಗಿ ಪದ್ಮಶ್ರೀ ಪ್ರಶಸ್ತಿ ಅಲ್ಲದೇ ಹಲವಾರು ಅಂತರಾಷ್ಟ್ರೀಯ ಪ್ರಶಸ್ತಿಗಳೂ

ಲಭಿಸಿವೆ. ಅವರಂತೆ ರಾಸಾಯನಿಕ ತಂತ್ರಜ್ಞಾನದಲ್ಲಿ ಪ್ರಸಿದ್ಧಿ ಪಡೆದವರೆಂದರೆ ರಘುನಾಥ ಅನಂತ ಮಶೇಲ್ಕರ ಮುಂದೆ ಭಾರತದ ಪ್ರಧಾನಿಮಂತ್ರಿಗಳ ವಿಜ್ಞಾನ ಸಲಹಾ ಸಮಿತಿ ಸದಸ್ಯರಾದರು. ಹಾಗೂ ನಂತರ ಭಾರತದ ಕಪ್ನಸಿಲ್ ಫಾರ್ ಸಾಯ್ಟಿಪಿಕ್ ಎಂಡ್ ಇಂಡಸ್ಟ್ರೀಯಲ್ ರಿಸರ್ಚನ ಅಧ್ಯಕ್ಷರೂ ಆದರು. ಶ್ರೀ ಫ್ರೊಮ್ಲಾನೊ ಡೆಮೆಲ್ಲೊ ಸೂಕ್ಷ್ಮ ಜೀವಿ ಸಂಶೋದನದಲ್ಲಿ ಹೆಸರು ಮಾಡಿದರು.

**10) ಭಾರತೀಯ ತತ್ವಶಾಸ್ತ್ರ, ಆಧ್ಯಾತ್ಮಿಕತೆ ಹಾಗೂ ಧಾರ್ಮಿಕ ಕ್ಷೇತ್ರದಲ್ಲಿ ಕೊಂಕಣಿಗರು**

10.1) ಭಾರತವು ಆದ್ಯಾತ್ಮೀಕತಾ ಹಾಗೂ ಧಾರ್ಮಿಕ ಪರಪಂರೆಯಿಂದ ತುಂಬಿದ ಅತೀದೊಡ್ಡ ದೇಶವಾಗಿದೆ. ಇಂಥ ಪವಿತ್ರ ರಾಷ್ಟ್ರದಲ್ಲಿ ಕೊಂಕಣಿಗರೂ ಸಹಿತ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಬೆಳೆಯಲು ಶ್ರಮಿಸಿದ್ದಾರೆ. ಸಂತ ಜುಜೆವಾರಭ್ ಶ್ರೀಲಂಕಾ ಹಾಗೂ ಕ್ಯಾನರಾ ಭಾಗದಲ್ಲಿ ಧರ್ಮ ಪ್ರಚಾರ ಮಾಡಿದರು. ಸಂತ ಗೊನ್ಸಾಲೊ ಗಾರ್ಸಿಯಾ ಭಾರತದ ಪ್ರಥಮ ಸಂತರೆಂದು ಪ್ರಸಿದ್ಧರಾಗಿದ್ದಾರೆ. ಅವರಂತೆ ಫಾದರ ಆಗ್ನೇಲೋ, ಮೊ. ರೇಮಂಡ್ ಪ್ರಾನ್ಸಿಸ್, ಕಮೇಲಿಯಸ್ ಮಸ್ಕಾರನ್ಹೆಸ್, ಇವರೆಲ್ಲ ಸಂತರೆನಿಸಿಕೊಂಡಿದ್ದಾರೆ. ಇವರು ಧರ್ಮ ಪ್ರಚಾರ ಹಾಗೂ ಶಿಕ್ಷಣ ಪ್ರಚಾರದಲ್ಲಿ ತಮ್ಮನ್ನೂ ತೊಡಗಿಸಿಕೊಂಡರು. ಜೊತೆಗೆ ಸಾಹಿತ್ಯ ರಚಿಸಿ ಅನುವಾದ ಮಾಡಿ ಜನರಿಗೆ ಸಾರಿದರು. 10.2) ವಾಣಿಕಾನದಲ್ಲಿ ನಡೆದ ಎರಡನೆಯ ವಿಶ್ವಸಭೆಯ ವಿಚಾರಗೋಷ್ಟಿಯಲ್ಲಿ ಜನರ ಭಾಷೆಯನ್ನು ಧಾರ್ಮಿಕ ವ್ಯವಸ್ಥೆಗೆ ತರುವಲ್ಲಿ ಯಶಸ್ವಿಯಾದ ಬಿಸ್ಟ ಬಾಜಿಲ್ ಸಾಲ್ಟದೋರ ಸೊಜನ ಇವರು ಧರ್ಮದ ವ್ಯವಸ್ಥೆ ಜೊತೆಗೆ ಸಾಮಾಜಿಕ ಹಾಗೂ ಶೈಕ್ಷಣಿಕ ಪರಿವರ್ತನೆಯ ಕೆಲಸ ಮಾಡಿದರು. ಅದೇ ಕಾರಣದಿಂದ ದ.ಕನ್ನಡದಲ್ಲಿ ಹಲವಾರು ಶಾಲೆಗಳು ಬೆಳೆದವು. ದಾಸವಾಣಿಯಲ್ಲಿ ಹೆಸರಾಂತ ವಾಗ್ಮಿ ಕೀರ್ತನಕಾರರಾದ ಭದ್ರಗಿರಿ ಅಚ್ಯೂತ ದಾಸರು ತಮ್ಮ ಧಾರ್ಮಿಕ ಸೇವೆಯಿಂದ ಚಿರಪರಿಚಿತರಾದರು. ದೇಶ-ವಿದೇಶದಲ್ಲಿ ಅವರು ಧರ್ಮ ಸಂದೇಶ ಜನರವರೆಗೆ ತಲುಪಿಸಿದರು. ಸುಮಾರು 50 ವರ್ಷ ಅವರು ಸೇವೆ ಸಲ್ಲಿಸಿದ್ದಾರೆ. ಅದರಂತೆ ಹರಿಕಥಾ ಮಾಧ್ಯಮದಿಂದ ಹೆಸರು ಮಾಡಿದ ಭದ್ರಗಿರಿ ಕೇಶವದಾಸರು.

ಗೋವಾದಲ್ಲಿ ಬಾಪ್ ಅಂತೊನಿಯಾ ಲುಯಿಸ್ ಪಿರೇರಾ ಸಹಿತ ಧಾರ್ಮಿಕ ಬೆಳವಣಿಗೆಗೆ ಸಹಕಾರ ನೀಡಿದ್ದಾರೆ. ಸುಮಾರು 25 ಕ್ಕಿಂತ ಹೆಚ್ಚು ಧಾರ್ಮಿಕ ಪುಸ್ತಕಗಳನ್ನು ರಚಿಸಿ ಪ್ರಸಾರಮಾಡಿದ್ದಾರೆ. ಧಾರ್ಮಿಕ ಕ್ಷೇತ್ರದಲ್ಲಿ ಜನರನ್ನೂ ಆಕರ್ಷಿಸಲು ಆಧ್ಯಾತ್ಮಿಕವಾಗಿ ವಲವು ಬರಲು ನಿರಂತರ ಪ್ರಯತ್ನ ಮಾಡಿದ ಮಮ್ಮದ ಮೀರಾನ ಸಿದ್ದಿಕ್ ಪವಿತ್ರ ಖುರಾನದ ಅಂಶಗಳನ್ನು ತನ್ನ ರೀತಿಯಲ್ಲಿ ಸಾರಿದನು. ಅದರಂತೆ ಸಂಸ್ಕೃತದಲ್ಲಿ ಬ್ರಹ್ಮಸೂತ್ರ ಹಾಗೂ ಉಪನಿಷತ್, ವೇದಾಂತಶಾಸ್ತ್ರ ಹಾಗೂ ಕಾಲೀಶ ಸಿದ್ದಾಂತ ನೀಡಿದ ಕೊಚ್ಚಿಯ ಪಂಡಿತ ಅನಂತ ಶರ್ಮ ಶಾಸ್ತ್ರಿ ಹಾಗೂ ಪವಿತ್ರ ಪುಸ್ತಕದ ಭಾಷಾಂತರ ರೋಮಿ ಕೊಂಕಣಿಯಲ್ಲಿ ಮಾಡಿ ಪ್ರಸಿದ್ಧರಾದ ಬಾಪ್ ವಾಸ್ಕೊ ದೆ ರೇಗೋ ಇವರೆಲ್ಲ ಕೊಂಕಣಿಗರು.

10.3) ಅಂದಾಜು 5 ಶತಮಾನದಲ್ಲಿ ಸಾವಿರಾರು ಜನ ಕೊಂಕಣಿಗರು ಧರ್ಮ ಪ್ರಚಾರ ಕಾರ್ಯದಲ್ಲಿ ತೆ-ಡಗಿದ್ದರು. ಹಾಗೂ ಜನರ ಮನಸ್ಸಿನಲ್ಲಿ ಇಂದಿಗೂ ಸಂತರಾಗಿ ಉಳದಿದ್ದಾರೆ. ಶ್ರೀ ಆಯ್ವರಿ ಕೊಸ್ತಾಂತ ನುನ್ಸಿಯಾ (ಆಂಬ್ರೊಸಮಾಡ್ತ) ಕಾಡ್ರಿನಲ್ ಆಯ್ವನ ಡಾಯಿಸ್, ಕಾಡ್ಡಿನಲ್ ಏಲೇರಿಯನ್, ಗ್ರಾಸಿಯಸ್ ಕಾಡ್ಡಿನಲ್ ಒಸ್ವಾಲ್ಡ ಗ್ರಾಸಿಯಸ್ ಕಾಡ್ಡಿನಲ್, ಜೊಸೆಫ್ ಕೋರ್‍ಡೆರೊ ಇವರೆಲ್ಲ ಬಹಳ ಸೇವೆ ಮಾಡಿದ್ದಾರೆ.

**11) ಭಾರತದ ಸಮಾಜ ಸೇವಾ ಕ್ಷೇತ್ರದಲ್ಲಿ ಕೊಂಕಣಿಗರು**

11.1) ಸಮಾಜ ಸೇವೆಗಾಗಿ ಕೊಂಕಣಿಗರು ಸ್ವತಃ ಚಿರಪರಿಚಿತರು. ಭಾರತದ ಸ್ವತಂತ್ರ ಸಂಗ್ರಾಮದಲ್ಲೂ ಗೋವಾದಿಂದ ಪೋರ್ಚುಗೀಸರನ್ನು ಓಡಿಸುವ ಚಳುವಳಿ ಸಂದರ್ಭದಲ್ಲೂ ಸಾವಿರಾರು ಕೊಂಕಣಿಗರು ತಮ್ಮ ಸಮಾಜ ಸೇವೆಯ ಕಾರ್ಯವೈಖರಿ ಜಗತ್ತಿಗೆ ಸಾರಿದ್ದಾರೆ. ಕೇರಳದ ಶ್ರೀ ರಂಗಾರಾವ ಇವರು ಸಮಾಜ ಸೇವೆಗೆ ಪ್ರಸಿದ್ಧರಾಗಿ ಹೋದರು. ಪ್ರತಿಯೊಬ್ಬರೂ ದೂರಮಾಡಿದ ದಲಿತಸಮುದಾಯದ ಜನರಿಗೆ ತನ್ನ ಸರ್ವ ಆಸ್ತಿಯನ್ನು ನೀಡಿ ತ್ಯಾಗಿಯಾದರು. ಹಾಗೂ ಅವರ ಏಳಿಗೆಗಾಗಿ ಹಗಲು-ರಾತ್ರಿ ದುಡಿದು ಹಲವಾರು ಕುಟುಂಬದ ಆಶಾಕಿರಣವಾಗಿ ಉಳದರು.

11.2) ಫಯ್ಯಲಿ ನಗರ, ವೀರನಗರ, ಬಜಾಲದಲ್ಲಿ ಸಾವಿರಾರು ಕುಟುಂಬದವರಿಗೆ ಆಧಾರ ಸ್ಥಂಭವಾಗಿ ಹೆಸರು ವಾಸಿಯಾದ ಬಾಪ್ ಏಲೇರಿಯನ್ ಡಿಸೋಜ ಇಂದಿಗೂ ಸಾವಿರಾರು ಜನರ ಬಾಯಲ್ಲಿ ಉಳದಿದ್ದಾರೆ. ಅದರಂತೆ ಸಮಾಜ ಸೇವಕಿ ಸಿಸ್ಟರ್ ಮರಿಯಾ ಗೊರಟ್ಟ ಹೊನ್ನಾವರದ ಮಿಸ್ ಓಲಿಂಡಾ ಪಿರೇರಾ ಸಮಾಜ ಸೇವಕಿಯಾಗಿ ಲಕ್ಷಾಂತರ ಜನರ ನೆನಪಿನಲ್ಲಿದ್ದಾರೆ.

ಸೆಲಿನ ನರೇನ್ಹಾ , ರೀಟಾ ನರೇನ್ಹಾ ಈ ಮಹಿಳೆಯರು ಮಾತುಬಾರದ ಅಪಂಗರಿಗಾಗಿ ಸಂಸ್ಥೆಯನ್ನು ಹುಟ್ಟುಹಾಕಿ ಸಂಘಟಿಸಿ ಅವರಿಗೆ ನೀಡಿದ ಸೇವೆ ಶ್ಲಾಘನೀಯವಾಗಿದೆ. ಅದರಂತೆ ಮಂಗಳೂರಿನ ಮೇಯರ್ ಜುಡಿತ್ ಮಸ್ಕಾಂನೆಸ್ ತಮ್ಮ ಆಳ್ವಿಕೆಯಲ್ಲಿ ಉತ್ತಮ ಸಮಾಜ ಸೇವೆ ಮಾಡಿದರು. ಮೊ. ಪ್ರಾನ್ಸಿಸ್ ಎಲಿಯಾಸ್ ಡಿಸೋಜಾರವರು ಅನಾಥರಿಗಾಗಿ ಒಂದು ಶಾಲೆ ತೆರೆದು ಹಗಲು ರಾತ್ರಿ ಸೇವೆ ಮಾಡಿದರು. ಹಾಗೂ ಮೊ. ಎಡ್ವಿನ್ ಪಿಂಟೇರವರು ಸುವ್ಯವಸ್ಥಯ ಆಧುನಿಕ ವ್ಯವಸ್ಥೆ ಮಾಡಿದರು. ಮೊ. ಮರಿಯಾಣ ಪ್ಲಾಸಿಡ್ ಕುಲಸಾರ ನೇತೃತ್ವದ 120 ವರ್ಷದ ಹಿಂದಿನ ಸಾಂತ ಅಂತೋನಿ ಆಶ್ರಯ ಸಂಸ್ಥೆ ಸಾವಿರಾರು ನಿರ್ಗತಿಕರಿಗೆ

ಮನೆ ನೀಡಲಾಗಿದೆ. ಆಗ ಜಾತಿ-ನೀತಿ ಯಾವುದೂ ಇಲ್ಲದೆ ಎಲ್ಲರೂ ಸಮಾನತೆಯಿಂದ ಬಾಳಿದ್ದರು.

11.3) ಮಂಗಳೂರಲ್ಲಿ ಜನಿಸಿದ ಪಂಡಿತ ತಾರಾನಾಥ ಜನತಾ ಜನಾರ್ಧನ ಸೇವೆ ಮಾಡಿ ರಾಷ್ಟ್ರೀಯ ಹೆಸರಾಂತ ಸಮಾಜಸೇವಕರಾಗಿದ್ದಾರೆ ಹೈದ್ರಾಬಾದ್ ನಿಜಾಮ ಸರ್ಕಾರದ ವಿರುದ್ಧ ಅವರು ಸಂಘರ್ಷ ಮಾಡಿದರು. ಹಲವಾರು ಗ್ರಂಥಗಳನ್ನು ರಚಿಸಿದ್ದಾರೆ. ಕ್ರಮೇಣ ಆಧ್ಯಾತ್ಮಿಕತೆಗೆ ಪರಿವರ್ತನೆಯಾದರು. ಹಾಗೂ ಬಡ-ಅನಾಥ ಜನರಿಗೆ ಸಹಕಾರಿಯಾದರು. ಅವರಂತೆ ಸಮಾಜ ಸೇವೆಗಾಗಿ ಅಂತರಾಷ್ಟ್ರೀಯ ಹೆಸರು ಮಾಡಿದವರೆಂದರೆ ಆಸ್ಟಿನ ಡಿಸೋಜಾ ಪ್ರಭು ಅವರು ಲಯನ್ಸ ಜಿಲ್ಲೆ-1 ಚಿಕ್ಯಾಗೋದ ಅಧ್ಯಕ್ಷರಾಗಿರುವ ಭಾಗ್ಯ ಅವರಿಗೆ ಲಭಿಸಿದೆ. ಅವರಂತೆ ಜನರಿಗೆ ಅವರ ಹಕ್ಕನ್ನು ನೀಡುವ ಅದೂ ಸಂವಿಧಾನಿಕವಾಗಿ ಕಾರ್ಯಮಾಡಿದವರು ಎಂ. ರಂಗಾ ಪೈ ರವರು ಅಗ್ರಮಾನ ಸಮಾಜ ಸಂಘಟಕರಾಗಿ ಫಾರ್ಮ ಆಫ್ ಫ್ರೀ ಎಂಟರ್‌ಪ್ರೈಸಸ್ ಹಾಗೂ ವಿವಿಧ ಸಂಘಟನೆ ಮೂಲಕ ಜನರಿಗೆ ಅವರ ಹಕ್ಕು ನೀಡಲು ಶ್ರಮಿಸಿದ್ದಾರೆ.

11.4) ಹಲವಾರು ಕೊಂಕಣಿಗರು ಸಮಾಜ ಸೇವೆಯಲ್ಲಿ ಎಲೆಮರಿಕಾಯಿಯಾಗಿ ಉಳಿದಿದ್ದಾರೆ. ಅಂಥವರಲ್ಲಿ ಬಿಲ್ಡರ್ ಡಾ. ಪಿ. ದಯಾನಂದ ಪೈ ಹಾಗೂ ಸಹೋದರ ಸತೀಷ ಪೈ, ಅನಿವಾಸಿ ಉದ್ಯಾಮಿ ಶ್ರೀ ರೋನಾಲ್ಡ ಕೊಲಾಸೊ, ಶ್ರೀ ಮಾಯರಲ್ ಡಿಸೋಜಾ ಇವರು ಹಲವಾರು ಬಡವರಿಗೂ ಅನಾಥರಿಗೂ ತಮ್ಮ ತಮ್ಮ ಕೈಲಾದಷ್ಟು ಸಹಕಾರ ನೀಡಿದ್ದಾ-ರೆ. ಅದರಂತೆ ಬಿಲ್ಡರ ಕಿಶೋರ ಅವರ್ಸೇಕರ(ಕಾರವಾರ) ಹಾಗೂ ಕಮಲಾಕ್ಷ ನಾಯ್ಕ ಗೋವಾ

(ಕಾರವಾರ ಮೂಲ). ಹಾಗೂ ಎಸ್.ಡಿ. ಸಾವಂತ

**ಪ್ರಥಮ ಕೊಂಕಣಿಗಾಗಿ ಜ್ಞಾನಪೀಠ ಪ್ರಶಸ್ತಿ**

ಜ್ಞಾನಪೀಠ ಪ್ರಶಸ್ತಿ ಎಂದರೇನು? ಜ್ಞಾನ ಎಂದರೆ

ಮಾಹಿತಿ (Knowledge) ಸಂಸ್ಕೃತದಲ್ಲೂ ಕೊಂಕಣಿಯಲ್ಲೂ ಜ್ಞಾನವೆನ್ನುತ್ತಾರೆ. ಈ ಪ್ರಶಸ್ತಿಯನ್ನು ಅಪಾರ ಜ್ಞಾನ ಹೊಂದಿ ತಮ್ಮ

ಜ್ಞಾನವನ್ನು ಉತ್ತಮ ಕೃತಿಗಳ ಮೂಲಕ ಹೊರಹಾಕುವ ಸಾಹಿತಿಗೆ ಈ ಪ್ರಶಸ್ತಿಯನ್ನು ನೀಡಲಾಗುತ್ತದೆ. ಇದರ ಪ್ರಾರಂಭವನ್ನು ಶ್ರೀ ಸಾಹು ಶಾಂತಿ ಪ್ರಸಾದ ಜೈನ್ ಇವರು ಸ್ವತಹ ಚಿಂತಕರು ಹಾಗೂ ದಾನಿಗಳಾಗಿದ್ದರು. ಅವರು 1943-44 ರಲ್ಲಿ ವಾರಣಾಸಿಯಲ್ಲಿ ಭಾರತೀಯ ಜ್ಞಾನಪಿಟ ಪ್ರಶಸ್ತಿ ಪುರಸ್ಕಾರ ಸಂಘಟನೆ ಪ್ರಾರಂಭಿಸಿದರು. ಅದರ ಅಧ್ಯಕ್ಷರು ಶ್ರೀಮತಿ ರಮಾ ಎಸ್. ಜೈನ ಇದ್ದರು. ಅಂದಿನ ಪ್ರಥಮ ರಾಷ್ಟ್ರಪತಿ ಡಾ. ಬಾಬು ರಾಜೇಂದ್ರ ಪ್ರಸಾದರ ಅಮೃತಹಸ್ತದಿಂದ ಪ್ರಥಮ ಜ್ಞಾನಪೀಠ ಪ್ರಶಸ್ತಿ ಕೇರಳದ ಗೋವಿಂದ ಶಂಕರ ಕುರುಪ ಅವರಿಗೆ ಲಭಿಸಿತು. ನಂತರ 41 ಜನರಿಗೆ ಭಾರತದ ವಿವಿಧ ರಾಜ್ಯದ ಭಾಷೆಯ ಸಾಹಿತಿಗಳಿಗೆ ಲಭಿಸಿದೆ. 2006 ರಲ್ಲಿ 42 ನೇ ಪ್ರಶಸ್ತಿಯು ಗೋವಾದ ಕೊಂಕಣಿಗ ಶ್ರೀ ರವೀಂದ್ರ ಕೆಳಕರ ರವರಿಗೆ ಲಭಿಸಿದ್ದು ಕೊಂಕಣಿಗರೆಲ್ಲರಿಗೂ ಹೆಮ್ಮೆಯ ವಿಷಯ. ಈ ಪ್ರಶಸ್ತಿಯು ಉತ್ಕೃಷ್ಟ ಮಟ್ಟದ ಸರಸ್ವತಿ ಮೂರ್ತಿ. ಒಂದು ಪ್ರಶಸ್ತಿ ಪತ್ರ ಹಾಗೂ ರೂ 7 ಲಕ್ಷದ ಪುರಸ್ಕಾರ. (ಪ್ರಥಮ ಪುರಸ್ಕಾರ 1965 ರಲ್ಲಿ ನೀಡಿದಾಗ ರೂ. 2.5 ಲಕ್ಷ ಇತ್ತು. ಪ್ರಶಸ್ತಿ ವಿಜೇತ ಶ್ರೀ ರವೀಂದ್ರ ಕೇಳಕರ ರವರ ಸಂಕ್ಷಿಪ್ತ ಪರಿಚಯ. ಶ್ರೀ ರವೀಂದ್ರ ಕೇಳಕರರವರು ಗೋವಾದಲ್ಲಿ 07-03-1925 ರಲ್ಲಿ ಜನಿಸಿದರು. ಕೇಳಕರರವರು ಬಾಲ್ಯದಿಂದಲೇ ಸಾಹಿತ್ಯ-ಸಮಾಜ ಹಾಗೂ ಸಾಂಸ್ಕೃತಿಕ ಚಟುವಟಿಕೆಯಲ್ಲಿ ಅಭಿರುಚಿ ತೋರಿದರು. ನಂತರ ಗೋವಾ ಚಳುವಳಿಯಲ್ಲೂ ಪ್ರಮುಖ ಪಾತ್ರ ವಹಿಸಿದ್ದರು. ಅವರ ಸಾಹಿತ್ಯದ ಯಾತ್ರೆ ಸತ್ಯಾಗ್ರಹ ಎಂಬ ಪುಸ್ತಕದ ಪಬ್ಲಿಕೇಶನದಿಂದ ಪ್ರಾರಂಭವಾಗುತ್ತದೆ. 2006 ರವರೆಗೆ ಅವರು ಅಂ-ದಾಜು 32 ಸ್ವರಚಿತ ಪುಸ್ತಕಗಳನ್ನು ಕೊಂಕಣಿ- ಹಿಂದಿ-ಮರಾಠಿಯಲ್ಲಿ ಹೊರತಂದಿದ್ದಾರೆ. ಅದರಲ್ಲಿ ಪ್ರಮುಖವಾಗಿ ಅಶೆಆಶಿಲ್ ಗಾಂಧಿಜಿ- ತುಲಸಿ-ಉಜವಾಡಚೆಸೂರ-ತಾಥಗರ- ಘುಸ್ವಲ್ಲೆಜಾಸ್ವಿ-ಪಂಥಸಾಲಾ- ಅಗಲ-ಪಗಲ-ಮಹಾತ್ಮಗಾಂಧಿ-ಜಪಾನಜಸಾ ದಿಸಲಾ. ಶ್ರೀ ಕೇಳಕರ ರವರು ಒಂದು ಢಜನ್‌ಕ್ಕಿಂತಲೂ ಹೆಚ್ಚಿನ ಮುಸ್ತಕಗಳನ್ನು ಕೊಂಕಣಿಗೆ ಅನುವಾದ ಮಾಡಿದ್ದಾರೆ. ಇವರ ಹೆಚ್ಚಾನು ಹೆಚ್ಚು ಕೃತಿಗಳು ಮಾನವೀಯತೆಗೆ ಹಾಗೂ ಸಮಾಜ ಸುಧಾರಣೆಗೆ ಸಂಬಂಧಿಸಿವೆ. ಅವರು ಭಾರತವಲ್ಲದೇ ವಿವಿಧ ದೇಶಗಳನ್ನು ಸುತ್ತಿ ಬಂದಿದ್ದು ಅವರ ಅಂತರಾಳದ ಶಿಕ್ಷಣ ಯಾತ್ರೆಯ ಒಂದು ಭಾಗವಾಗಿದೆ ಎಂದು ಹೇಳಬಹುದು. ಅವರು ಉತ್ತಮವಾಗಿ – ಚಿಂತಕರು ಜೊತೆಗೆ ಉತ್ತಮ ಸಂಪಾದಕರು ಆಗಿದ್ದರು. ಇವರಿಗೆ ಪದ್ಮಭೂಷಣ, ಭಾಷಾ ಭಾರತಿ ಸನ್ಮಾನ, ಸಾಹಿತ್ಯ ಅಕಾಡೆಮಿ, ಟ್ರಾನ್ಸಲೇಶನ್ ಅವಾರ್ಡ, ಗೋವಾ ಆರ್ಟ ಅಕಾಡೆಮಿ ಅವಾರ್ಡ, ಸೆಂಟ್ರೆಲ್ ಹಿಂದಿ ಡೈರಕ್ಟ-ರೇಟ್ ಆವಾರ್ಡ್, ಕೊಂಕಣಿ ಸಾಹಿತ್ಯ ರತ್ನ ಪುರಸ್ಕಾರ, ವಿಶ್ವ ಕೊಂಕಣಿ ಕೇಂದ್ರ ಪುರಸ್ಕಾರ ಲಭಿಸಿವೆ. ಇದು ನಮಗೆ 42ನೇ ವಿವಿಧ ಕೊಂಕಣಿ ಭಾಷಿಕ ಸಮುದಾಯದ ವಿಶ್ವದಲ್ಲಿ ನೆಲೆಸಿರುವ ಎಲ್ಲರಿಗೂ ಅಭಿಮಾನದ ಸಂಗತಿಯಾಗಿದೆ.

♦♦♦♦

## ಕರ್ನಾಟಕದ ಕೊಂಕಣಿ ಮಿಮಿಕ್ರಿ ಕಲಾವಿದರು



ಡಾ. ವಸಂತ ಬಾಂದೇಕರ, ಕಾರವಾರ



ಶ್ರೀ ರಿಚರ್ಡ್ ಲೂಯಿಸ್ ಬೆಂಗಳೂರು



ಶ್ರೀಮತಿ ಸಂಧ್ಯಾ ಶೆಣೈ ಮಂಗಳೂರು



ಕು. ಜೈದೀಪ ಪ್ರಭು ಹೊನ್ನಾವರ



# 16. ವಿದೇಶದಲ್ಲಿ ಕೊಂಕಣಿ ಪರಿಮಳ

■ ಅಸ್ಟಿನ್ ಡಿಸೋಜಾ ಪ್ರಭು-ಅಮೇರಿಕಾ

42 ವಿವಿಧ ಕೊಂಕಣಿ ಭಾಷಿಕ ಸಮುದಾಯಗಳುಳ್ಳ ಅದರಲ್ಲೂ ಹಿಂದು-ಮುಸ್ಲಿಂ-ಕ್ರಿಶ್ಚಿನ್ನರುಳ್ಳ ಈ ಭಾಷೆಯ ಜನರು ಭಾರತವಲ್ಲದೇ ಜಗತ್ತಿನ ಹಲವಾರು ದೇಶಗಳಲ್ಲಿ ತಮ್ಮ ಉದರಪೋಷಣೆಗಾಗಿ ಹೋಗಿ ನೆಲೆಸಿದ್ದಾರೆ. ಇವರು ಪರದೇಶಕ್ಕೂ ಹೋದರೂ ಮಾತೃಭಾಷೆ ಕೊಂಕಣಿ ಮನೆಯಲ್ಲಿ ಮಾತನಾಡುವುದನ್ನು ಬಿಡಲಿಲ್ಲ. ಕೊಂಕಣಿ ಭಾಷಿಕರನ್ನು ಹುಡುಕಾಡಿ ಸಂಘಗಳನ್ನು ಕಟ್ಟಿದರು ಹಾಗೂ ವರ್ಷದಲ್ಲಿ 2-3 ಕಾರ್ಯಕ್ರಮಗಳನ್ನು (ವಿವಿಧ ಕೊಂಕಣಿ ಸಾಂಸ್ಕೃತಿಕ ಕಾರ್ಯಕ್ರಮ ಸಹಿತವಾಗಿ) ಮಾಡಿ ಕೊಂಕಣಿ ಭಾಷೆ- ಕಲೆ-ಸಾಹಿತ್ಯ ಬೆಳೆಸುವಲ್ಲಿ ಕಾರಣಿಕರ್ತರಾದರು.

ಬಹಳಷ್ಟು ಭಾಷಿಕರಿಗೆ ತಮ್ಮ ಮಾತೃಭಾಷೆ ಎಂದರೆ ಬಲು ಇಷ್ಟ ಕಾರಣ ಜನಿಸಿದಾಗಿನಿಂದ ತಾಯಿಯ ಮಡಿಲಲ್ಲಿ ಕುಳಿತು ಹಾಲನ್ನು ಕುಡಿಯುತ್ತಾ ತಾಯಿ ಮಾತನಾಡಲು ಕಲಿಸಿದ ಆ ಭಾಷೆ ಜೋಗುಳ ಪದ ಹಾಡಿ- ಕಾಗೆ ಗುಬ್ಬಚ್ಚಿ ಕಥೆ ಹೇಳಿ ಉಣಿಸಿದ ಭಾಷೆ ಅಂಬೆಗಾಲಿಡುತ್ತಾ ಅಂಗಳದಲ್ಲಿ ಆಟವಾಡುತ್ತಾ ತೊದಲು ನುಡಿಯಿಂದ ಮಾತನಾಡಿದ ಆ ಮಾತೃ ಭಾಷೆ ಮರೆಯಲು ಸಾಧ್ಯವೇ?.

ಪರದೇಶದಲ್ಲಿ ಕೊಂಕಣಿ ಸಂಘಟನೆಗಳ ಒಂದು ಉದಾಹರಣೆ ವಾಚಕರಾದ ನಿಮಗೆ ನಾನು ತಿಳಿಸಲು ಬಯಸುತ್ತೇನೆ. ನಾನು ಚಿಕ್ಯಾಗೊದಿಂದ ನ್ವವೆಂಬರ 5 ರಂದು ಕುವೈತಿನ ಕ್ಯಾನರಾ ಕಲ್ಚರಲ್ ಎಸೋಸಿಎಶನ್‌ದ 30 ನೇ ವಾರ್ಷಿಕೋತ್ಸವದ ಮುಖ್ಯ ಅಥಿತಿಯಾಗಿ ಹೋಗಿದ್ದೇನು. ಆ ಸಂಘಟನೆಯವರು ಆ ವಾರ್ಷಿಕೋತ್ಸವದ ಜೊತೆಗೆ " ಗಲ್ಫ ವ್ಹಾಯ್ಸ ಆಫ್ ಮಂಗಳೂರ-6" ಈ ಸ್ಪರ್ಧೆಯ ರಿಯಾಲಿಟಿ ಶೋ ಆಯೋಜನೆ ಮಾಡಿದ್ದರು. ಈ ಸ್ಪರ್ಧೆಗೆ 6 ಗಲ್ಫ ರಾಷ್ಟ್ರದಿಂದ ಕುವೆಟ್, ಯು. ಎ. ಇ, ಸೌದಿ ಅರೇಬಿಯಾ, ಓಮಾನ, ಬಾಹ್ರೇಯ್ನ ಹಾಗೂ ಖತಾರ ದಿಂದ 1500 ಜನ ಹಾಜರಿದ್ದರು. ಮಧ್ಯಾಹ್ನ 2-00 ರಿಂದ ಪ್ರಾರಂಭವಾಗಿದ್ದು ರಾತ್ರಿ 10-30 ರವರೆಗೆ ನಡೆಯಿತು. ಇಂಥ ಕೊಂಕಣಿ ಮ್ಯಾರಾಥಾನ ಕಾರ್ಯಕ್ರಮ ಬಹುಷಾ ಪರದೇಶದಲ್ಲಿ ಜರುಗಿದ್ದು ಪ್ರಥಮಬಾರಿ ಇರಬಹುದು. ನಿರಂತರ 8 $^1/_2$ ಘಂಟೆವರೆಗೆ ಜನರು ಉತ್ಸುಕತೆಯಿಂದ ಕುಳಿತು ಗಮನಿಸಿದ್ದು ಗಮನಾರ್ಹ. ಇದೇ ಸಂದರ್ಭದಲ್ಲಿ ನನಗೆ " ಕರಾವಳಿ ಕೊಂಕಣಿ ವೀರ" ಎಂದು ಬಿರುದಾಯಿತು. ಸನ್ಮಾನ ಮಾಡಿದ್ರು. ಸನ್ಮಾನವನ್ನು ನಾನು ಮರಣದವರೆಗೂ ನೆನಪು ಹಾರಲಾರೆ ಕಾರಣವೇಂದರೆ ಇದೊಂದು ಕಾರ್ಯಕ್ರಮದಿಂದ ಕೊಂಕಣಿ ಜನರ ಸಂಘಟನೆ-ಅಭಿರುಚಿ-ಭಾಷಾಭಿಮಾನ ಎಲ್ಲವೂ ಅರಿವಿಗೆ ಬಂದಿತು. ಕಾರಣ 8 $^1/_2$ ಘಂಟಿ ನಿರಂತರ ಕೊಂಕಣಿ ಕಾರ್ಯಕ್ರಮ ಪರದೇಶದಲ್ಲಿ ಜರುಗಿದ್ದು ಶ್ಲಾಘನೀಯವಾಗಿದೆ. ಪರದೇಶದಲ್ಲಿರುವ ಹಲವು ಕೊಂಕಣಿ ಸಂಘಟನೆಗಳ ಯಾದಿಯನ್ನು ಇಲ್ಲಿ ನೀಡುತ್ತಿದ್ದು ಅದನ್ನು ಗಮನಿಸಿದಾಗ ಪರದೇಶದಲ್ಲಿ ಕೊಂಕಣಿ ಪರಿಮಳ ಯಾವ ರೀತಿ ಪಸರಿಸಿದೆ ಎಂದು ಅರಿವಾಗುತ್ತದೆ.

01. ಬೆಳ್ಳಿವಿಜನ್ ಯು.ಎ.ಇ
02. ಬೆಳ್ಮಾಣ್ ಬೆತ್ಕಾಟಿ
03. ಬೈಂದೂರ ಎಸೋಸಿಎಶನ್
04. ಎಮಿರೇಟ್ಸ ಪಾಂಗಾಳಾಯ್ಟ್ಸ
05. ಫೆರಾರಾಯ್ಟ್ಸ
06. ಕಣಜಾರ ಲೂರ್ಡ್ಸ
07. ಕಟ್ಪಾಡಿ ಕೊಂಕಣ
08. ಕೆಮ್ಮಣ್ಣು ಫ್ಲವರ್ಸ
09. ಅಟಲ್ ಫ್ಲವರ್ಸ ಮುಖಾಮಾರ
10. ಮುದರಂಗಡಿ ಎಸ್.ಎಫ್.ಎಕ್ಸ ಕುಟಾಮ
11. ಒಮ್ಜೂರ
12. ಪಾಂಬೂರಿಯನ್ಸ
13. ಫಾಮಾದ ಪೆನಾಗಳ
14. ಪುತ್ತೂರ ಎಮಿರೇಟ್ಸ
15. ಶಿರ್ವಾ ಎಸ್ವಾಸ
16. ಸುರತ್ಕಲ್ ಪ್ಯಾರಿಶ್ ಅಸೋಸಿಎಶನ್
17. ತೊಟ್ಟಾಮ ಸಕತ
18. ಉದ್ಯಾವರ್ ಎಸೋಸಿಎಶನ್
19. ಯುನಾಯ್ಟೆಡ್ ಬ್ರಹ್ಮಾವರ
20. ವಾಮಾಂಜೂರಿಯನ್ಸ
21. ಕ್ಯಾನರಾ ಕ್ಯಾಥೊಲಿಕ ಫುಜೈರಾ
22. ದಾಯ್ಜಿ ದುಬಾಯ್
23. ದಾಯ್ಜಿ ದುಬಾಯಿ ರಂಗಮಂದಿರ್
24. ಎಮಿರೇಟ್ಸ ಪರಾಡೆಲಾ
25. ಜೆಬೆಲ್ ಆಲಿ ಕೊಂಕಣ ಅಸೋಸಿಎಶನ್
26. ಕರಾವಳ ಮಿಲನ್
27. ಕಾಸರ್ಗೋಡ ಕೊಂಕಣ್ಸ ಎಸೋಸಿಎಶನ್
28. ಕೆ. ಸಿ. ಓ ಅಬುಧಾಬಿ
29. ಕೊಂಕಣಿ ಬೆಲ್ಸ
30. ಕೊಂಕಣಿ ಕ್ಯಾರಿಜ್ಮಾಟಿಕ್ಸ
31. ಮ್ಯಾಂಗಳೂರ ಕೊಂಕಣ್ಸ
32. ಮಿಲಾಗ್ರಿಯನ್ಸ ಗಲ್ಪ ಎಸೋಸಿಎಶನ್ ದುಬಾಯಿ
33. ಎಸ್. ಎಮ್. ಕೆ. ಸಿ
34. ಎಸ್. ಎಮ್. ಕೆ. ಸಿ ಶಾರ್ಜಾ
35. ಎಸ್. ಎಮ. ಕೆ. ಸಿ ದುಬಾಯಿ
36. ಸ್ವಾರ್ಕ ದುಬಾಯಿ
37. ಉದೆಂತಿಂಚಿ ನಕ್ಷತ್ರ
38. ಕೊಂಕಣಯುವ

39. ಮುರ್ಕುಟ ಮೊಗರ್ನಾಡ
40. ಫೆರಾರಾಯ್ಸ್ಯ ಫ್ಯಾಮಿಲಿ
41. ಬಾರಕೂರಿಯನ್ಸ ಇನ್ ಯು.ಎ.ಇ
42. ಸೆಂಟ್ ಪಾಲ್ಸ್ ಕ್ಯಾಥೋಲಿಕ ಚರ್ಚ ಮೂಸಾಫಾ ಅಬುಧಾಬಿ
43. ಸೈಂಟ್ ಜೋಸೆಫ್ ಕೊಂಕಣಿ ಕಮ್ಯೂನಿಟಿ ಅಬುಧಾಬಿ
44. ಸೈಂಟ್ ಮೈಕಲ್ಸ ಚರ್ಚ ಶಾರ್ಜಾ
45. ಸೈಂಟ್ ಪ್ರಾನ್ಸಿಸ್ ಆಸ್ಸಿಸಿ ಚರ್ಚ ಜೆಬೆಲಆಲಿ
46. ಮಂಗಳೂರ್ಚ ಮೂತಿಯಾಂ ಅಬುಧಾಬಿ
47. ಸೈಂಟ್ ಅಂತೋಣಿ ಕ್ಯಾಥೋಲಿಕ ಚರ್ಚ ರಸಅಲ್‌ಖಾಯ್ಮಾ
48. ಸೈಂಟ್ ಮೆರಿಸ್ ಕ್ಯಾಥೋಲಿಕ ಚರ್ಚ ಆಲ್‌ಆಯ್ನ
49. ಕೊಂಕಣ ಕುಟಾಮ ಬಾಹ್ರೇಯ್ನ
50. ಯಂಗ್ ಗೋವನ್ಸ ಕ್ಲಬ್
51. ಸೇಕ್ರೆಡ್ ಹಾರ್ಟ ಕ್ಯಾಥೋಲಿಕ ಚರ್ಚ ಬಾಹ್ರೇಯ್ನ
52. ಎಮ್. ಸಿ. ಸಿ. ಪಿ
53. ಸೈಂಟ್ ಫ್ರಾನ್ಸಿಸ್ ಕ್ಷೇವಿಯರ್ಸ ಚರ್ಚ ಸಲಾಲಾ
54. ಹೋಲಿ ಸ್ಪಿರಿಟ್ ಚರ್ಚ ಘಾಲಾ
55. ಸೈಂಟ್ ಅಂಟೋನಿಜ್ ಚರ್ಚ ಸೋಹಾರ್
56. ಸೈಂಟ್ ಪೀಟರ್ ಎಂಡ್ ಪಾವ್ಲ ಚರ್ಚ ರೋವಿ
57. ಅಂಗಣ ದಮ್ಮಾಮ
58. ಕೊಂಕಣಘರ ರಿಯಾದ
59. ಮ್ಯಾಂಗಳೂರ ಕ್ರಿಕೆಟ್ ಕ್ಲಬ್
60. ಮ್ಯಾಂಗಳೂರ ಕಲ್ಚರಲ್ ಅಸೋಸಿಏಶನ್
61. ಎಮ್. ಸಿ. ಎ ಖಟಾರ
62. ಅವರಲೇಡಿ ಓಥ್ ರೋಜರ ಚರ್ಚ ಕೆ.ಎ.ಸಿ.ಸಿ
63. ಖಟಾರ ಗೋವನ ಸ್ಪೋರ್ಟ್ಸ ಕ್ಲಬ್
64. ಗೋವನ ಸ್ಪೋರ್ಟ್ಸ ಕ್ಲಬ್
65. ಮ್ಯಾಂಗಳೂರಿಯನ್ ಕ್ಯಾಥೋಲಿಕ ಅಸೋಸಿಏಶನ್
66. ಶಿರ್ವಾ ವೆಲಫೆರ ಅಸೋಸಿಏಶನ ಕುವೆಯ್ಟ
67. ಕುವೆಯ್ಟ ಕ್ಯಾನರಾ ವೆಲಫೆರ್ ಅಸೋಸಿಏಶನ್
68. ಕುವೇಟ್ಸ ಕಲ್ಚರಲ್ ಅಸೋಸಿಏಶನ್
69. ಮ್ಯಾಂಗಳೂರ್ ಕಲ್ಚರಲ್ ಅಸೋಸಿಏಶನ್
70. ಕುವೆಟ್ಸ ಬ್ರಹ್ಮಾವರ ವೆಲ್ಫೆರ್ ಅಸೋಸಿಏಶನ್
71. ಪಾಂಬೂರ ವೆಲ್ಫೇರ್ ಅಸೋಸಿಏಶನ್ ಕುವೇಟ್ಸ
72. ಯುನಾಯ್ಟೆಡ್ ಮಂಗಳೂರಿಯನ್ಸ ಕುವೇಯ್ಟ
73. ಕುವೇಯ್ಟ ಪಾಂಗ್ಳಾ ಅಸೋಸಿಏಶನ್
74. ಅಬ್ಬಾಸಿಯಾ ಕೊಂಕಣಿ ಫ್ಯಾಮಿಲೀಸ್ ಕುವೆಟ್ಸ
75. ಹೋಲಿ ಫ್ಯಾಮಿಲಿ ಕಾಥೆದ್ರಾಲ್ ಕುವೇಯ್ಟ
76. ಅವರಲೇಡಿ ಆಫ್ ಅರೇಬಿಯಾ ಚರ್ಚ ಕುವೇಯ್ಟ
77. ಸೈಂಟ್ ಥೆರೆಜಾ ಆಫ್ ಚೈಲ್ಡ್ ಜಿಸಸ್ ಚರ್ಚ ಸಾಲ್ಮಿಯಾ\
78. ಕುಂದಾಪುರ ವಾರಡೊ ವೆಲ್ಫೆರ್ ಎಸೋಸಿಏಶನ್ ಕುವೆಟ್ಸ
79. ಪಿಯುಸ್ ನಗರ ವೆಲ್ಫೇರ್ ಎಸೋಸಿಏಶನ್ ಕುವೆಯ್ಟ
80. ಎಲೋಯ್ಸಿಯನ್ ಅಲುಮನಾಯ್ ಕುವೆಯ್ಟ
81. ಬೆಳ್ಮಾಣ್ ವೆಲಫೆರ್ ಎಸೋಸಿಏಶನ್ ಕುವೇಯ್ಟ
82. ಬಿಳ್ಳಿವಿಜನ ಕುವೆಟ್ಸ
83. ಕುವೇಟ್ಸ ಕೊಂಕಣಿ ಕೇಂದ್ರ
84. ಯುನಾಯ್ಟೆಡ್ ಗೋವನ್ಸ ಸೆಂಟರ್
85. ದ ಗೋವನ ವೆಲ್ಫೆರ್ ಸೋಸಾಯಿಟಿ
86. ಮ್ಯಾಂಗಳೂರಿಯನ್ ಕ್ಯಾಥೋಲಿಕ್ ಅಸೋಸಿಏಶನ್ ಈಸ್ಟಕೊಸ್ಟ
87. ಹ್ಯುಸ್ಟನ್ ಕೊಂಕಣಿ ಕ್ಯಾಥೋಲಿಕ ಅಸೋಸಿಏಶನ್
88. ಸೈಂಟ್ ಪ್ರೆಸಿಲ್ಲಾ ಚರ್ಚ ಅವೆನಿಯಾ ಡಿಟ್ರೊಯ್ಟ
89. ಅವರ ಲೇಡಿ ಆಫ್ ಫಿಸ್ ಚರ್ಚ್ ನ್ಯೂಜೆರ್ಸಿ
90. ಮ್ಯಾಂಗಳೂರಿಯನ್ ಕೊಂಕಣ ಕ್ರಿಶ್ಚನ್ ಎಸೋಸಿಏಶನ್ ಆಫ್ ಚಿಕಾಗೋ
91. ನೋರ್ಥ ಅಮೆರಿಕನ್ ಕೊಂಕಣಿ ಅಸೋಸಿಏಶನ್
92 ಸರಸ್ವತಿ ಪೌಂಡೇಶನ್
93. ಅಮೆರಿಕನ್ ಕೊಂಕಣಿ ಅಸೋಸಿಏಶನ್
94. ಚಿತ್ರಾಪುರ್ ಸತಸಂಗ
95. ಕೊಂಕಣಿ ಸಭಾ
96. ಅಮೆರಿಕನ್.ಮಿಡ್‌ವೆಸ್ಟ ಕೊಂಕಣಿ ಅಸೋಸಿಯಸನ್
97. ಕೊಂಕಣಿ ಅಸೋಸಿಏಶನ್ ಆಪ್ ಕ್ಯಾಲಿಪೋರ್ನಿಯಾ
98. ಬೊಸ್ಟನ್ ಏರಿಯಾ ಕೊಂಕಣಿ ಅಸೋಸಿಏಶನ್
99. ದ. ಕೊಂಕಣಿ ಸಮಾಜ ಆಫ್ ಸದರ್ನ ಕ್ಯಾಲಿಫೋರ್ನಿಯಾ
100. ಮಿಶಿಗನ್ ಕೊಂಕಣಿ ಅಸೋಸಿಏಶನ್
101. ಮಿಡ್ ಅಂಟ್ಲಾಟಿಕ ಕೊಂಕಣಿ ಅಸೋಸಿಏಶನ್
102. ಕೊಂಕಣಿಸ್ ಇನ್ ಸದರ್ನ ಸ್ಟೆಟ್ಸ
103. ತ್ರಿರಿವರ ಏರಿಯಾ ಕೊಂಕಣಿ ಅಸೋಸಿಏಶನ್
104. ಕನ್ನೆಕ್ಟಿಕಟ್ ಒರ್ಗನೈಜೇಶನ್ ಆಫ್ ಕೊಂಕಣಿಸ್
105. ಕೊಂಕಣಿ ಅಸೋಸಿಏಶನ್ ಆಫ್ ಪ್ಲಾರಿಡಾ
106. ಗೋವನ್ಸ ಆಫ್ ಅಮೆರಿಕಾ
107. ಕೊಂಕಣಿ ಅಸೋಸಿಏಶನ್ ಆಫ್ ಜೆರ್ಜಿಯಾ
108. ದ. ಗೋವನ ಅಸೋಸಿಏಶನ್ ನ್ಯುಯಾರ್ಕ
109. ದ. ಗೋವನ ಅಸೋಸಿಏಶನ್ ನ್ಯುಜೆರ್ಸಿ
110. ದ. ಗೋವನ ಅಸೋಸಿಏಶನ್ ಆಫ್ ದ ವಾಶಿಂಗ್ಟನ್ ಮೆಟ್ರೋಪೊಲಿಟನ್ ಏರಿಯಾ
111. ನ್ಯು ಇಂಗ್ಲೆಂಡ್ ಗೋವನ್ಸ ಆಫ್ ಬೊಸ್ಟನ್ ಮ್ಯಾಸಜೊಸೆಟ್ಸ
112. ಗೋವನ ಓವರ್‌ಸೀಸ್ ಎಸೋಸಿಏಶನ್ ಚಿಕಾಗೊ
113. ಸೆಂಟ್ ಥೋಮಸ್ ಚರ್ಚ ಕ್ಯಾಲ್ಗರಿ
114. ಕೊಂಕಣ ಆರ್ಗನೈಜೆಶನ್ ಆಫ್ ಟೋರೆಂಟೊ
115. ಮ್ಯಾಂಗಳೂರಿಯನ್ ಅಸೋಸಿಏಶನ್ ಆಫ್ ಕ್ಯಾನಡಾ
116. ಇಮ್ಮಾಕ್ಯೂಲೇಟ್ ಕನ್ಸೆಪ್ಷನ್ ಚರ್ಚ ಡೇಲ್ಟಾ ಬಿ.ಸಿ

17. ಕೊಂಕಣಿ ಕ್ಯಾಥೋಲಿಕ್ ಆಫ್ ಬ್ರಾಂಪ್ಟನ್
18 ಗೋವನ ಓವರ್‌ಸೀಸ್ ಅಸೋಸಿಎಶನ್
19. ಕುಬೈರ್ ಗೋವನ ಅಸೋಸಿಎಶನ್
120. ಹ್ಯಾಮಿಲ್ಟನ್ ಗೋವನ ಅಸೋಸಿಎಶನ್
121. ಗೋವನ ಅಸೋಸಿಎಶನ್ ಕಾಲ್ಗರಿ
122. ಎಡ್ಮಂಟನ್ ಗೋವನ ಎಸೋಸಿಎಶನ್
123. ಕ್ಯಾನೇಡಿಯನ್ ಗೋವನ ಎಸೋಸಿಎಶನ್ ವ್ಯಾಂಕೂ
ವರ ಬಿಸಿ
124. ಒಂಟೇರಿಯಾ ಕೊಂಕಣಿಸ್ ಎಸೋಸಿಎಶನ್
125. ಸೈಂಟ್ ಫ್ರಾನ್ಸಿಸ್ ಆಸ್ಸಿಸಿ ಚರ್ಚ ಮ್ಯಾನೋ ಫೀಲ್ಡ ಅಬೇರ್ಡಿನ್ ಸ್ಕಾಟ್‌ಲ್ಯಾಂಡ್
126. ಅಬೇರ್ಡಿನ್ ಸೌಧ ಕ್ಯಾನರಾ ಅಸೋಸಿಎಶನ್ ಲಂಡನ್
127. ಕೊಂಕಣ ಕಲ್ಚರಲ್ ಅಸೋಸಿಎಶನ್ ಮ್ಯಾಂಚೆಸ್ಟಾರ್
128. ಬ್ರಿಟಿಷ್ ಕೊಂಕಣಿ ಕ್ಯಾಥೋಲಿಕ ಕಮ್ಯುನಿಟಿ
129. ಮ್ಯಾಂಗಳೂರಿಯನ್ ಯುನಾಯಿಟೆಡ್ ಕೊಂಕಣಿ ಎಸೋಸಿಎಶನ್ ನೊಟ್ಟಿಂಗ ಹ್ಯಾಮ
130. ಯು. ಕೆ ಕೊಂಕಣ್ಯಾ ಲಂಡನ್
131. ಕೊಂಕಣಿ ಕುಟಾಮ ಲಂಡನ್
132. ಕೊಂಕಣ್ಯಾ ಆಯರ್ಲೆಂಡ್ ಡಬ್ಲಿನ
133. ಕೊಂಕಣಿ ಕುಟಾಮ ರೋಮ
134. ಕೊಂಕಣಿ ಕುಟಾಮ ಫ್ರಾಂಕಪರ್ಟ
135. ಕೊಂಕಣಿ ಎಸೋಸಿಎಶನ್ ಜರ್ಮನಿ
136. ನೋರ್ವೆಯನ್ ಗೋವನ ಎಸೋಸಿಎಶನ್ ನೋರ್ವೆ
137. ಹೌಸ್ ಆಫ್ ಗೋವಾ ಅಸ್ಟನ
138. ಈಸ್ಟರ್ನ ಟೆರ್ಮೊಲಿಯಾ ಅಸ್ಟನ
139. ದ ಸೈಂಟ್ ಕ್ಷೆವಿಯರ್ಸ ಸೊಸಾಯಿಟಿ ದಾರವಿಸ್ ಸಲಾಮ ಟಾಂಜನಿಯ
140. ಕೊಂಕಣಿ ಕಮ್ಯುನಿಟಿ ಆಫ್ ಇಸ್ರಾಯಿಲ್
141. ದ ನ್ಯೆರೋಬಿ ಇನ್ಸಟಿಟ್ಯುಟ್ ಕಿನ್ಯಾ
142. ಗೋವನ ಅಸೋಸಿಎಶನ್ ಆಫ್ ವಿಕ್ಟೋರಿಯಾ
143. ಗೋವನ ಓವರ್‌ಸೀಸ್ ಎಸೋಸಿಎಶನ್
144. ಗೋವನ ಓವರ್‌ಸೀಸ್ ಎಸೋಸಿಎಶನ್ ವೆಸ್ಟರ್ನ್ ಆಸ್ಟ್ರೇಲಿಯಾ
145. ಮೇಲ್ಬೋರ್ನ ಕೊಂಕಣ್ಣಿ ಕಮ್ಯುನಿಟ್
146. ಅವರ ಲೇಡಿ ಆಫ್ ಲೂರ್ಡ್ಸ ಚರ್ಚ ಸೆವೆನಹಿಲ್ಸ
147. ಹೋಲಿ ಟ್ರೆನಿಟ್ ಚರ್ಚ ಸೌತ್ ಆಸ್ಟ್ರೇಲಿಯಾ
148. ಬೆಳ್ಳಿ ವಿಜನ್ ಬಾಹ್ರೇನ್

ಈ ಮೇಲ್ಕಾಣಿಸಿದ ವಿವಿಧ ಕೊಂಕಣಿ ಸಂಘಟನೆಗಳು ವಿದೇಶದಲ್ಲಿ ಕೊಂಕಣಿ ಸಾಹಿತ್ಯ- ಸಾಂಸ್ಕ್ರತಿಕ ಕಾರ್ಯಕ್ರಮಗಳನ್ನು ಮಾಡಿಕೊಂಡು ಕೊಂಕಣಿ ಭಾಷೆಯ ಪರಿಮಳವನ್ನು ವಿದೇಶದಲ್ಲಿ ಪಸರಿಸುತ್ತಿದ್ದಾರೆ. ಇದೇ ಕಾರಣಾಂತರದಿಂದ ಪ್ರತಿದಿನ ಆ ದೇಶದ ಭಾಷೆಯನ್ನು ಸಂಸ್ಕೃತಿಯನ್ನು ನೋಡಿ ಬೇಸತ್ತ ಆ ಜನರಿಗೆ ತಮ್ಮ ಮಾತೃ ಭಾಷೆಯ ಮುಖಾಂತರ ನೆಮ್ಮದಿ ದೊರೆಯುತ್ತದೆ.

ನಮ್ಮ ಭಾಷೆಯನ್ನು ಉಳಿಸಿ ಬೆಳೆಸಿಕೊಂಡು ಹೋಗಬೇಕಾದರೆ ನಾವು ಮೋದಲು ಮನೆಯಲ್ಲಿ ಹಿರಿಯರು ಕೊಂಕಣಿ ಮಾತನಾಡಬೇಕು, ಓದಬೇಕು, ಬರೆಯಬೇಕು, ಮಕ್ಕಳಿಗೆ ಕಲಿಸಬೇಕು. ಇಂದಿನ ಆಧುನಿಕ ಈ ಕಾಲದಲ್ಲಿ ಅದೇನು ಪುಸ್ತಕದಲ್ಲಿ ಲೇಖನಿಯಿಂದ ಬರೆಯಬೆಕೇಂದಿಲ್ಲ. ಅದರ ಬದಲಾಗಿ ಕೊಂಕಣಿ- ಇಂಗ್ಲೀಷ ಲ್ಯಾಪ್‌ಟಾಪ್ ಮುಖಾಂತರ ಪರಿವರ್ತನೀಯ ಕಾರ್ಯಕ್ರಮದಲ್ಲಿ ಕಲಿಸಬಹುದು. ಬರಹ " ನುಡಿ"ಯಲ್ಲಿ ದಿನಕ್ಕೆ ಒಂದು ಅರ್ಧ ಘಂಟೆಯಾದರೂ ಕಲಿಸಿದ್ದಲ್ಲಿ ಮುಂದಿನ ಪೀಳಿಗೆಗೆ ನಾವೂ ಸ್ವಲ್ಪಾದರೂ ಮಾತೃ ಭಾಷೆ ಕೊಂಕಣಿ ಉಳಿಸಬೆಳೆಸಬಹುದಾಗಿದೆ.

ಎಲ್ಲಿಯವರೆಗೆ ಕೊಂಕಣಿ ಕಾರ್ಯಕ್ರಮಗಳು ಸಂಘಟನೆಯಾಗುವುದಿಲ್ಲವೋ , ಎಲ್ಲಿಯವರೆಗೆ ಜಾತಿ- ಧರ್ಮದ ಕಟ್ಟಳೆ ಬಿಟ್ಟು ಹೋರಬರುವುದಿಲ್ಲವೋ ಅಲ್ಲಿಯವರೆಗೆ ಮಾತೃಭಾಷೆ ಕೊಂಕಣಿಯ ಅಭಿವೃಧ್ಧಿಯಾಗಲಾರದು.

ಕೊಂಕಣಿ ಜೀವಂತವಾಗಿ ಉಳಿಯಲು ಮುಖ್ಯ ಕಾರಣೀಕರ್ತರೆಂದರೆ . ಕೊಂಕಣಿ ಭಾಷಿಕ ಕ್ರಿಶ್ಚಿನ್ ಕ್ಯಾಥೋಲಿಕ ಸಮುದಾಯದವರು ಎಂದು ಹೇಳಬಹುದು ಕಾರಣ ಮನೆಯಲ್ಲೂ ಕೊಂಕಣಿ ಮಾತೃಭಾಷೆ ಹಾಗೂ ಚರ್ಚಗಳಲ್ಲೂ ಬೈಬಲ್ ಓದುವ ವಿಷಯಗಳು ಕೊಂಕಣಿಯಲ್ಲೇ ಇಂದಿಗೂ ಜರುಗುತ್ತಲಿವೆ. ಆದರೆ ಕೊಂಕಣಿ ಭಾಷಿಕ ಹಿಂದೂ ಸಮುದಾಯದವರು ತಮ್ಮ ವ್ಯಾಪಾರ

ಉದ್ಯೋಗದ ಜೊತೆಗೆ ಮನೆಭಾಷೆ ಕೊಂಕಣಿಯನ್ನೂ ಬಳಸಿಕೊಂಡು ಬಂದರು. ಕ್ರಿಶ್ಚನ್ ಬಾಂಧವರು ಹೆಚ್ಚಾಗಿ ಕೊಂಕಣಿ ಸಾಹಿತ್ಯಕ್ಕೆ ಒತ್ತು ನೀಡಿದರು. ಆದರೆ ಇಂದು ಕೊಂಕಣಿ ಭಾಷೆಗೆ ರಾಷ್ಟ್ರೀಯ ಮನ್ನಣೆ ದೊರೆತ ನಂತರ ಕೊಂಕಣಿ ಸಾಹಿತ್ಯ-ಕಲೆ-ಸಂಸ್ಕೃತಿ ಎಲ್ಲರೂ ಸೇರಿ ಅಭಿವೃಧ್ಧಿಗೊಳಿಸುತ್ತಿದ್ದಾರೆ. ವಿಶ್ವ ಕೊಂಕಣಿ ಸರದಾರ ಬಸ್ತಿ ವಾಮನ ಶೆಣೈ ಮಂಗಳೂರಿನ ಶಕ್ತಿನಗರದಲ್ಲಿ ವಿಶ್ವ ಕೊಂಕಣಿ ಕೇಂದ್ರ ಸ್ಥಾಪಿಸಿ ಕಳೆದ 10-12 ವರ್ಷದಿಂದ ಜಗತ್ತಿನ ಎಲ್ಲ ಕೊಂಕಣಿ ಸಂಘಟನೆಗಳ ಸಂಪರ್ಕದೊಂದಿಗೆ ಕೊಂಕಣಿ ಸಾಹಿತ್ಯ-ಕಲೆ-ಸಂಸ್ಕೃತಿಗಾಗಿ ದುಡಿಯುತ್ತಿದ್ದಾರೆ. ಭಾರತದ ವಿವಿಧ ರಾಜ್ಯದ ಕೊಂಕಣಿ ಅಕಾಡಮಿಗಳು ವಿವಿಧ ಸಂಘಟನೆಗಳೂ ಕಾರ್ಯನಿರ್ವಹಿಸುತ್ತಿವೆ.

ಪರದೇಶದಲ್ಲಿ ಕೊಂಕಣಿ ಪರಿಮಳ ಹಬ್ಬಲು ಭಾರತದ ಹಲವಾರು ಕೊಂಕಣಿ ಪತ್ರಿಕೆಗಳು ಪ್ರಮುಖ ಪಾತ್ರವಹಿಸಿವೆ. ಅವು ಭಾರತದ ಕೊಂಕಣಿಗರ ಕಲಾ- ಸಾಹಿತ್ಯ- ಸಂಸ್ಕೃತಿಯ ಮಾಹಿತಿಯನ್ನು ಪತ್ರಿಕೆ ಮುಖಾಂತರ ನೀಡುತ್ತಿರುವುದರಿಂದ ಹಾಗೂ ವಿವಿಧ ಕೊಂಕಣಿ ಪುಸ್ತಕದ ಮಾಧ್ಯಮದಿಂದ ಅದು ವಿದೇಶದಲ್ಲಿ ಕೊಂಕಣಿ ಜೀವಂತವಾಗಿರಲು ಸಹಕಾರಿಯಾಯಿತು.

2001 ರಲ್ಲಿ ಜನೇವರಿ 14 ರಂದು ದುಬೈಯಲ್ಲಿ ಶ್ರೀ ವಾಲ್ಟರ ನದಳಕೆ ಎಂಬುವರು ಕೊಂಕಣಿ ಕ್ಷೇತ್ರದಲ್ಲಿ ಬಿರುಗಾಳಿ ಎಬ್ಬಿಸಿದರು. ತಮ್ಮ ದಾಯ್ಜಿವರ್ಲ್ಡ ಡಾಟ್ ಕಾಮ್ ಮುಖಾಂತರ ಕೊಂಕಣಿ ಜನರಲ್ಲಿ ಕೊಂಕಣಿ ಜಾಗೃತ ಸುನಾಮಿ ತಂದರು. ಇದರಿಂದ ಕೊಂಕಣಿ ವೃದ್ಧಿ-ಸಮೃದ್ಧಿ ಹಾಗೂ ಪ್ರಗತಿ ಆಯಿತು. ಹಾಗೂ ಜಗತ್ತಿನಲ್ಲಿ ಎಲ್ಲ ಭಾಗದಲ್ಲೂ ಕೊಂಕಣಿಗರ ಕಾರ್ಯಕ್ರಮ ನೋಡಲು ಅವಕಾಶ ದೊರೆಯಿತು. ಈ ಇಂಟರ್‌ನೆಟ್ ವ್ಯವಸ್ಥೆಯಿಂದ ಕೊಂಕಣಿ ಭಾಷೆ ಬೆಳವಣಿಗೆಗೆ ಎಲ್ಲ ದೃಷ್ಟಿಯಿಂದ ಸಹಕರಿಯಾಗಿತ್ತು.

2008 ರಲ್ಲಿ ಕುವೈತ್ತಿನ 2 ಜನ ಕೊಂಕಣಿಗರು ದಿ ಲುವಿಸ್ ರೋಡ್ರಿಗ್ಸ್ ಹಾಗೂ ಲಾರೆನ್ಸ ವೆಂಟೋ ಇವರಿಬ್ಬರೂ ಸೇರಿ ಗಲ್ಫ ದೇಶದಲ್ಲಿ ಕೊಂಕಣಿ ಪರಿಮಳ ಪಸರಿಸುವ ದೃಷ್ಟಿಯಿಂದ ತಮ್ಮ ಹತ್ತಿರ ಹಣವಿರದಿದ್ದರೂ " ಗಲ್ಫ ವ್ಹಾಯಿಸ್ ಆಪ್ ಮ್ಯಾಂಗಳೂರ್" ಎಂಬ ಯೋಜನೆ ಹಾಕಿ ಅಲೆಂಗಳದಲ್ಲಿ ಕುವೈತ್, ಯು.ಎ.ಇ, ಬಾಹ್ರೇಯ್ನ, ಖತಾರ ಹಾಗೂ ಜಮಾನದಿಂದ 10 ಅಂತಿಮ ಸ್ಪರ್ಧಾಳುಗಳನ್ನು ಆರಿಸಿದರು. 5 ಜನ ಸಂಗೀತಕಾರರ ತಂಡ ವಿಲ್ಲಿ ರೆಬಿಂಬಸ್, ಜೋಯೆಲ್ ಪಿರೇರಾ, ಮೆಲ್ವಿನ್ ಪೆರಿಸ್, ಮೀಸಾ ರೆಬಿಂಬಸ್ ಹಾಗೂ ಕಾರ್ಯನಿರ್ವಾಹಕ ಲೆಸ್ಲಿ ರೇಗೋ. ಈ ಮೇಲಿನ 5 ದೇಶಗಳಿಗೆ ಭೇಟಿ ನೀಡಿ 2 ಅಂತಿಮ ಸ್ಪರ್ಧಾಳುಗಳನ್ನ ಆರಿಸಿದರು. ಲುವಿಸ್ ರೋಡ್ರಿಗ್ಸ್ ಹಾಗೂ ಲಾರೆನ್ಸ್ ವೆಂಟೋರವರ ನೇತೃತ್ವದಲ್ಲಿ ಅಕ್ಟೋಬರ 17 2008 ರಂದ ಕುವೈತ್‌ನ ಅಮೇರಿಕನ್ ಇಂಟರ್‌ನ್ಯಾಷನಲ್ ಸ್ಕೂಲಿನ ಒಡಿಟೋರಿಯಂನಲ್ಲಿ ಕಾರ್ಯಕ್ರಮ ನಡೆಯಿತು ಹಾಗೂ ಯಶಸ್ವಿಯಾಯಿತು. ಈ ಕಾರ್ಯಕ್ರಮದ ಉತ್ತೇಜನದಿಂದ ಪ್ರತಿ ಎರಡು ವರ್ಷಕ್ಕೊಮ್ಮೆ ಈ ಕಾರ್ಯಕ್ರಮ ಮಾಡುವ ನಿರ್ಧಾರ ತೆಗೆದುಕೊಂಡರು. ಈ ಕಾರ್ಯಕ್ರಮ ದಾಯ್ಜಿ ವರ್ಲ್ಡ ಮುಖಾಂತರ ವಿವಿಧ ದೇಶದ ಜನರು ತಮ್ಮ ತಮ್ಮ ಮನೆಯಲ್ಲಿ ಕುಳಿತು ಅಂದಾಜು 40,000 ಜನ ವಿಕ್ಷಿಸಿದರು. ಭಾರತದಲ್ಲಿ ಮಂಗಳೂರಿನ ಮಾಂಡಸೇಬಾಣ ಸಂಸ್ಥೆ ಹಾಗೂ ವಿಶ್ವ ಕೊಂಕಣಿ ಕೇಂದ್ರ ಸತತವಾಗಿ ವಿವಿಧ ಕೊಂಕಣಿ ಕಾರ್ಯಕ್ರಮ ಆಚರಿಸಿ ಕೊಂಕಣಿಯ ಅಭಿವೃದ್ಧಿ ಮಾಡುತ್ತಲದ್ದಾರೆ. ವಿದೇಶದಲ್ಲಿರುವ ಅಂದಾಜು 150 ವಿವಿಧ ಕೊಂಕಣಿ ಸಂಘಟನೆಗಳು ಪ್ರತಿವರ್ಷ ಅಂದಾಜು 1000 ಕಾರ್ಯಕ್ರಮ ಮಾಡುತ್ತಾರೆ.

ಇಂದಿನ ಆಧುನಿಕ ತಂತ್ರಜ್ಞಾನವು ಪ್ರಸಾರಕ್ಕೂ ಶಿಕ್ಷಣಕ್ಕೂ ಬಹಳ ಸಹಕಾರಿಯಾಗಿದೆ. ಫೇಸ್‌ಬುಕ್, ಟ್ವಿಟರ್, ಇನ್ಸ್ಟಾಗ್ರಾಮ್, ವಾಟ್ಸಪ್ ಎಲ್ಲವೂ ಅನುಕೂಲವಾಗಿದೆ. ಒಂದು ಮಾತು ನಿಜ ಯಾವಾಗ ಕೊಂಕಣಿ ಸಾಹಿತ್ಯದ ಕೃಷಿ ಆಗುವುದೋ ಅಂದು ಮಾತ್ರ ಮುಂದಿನ ಪಿಳಿಗೆಗಾಗಿ ಶೇಖರಿಸಲು ದಾಖಲೆಯಾಗಿ ಉಳಿಯುವುದು.

♦♦♦♦

# 17. ಶ್ರೀ ಮಾಧವ ಮಂಜುನಾಥ ಶಾನಭಾಗ

■ ಡಾ. ವಸಂತ ಬಾಂದೇಕರ-ಕಾರವಾರ



ದಿವಂಗತ ಮಾಧವ ಮಂಜುನಾಥ ಶಾನಭಾಗ ಕೊಂಕಣಿ ಮಾನ-ಸನ್ಮಾನ ಹಾಗು ಅದರ ಉದರಗತಿಗಾಗಿ ಜನಿಸಿ ಬಂದ ಮಹಾನ್ ವ್ಯಕ್ತಿ ಎಂದು ಹೇಳಬಹುದು. ಅವರು ಜಾತಿ- ಮತ-ಧರ್ಮ-ವರ್ಗ ಮರೆತು ದೇಶದಲ್ಲಿ ಅಲ್ಲಲ್ಲಿ ಸಿಂಪಡಿಸಿ ಹೋದ

ಎಲ್ಲ ಕೊಂಕಣಿ ಭಾಷಿಕರನ್ನು ಒಂದುಗೂಡಿಸಿದ ವ್ಯಕ್ತಿ. ಕೊಂಕಣಿ ಮಾತೃ ಭಾಷೆಯ ಸಾಹಿತ್ಯ-ಸಂಗೀತ-ಕಲೆ-ಜಾನಪದಕಲೆ-ಸಂಸ್ಕೃತಿ ಇವುಗಳ ಪರಿಚಯ- ರಕ್ಷಣೆ ಹಾಗೂ ಬೆಳವಣಿಗೆಯಾಗಬೇಕೇಂಬ ದೃಷ್ಟಿಯಿಂದ ಕಾರವಾರದಲ್ಲಿ ಪ್ರಥಮ ಅಖಿಲ ಭಾರತ ಕೊಂಕಣಿ ಪರಿಷತ್ ಸ್ಥಾಪಿಸಿ 08,09/ಜುಲೈ 1939 ರಲ್ಲಿ ಕಾರವಾರದಲ್ಲಿ ಯಶಸ್ವಿಯಾಗಿ ಆಯೋಜಿಸಿದರು. ಹೀಗಾಗಿ ಅವರಿಗೆ "ಕೊಂಕಣಿ ಪರಿಷತ್‌ನ ಶಿಲ್ಪಕಾರ" ಎಂದೂ ಕರೆಯುತ್ತಾರೆ.

ಶ್ರೀ ಮಾಧವ ಮಂಜುನಾಥ ಶಾನಭಾಗರವರ ಜನ್ಮ 1887 ಸಪ್ಟೆಂಬರದಲ್ಲಿ ಹೆರವಟ್ಟಾ (ಕುಮಟಾ) ಗ್ರಾಮದಲ್ಲಿ ಮಧ್ಯಮ ವರ್ಗ ಕುಟುಂಬದಲ್ಲಿ ಜನಿಸಿದರು. ಚಿಕ್ಕವರಿದ್ದಾಗ ತಂದೆಯವರು ತಿರಿಕೊಂಡಿದ್ದರಿಂದ ಅನಾಥರಾದ ಅವನ ಹಾಗೂ ವಿಧವೆ ತಾಯಿಯನ್ನು ಅವರ ಮಾಮಾ ಸಂತಪ್ಪ ಪೈ ಗೋಕರ್ಣದಲ್ಲಿ ಕರೆದುಕೊಂಡು ಹೋಗಿ ಅವನಿಗೆ ಒಳ್ಳೆಯ ಶಿಕ್ಷಣ ನೀಡಿದರು. ಶ್ರೀ ಮಾಧವ ಶಾನಭಾಗ ಕಾರವಾರದ ಸರ್ಕಾರಿ ಹೈಸ್ಕೂಲ್‌ದಿಂದ ಮೆಟ್ರಿಕ್ ಪಾಸಾದರು. ನಂತರ ಪುಣೆಗೆ ಹೋಗಿ ಪ್ರಸಿದ್ಧ ಫರ್ಗ್ಯೂಸನ ಕಾಲೇಜ್‌ನಿಂದ ಬಿ.ಎ ಪದವಿ ಪಡೆದರು. ಆದರ ಮುಂದಿನ ಶಿಕ್ಷಣಕ್ಕೆ ಕಾರವಾರ ಕೊಡಿಭಾಗದ ಶ್ರೀ ಶ್ರೀನಿವಾಸ ಭುಜಲೆಯವರು ಆಶ್ರಯ ನೀಡಿದರು. ಪದವೀಧರರಾದ ನಂತರ ಪ್ರಸಿದ್ಧ ಇತಿಹಾಸಕಾರ ಸಂಶೋಧಕ ಆರ್. ಜಿ. ಭಂಡಾರಕರ್ ಅವರ ಸಂಪರ್ಕಕ್ಕೆ ಬಂದರು. ಹಾಗೂ ಭಂಡಾರಕರರ ಕಾರ್ಯವೈಖರಿಗೆ ಆಕರ್ಷಿತರಾಗಿ ಅವರ ಜೊತೆ ಕೆಲಸ ಮಾಡತೊಡಗಿದರು.

ಮುಂದೆ ಅವರಿಗೆ ಗಾಂಧೀಜಿಯವರ ಸತ್ಯಾಗ್ರಹ ವಿಚಾರಕ್ಕೆ ಪ್ರಭಾವಿತರಾಗಿ ತಮ್ಮ ಜನ್ಮಸ್ಥಳ ಕುಮಟಾಕ್ಕೆ ಮರಳಿಹೋದರು ಹಾಗೂ ಕುಮಟಾದ ಗಿಬ್ಬ್ ಹೈಸ್ಕೂಲ್‌ದಲ್ಲಿ ಶಿಕ್ಷಕ ನೌಕರಿ ಮಾಡತೊಡಗಿದರು.ನಂತರ ಆ ವೃತ್ತಿ ಬಿಟ್ಟು ಎಂ. ಎ ಹಾಗೂ ಎಲ್. ಎಲ್. ಬಿ ಮಾಡಿದರು ಹಾಗೂ ಮರಳಿ ಕಾರವಾರಕ್ಕೆ ಬಂದು ವಕೀಲ ವೃತ್ತಿ ಪ್ರಾರಂಭಿಸಿದರು. ಗಾಂಧೀತತ್ವಗಳು, ಖಾದಿ ಮಹತ್ವ ಅರಿತ ಅವರು ಚಹ- ಕಾಫಿ ಇತ್ಯಾದಿ ಯಾವುದೇ ಪಾನಿಯಗಳನ್ನು ಕುಡಿಯುತ್ತಿರಲಿಲ್ಲ. ಸರಳಜೀವನ- ಶಿಸ್ತಿನ ಬದುಕನ್ನೇ ಅವರು ಇಷ್ಟಪಡುತ್ತಿದ್ದರು. ಎಷ್ಟೋ ವರ್ಷ ಅವರು ಕಾರವಾರದ ದಾರುಬಂದಿ ಸಮಿತಿಯ ಸದಸ್ಯರಾಗಿಯೂ ಕೆಲಸ ಮಾಡಿದ್ದರು. ತಮ್ಮ ವಕೀಲ ವ್ಯವಸಾಯದಲ್ಲಿ ಸತ್ಯ ಹಾಗೂ ನ್ಯಾಯದ ತತ್ವ ಪಾಲಿಸಿದರು. ವಿಧವೆಯರು ಹಾಗೂ ದುರ್ಬಲರಿಂದ ಹಣ ಪಡೆಯದೆ ಉಚಿತ ಸೇವೆ ನೀಡುತ್ತಿದ್ದರು.

1930 ರಿಂದ 45 ರ ಸಮಯ ಎರಡನೇ ಮಹಾಯುದ್ಧದ ಕಠಿಣ ಪ್ರಸಂಗ ಭಾರತದ ಅರ್ಥವ್ಯವಸ್ಥೆ ಮೇಲೆ ಕೆಟ್ಟ ಪರಿಣಾಮ ಬೀರಿದ ದಿನ ದೇಶವೂ ಸಹಿತ ಪರಕೀಯರ ಆಳಿಕೆಯಲ್ಲಿತ್ತು. ಭಾರತದಲ್ಲಿ ವಿವಿಧ ಭಾಗದಲ್ಲಿ ಅಂದು ಓಡಾಡಿ ಜನರನ್ನು ಸಂದರ್ಶಿಸಿ ಸಂಘಟಿಸುವುದು ಯಕ್ಷ ಪ್ರಶ್ನೆಯಾಗಿತ್ತು. ಅಂಥ ಸಂದರ್ಭದಲ್ಲೂ ಶ್ರೀ ಮಾಧವ ಶಾನಭಾಗರು ಉತ್ತರಕನ್ನಡ ಜಿಲ್ಲೆ, ದಕ್ಷಿಣಕನ್ನಡ ಜಿಲ್ಲೆ, ಕೇರಳದ ಮಲಬಾರ, ಕೋಚಿನ, ಗೋವಾ, ಮುಂಬಯಿ ಭಾಗದಲ್ಲಿ ಸೈಕಲ್ ತುಳಿದು, ಎತ್ತಿನ ಬಂಡೆ ಮೇಲೆ ,ಬಸ್ಸಿನಲ್ಲೂ, ರೈಲಿನಲ್ಲೂ ಪ್ರವಾಸ ಮಾಡಿ ಆ ಕೊಂಕಣಿಗರನ್ನು ಸಂಘಟಿಸಿ ಪ್ರಥಮ ಕೊಂಕಣಿ ಪರಿಷತ್ ಆಚರಿಸಲು ಯಶಸ್ವಿಯಾದರು. ಅಂದಿನಿಂದ ಇಂದಿನವರೆಗೆ ಅಖಿಲ ಭಾರತ ಕೊಂಕಣಿ ಪರಿಷತ್ ಪ್ರತಿ ಎರಡು ವರ್ಷಕ್ಕೊಮ್ಮೆ ನಿರಂತರವಾಗಿ ನಡೆಯುತ್ತಾ ಬಂದಿದೆ. ದಿ.॥ ಮಾಧವ ಮಂಜುನಾಥ ಶಾನಭಾಗರು ಅಂದಿನ ಸಂಘಟನೆಯಿಂದಾಗಿ ಭಾರತದ ವಿವಿಧ ರಾಜ್ಯದಲ್ಲಿ ಹಲವಾರು (ಸಾವಿರಾರು ಕೊಂಕಣಿ ಸಂಘಟನೆಗಳು) ಹಾಗೂ ವಿದೇಶಗಳಲ್ಲಿ 150 ಸಂಘಟನೆಗಳು, ಕೊಂಕಣಿ ಕಲೆ- ಸಾಹಿತ್ಯ- ಸಂಸ್ಕೃತಿ ರಕ್ಷಣೆ ಅಭಿವೃದ್ಧಿಗಾಗಿ ಶ್ರಮಿಸುತ್ತೇವೆ. ದಿ॥ ಮಾಧವ ಶಾನಭಾಗರು ಕೊಂಕಣಿ ಸಂಸ್ಕೃತಿ ರಾಯಭಾರಿಯೂ, ಕೊಂಕಣಿ ಮಿಶನಿನ ವಿಭೂತಿ ಎಂಬ ಹಲವಾರು ಹೆಸರಿನಿಂದ ಅವರನ್ನು ಸ್ಮರಿಸುತ್ತಾರೆ. ಶ್ರೀಯುತರು ದಿನಾಂಕ 17-01-1950 ರಂದು ನಮ್ಮನ್ನಗಲಿ ಹೋದರು. ಎಲ್ಲ ಕೊಂಕಣಿಗರ ಪರವಾಗಿ ಅವರ ಆತ್ಮಕ್ಕೆ ಶಾಂತಿ ಸಿಗಲಿ ಎಂಬ ಪ್ರಾರ್ಥನೆ.

♦♦♦♦

# 18. ಶಣೈ ಗೊಂಯಬಾಬ

■ ಡಾ. ವಸಂತ ಬಾಂದೇಕರ-ಕಾರವಾರ

ಶ್ರೀ ವಾಮನ ರಘುನಾಥ ಶಣೈರವರ ಜನ್ಮ 23-06-1877 ರಲ್ಲಿ ಗೋವಾ ರಾಜ್ಯದ ಪೋಂಡಾದ ದಿವಚಲೆ ಗ್ರಾಮದಲ್ಲಿ ಆಯಿತು ಇವರ ಕುಟುಂಬದ ಪೂರ್ವಜರು ಪೋರ್ಚುಗೀಸರ ದರ್ಬಾರದ ರಾಜದೂತರಾಗಿದ್ದರು. ಅವರ ಕುಲದೇವರು ಕವಳೆಯ ಶಾಂತಾದುರ್ಗಾ.

ವಾಮನ ಶೆಣೈ ಬಾಲ್ಯದಿಂದಲೇ ಬುದ್ಧಿವಂತರಾಗಿದ್ದರು. ಅವರ ಬಾಲ್ಯದಲ್ಲಿ ಸರಿಯಾದ ಶಾಲೆ ವ್ಯವಸ್ಥೆ ಇಲ್ಲದಿದ್ದರಿಂದ ಪ್ರಾಥಮಿಕ ಶಿಕ್ಷಣ ಕಷ್ಟದಾಯಕವಾಗಿತ್ತು ಮ್ಹಾಪಸಾದಲ್ಲಿ ಗೋಮಾಂತರ ಶಿಕ್ಷಣ ಮಂಡಳಿಯ ಶಾಲೆಯಲ್ಲಿ ನಾಲ್ಕು, ಐದು, ಆರನೇ ವರ್ಗದವರೆಗೆ ಕಲಿತರು ಮುಂದೆ ಪೋರ್ಚುಗೀಸರ ಶಾಲೆಯಲ್ಲಿ ಕಲಿತು ತಾಲೂಕಿಗೆ ಪ್ರಥಮರಾಗಿ ತೇರ್ಗಡೆ-ಯಾದರು. ಛೀಕಾಜಿ ಗುಂಜಿಕರ ಬರೆದ ಪ್ರಸಿದ್ಧ ಸರಸ್ವತಿ ಮಂಡಳ ಪುಸ್ತಕ ಓದಿ ಅದರಿಂದ ಪ್ರಭಾವಿತರಾಗಿ ಕೊಂಕಣಿ ಮಾತೃಭಾಷೆಯ ಮೂಲ ಸಂಸ್ಕೃತ ಎಂದರಿತು ತನ್ನ ಮಾತೃಭಾಷೆಯ ಮೇಲೆ ಅಭಿಮಾನವೆನಿಸತೊಡಗಿತು.

ವಾಮನರಾಯರ ದೊಡ್ಡಪ್ಪ ಚಿಂತಾಮಣಿ ಬಾಬಾ ಮುಂಬಯಿಯಲ್ಲಿ ಅಗ್ರೋ ಬ್ಯಾಂಕಿನ ಶಾಖಾ ಮ್ಯಾನೇಜರಾಗಿದ್ದರು. 1895ರಲ್ಲಿ ಅವರು ನಿವೃತ್ತರಾಗಿ ಗೋವಾಕ್ಕೆ ಬಂದಾಗ ವಾಮನರವರನ್ನು ಕಂಡು ಮುಂಬೈಗೆ ಮರಳಿ ಹೋಗುವಾಗ ಕರೆದುಕೊಂಡು ಹೋದರು. ಗೋವಾದಿಂದ ಮುಂಬೈಗೆ ಬೋಟಿನಲ್ಲಿ ಹೋಗುವಾಗ ಬೋಟಿನಲ್ಲಿ ಒಬ್ಬ ವ್ಯಕ್ತಿ ವಾಮನರನ್ನು ನೋಡಿ ಚಿಂತಾಮಣಿಯನ್ನು ಕೇಳಿದಾಗ ಈ ಗೊಂಯಿಬಾಬಾಗೆ ಮುಂಬೈಗೆ ತಗೊಂಡು ಹೋಗ್ತೀರಾ ಎಂದು. ಆಗ ಚಿಂತಾಮಣಿಯವರು ಹೌದು ನನ್ನ ತಮ್ಮನ ಮಗ ಇವನಿಗೆ ಮುಂಬೈಯಲ್ಲಿ ಇಂಗ್ಲೀಷ್ ಕಲಿಸಲು ಕರೆದುಕೊಂಡು ಹೋಗುತ್ತಿದ್ದೇನೆ. ಎಂದರು. ಈ ಗೊಂಯಿಬಾಬಾ ಎಂಬ ಶಬ್ದವು ವಾಮನರ ಕಿವಿಯಲ್ಲಿ ಸದಾ ಗುಂಯಿಗುಡುತ್ತಿತ್ತು. ಮುಂದೆ ವಾಮನರಾಯರು ಸಾಹಿತ್ಯ ಕ್ಷೇತ್ರದಲ್ಲಿ ತಮ್ಮ ಲೇಖಣಿ ಪೆನ್‌ನೇಮ ಗೊಂಯಿಬಾಬ್ ಎಂದು ಜಗತ್ಪ್ರಸಿದ್ಧರಾದರು.

ಮುಂಬೈಗೆ ಹೋದ ನಂತರ ಚಿಂತಾಮಣಿಯವರು ವಾಮನರವರನ್ನು "ಮರಾಠಾ ಹೈಸ್ಕೂಲಿನಲ್ಲಿ" ಸೇರಿಸಿದರು. ಅವರಿಗೆ ಜಗನ್ನಾಥ ಶಂಕರ ಶೇಠ ಶಿಷ್ಯವೇತನ ದೊರೆಯಿತು ಶಾಲೆ ಕಲಿಯುವಾಗ ಮರಾಠಿ, ಸಂಸ್ಕೃತ. ಇಂಗ್ಲೀಷ ಮೂರು ಭಾಷೆ ಕಲಿಯಲು ಅವಕಾಶ ದೊರೆಯಿತು. 1898ರಲ್ಲಿ ವಾಮನರಾವ ಮೆಟ್ರಿಕ್ ಪ್ರಥಮ ಶ್ರೇಣಿಯಲ್ಲಿ ಪಾಸಾದರು ಮುಂದೆ 1899 ರಲ್ಲಿ ಮರಳಿ ಗೋವಾಕ್ಕೆ ಬಂದರು ಹಾಗೂ ಬಂದು ಇಂಗ್ಲೀಷ ಸ್ಕೂಲಿನಲ್ಲಿ ಶಿಕ್ಷಕರಾಗಿ ವೃತ್ತಿ ಪ್ರಾರಂಭಿಸಿದರು. ಆದರೆ ಅದು ಮನಸ್ಸಿಗೆ ಒಪ್ಪದೇ ರಾಜಿನಾಮೆ ನೀಡಿ ಕರಾಚಿಗೆ ಹೋದರು. ಕರಾಚಿಯಲ್ಲಿ ನಗರಪಾಲೀಕಾ ಕಛೇರಿಯಲ್ಲಿ ಕಾರಕೂನನ ನೌಕರಿ ದೊರೆಯಿತು. ಆದರೆ ಅಲ್ಲಿಯ ಹವಾಮಾನ ಸಂಗತಿಗಳ ರೀತಿ ನೀತಿ ಮನಸ್ಸಿಗೆ ಬಾರದೇ ಅದನ್ನು ಬಿಟ್ಟು ಮರಳಿ ಮುಂಬೈಗೆ ಬಂದರು ಹಾಗೂ ಸ್ಟೆನೋಗ್ರಾಫರ್ ಎಕೌಂಟನ್ಸಿ ಕಲಿತುಕೊಂಡರು. 1902ರಲ್ಲಿ ಯುರೋಪಿಯನ್ ಸಂಸ್ಥೆಯಲ್ಲಿ ನೌಕರಿ ದೊರೆಯಿತು ಹಾಗೂ ಅದೇ ವರ್ಷ ಮದುವೆಯಾದರು.

1903-1904 ರಲ್ಲಿ ವಾಮನರವರಿಗೆ ಒಬ್ಬ ಮಗನಾದನು. ಮಗ 3-4 ವರ್ಷದವನಾದಾಗ ಮಗನಿಗೆ ಮಾತೃಭಾಷೆ ಕೊಂಕಣಿ ಕಲಿಸುವ ದೃಷ್ಟಿಯಿಂದ ತನ್ನ ಪದ್ಧತಿಯಿಂದ "ಕೊಂಕಣಿ ಮೂಲ" ಎಂಬ ಪುಸ್ತಕ ರಚಿಸಿದರು. (ಇದೇ ಪುಸ್ತಕ ಮುಂದೆ 1940ನೇ ಇಸ್ವಿಯಲ್ಲಿ ಗೋಮಾಂತರ ಮುದ್ರಣಾಲಯದಲ್ಲಿ ಮುದ್ರಣಗೊಂಡು ಬೆಳಕಿಗೆ ಬಂದಿತು) ಅದೇ ಸಂದರ್ಭದಲ್ಲಿ ಮಾಧವರಾಯರು "ಅಭಾಗಿ ಸುಬ್ರಾಯ" "ಭಾಡೆಸ್ತರಾಯಬಾಬ" ಎಂದು ಭಾಡೆಸ್ತರಾಯಬಾಬ ಇದು ಪ್ರಸಿದ್ಧ ಇಂಗ್ಲೀಷ ಸಾಹಿತಿ ಓಲಿವರ ಗೊಲ್ಡಸ್ಮಿಥರ್ She Stoops to Conquer ದ ನಾಟಕದ ರೂಪಾಂತರವಾಗಿದೆ.

ವಾಮನರಾವ ಪ್ರಾರಂಭಿಕವಾಗಿ ಮರಾಠಿ ಸಾಹಿತ್ಯದ ರಚನೆ ಮಾಡುತ್ತಿದ್ದರು. ಆ ಸಂದರ್ಭದಲ್ಲಿ ಹಿಂದು ಭಾಷಿಕ ಗೋವಾದವರು ತಮ್ಮ ಮಾತೃಭಾಷೆ ಮರಾಠಿ ಎಂದು ತಿಳಿಯುತ್ತಿದ್ದರು. ಆದರೆ ಅದು ಗೋವಾದ ಕಲಬೆರಕೆ ಭಾಷೆಯಾಗಿತ್ತು. ಇಂಗ್ಲೀಷ್-ಪೊರ್ಚುಗೀಸ-ಮರಾಠಿ ಕಲಿತ ಅಂದಿನ ಗೋವಾದವರು ತಮ್ಮ ಚಿಕ್ಕ ಚಿಕ್ಕ ವ್ಯಾಪಾರಕ್ಕಾಗಿ ರೋಮಿ(ಇಂಗ್ಲೀಷ) ಲಿಪಿಯನ್ನು ಬಳಸುತ್ತಿದ್ದರು. ಗೋವಾದಲ್ಲಿ ಎರಡು ಜನ ಕೊಂಕಣಿಗರು ಭೇಟಿಯಾದರೆ ಮಾತ್ರಭಾಷೆ ಕೊಂಕಣಿ ಮಾತನಾಡದೆ ಇಂಗ್ಲೀಷ, ಪೋರ್ಚುಗೀಸ ಯಾ ಮರಾಠಿಯಲ್ಲೇ ಮಾತನಾಡುತ್ತಿದ್ದರು. ಆದರೆ ಮನೆಯಕಡೆ ಕೆಲಸಕ್ಕಾಗಿ ಬಂದ ಗಾವಡಿ ಜನಾಂಗದವರ ಜೊತೆ ಮಾತ್ರ ಕೊಂಕಣಿ ಮಾತನಾಡುತ್ತಿದ್ದರು.

ಈ ವಿಷಯವನ್ನು ಗಂಭೀರವಾಗಿ ತೆಗೆದು-ಕೊಂಡ ವಾಮನರಾಯರು ಕೊಂಕಣಿ ಮಾತೃಭಾಷಿಕರಿಗೆ ಅದರ ರುಚಿ ಹಾಗೂ ಮಹತ್ವವನ್ನು ತೋರಿಸುವ ದೃಷ್ಟಿಯಿಂದ ವಾಮನರಾಯರು ಇಂಗ್ಲೀಷ ಭಾಷೆಯ ಮಹಾ ಪ್ರಸಿದ್ಧ ನಾಟಕಕಾರರಾದ ಶೇಕ್ಸ್‌ಫೀಯರ್‌ರವರ ನಾಟಕದ ಕಥೆಯನ್ನು ಕೊಂಕಣಿಯಲ್ಲಿ ಬರೆದರು. ಹಾಗೂ 12 ವಿವಿಧ ಶೇಕ್ಸ್‌ಫೀಯರ್ ನಾಟಕದ ರೂಪಾಂತರ ಮಾಡಿ "ಶೇಕ್ಸ್ ಫೀಯರ್ ಖೇಳಾಂಚೆ ಮಾಳ" ತಯಾರ

ಮಾಡಿದರು. ಅದರಂತೆ ಅರೆಬಿಯನ್ ನೈಟ್ಸ್ ಕೆಲ ಕಥೆಗಳು 'ಬಕಾವಲೇಚೆ ಫೂಲ್" ಇವೆಲ್ಲವನ್ನು ಭಾಷಾಂತರ ಮಾಡಿದರು. 'ರೋಮಿಲಿಪಿಯಲ್ಲಿ" (ಇಂಗ್ಲೀಷ ಕೊಂಕಣಿ) ಒಂದು ಸಂಸ್ಥೆ ಈ ಎಲ್ಲ ಪುಸ್ತಕವನ್ನು ಮುದ್ರಿಸಿತು. ಕೊಂಕಣಿ ಗರಿಕೆ ತಮ್ಮದೇ ಮಾತೃಭಾಷೆ ಶೈಲಿಯಲ್ಲಿ ಸರಳ ಸುಂದರವಾಗಿ ಸುಲಭವಾಗಿ ಓದಲು ದೊ-ರೆತು ಇವರೆಲ್ಲ ಪುಸ್ತಕಗಳು ಪ್ರಸಿದ್ಧವಾದವು ಸಾಹಿತ್ಯ ಕ್ಷೇತ್ರದಲ್ಲಿ ಒಂದು ಕ್ರಾಂತಿಯೇ ಆಯಿತು. ಈಗ ಕೊಂಕಣಿ ಕ್ರಿಶ್ಚಿಯನ್ ಬಾಂಧವರು ವಾಮನರವರ ಕಡೆಗೆ ಆದರ ಗೌರವದಿಂದ ಪರಿಚಯಿಸತೊಡಗಿದರು. ಇವರ ಪುಸ್ತಕದಿಂದ ಮುದ್ರಣಕಾರರಿಗೂ ಬಹಳ ಲಾಭವಾಯಿತು ಹಾಗೂ ವಾಮನರಾಯರ ಆರ್ಥಿಕ ಪರಿಸ್ಥಿತಿ ಚೆನ್ನಾಗಿ ಆಯಿತು. ದುಡ್ಡಿಗಿಂತಲೂ ತಾನು ಕೊಂಕಣಿಯಲ್ಲಿ ಬರೆಯಬೇಕೆಂಬ ಇಚ್ಛೆ ಪೂರ್ಣಗೊಂಡಂತಾಯಿತು.

ಈಗ ಕೊಂಕಣಿ ಜನ ಜಾಗೃತರಾದರು ಹಾಗೂ 'ಗೊಂಯ್ಕರ ಹಿಂದೂ ಸಭಾ' ಎಂಬ ಹೆಸರಿನ ಸಂಘಟನೆ ಸ್ಥಾಪಿಸಿದರು. ಆ ಸಂಸ್ಥೆಯಲ್ಲಿ ವಾಮನರಾಯ - ಡಾ. ವೆಂಕಟೇಶ ಕಾಮತ ಹಾಗೂ ಶ್ರೀ ವಾಮನರಾವ ಕೇ-ರೆಕರ ಇದ್ದರು, ಇಂದಿಗೂ ಆ ಸಂಘಟನೆ ಕಾರ್ಯ ನಿರ್ವಹಿಸುತ್ತಿದೆ. ವಾಮನರವರು ಸತತವಾಗಿ 18 ವರ್ಷ ಆ ಸಂಘಟನೆಯನ್ನು ನಡೆಸಿಕೊಂಡು ಬಂದರು. ವಿವಿಧ ಕೊಂಕಣಿ ಕಾರ್ಯಕ್ರಮ, ಸ್ನೇಹಸಮ್ಮೇಳನ, ಅಸಮಾನ್ಯ ವ್ಯಕ್ತಿಯ ಸತ್ಕಾರ, ಯಶಪ್ರಾಪ್ತಿ ಮಾಡಿದ ವಿದ್ಯಾರ್ಥಿಗಳ ಅಭಿನಂದನಾ ಕಾರ್ಯಕ್ರಮಗಳಾದವು. ವಾಮನರಾಯರು ಮೋಗಾಚೆ ಲಗ್ನ "ಝಿಲ್ಬಾ ರಾಣೊ" ಪವನಾಚೊ ತಪಲೆ ನಾಟಕಗಳು ಪ್ರಸಿದ್ಧವಾಗಿವೆ.

1930ರಲ್ಲಿ ಮಡಗಾಂವ (ಗೋವಾ) ದಲ್ಲಿ 15ನೇ ಮಹಾರಾಷ್ಟ್ರ ಸಾಹಿತ್ಯ ಪರಿಷತ್ತಿನ ಸಮ್ಮೇಳನವಾದಾಗ ಗೊಂಯ ಹಿಂದೂ ಸಭಾ ಸಾಹಿತ್ಯ ಪರಿಷತ್ತಿಗೆ ಸಹಕಾರ ನೀಡಿತು. ವಾಮನರಾಯರೂ ಸಕ್ರೀಯವಾಗಿ ಭಾಗವಹಿಸಿದರು.

ವಾಮನರವರು ಮುಂಬೈ ವಿಲೇಪಾರ್ಲೆ ಎಂಬ ಊರಲ್ಲಿ ಒಂದು ಚಿಕ್ಕ ಸ್ವಂತ ಮನೆಯಲ್ಲಿ ವಾಸವಾಗಿದ್ದರು. ಆ ಮನೆಗೆ "ಗೋಮಂತಾಶ್ರಮ" ಎಂದು ಹೆಸರಿತ್ತು. ಶೆಣೈ ಬಾಬಾರ ಧರ್ಮಪತ್ನಿ ಹೆಸರು ಶಾಂತಾಬಾಯಿ ಎಂದಿತ್ತು. ಅವರಿಗೆ ಎರಡು ಹೆಣ್ಣು, ಎರಡು ಗಂಡು ಮಕ್ಕಳಿದ್ದರು. ಶಾಂತಾಬಾಯಿಯವರ ಶಿಕ್ಷಣ ಕಡಿಮೆಯಿದ್ದರೂ ಅಪಾರ ಜ್ಞಾನವಿತ್ತು. ಅವರಿಗೆ ಗೋವಾದ ಲೋಕ ವೇದದ ಹಲವಾರು ಕಥೆಗಳು ತಿಳಿಯುತ್ತಿದ್ದರು. ಅವನ್ನೆಲ್ಲ ಕೇಳಿಸಿಕೊಂಡ ವಾಮನರಾಯರು "ಲೋಕವೇದ" ಹೆಸರಿನ ಸಂಪಾದ ಮಾಡಿ ಬೇರೆ ಬೇರೆ ಪತ್ರಿಕೆ ಮಾಧ್ಯಮದಿಂದ ಹೊರತಂದರು. ಶಾಂತಾಬಾಯಿಗೆ ಗಿಡಮೂಲಿಕೆ ಔಷಧದ ಜ್ಞಾನವೂ ಇತ್ತು. ಅದನ್ನು ಸಂಗ್ರಹಿಸಿ "ವಖತಾಂಚಿ ಸಾಂಗಳ" ಎಂಬ ಹೆಸರಿನಿಂದ ನವೆಂಗೋಂಯ ಪತ್ರಿಕೆ ಮಾಧ್ಯಮದಿಂದ ಬೆಳಕಿಗೆ ತಂದರು.

ಶ್ರೀಯುತರು ರೋಮಿ ಲಿಪಿಯಲ್ಲಿ ಕೊಂಕಣಿಯ 13 ಪುಸ್ತಕಗಳನ್ನು ದೇವನಾಗರಿಯಲ್ಲಿ 27 ಕೃತಿಗಳನ್ನು ರಚಿಸಿದ್ದಾರೆ. ಮಾಧವ ಮಂಜುನಾಥ ಶಾನಭಾಗರ ಪ್ರಥಮ ಅಖಿಲ ಭಾರತ ಕೊಂಕಣಿ ಪರಿಷತ್ ಕಾರವಾರದಲ್ಲಿ ನಡೆದ ಕಾರ್ಯಕ್ರಮಕ್ಕೆ ವಾಮನರಾಯರು ಮುಂಬೈ ಭಾಗದ ಸಂಘಟಕರಾಗಿ ಅತ್ಯುತ್ತಮ ಸಹಕಾರ ನೀಡಿದರು. ಮುಂದೆ 1946ರ ಸುಮಾರಿಗೆ ಕ್ಷಯರೋಗದಿಂದ ಬಳಲುತ್ತಿದ್ದರು. ದಿನಾಂಕ 09-04-1946 ರಂದು ಮುಂಬೈದ ಖಾಸಗಿ ನರ್ಸಿಂಗ್ ಹೋಮದಲ್ಲಿ ಮೃತರಾದರು. ಆದರೆ ಸ್ವಾಭಿಮಾನ, ಹಠವಾದಿಯಾಗಿ ಮಾತೃಭಾಷೆ ಸೇವೆ ಮಾಡಿ ಕೊಂಕಣಿಗರಿಗೆ ದಾರಿದೀಪವಾದರು.

♦♦♦♦



# 19. ವಿಶ್ವದ ಏಕೈಕ ಕೊಂಕಣಿ ಭಾಷಿಕ ತಾಲೂಕು

■ ಡಾ. ವಸಂತ ಬಾಂದೇಕರ-ಕಾರವಾರ

ಕೊಂಕಣಿ ಭಾಷೆಯ ಇತಿಹಾಸ, ಸಾವಿರ ವರ್ಷದ ಹಿಂದಿನದಿದ್ದು 42 ವಿವಿಧ ಕೊಂಕಣಿ ಭಾಷಿಕ ಸಮುದಾಯಗಳಿದ್ದು (ಹಿಂದು-ಮುಸ್ಲಿಂ-ಕ್ರಿಶ್ಚಿಯನ್) 3 ಧರ್ಮದವರಿದ್ದು, ಕನ್ನಡ-ದೇವನಾಗರಿ-ಮಲಯಾಳಂ-ರೋಮ್-ಅರಬಿಯನ್ ಹೀಗೆ 5 ಅವೆಗಳನ್ನು ಹೊಂದಿದ ಗೋವಾ ರಾಜ್ಯದ ರಾಜ್ಯಭಾಷೆಯಾಗಿ ಕೇಂದ್ರ ಸಾಹಿತ್ಯ ಅಕಾಡೆಮಿಯಲ್ಲಿ ಮುನ್ನಡೆ ಪಡೆದ ಹಾಗೂ ಭಾರತದ ಸಂವಿಧಾನದ 8ನೇ ಪರಿಚ್ಛೇಧದಲ್ಲಿ ಈ ಭಾಷೆಗೆ 20-08-1992ರಂದು ರಾಷ್ಟ್ರೀಯ ಮನ್ನಣೆ ಪಡೆದ ವಿಶ್ವದ ಎಲ್ಲಾ ಭಾಗದಲ್ಲಿ ಹರಡಿರುವ ಅಂದಾಜು 50-60 ಲಕ್ಷ ಜನಸಂಖ್ಯೆಯುಳ್ಳ ಶ್ರೀಮಂತ ಭಾಷೆ ಈ ಕೊಂಕಣಿ ಎಂದು ಹೇಳಲು ಹೆಮ್ಮೆ ಅನಿಸುತ್ತದೆ. ಕೊಂಕಣಿಗರು ಹೆಚ್ಚಾಗಿ ಗೋವಾ, ಕರ್ನಾಟಕ, ಮಹಾರಾಷ್ಟ್ರ, ಕೇರಳದಲ್ಲಿದ್ದರೂ ಪೂರ್ತಿ ಕೊಂಕಣಿ ಮಾತನಾಡುವ ಕೊಂಕಣಿ ಕಲೆ-ಸಂಸ್ಕೃತಿ ಬದುಕು ಕಾಣುವ ಏಕೈಕ ತಾಲೂಕೆಂದರೆ ಉತ್ತರ ಕನ್ನಡ ಜಿಲ್ಲೆಯ ಕೇಂದ್ರ ಸ್ಥಾನವಾದ ಕಾರವಾರ ತಾಲೂಕು ಎಂದು ಹೇಳಬಹುದು.

**ಸಂಕ್ಷಿಪ್ತ ಇತಿಹಾಸ** : ಈ ಭಾಗಕ್ಕೆ ಪರಶುರಾಮ ಖಂಡ ಎಂದೂ ಕರೆಯುತ್ತಾರೆ. ಗೋವಾ ರಾಜ್ಯ ಗಡಿಯಲ್ಲಿರುವ ಈ ಕಾರವಾರ ತಾಲುಕು ಅತಿ ಹೆಚ್ಚು 30-35 ವಿವಿಧ ಕೊಂಕಣಿ ಸಮುದಾಯಗಳನ್ನು ಹೊಂದಿದೆ. ಪಾಂಡರಿನದಿ, ಕಾಳಿನದಿ, ಅರಬ್ಬೀ ಸಮುದ್ರದ ಸಂಗಮದ ತಟದಲ್ಲಿರುವ ಈ ತಾಲೂಕನ್ನು 257 ಕ್ರಿ.ಪೂ. ಮೌರ್ಯರು ಆಳಿದರು. ಅಶೋಕ ಮಹಾರಾಜನು ಭೌದ್ಧ ಧರ್ಮ ಪ್ರಸಾರಕ್ಕಾಗಿ ಒಬ್ಬ ಧೂತನನ್ನು ತನ್ನ ಕೇಂದ್ರ ಸ್ಥಾನ ಬನವಾಸಿಯಿಂದ ಚಿತ್ತಾಕುಲದ ಮುಡಗೇರಿ ಗ್ರಾಮಕ್ಕೆ ಕಳುಹಿಸಿಕೊಟ್ಟಿದ್ದನು. ಅದರ ನಂತರ 1119 ರ ವರೆಗೆ ವಿವಿಧ ರಾಜರುಗಳಾದ ಕದಂಬರು, ಚಾಲುಕ್ಯರು, ಭೋಜರು ಹಾಗೂ 1119 ರಿಂದ 1216 ರವರೆಗೆ ಹೋಯ್ಸಳರು ಹಾಗೂ ದೇವಗಿರಿಯವರು, 1216-1318 ರ ವರೆಗೆ ಆಳಿದರು. 1330-1480 ರವರೆಗೆ ವಿಜಯನಗರ ಸಾಮ್ರಾಜ್ಯದ ರಾಜರು ಆಳಿದರು, 1481 ರಿಂದ ವಿಜಾಪುರದ ಆದಿಲಶಾಹಿಗಳು, 1645-1661ರವರೆಗೆ ಶಿವಪ್ಪ ನಾಯಕ ಆಳಿದರು.

ವಿಜಯನಗರದ ರಾಜರ ಆಳ್ವಿಕೆಯಲ್ಲಿ ಪ್ರಥಮವಾಗಿ ಯುರೋಪದಿಂದ ಪೋರ್ಚುಗೀಸರು ಬಂದರು, ನಂತರ ಡಚ್ಚರು, ಪ್ರೆಂಚರು, ಇಂಗ್ಲೀಷರು ಇವರ ಹಿಂದೆ ಬಂದರು. ಇವರೆಲ್ಲರೂ ಚಿತ್ತಾಕುಲಾ, ಕಾರವಾರ ಪ್ರದೇಶಕ್ಕಾಗಿ ಬಡಿದಾಡಿದರು. ಕಾರಣ ಬೈತಖೋಲಿನ ಕಾರವಾರದ ಅಂತರಾಷ್ಟ್ರೀಯ ನೈಸರ್ಗಿಕ ಬಂದರು ಹಾಗೂ ಕಾಳಿನದಿಯ ಚಿಕ್ಕ ಬಂದರುಗಳಾದ (ಕಡವಾಡ-ಚಿತ್ತಾಕುಲಾ-ಕದ್ರಾ ಈ ಮೂರು ಬಂದರುಗಳು) ಇವು ವ್ಯಾಪರಕ್ಕಾಗಿ ಬಹಳ ಉಪಯುಕ್ತವಾಗಿದ್ದವು.

1520ರಲ್ಲಿ ವಾಸ್ಕೋಡಿಗಾಮಾ, 1665 ಹಾಗೂ 1673ರಲ್ಲಿ ಶಿವಾಜಿ ಮಹಾರಾಜ, 1763ರಲ್ಲಿ ಹೈದರಲಿ, 1784ರಲ್ಲಿ ಟಿಪ್ಪೂ ಸುಲ್ತಾನ, 1715ರಲ್ಲಿ ಸೋಂದೆರಾಜರ ಬಸಲಿಂಗರಾಜ, 1790ರಲ್ಲಿ ಇದು ಇಸ್ಟ್‌ಇಂಡಿಯಾ ಕಂಪನಿಗೆ ಸೇರಿದ್ದರಿಂದ ಕೆನರಾ ಜಿಲ್ಲೆ ಎಂದಾಯಿತು. 1862ರಲ್ಲಿ ಮುಂಬೈ ಪ್ರಾಂತ್ಯದಲ್ಲಿದ್ದ ಕಾರವಾರ 1956ರಲ್ಲಿ ಕರ್ನಾಟಕಕ್ಕೆ ಸೇರಿತು.

**ಕಾರವಾರ ತಾಲುಕಿನಲ್ಲಿರುವ ಗ್ರಾಮಗಳು 63 :**

ಅರ್ಗಾ, ಅಮದಳ್ಳಿ, ಆರವಾ, ಅಂಗಡಿ, ಉಳಗೆ, ಕರಿಣಕೋಣ, ಕಡವಾಡ, ಕದ್ರಾ, ಕಡಿಯೆ, ಕಣಸಗೇರಿ, ಕತಾರ, ಕಮರಗಾಂವ, ಕಾರವಾರ, ಕಿನ್ನರ, ಕುಚೇಲಗಾರ, ಕೆರವಡಿ, ಕೈಗಾ, ಕೊಳಗೆ, ಕೊಡಾರ, ಕೋಡಿಬಾಗ, ಕೋಣೆ, ಗೊಟೆಗಾಳಿ, ಗೋಪಶಿಟ್ಟಾ, ಗೋಯರ, ಘಾಡಸಾಯಿ, ಚಿತ್ತಾಕುಲಾ, ಚೆಂಡಿಯಾ, ತೋಡೂರು,, ದೇವಕಾರ, ದೇವಗಡ, ದೇವಳಮಕ್ಕಿ, ನಂದನಗದ್ದಾ, ನಗೆಕೊವೆ, ನಿವಳಿ, ನೈತಿಸಾವರ, ಬರಗಲ್, ಬಾಡ, ಬಾಳೆಮನೆ, ಬಿಣಗಾ, ಬೆಳೂರು, ಬೈತಖೋಲ, ಬೊಳಶಿಟ್ಟಾ, ಭೈರಾ, ಮಕೇರಿ, ಮಾದೇವಾಡಾ, ಮಲ್ಲಾಪುರ, ಮಾಜಾಳಿ, ಮುಡಗೇರಿ, ಮೈಗಿಣಿ, ಲಂಡೆ, ವಿರ್ಜೆ, ವೈಲವಾಡ, ಶಿರವಾಡ, ಶಿರ್ವೆ, ಸಾವಂತವಾಡ, ಸಿದ್ಧರ, ಸುಂಕೇರಿ, ಹಣಕೋಣ, ಕರಿಣ-ಕೋಣ, ಹರ್ತು, ಹಳಗೆಜೂಗ, ಹೊಟೆಗಾಳಿ, ಹೊಸಾಳಿ, ಹೀಗೆ 63 ಗ್ರಾಮಗಳು.

**ಭಾಷಾ ಭಾವೈಕ್ಯ** :

ಇಲ್ಲಿ ಕನ್ನಡ, ಮುಸ್ಲಿಂ, ಮರಾಠಾ ಭಾಷಿಕ ವಿವಿಧ ರಾಜರು ಆಳಿಹೋದ ಈ ಭಾಗವು ಗೋವಾ ಗಡಿಯಲ್ಲಿರುವುದರಿಂದ ಇಲ್ಲಿ ಕನ್ನಡ-ಕೊಂಕಣಿ-ಮರಾಠಿ-ಉರ್ದು ಭಾಷಿಕ ವಿವಿಧ ಸಮುದಾಯದ ಜನರಿದ್ದಾರೆ. ಅವರವರ ಸಂಸ್ಕೃತಿ, ಸಂಸ್ಕಾರ ಆಚರಣೆಗಳು ಹಾಗೂ ಮರಾ,ಠಿ ಕನ್ನಡ, ಕೊಂಕಣಿ, ಉರ್ದು ಭಾಷೆಗಳು ಇಂದಿಗೂ

ಕಾಲನೆಯಲ್ಲಿವೆ. ಹಾಗೂ ಎಲ್ಲರೂ ಭಾಷಾ ಭಾವೈಕ್ಯ, ಕೋಮು ಸೌಹಾರ್ದದಿಂದ ಸೌಹಾರ್ದಯುತವಾಗಿ ಬದುಕುತ್ತಿದ್ದಾರೆ. 400 ವರ್ಷದ ಇತಿಹಾಸವನ್ನು ಚಿತ್ತಾಕುಲದ (ಸದಾಶಿವಗಡ) ಕೋಟೆಯಲ್ಲಿ ಶ್ರೀ ದುರ್ಗಾದೇವಿ ದೇವಸ್ಥಾನ (ಶಿವಾಜಿ ಮಹಾರಾಜರು ಎರಡು ಬಾರಿ ಈ ದೇವಸ್ಥಾನದ ದರ್ಶನ ಪಡೆದಿದ್ದಾರೆ) ಆ ದೇವಸ್ಥಾನದ ಎದುರುಗಡೆ 400 ವರ್ಷ ಹಿಂದಿನ ಹಳೆಯದಾದ ಬಗ್ದಾದದಿಂದ ಬಂದಸೂಫಿ ಸಂತ ಹಜರತಫೀರ ಸಯ್ಯದ ಸಮಶುದ್ಧೀನ ಇಲ್ಲಿ ಬಂದು ನೆಲೆಸಿ ಹಲವಾರು ಪವಾಡಗಳನ್ನು ಮಾಡಿದ್ದು ಅವರ ಸಮಾಧಿ ಇಲ್ಲೇ ಇದ್ದು ದರ್ಗಾವನ್ನು ನಿರ್ಮಿಸಿದ್ದಾರೆ. ಕಳೆದ ನೂರಾರು ವರ್ಷದಿಂದ ಶ್ರೀದುರ್ಗಾ-ದರ್ಗಾ ಪವಿತ್ರ ಮಂದಿರಗಳು ಎದುರು ಬದರಾಗಿದ್ದು ಎಲ್ಲ ಧರ್ಮದವರೂ ಸೇರಿ ಪ್ರತಿವರ್ಷ ಎರಡೂ ಉತ್ಸವಗಳನ್ನು ಆಚರಿಸುತ್ತ ಬಂದಿದ್ದಾರೆ. ಇದು ಇಂದು ಜಗತ್ತಿಗೇ ಹಿಂದು-ಮುಸ್ಲಿಂ ಬಾಂಧವರಿಗೆ ಕೋಮು ಸೌಹಾರ್ದ ಸಂಕೇತದ ಮಾದರಿಯಾಗಿದೆ. ಎಂದು ಹೇಳಬಹುದು.

**ಕಾರವಾರದಲ್ಲಿ ಜರುಗಿದ ವಿವಿಧ ಮಹತ್ವದ ಘಟನಾವಳಿಗಳು :**

• 1883 ರಲ್ಲಿ ಗುರುದೇವ ರವೀಂದ್ರ ನಾಥ ಟ್ಯಾಗೋರರು ಕಾರವಾರದಲ್ಲಿ ಕೆಲಕಾಲ ಉಳಿದು ಇಲ್ಲಿಯ ಸೃಷ್ಟಿ ಸೌಂದರ್ಯ ಕಂಡು ಕಾರವಾರವನ್ನು ಕರ್ನಾಟಕದ ಕಾಶ್ಮೀರ ಎಂದು ಕರೆದಿದ್ದಾರೆ.

• 27-02-1934ರಲ್ಲಿ ಮಹಾತ್ಮಾ ಗಾಂದೀಜಿಯವರು ಒಂದು ರಾತ್ರಿ ಕಾರವಾರದ ಹಳದೀಪುರ ಎಂಬವರ ಮನೆಯಲ್ಲಿ ನೆಲೆಸಿದ್ದರು.

• 04-05-1951ರಲ್ಲಿ ಕಾರವಾರದಲ್ಲಿ 34ನೇ ಅಖಿಲ ಭಾರತ ಮರಾಠಿ ಸಾಹಿತ್ಯ ಸಮ್ಮೇಳನ ಜರುಗಿತ್ತು.

• 1920 ರಲ್ಲಿ ಕಾರವಾರದಲ್ಲಿ ಮೊದಲನೇಯ ರಾಜಕೀಯ ಸಮ್ಮೇಳನ ಜರುಗಿತ್ತು ಅದರ ಕಾರ್ಯದರ್ಶಿಯಾಗಿ ಕೆ. ಆರ್. ಹಳದಿಪುರ ಹಾಗೂ ಎಂ. ಎ. ಶಾನಭಾಗರಿದ್ದರು.

• ಕಾರವಾರದ ಮಾಧವ ಮಂಜುನಾಥ ಶಾನಭಾಗರು 08-07-1939ರಂದು ಪ್ರಥಮ ಅಖಿಲ ಭಾರತ ಕೊಂಕಣಿ ಪರಿಷತ್ ಸಮ್ಮೇಳನ ಆಯೋಜಿಸಿದ್ದರು.

ಈ ಕಾರವಾರವು ಮುಂಬೈ ಪ್ರಾಂತ್ಯಕ್ಕೆ ಸೇರಿದ ಸಂದರ್ಭದಲ್ಲಿ ಇಲ್ಲಿ ಹೆಚ್ಚಾಗಿ ಪ್ರಾಥಮಿಕ ಶಾಲೆಗಳು ಮರಾಠಿಯಲ್ಲಿದ್ದವು (ಕಳೆದ 30 ವರ್ಷದಿಂದ ಈಗ ಕನ್ನಡ ಶಾಲೆಗಳಾಗಿದ್ದು) ಆದರೆ ಈ ಹಿಂದೆಯೂ ಎಲ್ಲರೂ ಕೊಂಕಣಿಯಲ್ಲೇ ಮಾತನಾಡುತ್ತಿದ್ದರು. 30-40 ವರ್ಷದ ಹಿಂದೆ ಕಾರವಾರದ ಕಾಲೇಜಿನಲ್ಲೂ ಕೊಂಕಣಿಯಲ್ಲೇ ಪಾಠ ಮಾಡುವ ರೂಢಿಯಲ್ಲಿತ್ತು. ಇಲ್ಲಿಯ ವೈಶಿಷ್ಟವೇನೆಂದರೆ ಕೊಂಕಣಿಗರಾದ ಕ್ರಿಶ್ಚಿಯನ್ ಕ್ಯಾಥೋಲಿಕ್, ಕೊಂಕಣಮರಾಠಾ ದೈವಜ್ಞ ಬ್ರಾಹ್ಮಣ, ಭಂಡಾರಿ, ಕೊಮಾರಪಂತ, ಗೋಮಾಂತಕ ವಿವಿಧ ಸಮುದಾಯದವರು ತಮ್ಮ ತಮ್ಮ ಮನೆಯಲ್ಲಿ ತಮ್ಮದೇ ಆದ ಶೈಲಿಯಲ್ಲಿ ಕೊಂಕಣಿ ಮಾತನಾಡುತ್ತಾರೆ. (ಇದು ಯಾವುದೇ ರಾಜ್ಯದಲ್ಲಿರುವ ಕೊಂಕಣಿಗರು ಇದೇ ರೀತಿ ಮಾತನಾಡುತ್ತಾರೆ.) ಆದರೆ ಇವರೆಲ್ಲರೂ ಮನೆಯಿಂದ ಹೊರ ಬಂದಾಗ ಮಾತ್ರ ಮಾತನಾಡುವ ಭಾಷೆ ಕಾರವಾರಿ ಕೊಂಕಣಿಯಲ್ಲಿ ಈ ಕೊಂಕಣಿ ಅಂಗಡಿ, ಶಾಲೆ, ದವಾಖಾನೆ, ಬ್ಯಾಂಕ, ಸರ್ಕಾರಿ ಕಛೇರಿಗಳು, ಸಂತೆ, ಮೀನು ಮಾರುಕಟ್ಟೆ, (ತರಕಾರಿ, ಹೂವು, ಹಣ್ಣು, ಹಂಪಲ) ಸ್ಟ್ರೀಟ್ ಮಾರ್ಟ ಎಲ್ಲಿ ಹೋದರೂ ಕಿವಿಯ ಮೇಲೆ ಬೀಳುವ ಒಂದೇ ಕಾರವಾರಿ ಕೊಂಕಣಿ ಶೈಲಿ.

ಬೆಳೆಯುತ್ತಿರುವ ಈ ಕಾರವಾರಕ್ಕೆ ವ್ಯಾಪಾರಕ್ಕಾಗಿ ವಿವಿಧ ರಾಜ್ಯದ ಗುಜರಾತಿ, ಮಾರವಾಡಿ, ಬಂಗಾಲಿ, ಕೆರಳಿಯನ್, ಮರಾಠಿ, ಮದ್ರಾಸಿ ವ್ಯಾಪಾರಿಗಳೂ ರಾಜ್ಯದ ವಿವಿಧ ಭಾಗದ ಕನ್ನಡಿಗರು ಹೂವು, ಎಲೆ, ಕಾಯಿಪಲ್ಯೆ, ಹಣ್ಣು-ಹಂಪಲ ಮಾರುವವರು ಬಂದು ಇಲ್ಲಿ ವ್ಯವಸಾಯ ಮಾಡುತ್ತಿದ್ದಾರೆ. ಆದರೆ ಅವರೆಲ್ಲ ತಮ್ಮ ವ್ಯವಹಾರವನ್ನು ಕಾರವಾರಿ ಕೊಂಕಣಿಯಲ್ಲೇ ಮಾತನಾಡುತ್ತಾರೆ, ಹೀಗಾಗಿ ಇದೊಂದು ಮಾತ್ರ 63 ಹಳ್ಳಿಗಳುಳ್ಳ ಏಕೈಕ ಕೊಂಕಣಿ ಭಾಷಿಕ ತಾಲೂಕು ಎಂದು ಹೇಳಬಹುದು.

**ಕಾರವಾರವು 16ನೇ ಶತಮಾನದಲ್ಲಿ ಪ್ರಸಿದ್ಧ ವ್ಯಾಪಾರಿಕೇಂದ್ರವಾಗಿತ್ತು :**

ಇಂದು ಮುಂಬೈ ಭಾರತದ ಪ್ರಸಿದ್ಧ ವ್ಯಾಪಾರ ಕೇಂದ್ರವಾಗಿದೆ. ಸಂದರ್ಭದಲ್ಲಿ ಕಾರವಾರವು ಪ್ರಸಿದ್ಧಿ ವ್ಯಾಪಾರಿಕೇಂದ್ರವಾಗಿತ್ತೆಂದರೆ ನಂಬಲೂ ಅಸಾಧ್ಯವೆನಿಸಬಹುದು.

ಜಗತ್ತಿನಲ್ಲೇ ಶ್ರೇಷ್ಠ ನೈಸರ್ಗಿಕ ಬಂದರು ಬೈತ-ಖೋಲ (ಕಾರವಾರ) ದಲ್ಲಿದ್ದು 9ನೇ ಶತಮಾನದಲ್ಲಿ ಅರಬರು ಇಲ್ಲಿ ಬಂದು ಗರಮಸಾಲೆ ಮುಂತಾದ ಪದಾರ್ಥಗಳನ್ನು ತಮ್ಮ ದೇಶಕ್ಕೆ ಸಾಗಿಸುತ್ತಿದ್ದರು. ಅವರೇ ಇದಕ್ಕೆ ಬೈತ್-ಎಲ್-ಕೋಲ್ ಎಂದು ಕರೆದರು. ಅಂದರೆ ಸುರಕ್ಷಿತ್ ಅಖಾತ್ ಎಂದರ್ಥ ಇದು ಎರಡು ಗುಡ್ಡದ ನಡುವೆ ನೈಸರ್ಗಿಕವಾಗಿ ಮಾರ್ಪಟ್ಟಿರುವ ಬಂದರು, ಈ ಬಂದರಕ್ಕೆ ಗ್ರೀಕ್ ಮತ್ತು ನಾಗರಿಕತೆಯ ಕಾಲದಿಂದ ಬ್ರಿಟೀಷ್ ಮತ್ತು ಯುರೋಪಿಯನ್ ಕಾಲದವರೆಗೆ ಯಾವಾಗಲೂ ವಿದೇಶಗಳೊಂದಿಗೆ ತನ್ನ ಸಂಬಂಧ ಇಟ್ಟುಕೊಂಡು ಬಂದಿದೆ. 1860ರಲ್ಲಿ ಬ್ರಿಟೀಷರ ಕಡಲ ತಜ್ಞ ಅರ್ಥರಕೋಟನ್ ಈ ಬಂದರು ಜಗತ್ತಿನಲ್ಲಿಯೇ ಉತ್ತಮ ನೈಸರ್ಗಿಕ ಬಂದರು ಎಂದು ಕರೆದಿದ್ದನು. ಈ ಬಂದರಿನ ಸರಾಸರಿ ಆಳ 30 ರಿಂದ 40 ಅಡಿ ಇದ್ದು ಅಲ್ಲಲ್ಲಿ ಇರುವ 5-6 ದ್ವೀಪಗಳು, ದೇವಗಡ, ಕೂರ್ಮಗಡ, ಅಂಜದೀಪ ಮುಂತಾದವು ಈ ಬಂದರನ್ನು ಮಳೆಗಳಿಂದ ಸಂರಕ್ಷಿಸುತ್ತವೆ. ವಿಶ್ವದ ವಿವಿಧ ಸಾಮಗ್ರಿ ತಂದು ಹಾಗೂ ಇಲ್ಲಿಂದ ಬೇರೆ ಸಾಮಗ್ರಿ ತೆಗೆದು-

ಕೊಂಡು ಹೋಗುತ್ತವೆ.

16ನೇ ಶತಮಾನದಲ್ಲಿ ಈ ಬಂದರಿಗೆ ಬಂದು ಇಳಿದ ಸಾಮಗ್ರಿ ಕಾಳಿನದಿಯ ಚಿಕ್ಕ ಬಂದರುಗಳಾದ ಕಡವಾಡ, ಚಿತ್ತಾಕುಲಾ ಮುಖಾಂತರ ಕದ್ರಾದ ಬಂದರಿಗೆ ಹೋಗಿ ತಲುಪುತ್ತಿತ್ತು. ಕದ್ರಾದಲ್ಲಿ ಸರಕುಸಾಮಗ್ರಿಗಳ ಶೇಖರಣೆ ಕೇಂದ್ರ ಮಾಡಿ ಕೊಂಡಿದ್ದು ಅಲ್ಲಿಂದ ಎತ್ತಿನಬಂಡಿ (ಚಕ್ಕಡಿ) ಮೂಲಕ ಅಣಸಿ ಮಾರ್ಗವಾಗಿ ಹುಬ್ಬಳ್ಳಿಗೆ ತಲುಪುತ್ತಿತ್ತು. ಹುಬ್ಬಳ್ಳಿಯಿಂದ ಕರ್ನಾಟಕ ವಿವಿಧ ಬಾಗಗಳಿಗೆ ಹೋಗುತ್ತಿತ್ತು. ಕದ್ರಾದ ಪಕ್ಕ, ಕುರ್ನಿಪೇಠದಲ್ಲಿ ಟ್ರೇಡಿಂಗ್ ಕಂಪನಿಗಳಿದ್ದು ಅಲ್ಲಿ ವಾರಕ್ಕೊಮ್ಮೆ ದೊಡ್ಡ ಸಂತೆ ಜರುಗುತ್ತಿತ್ತು. ಆದಿಲ್‌ಶಾಹಿ ಅರಸರು 1638 ರಲ್ಲಿ ತಮ್ಮ ಆಡಳಿತದಲ್ಲಿ ಒಂದು ಕೋಟೆಯನ್ನು ಕಟ್ಟಿದರು ಅಲ್ಲಿ 1939ರಲ್ಲಿ ರಾಬರ್ಟ ಮಾಸ್ಟರ್ ಎಂಬುವರು ಬ್ರಿಟೀಷರ ಪರವಾಗಿ ಒಂದು ಕಾರ್ಖಾನೆಯನ್ನು ಸ್ಥಾಪಿಸಿದನು ಅಲ್ಲಿ ಸಾವಿರಾರು ಜನ ನೇಕಾರರು ಮಸ್ಲಿನ ವಸ್ತ್ರ ನೇಯುತ್ತಿದ್ದರು. ಇದೇ ಕೆಲಸವನ್ನು ಹುಬ್ಬಳ್ಳಿ-ಧಾರವಾಡ, ಗದಗ, ಗೋಕಾಕದಲ್ಲಿ ಸಾವಿರಾರು ನೇಕಾರರು ನೇಯ್ದು ಈ ಕಾರಖಾನೆಗೆ ಒದಗಿಸುತ್ತಿದ್ದರು ಕಡವಾಡ ಬಂದರಿನಿಂದ ಈ ಭಾಗದ ಪ್ರಥಮದರ್ಜೆ ಅಕ್ಕಿಯು ರಪ್ತಾಗುತ್ತಿತ್ತು.

ಬಿಜಾಪುರದ ಆದಿಲ್‌ಶಾಹಿ ರಾಜರಕಾಲದಲ್ಲಿ ಬಿಜಾಪುರ, ಹುಬ್ಬಳ್ಳಿಯ ಮುಸ್ಲಿಂ ಭಕ್ತರು ಮಕ್ಕಾಗೆ ಹೋಗಲು ಕದ್ರಾದವರೆಗೆ ಬಂದು ಅಲ್ಲಿಂದ ಕಡವಾಡ ಬಂದರ ತಲುಪುತ್ತಿದ್ದರು, ಅವರೆಲ್ಲ ಭಕ್ತಾಧಿಗಳನ್ನು ಹೊತ್ತು ಒಂದು ಹಡಗು ಈ ಕಡವಾಡದಿಂದ ಗುಜರಾತ ಸೂರತ್‌ಗೆ ಹೋಗುತ್ತಿತ್ತು ಅಲ್ಲಿಂದ ಮುಂದೆ ಅವರು ಮಕ್ಕಾಗೆ ಪ್ರಯಾಣ ಮಾಡುತ್ತಿದ್ದರು.

ಕಡವಾಡದ ಪಕ್ಕದ ಸುಂಕೇರಿ ಗ್ರಾಮವಿದ್ದು ಇಲ್ಲಿ ಸುಂಕ ವಸೂಲಿ ಮಾಡುವ ಕೇಂದ್ರವಾಗಿತ್ತು ಅದಕ್ಕೆ ಸುಂಕದಕೇರಿ ಹೋಗಿ ಅದು ಇಂದು ಸುಂಕೇರಿಯಾಗಿದೆ. ಕಾರಣಾಂತರದಿಂದ ಕಡವಾಡದ ನೂತನ ಕಾರಖಾನೆ 1789ರಲ್ಲಿ ಮುಚ್ಚಲ್ಪಟ್ಟಿತು. ಕಾರವಾರವು 1638ರಲ್ಲಿ ಪ್ರಸಿದ್ಧ ವ್ಯಾಪಾರಿಕೇಂದ್ರ ವಾಗಿದ್ದಾಗ ಇಂದಿನ ಬೃಹತ್ ಮುಂಬೈ ಆಗ ಚಿಕ್ಕ ದ್ವೀಪವಾಗಿತ್ತು. ಇಂಗ್ಲೀಷರು ಆ ದ್ವೀಪವನ್ನು 1668ರಲ್ಲಿ ವಾರ್ಷಿಕ 10 ಪೌಂಡಗೆ ಬಾಡಿಗೆ ನಾತೆಯಿಂದ ಸ್ಥಳ ಪಡೆದರು. 1752ರವರೆಗೂ ಅವರು ಕಾರವಾರದಿಂದಲೇ ವಹಿವಾಟು ಇಟ್ಟುಕೊಂಡು ಮುಂಬೈಗೆ ಹೋಗಿ ಬರುತ್ತಿದ್ದರು. ಮುಂದೆ84 ವರ್ಷದ ನಂತರ ತಮ್ಮ ವ್ಯಾಪಾರಿ ಕೇಂದ್ರವನ್ನು ಮುಂಬೈಗೆ ಸ್ಥಳಾಂತರಿಸಿದರು ಹಾಗೂ ಮುಂಬೈಯನ್ನು ಅಭಿವೃಧ್ಧಿ ಮಾಡತೊಡಗಿದರು.

ದಿ. ಶ್ರೀ ಮಾಧವ ಅನಂತ ದೇಸಾಯಿ ಮೂಲ ಕುಮಟಾ ತಾಲೂಕಿನಲ್ಲಿ 21-07-1911ರಲ್ಲಿ ಜನಿಸಿ ಮುಂದೆ ಮುಂಬೈ ಹೋಗಿ ನೆಲೆಸಿದರು ಅವರು 1969ರಲ್ಲಿ ಬರೆದ ಚಿತ್ತಾಕುಲ-ಕಾರವಾರ ಎಂಬ ಪುಸ್ತಕದಲ್ಲಿ ಮೇಲಿನ ಎಲ್ಲಾ ಮಾಹಿತಿ ನೀಡಿದ್ದಾರೆ ಏನೆಂದರೆ ಮುಂದೊಂದು ದಿನ ಇದೇ ಮುಂಬೈ ನಗರವು ಹಲವಾರು ಸಮಸ್ಯೆಗಳಿಂದಾಗಿ 50 ವರ್ಷದಲ್ಲಿ ಮತ್ತೆ ವ್ಯಾಪಾರಸ್ಥರು, ಪ್ರಜ್ಞಾವಂತರು ಕಾರವಾರಕ್ಕೆ ಹೋಗಿ ನೆಲೆಸಲಿದ್ದಾರೆ ಎಂದು ಅವರ ಮಾತು ನಿಜವಾಗಿದೆ. ಈ 50 ವರ್ಷದಿಂದ ಕಾರವಾರ ನೌಕಾನೆಲೆ ಯೋಜನೆ ಕೊಂಕಣರೈಲ್ವೆ, ಕೈಗಾ ಅಣುಸ್ಥಾವರದಿಂದಾಗಿ ಭಾರತದ ಮೂಲೆ ಮೂಲೆಯಿಂದ ಜನ ಬಂದಿದ್ದಾರೆ. ಭವ್ಯ ಇಮಾರತಗಳು, ರಸ್ತೆಗಳು ಬೆಳೆಯುತ್ತಿವೆ ಹಾಗೂ ಮುಂಬೈ ನಗರ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದೆ.

♦♦♦♦



# 20. ಪುರಾತನ ಕೊಂಕಣಿ ಭಾಷಿಕರ ಒಂದು ಗ್ರಾಮ

■ ಶ್ರೀಮತಿ ಲಕ್ಷ್ಮೀ ವಸಂತ ಬಾಂದೇಕರ, ಕಾರವಾರ

**ಗ್ರಾಮದ ರಚನೆ** : 200 ವರ್ಷದ ಹಿಂದೆ ಕೊಂಕಣಿ ಭಾಷಿಕರ ಒಂದು ಗ್ರಾಮವು ಸ್ಥಾಪನೆಯಾಗಬೇಕಾದರೆ ಮುಖ್ಯವಾಗಿ ನೀರಿನ ವ್ಯವಸ್ಥೆ ಇರುತ್ತಿತ್ತು. (ನದಿ-ಕೆರೆ-ಬಾವಿಗಳಿಂದ) ಆಗ ಕೊಂಕಣಿ ಭಾಷಿಕ ವಿವಿಧ ಸಮುದಾಯದವರ ಕಸುಬುಗಳು ಪ್ರತಿಯೊಬ್ಬರಿಗೂ ಅವಲಂಭನ ವಿರುತ್ತಿದ್ದವು. ಬೇಸಾಯ ಮಾಡುವವರು ಕುಂಬಾರರು, ಬಡಿಗರು, ವೈಶ್ಯರು, ಚರ್ಮಗಾರರು, ಸೋನಗಾರರು ಇತ್ಯಾದಿ ಇವರೆಲ್ಲರೂ ಸೇರಿ ಒಂದು ಗ್ರಾಮವಾಗುತ್ತಿತ್ತು.

ಇವರೆಲ್ಲರು ತಮ್ಮ ತಮ್ಮ ವೃತ್ತಿಯ ಸಮುದಾಯದ ವಾಡೆಗಳನ್ನಾಗಿ ಬೇರೆ ಬೇರೆ ಮಾಡಿಕೊಂಡು ವಾಸಿಸುತ್ತಿದ್ದರು. ಉ.ದಾ. ಬೇಸಾಯ ಮಾಡುವವರು ಒಂದೇ ಕಡೆ ತಮ್ಮ ತಮ್ಮ ಮನೆ ಮಾಡಿಕೊಂಡು ವಾಸಿಸುತ್ತಿದ್ದರು. ಕಮ್ಮಾರರು, ಕುಂಬಾರರು ಹೀಗೆ ಪ್ರತ್ಯೇಕ ವಾಡೆಗಳನ್ನಾಗಿ ಮಾಡಿಕೊಂಡು ವಾಸಿಸುತ್ತಿದ್ದರು. ಅದಕ್ಕೆ ಆಚಾರಿವಾಡಾ, ಕುಂಬಾರವಾಡಾ, ಸೋನಾರವಾಡಾ, ಚಾಂಬಾರವಾಡಾ ಹೀಗೆ ಹೆಸರುಗಳಿಂದ ಕರೆಯುತ್ತಿದ್ದರು. ಪ್ರತಿಯೊಬ್ಬರಿಗೂ ತಮ್ಮ ತಮ್ಮ ಸಂಸಾರದ ಬದುಕಿಗೆ ಕುಂಬಾರರ ಗಡಿಗೆ. ವ್ಯಾಪಾರರ ಖರೀದಿಸಿದ ಸಾಮಾನುಗಳು, ಬಡಿಗರ ಕಟ್ಟಿಗೆ ವಸ್ತುಗಳು ಬೇಕಾಗುತ್ತಿದ್ದವು. ಆಗ ಅವರು ಅವರ ವಾಡೆಗಳಿಗೆ ಹೋಗಿ ಖರೀದಿ ಮಾಡಿಕೊಂಡು ಬರುತ್ತಿದ್ದರು.

**ಮನೆಯ ರಚನೆ** : ಸಾಮಾನ್ಯವಾಗಿ ಹಿಂದಿನಕಾಲದ ಮನೆಗಳು ಹುಲ್ಲಿನ ಹೊದಿಕೆಯ ಗುಡಿಸಲುಗಳು ಯಾ ಕರಿಹಂಚಿನ (ನಾಡಹಂಚಿನ) ಮನೆಗಳಿರುತ್ತಿದ್ದವು. ಮಣ್ಣನ್ನು ಕಲಸಿ ಅದರಲ್ಲಿ ಕಡ್ಡದ ಹುಲ್ಲನ್ನು ಬೆರೆಸಿ ಗೋಡೆಗಳನ್ನು ಕಟ್ಟಿಕೊಳ್ಳುತ್ತಿದ್ದರು. ಇವರ ಮನೆಗೆ 2 ಕೋಣೆಗಳಿರುತ್ತಿದ್ದವು. ಹಾಗೂ ಚಿಕ್ಕದೊಂದು ಪಡವಿ (ಹಿಂದಿನಭಾಗ) ಇರುತ್ತಿತ್ತು.

ಆ ಸಮಯದಲ್ಲಿ ದೊಡ್ಡ ಮನೆಗಳೆಂದರೆ ಭಟ್ಟರ, ಬ್ರಾಹ್ಮಣ ಕುಲಕರ್ಣಿಯವರ ದೊಡ್ಡ ಮನೆಗಳಾಗಿದ್ದವು. ಆ ಮನೆಗಳಿಗೆ ದೇವರ ಕೋಣೆ, ಅಡುಗೆ ಮನೆ, ಹೆರಿಗೆಕೋಣೆ, ಮಲಗುವ ಕೋಣೆ ಜೊತೆಗೆ ಮುಂದೊಂದು ವಿಶಾಲವಾದ ಅಂಗಳ 8 ಚೌಕಗಳು ಇರುತ್ತಿದ್ದವು. ಅಲ್ಲದೇ ಭತ್ತ ಕುಟ್ಟುವ ವಳ್ಳು ಇರುತ್ತಿತ್ತು. ಅಂಗಳದಲ್ಲಿ ತುಳಸಿಕಟ್ಟೆ, ಕೆಲ ಮನೆಗಳಲ್ಲಿ ಎರಡು ಬೇರೆ ಬೇರೆ ಒಲೆಗಳಿರುತ್ತಿದ್ದವು. ಒಂದು ಶಾಖಾಹಾರಿಯಾದರೆ, ಇನ್ನೊಂದು ಮಾಂಸಾಹಾರಿಗಾಗಿ, ಬೆಳಗ್ಗೆ ಎದ್ದತಕ್ಷಣ ಸೆಗಣಿಯಿಂದ ಒಲೆಸಾರಿಸಿ ರಂಗೋಲಿ ಹಾಕುವ ಪದ್ಧತಿ ಇತ್ತು.

ಯಾವ ಮನೆಯಲ್ಲಿ ದನಕರುಗಳು ಇದ್ದವು ಆ ಮನೆಯಲ್ಲಿ ದನದ ಕೊಟ್ಟಿಗೆ ಮನೆಹೊರಗೆ ಕಟ್ಟುತ್ತಿದ್ದರು. ಕೋಳಿಸಾಕುವವರು ಕೋಳಿಗೂಡನ್ನು ಕಟ್ಟುತ್ತಿದ್ದರು.

**ಹಿಂದಿನ ಗ್ರಾಮದ ವಿವಿಧ ವ್ಯವಸಾಯ** :

ಕುಂಬಾರರು ಮಣ್ಣಿನ ಗಡಿಗೆ ಪಾತ್ರೆ ಮಾಡಿ ಮಾರಾಟ ಮಾಡಿದರೆ, ಮ್ಯಾದಾರರು ಬಿದಿರಿನ ವಿವಿಧ ವಸ್ತುಗಳನ್ನು ಕಾಲಿಗೆ ಚಪ್ಪಲಿಗಳನ್ನು ಚಮಗಾರರು, ತಾಮಣಕಾರರು ತಾಮ್ರದ, ಹಿತ್ತಾಳೆ ಪಾತ್ರಗಳನ್ನು ಆಚಾರಿಯವರು ಶೇಡಿ, ಗುದ್ದಲಿ, ಕುಡಗೋಲು, ಕತ್ತಿ ಇತ್ಯಾದಿ ಬಡಿಗರು ವಿವಿಧ ಕಟ್ಟಿಗೆ ವಸ್ತುಗಳನ್ನು, ಸೋನಗಾರರು ಬಂಗಾರ ಬೆಳ್ಳಿಯ ಅಲಂಕಾರ ವಸ್ತುಗಳನ್ನು ಮದುವೆ, ಮುಂಜಿಗೆ ಪಂಚವಾದ್ಯ (ವಾಜಂತ್ರಿ)ಗಳು, ಕೇಶ ಕರ್ತನಕ್ಕೆ ಮಹಾಲೆಗಳು, ಬಟ್ಟೆ ಇಸ್ತ್ರಿ ಮಾಡಿಕೊಡಲು ಧೋಬಿಗಳು, ದೇವರ ಪೂಜೆ, ಲಗ್ನ ಸಮಾರಂಭ, ಪಂಚಾಂಗ ನೋಡಲು ದೇವಸ್ಥಾನದ ಪಕ್ಕ ಭಟ್ಟರ ವಾಸದ ಮನೆ, ಮೀನು ಮಾರಾಟ ಮಾಡಲು ಅಂಬಿಗರು, ಪಾಗಿಗಳು, ಖಾರ್ವಿ, ಗಾಬಿತರು ಇರುತ್ತಿದ್ದರು.

ಹಿಂದಿನ ಕಾಲದಲ್ಲಿ ಈಗಿನಂತೆ ಪೇಟೆ, ಸಂತೆ, ಅಂಗಡಿಗಳು ಇರುತ್ತಿರಲಿಲ್ಲ. ಆದ್ದರಿಂದ ಆದಷ್ಟು ಮನೆಯಲ್ಲೇ ವ್ಯವಸ್ಥೆ ಮಾಡಿಕೊಳ್ಳಬೇಕಾಗುತ್ತಿತ್ತು. ಆದ್ದ-ರಿಂದ ತಮಗೆ ಬೇಕಾದ ಕಾಯಿಪಲ್ಯೆಗಳನ್ನು ತಮ್ಮ ಮನೆ ಹಿತ್ತಲ ತೋಟದಲ್ಲಿ ಕಾಯಿಪಲ್ಯೆ, ದೇವರಿಗಾಗಿ ಹಾಗೂ ಮುಡಿಯಲುವಿವಿಧ ಹೂವುಗಳನ್ನು ಬೆಳೆಸುತ್ತಿದ್ದರು. ಪ್ರತಿ ಮನೆಯಲ್ಲಿ ಕೋಳಿ ಸಾಕಣೆ ಇರುತ್ತಿತ್ತು. ಇದರಿಂದ ತತ್ತಿಗಳು ಸಮಯ ಸಂದರ್ಭ ಮನೆಗೆ ಅತಿಥಿಗಳು ಬಂದಾಗ ಯಾ ಜಾತ್ರೆ ಉತ್ಸವಕ್ಕಾಗಿ ಅವು ಉಪಯೋಗ ಬರುತ್ತಿದ್ದವು. ಮಳೆಗಾಲದ 3-4 ತಿಂಗಳು ಮೊದಲು ಒಣಮೆಣಸು, ಬೆಲ್ಲ, ಉಳ್ಳಾಗಡ್ಡಿ, ಶಿವುಡು ಅಕ್ಕಿ, ಅವಲಕ್ಕಿ ಉಪ್ಪು ಮೆಣಸಿನಕಾಯಿ ಇಂಥವುಗಳನ್ನು ಸಂಗ್ರಹಿಸಿ ಇಡುತ್ತಿದ್ದರು.

**ಗ್ರಾಮೀಣ ಭಾಗದ ದೇವರು (ದೇವರ ಕಲ್ಪನೆ)** :

ಸುಂದರ ರೂಪ, ಸುಂದರ ವಸ್ತ್ರ ಹಾಗೂ ಅಲಂಕಾರ ಹಾಕಿ ಬಲಿಷ್ಠ ಆಗಿದ್ದ ಅವರ ಜೊತೆಗೆ ಯಕ್ಷ, ಗಂಧರ್ವ ಅಪ್ಸರಾ ಇರುತ್ತಾರೆ. ಹೀಗೆ ಅನೇಕ ರೂಪಗಳು ಅವರ ಮನದಲ್ಲಿ ಇರುತ್ತಿತ್ತು. ದೈತ ದಾನವರು ಕೆಟ್ಟ ಶಕ್ತಿ ಇದ್ದರೆ, ದೇವರು ಅವರನ್ನು ಆ ಸಂಕಷ್ಟದಿಂದ ಪಾರು ಮಾಡುತ್ತಾನೆ ಎಂಬ ಕಲ್ಪನೆ ಇತ್ತು. ಪ್ರತಿಯೊಂದು ದೇವರ ಅಸ್ತ್ರ-ಶಸ್ತ್ರ ಅವರ ವಾಹನಗಳು ಪ್ರಾಣಿ ಪಕ್ಷಿಗಳಿದ್ದವು. ಆದ್ದ-

ರಿಂದ ಭೂಮಿಯ ಮೇಲೆ ಆಯಾ ದೇವರ ದೇವಸ್ಥಾನ ಕಟ್ಟಿ ಪೂಜೆ ಮಾಡತೊಡಗಿದರು. ಪ್ರತಿಯೊಬ್ಬರಿಗೂ ಮೂಲವಾಗಿ ಕುಲದೇವರು ಹಾಗೂ ನಂತರ ಗ್ರಾಮ ದೇವರಿಗೆ ಮಾನ ಕೊಡುತ್ತಿದ್ದರು ಹಾಗೂ ಪ್ರತಿ ಮನೆಯ ದೇವರ ಕೋಣೆಯಲ್ಲಿ ಒಂದು ಕಟ್ಟಿಗೆಯಿಂದ ಮಾಡಿದ ಕಂಬವನ್ನು ಮಾಡಿ ಮನೆ ಪ್ರವೇಶ ಮಾಡುವ ಸಂದರ್ಭದಲ್ಲಿ ಭಟ್ಟರ ಕೈಯಿಂದ ಪೂಜಿಸಿ ಹುಗಿದಿರುತ್ತಾರೆ ಹಾಗೂ ಪ್ರತಿದಿನ ಅದಕ್ಕೆ ಪೂಜೆಯಾಗುತ್ತದೆ. ಅದಕ್ಕೆ ಮನೆಯವರು ಪುರಸವೆಂದು ಕರೆಯುತ್ತಾರೆ. ಒಂದು ರೀತಿ ಮನೆಯ ರಕ್ಷಕ ದೇವರಿದ್ದಂತೆ.

**ದೇವಚಾರ** :

ಇವರಿಗೂ ದೇವರಿಗೆ ನೀಡುವ ಮಾನ ಕೊಡುತ್ತಾರೆ. ದೇವಚಾರ ಹೆಚ್ಚಾಗಿ ಗಿಡದ ಮೇಲೆ ಇರುತ್ತದೆ ಹಾಗೂ ತಮಗೆ ಸಂಕಷ್ಟ ಬಂದಾಗ ಬಂದು ಸಹಾಯ ಮಾಡುತ್ತದೆ ಎಂದು ನಂಬಿಕೆ ದಾರಿತಪ್ಪಿದವರಿಗೆ ದಾರಿ ತೋರಿಸುವುದು ಪ್ರವಾಸದಲ್ಲಿರುವಾಗ ನಮ್ಮ ಜೊತೆ ಉಳಿದು ಸಹಾಯ ಮಾಡುತ್ತದೆ ಹೀಗೆ ನಂಬಿಕೆಯಿಂದ ಆ ವಠಾರದಲ್ಲಿರುವ ನಂಬಿದ ಗಿಡದ ಬುಡದಲ್ಲಿ ವಾರದಲ್ಲಿ ಒಂದು ಸಲ ಸೇರೆ ಹಾಗೂ ವರ್ಷದಲ್ಲಿ ಎರಡುಸಲ ಉಡಿ ಹಾಗೂ ಕೋಳಿಯ ಬಲಿ ಕೊಡುತ್ತಿದ್ದರು. ಅದರಲ್ಲೂ ಹಲವಾರು ಪ್ರಕಾರಗಳಿವೆ.

**ಹಾಪಸಿ**– ಇದು ಸುಡಗಾಡದಲ್ಲಿರುತ್ತದೆ, **ಮ್ಹಾರು**– ಇದು ಹೊಲದ ಹತ್ತಿರ ಇರುತ್ತದೆ. **ದೇವಚಾರ**– ಜನ ವಾಸವಿರುವ ಸ್ಥಳದಲ್ಲಿ ಇರುತ್ತದೆ, **ಕೌದಿಗೆ**– ಕಾಡಿನ ಗುಡ್ಡದ ಹತ್ತಿರ ಇರುತ್ತದೆ. **ನಾಸ**– ಇದು ಊರಿನ ಸೀಮೆಯ ರಕ್ಷಣೆ ಮಾಡುತ್ತದೆ. ನಾಸ ಎಂದರೆ ನಷ್ಟ ಎಂಬ ಅರ್ಥ (ಅಂದರೆ ನಷ್ಟ ಮಾಡುವುದು) ಅದಕ್ಕೆ ಶಾಂತ ಇಡಲು ರವಿವಾರ, ಬುಧವಾರಕ್ಕೊಮ್ಮೆ ಅವನ ಹೆಸರಿನಿಂದ ಮನೆಯ ತೋಟದಲ್ಲಿ 7 ಎಲೆಗಳ ಮೇಲೆ ಒಂದೊಂದು ಹನಿ ಸೆರೆ ಹಾಕಿ ಉದ್ದಿನ ಕಡ್ಡಿ ಬೆಳಗುತ್ತಾರೆ. ದೀಪ ಹಾಗೂ ಮೇಣ ಬತ್ತಿಯನ್ನು ಹಚ್ಚುತ್ತಾರೆ.

**ಭೂತಾವಳ (ದೆವ್ವ)** :

ಮನುಷ್ಯನು ಅತೃಪ್ತನಾಗಿ ಸತ್ತರೆ ಮುಕ್ತಿ ಇಲ್ಲದೇ ಅವನು ದೆವ್ವನಾಗುತ್ತಾನೆ ಎಂಬ ನಂಬಿಕೆ. ದೆವ್ವ ಆಯಾ ಮನೆಗೆ ಸಂಬಂಧಿಸಿದ್ದರೆ ಅವರಿಗೆ ತೊಂದರೆ, ವಠಾರದ ದೆವ್ವವಿದ್ದರೆ ವಠಾರದರೆಲ್ಲರಿಗೂ ತೊಂದರೆ ಕೊಡುತ್ತದೆ ಎಂಬ ನಂಬಿಕೆ ಇತ್ತು. ಊರಿನಲ್ಲಿ ದೆವ್ವದ ಜೊತೆ ಮಾತನಾಡುವ ಘಾಡಿ ಇರುತ್ತಿದ್ದು ಆ ಆ ಜನರ ಹೇಳಿಕೆ ಕೇಳಿ ದೆವ್ವ ಹಿಡಿದ ಮನುಷ್ಯನಿಗೆ ಬೆತ್ತದಿಂದ ಬಡಿದು ಅವನು ಯಾರಿಗೆ ಸಂಬಂಧ ಪಟ್ಟವನು, ಇವನ ಮೈಯಲ್ಲಿ ಏಕೆ ಬಂದನು, ಅವನ ಬೇಡಿಕೆ ಏನಿದೆ ಎಂದು ಕೇಳಿ ಬೆತ್ತದಿಂದ ಬಡಿದು ಭೂತವನ್ನು ಅವನ ಮೈಯಿಂದ ಬೇರ್ಪಡಿಸುತ್ತಿದ್ದರು. ದೆವ್ವಗಳಲ್ಲೂ ವಿವಿಧ ಪ್ರಕಾರಗಳಿವೆ.

**ಖೇತ್ರಿ** – (ಮದುವೆಯಾದ ಗಂಡು ಅಪಘಾತದ[illegible] ಮರಣ ಹೊಂದಿದರೆ)

**ದಿಣೊ** (12 ವರ್ಷ ವಯಸ್ಸಾಗುವ ಮೊದಲು ಮರ[illegible] ಹೊಂದಿದರೆ)

**ವಾರಗತ** (ಭ್ರಷ್ಟ ಹೆಣ್ಣು ಮಗಳು ತೀರಿಕೊಂಡರು)

**ಹಿಂದಿನ ಕಾಲದ ವಿವಿಧ ವ್ಯವಸಾಯುಗಾರ[illegible] ಸಲಕರಣೆಗಳು ಈ ಕೆಳಗಿನಂತಿವೆ** –

(ಹತ್ಯಾರ–ಆವತಾ)

– **ಶೇತಕಾರಚಿ ಆವತಾ (ಬೇಸಯಗಾರ ಒಕ್ಕಲಿಗ[illegible] ಸಲಕರಣೆಗಳು**

ನಾಂಗರ–ದಾಂತೊ–ಧಿವಳೊ–ಗುಟ್ಟು–ಬೇರೆ–[illegible] ಕುದಳ–ಪಾಣಕುದಳಕುರೇಡ–ಅಳಯು–ನಿವಳೋ–[illegible] ನರಪೇಣಿ–ಪಾರಯು–ಪಿಕಾಸ–ಪಾವಡೊ–ಉಳೊ–[illegible] ಕೊಯತಿ–ಕೊಯಿತೋ–ಕೋಯಿತುಲ್–ಬೆನುಲೆ–[illegible] ಮೇಡಕುಳ–ದಾಬಣ–ಕಾತನೆ–ಕಿಲ್ಲರಕಾತನೆ–ಕಿಮೊ

– **ಚಾಮರಾಚಿ (ಚಮಗಾರರು)**

ರಂಪಿ, ಪಾರಯ, ದಾಬಣ, ಸುರಿ, ತುತಿಯಾ, ಓಡಣಿ – **ಮೆಸ್ತಾಚಿ (ಬಡಿಗನ)** ಭಾತೋ, ಖಣ, ಕಾನಸ, ಸಾಣಸ, ತೊ, ಖರವತ, ತಿರ್ವೊಟ, ತುತಿಯೊ, (ಹಾತೋಡಿ ಲಾಕಡಾಚಿ) ವಾದ್ರೆಕಸಳ, ಏಕದಾರೊ ಕಸಳ, ಕಂಡ್ರಾ, ಬೆರಣ ತೊಪಣ, ತೋಪಣದಾಂಡೆ, ಖರವಾತ ಹಾತೋಡ, ಪಾವಡಿ, ಭೀಡ, ಟೇಪ, ಪೆನ್ಸಿಲ್, ಗಿರಮಿಟ, ಸಾಣಿ, ಘಾತೋರ

– **ಶೇಟಾಚಿ (ಸೋನಗಾರ)**

ಏರಣ, ಕೊಳಮಿ, ನಿವಳಣಿ, ಪಟಕಳಣಿ, ಮಾರ್ಕ, ಗೇವೊ, ಮೇರತೆಲ, ಕಂಪಾಸ, ಜಿಂತ್ರ ತಾಕಡಿ ದಿರ್ಬೊ, ಗೊಟಲಿ, ಖರವತ, ಸೇವಣೊ, ಕಾತರ, ಗೇವಿ, ದೊಡರೆ, ಚಿಮಣಿ, ಸಾಣಸ, ತುರ್ಕೆತ, ಫುಂಕಣಿ, ತೋರ್ಣ, ಸಳ, ಕಾನಸ, ಗಾಂಟ್ಯೊ ಮಾಸ ಆಗೆಂಟ

– **ಮ್ಹಾಲ್ಯಾಚಿ (ನಾಪಿತ–ಕ್ಷೌರಿಕ)**

ಕಾತರ, ಫಣಿ, ವಾಖರ, ಆರಶಿ

– **ಮ್ಹಾರಾಚಿ (ಮ್ಯಾದಾರರ)**

ಕೊಯತಿ–ಕೊಯತೊ ಸುರೀ, ಭೋದ್ದೋ, ಲ್ಯಾಂಬ, ಹಾತೋಡಿ, ಇನ್ನೆ

– **ಕುಂಬಾರಾಚಿ (ಕುಂಬಾರರ)**

ಖೊರೆ, ಪಿಕಾಸ, ಪಾರಯ, ಚೌಕ (ಚಕ್ರ), ಪೆಡ್ನಿ, ಬುಟಿ

– **ಮಡಿವಾಳಾಚಿ (ಧೋಬಿ)**

ಇಸ್ತ್ರಿ, ಕದೆ, ತಸ್ತ, ಭಾಣ, ಸಾಬಣ

– **ನುಸ್ತೆಕಾರಾಚಿ (ಮೀನುಗಾರರ)**

ಕೋಬಲೆ, ಶಾಂಟಳ, ಕುಳ, ಪಾಗೆರ, ಕಡಸರಿ, ಶೆಣಿ, ಸುರಿ, ಶಿತಾರಿ, ತಾಂಸ, ರಛಾರಿ, ದಾವಡ

– **ವಾಣ್ಯಾಂಚಿ ಮಾಪಾ (ಅಳತೆ ತೂಕ ಸಾಮಗ್ರಿ)**

ವಜನಾ ಮಣ, ಪಾತಳ, ಪಾವ ಶೇರ,

ನಿರ್ಧನವವಂಗ, ಕುಡವ, ನವಟಂಗ, ಶೇರ, ಮುಡಿ, ಕೊಳಾವ್, ಖಾಣಿ, ಅರ್ಧಶೇರ, ಗಿನ್ನಾಟೆ, ಕುಂಭ, ಅರ್ಧ ಅನ್ನಾಟೆ ಕಾನಡ, ಆಟೋವ, ಕಾಲವ ಪಾಯಲಿ

**– ಭಟಾಲಿ ಪೂಜೆ ಆಯದನಾ (ಭಟ್ಟರ ಪೂಜಾ ಸಾಮಗ್ರಿ)**

ಪಡಗೊ, ತಾಂಬ್ಯೋ ಪಳ, ಘಾಟ, ಪಂಚಪತ್ರ, ಅಕ್ಷತೆ, ಕಳಸ ಮಣಿ ಚವಯ, ಸಾಣ

**– ವಾಜಂತ್ರ್ಯಾ ಜಿ (ಓಲಗರ ಪಂಚವಾದ್ಯ)**

ಧೋಲ, ತಾಸೊ, ಧೋಲಕೆ, ಶಾಮೇಳ, ಘುಮಟ, ಮಾದಳ, ಪಕವಾಜ, ತಬಲೆ, ಕಂಸಾಳೆ, ಡಮರು, ಶಿನಾಯಿ, ಸೂತಗ, ಶಿಲಗ, ಕೊರಸೊ, ಎಕತಾರಿ, ತಂಬೂರೊ, ಶಂಖ, ಪಾವೊ, ಪಿತಿಳ, ಚಾಗುಡೊ.

**– ದರ್ಜ್ಯಾಂಚಿ (ಸಿಂಪಿಗನ)**

ಕಾತರ, ಸುಯ,ದಿದಾಲ, ಮಾಕನ, ಪೂಟಪಟ್ಟಿ, ಖಡು.

**– ಆಯದನಾ (ಪಾತ್ರೆಗಳು)**

ಕುಯಣಿ, ಮಡಕಿ, ಗಾಡಗೆ, ದಾಲಿ, ಗಾಡಗುಳ, ಶೈಲ, ತವೊ, ಸಾನನ, ಕೇಪ (ಸಾನನ ಧಾರಣ) ಬುಯಾಂವ, ಆಚಾಂವ, ಹಾಂಡೊ, ಹಾಂಡಿ, ಕಳಸ, ಭಾಣ, ಮಾರಿಕುಟಿ, ಗುಲಗುರ್ಲತ, ಧೂಪಾಡ್ಡೆ, ಮಿಲೀರ, ಪಂಟ್ಯೋ, ಕುಂಡ್ಯೋ, ಕಟ್ಟೆದವಲೆ, ಕಟ್ಟೆಧೋಣೆ, ಪತ್ರಾವಳ (ದೇವಧರ್ಮ ಕಾರ್ಯಾಕ ಕೆಳಪಾನ, ಪತ್ರವಳ ಉಪಯೋಗ ಮಾಡುತ್ತಾರೆ.)

**– ಮ್ಹಾರಾವತ ವಸ್ತು (ಮ್ಯಾದಾರರ ಬಿದಿರಿನ ವಸ್ತುಗಳು)**

ಸುಪ, ಸುಪಲಿ, ಪಾಟಲೊ, ವಲ್ಲಿ, ವಲ್ಲೊ, ಸಾಂಗಶಿ, ಶಾಮೇಳ, ಪಾಂಜ, ಕಡೊ, ಪರಡಿ, ಪಾಳಣಿ, ಚೌಳಣಿ, ಪೇಟ, ಪಟರೊ, ಕುರದಾಂಡೊ, ಕಂಡೊ, ಕಂಡಿ, ಖಣವಿ, ಆರಣಿ, ಖುಳಖುಳೊ, ಸಾಣ್ಣೇರ

**– ಶೆತಾ, ಭಾತಾ ವಾಪರಚೆ (ಹೊಲದಲ್ಲಿ ಉಪಯೋಗಿಸುವ)**

ಹಾತರಿ, ಹಾತರ, ಪಾಟೊ, ದುಡಸುಪ, ಖೆಟಲೊ (ಖೆಂಪುಲ) ವಜೆ ಗೊಬರಚೌಳಣಿ, ಉರ್ಲಿ, ಕಂಡೂಲ

**– ಲಾಕಡವಸ್ತು (ಕಟ್ಟಿಗೆ ಸಾಮಗ್ರಿ)**

ಚಾರಂಗ, ಚೌಕ, ಬಾಶಿನ, ಮೇಜ, ಕದೇಲ, ದಿವಾಣ, ಚಾಪಳೊ. ಕಧೋಪಾಳೊ, ಪಾಯಣಿ, ತಾಮರೇತ ಕಾಂತ, ಕಾಂತೇರ, ಖುಟ್ಯಾಳ, ಫೇಡವಂಚಿ, ಪೆಟ, ಪೆಟಾ–ರೊ, ಆರಮಾರ, ಕಾನಪೊ, ಖಾಟ, ಪಲಂಗ, ಮಚಲಕ, ಬಾಜಮೊಣೆ, ಮಾಚುಲ, ಕದಲೀನ, ಪೆಟುಳ, ಚಟಾಯ, ಆಸನ.

**– ಆಯದನಾ (ಭಾಂಡೆ ಸಾಮಾನು) ಪಾತ್ರೆಗಳು ಇತ್ಯಾದಿ**

ದಾಯ, ದವಲೊ, ದಾಮ, ಪಳ, ಶೆವಗೊ, ಚಕಲೆಧಾತೊ, ರವಿ, ಕೊಡಮುಳ, ಕೊಳಂಬಿ, ದೊಣ, ದೇಣಲಿ, ವಾಳಣೆ, ಆಡೋಳ, ಮಾಣ, ಪೆಟಣಿ, ತಾಟ, ಫೋಡ, ಮುಸಳ, ಕಾಣನ, ತಾಪಿ, ಕಾಯಲಾತೊ, ತವೊ, ಲಾಟಫಳ, ತೋಣಿ, ರಾಂತೇರ (ಗುಡಫಳೆ, ತಾಂಬೂಲಫಳೆ, ಖೇಳಣಿ, ಚೇಮ) ತೋಪ ಹಾಂಡೊ, ಕಳಸೊ, ಘಾಗರಿ, ಆಣ, ಚೆಂಬು, ಲೊಟೊ, ತಾಂಬ್ಯೆ, ಮಡಕಿ, ಕಾಸಾಂಡಿ, ಕಾಯಲಿ, ಪೊಳ್ಯಾ ಕಾಯಲಿ, ಎಲಾಣ್ಯಾಕಾಯಲಿ, ವಡ್ಯಾಕಾಯಲಿ, ವಾಟಲಿ, ಲೊಖಣಿ, ಕಾಸೊ, ಪಿತಿಳಘೊರೊ, ಸಾನನ ಕೊಪ್ರೊ, ಲೊಟಿ, ಶಿಖೆ, ತಾಟಲಿ, ಗಂಗಾಳ, ಥಾಳೊ, ಡಬೊ, ವಿಲೊ ವಾಟಿ, ವಾಡಗೆ, ತವೊ, ಚೆಪೆ, ಶಿವಗೊ, ಏರವಳ, ಖಲವತ್ತೊ, ಕರಂಡಿ, ಫಿಕದಾನಿ, ಅತ್ತರದಾಣೆ, ಗುಲಾಬದಾಣೆ, ಪಾನಪಡೊ, ಅಡಕಾತಿ, ಚುನಾಳ, ಚಾಪೊಲೊ, ಚೌಳಣ, ಗಿಂಡಿ ತಸ್ತ, ಕಿಲ್ಲಕಾತನ, ತಬಕ ಕಿಸಣಿ ಕಾನುರ ಕಡಯತಾಂಬೆ, ಕಡಯೆ ಡಬೊ, ಕಮಂಡಿಲ ಕಿಟಲಿ ಚಮಚೊ ಫಿರಕೇತಾಂಬೊ.

**– ದೇವಾಕುಡಿತ್ಲೆ ವಾಪರಚೆ (ದೇವರ ಕೋಣೆಯಲ್ಲಿರುವ ಪಾತ್ರೆಗಳು)**

ತಾಂಬ್ಯೋ, ಪಡಗೆ, ಪಂಚಪಾತ್ರ, ಪಳ, ಘಂಟೆ, ನಿರಂಜನ, ಪಂಟಿ ಧುಪಾಂಡೆ, ಚಿಪಳ, ದಿವಳ, ಮಾಡ, ಲಾವಣದಿವೆ, ನಂದಾದೀಪ, ಪಂಚಾರತಿ, ಏಕಾರತಿ, ಸರಮಾಳ, ಶಾರೀಮುದ್ರಾ (ಶಾಂಖ, ಚಕ್ರ, ಗಧಾ, ಪದ್ಮ ಆಕಾರಚ್ಯೋ)

**– ಘರಾತ ವಾಪರಚೆ ಕಾಯಿ ಫಾತ್ರಾ ವಸ್ತು (ಮನೆಯಲ್ಲಿ ಉಪಯೋಗಿಸುವ ಕಲ್ಲಿನ ಸಾಮಗ್ರಿಗಳು)**

ಘಾತರ, ರಗಡೆ, ವಾನ, ತಾದೆ, ಖಲವತ್ತೊ, ಕೊರಳೆ ಸಾಣ

**– ಚೀನಿ ಮಾತೆ ಆಯದಾನ (ಚೀನಿ ಮಣ್ಣಿನ ಪಾತ್ರೆ)**

ಕಪ್ಪ, ಬಶಿ, ಭರಣೆ, ಬುಯಾಂವ, ಆಚಾಂವ್ಟ, ಕಾಂಸೊ, ವರಿ, ಕಿಟಲಿ, ಘುಲದಾನಿ

**– ರಾತ್ರಿ ಉಜವಾಡ ವ್ಯವಸ್ಥಾ (ರಾತ್ರಿ ಬೆಳಕಿನ ವ್ಯವಸ್ಥೆ)**

(ಚಿಮಣಿ ಎಣ್ಣೆ ಸಿಗುವ ಮೊದಲು) ತಿಳೆಲ, ಎರೆಂಡಲ ತೇಲ, ಖೊಬ್ರೆತೆಲ, ಪಂಟಿ ದಿವಲೆ ಹಚ್ಚುತ್ತಿದ್ದರು. ಬರಬರುತ್ತ ಚಿಮಣಿ ಎಣ್ಣೆ ಸಿಕ್ಕ ನಂತರ ಚಿಮಣಿ, ಕಂದಿಲ, ಬತ್ತಿ ಕಾಣತೊಡಗಿದವು.

**– ಸಂಸಾರ ಉಪಯೋಗಿ ಇತರೆ ವಸ್ತು (ಸಂಸಾರಕ್ಕೆ ಬೇಕಾದ ಇತರೆ ವಸ್ತುಗಳು)**

ಪಿಸೊಣಿ, ಸಾನ್ನಾ ವಿರೋಣಿ ಮಾಂದ್ರಿ ಶಿಕೆ ಕೊಬಲೆ ನಿವಣಿ ಚಿನಕಳ ಗೋಫಿಣ ಪಾಂಚರೊ ಪಾರಕಾಟಿ ದೊರ ಶೆಲ್ ರಾಜು ಗಜಕಿ ದಾವ ಜಾಬಳೊ ಘಾಂತೋಣಿ, ಅಕೊಣಿ ಕಂಡೊ ಫಣಿ ಆರಶಿ ಫರಮ ಸಾಂತಲಿ ಮಾಂದ್ರಿ ಜಮಖಾನ ಚಾದರ ಗೋಜಡಿ.

**– ಹಿಂದು ದೇವ್ಳಾತ ದಿಸ್ಟಿ ವಸ್ತು (ಹಿಂದು ದೇವಸ್ಥಾನದಲ್ಲಿಯ ವಸ್ತುಗಳು)**

ತೋರ್ಣ, ಅಬದಾಗಿರ, ಸೂರ್ಯಪಾನ, ಚವರ ಮೊರಶೆಲ್ ಪುಡಿಸತ್ರಿ ಪುಗೊ ಬಾಲದಾರಕಾಡಿ ಕಳಸ ದಿವಟಿ ಪಾಲಖಿ ಲಾಲಕಿ ರಥ ವಾಯ ಫಡಿಬಿ.

**– ಚರ್ಚಾತ್ ದಿಸ್ಟೆ ವಸ್ತು (ಚರ್ಚಿನಲ್ಲಿ ಕಾಣುವ**

ವಸ್ತುಗಳು)

ಬೊಂದೇರ ವಾರ, ಇರ್ಮಿತಾಲ, ಆಲ್ತಾರ ಚರೊಲುಬಿ.

**– ಜೇವಣಖಾಣ (ಊಟ)**

ಧಾನ್ಯ ಭಾತ, ನಾಸಣಿ (ಗೊಂಡೆ) ಪಾಬಳ, ಹುಮಣ, ಆಂಬಟ ಉಕಡೆ ಶೀತ, ಸುರಯಶೀತ

**– ಭಾಜಿಫಳಾ (ಕಾಯಿಪಲ್ಯೆಗಳು)**

ತಾಯಕುಳ್ಯಾಭಾಜಿ, ಮ್ವಾರಗಾಚಿಭಾಜಿ, ಲುತೆಚೆಭಾಜಿ, ಆಳು, ತೆರೆ ದೊರಳುಂಚಿಭಾಜಿ, ಕುಡಕೇಚಿಭಾಜಿ, ತಾಂಖಡಿ ಭಾಜಿ, ವಾಳಭಾಜಿ, ಸಾಂಸವೇಭಾಜಿ, ಶೇಪೆಚಿಭಾಜಿ, ಧವಿಭಾಜಿ, ಚವಳಚೆಭಾಜಿ, ಮುಳ್ಯಾಚಿಭಾಜಿ, ಕಾಂದ್ಯಾಪಾತ್ಯಾಭಾಜಿ, ಆಂಕುರ, ಆಳಂಬಿ, ಕಿಲ್ಲ, ಧವದುದಿ, ಕೊಕಣದುದಿ, ಬೆಬರಾ ಘೋಸಾಳ, ಮಾಟ್ವಾಘೋಸಾಳ ಕಾಳಂಗ, ತವಶಿ, ಮೊಗೆ, ಚಿಬಡ ಬೆಂಡೆ ದಿರವಾರ ವಾಲ ವಾಯಂಗಿ ತೆಂಡಲಿ ಪಡೋಳ ಕಾರಾತಿ ಕುವಾಳ ಕೊಯತೆವಾಲ ಆಂಬಾಡೆ ಆವಾಳೊ ಚೆಚೆಬೊಂಟಾ ಆಟಂಬಾ, ಬಿಮಳಾ, ಕರಮಳಾ, ಭಿರಂಡಾ, ಆಂಬೆ, ಪಣಸ, ಕಾಜು, ಪೆರಾ, ಆಂತೆರಾ, ಸೀತಾಫಳ, ಕೆಳಿ, ಅಣಸಾ, ಪೊಪ್ಪಯೋ, ನಿರಪಣಸ, ಚಿಕ್ಕು, ತೊರಿಂಗ, ಮಾವಳಂಗ, ಲಿಂಬು, ನಾಲ, ಜಗಮಾ, ಜಾಂಬಳಾ, ಚಾರಾ, ಚುನ್ನ, ಕಣ್ಣಾ, ಕಣೇರಾ, ಬೆಳಸಾ, ಬೊರಾ, ಕಾರಾತೆ, ಜಿರಕೆಕೊನಾ, ಸಾರಣ, ರಘಾಡೆಕಣಂಗ, ಕಾಟ್ಯಾಕಣಂಗ ನಾದಿ ಕಣಂಗ ಮಾಡ್ಯೊ.

**– ಗರಮಮಸಾಲೆ (ಗರಮ ಮಸಾಲೆಗಳು)**

ಮಿರಸಾಂಗ, ಹಳದ, ಕಾಂದೊ, ಲಸೂಣ, ಕೊತಂಬರ, ಮೀಟ ವೆಲಚಿ, ಲವಂಗ, ಮಿರ್ರ್ಯಾ, ಜಾಯಫಳ. ಪತ್ರಿ, ದಾಲಚೀನ, ತಿಕಿ, ದಗಡಫುಲ, ಗಸಗಸ, ಸಾಸವ, ಜೀರ, ಬಡೆಸೋಪ, ತುಪಮಿರಿಯಾ, ತಿಳ್ಯೊ, ವೊವಾ, ವೆಳಚೊ, ಮೆತ್ಯೊ, ಹಿಂಗ, ಸಣಬಿಯಾ, ಗೊಡ, ಸಾಕರ, ಚಾಪಲೇ ದೂದ, ಗಂಟಮೂಗ, ಚಣೆ, ಚವಳ್ಯೊ ತೊರ, ಹಳಸಾಂದೆ, ಮಸೂರ.

**– ನದಿ ನುಸ್ತ್ಯಾ (ನದಿಯ ಮೀನುಗಳು)**

ಪಿಟ್ಟೊಳ, ಕಾಡ್ಡಾಂಕಾ, ಸಾಂಗಟಾ, ತಾಂಬಶೆ, ಶೆವಟೆ, ಕುಲ್ಯೊ, ಕೊಂಗೆ, ಖುಬೆ ಪಂಟಂಗ, ಖಾರೆ ಕಾಳುಂದರ, ವಾಗೊಳ

**– ಸಮುದ್ರ ನುಸ್ತ್ಯಾ (ಸಮುದ್ರದ ಮೀನುಗಳು)**

ಬಾಂಗಡೆ, ತಾರಲೆ, ಪೆಡವಿ, ವಿಸವೋಣ, ಕಲ್ಯೋ, ರಾವಸ, ಮುಡಶ್ಯೊ, ಶೆತಕಾ, ತಾಳ್ಯೊ, ತೇಣಕ್ಯೊ, ಮೊರ್ಯೊ, ಮಾನಕ್ಯೊ, ಪಾಪಲೇಟ ಶೊಯೊ, ಖಾಪಯೊ, ವೆಲ್ಯೊ, ಪೋಡ್ಯಾರೆ, ಲೆಪೊ ರಾಣಿ, ಬಾಳೆಬೊಮಿಲ ತಿಸರ್ಯೊ, ಕೊಂಡ್ಯೊ, ಶಿನ್ಯಾಣ್ಯೊ, ನೀಳೆ

**– ನುಸ್ತ್ಯಾಚೆ ಸುಕ್ಯೆ:** ದಬದಬಿತ ತಳುನ ಆಂಬಟ ಭಾಜುನ ಹುಮಣ ಹೀಗೆ ವಿವಿಧ ರೀತಿಯಿಂದ ಮಾಡಿ ತಿನ್ನುತ್ತಾರೆ.

**– ಮಾಸಶಾಗೋತಿ (ಮಾಂಸದ ಸಾರು)**

ರಾನದುಕರ, ಸೋಸೊ, ಪಿಸಯ ಬೆಕರು ಹೂದರಾನಮಾಂಜರ, ಚೌನಿ, ಕೊಗುಳ, ಕವಡೋ ಬ... ಲಾಯೆ ರಾನಕೊಂಬು ಇವುಗಳ ಮಾಂಸದ ಸಾರು ಮಾ... ಸೇವಿಸುತ್ತಾರೆ.

**– ಶಿವರಾಗ ಜೇವಣಾಚೆ ಖಾಣ ಪ್ರಕಾರ (ಶಾಖಾಹಾ... ಊಟದ ಪ್ರಕಾರಗಳು)**

ಮೂಗಾಗಾಂಟಿ, ಖತಖತೆ, ರೋಸ, ಕಾಂದ್ಯಾಚೋ ಯಾ ಧೇಪಳಾಕುವಳ, ಶಾಕ, ಭಾಜಿ, ಶಿಶೇಲ ರಾಯತ್... ಕಿಸಮೊರ, ಉಸಳಿ, ಚಟಣಿ, ದಂಗರ, ಧರಯ, ಪಾಪಡ (ಪಣಸಾಚೆ, ಹುಡದಾಚೆ) ಸಾಂಡಗೆ ಶಿವಯೊ (ಗಂವಾಚ... ತಾಂದಳಾಚೊ) ವಡ್ಯೊ, ವಡೆ (ಗೋಡ–ತಿಕಟ) ಲೋಣಚೆ (ಆಂಬ್ಯಾಚೆ, ಅಂಬಾಡೆ, ಕಣ್ಣಚೆ, ಆದಳ್ಯಾಚೆ, ಕರಮಳಾಂಚೆ, ಬಿಮಲಾಚೆ) ಕದಿ, ಭರ್ತ, ತಳಲ್ಯೊಫೋಡಿ, ಕರಬು, ಸಾಸವ, ಸಾನ್ನವ್ಹಿಟ, ಪಾತೊಳ್ಯೊ, ತರರ್ಕಿವಾರ ಫೋವ, ಪೊಳೆ ಮಣಗಣಿ, ಪುರಣ ಪೊಳ್ಯೊ, ಖೀರ ಯಲಪ, ಸೂಜಿ, ಆಟವಲ, ಪಾಯಸ ಗುಳೇಣಿ, ದೋಣಸೆ, ಸಾಕರಬಾತ, ಸಾಂಚೊ ಶೆರೆ, ಶಿಕರಣ, ಪಂಚಾಮೃತ, ಅಮರಸ ಇತ್ಯಾದಿ.

**– ಸುಖಿಖಾಣ (ಒಣ ತಿಂಡಿಗಳು)**

ಲಾಡು, ರಾವಾ, ಹಾಲವೆ ಶಂಕರಪಾಳೆ, ಚಕಲ್ಯೊ, ಜಿಲೆಬ್ಯೊ, ನ್ಯೆವರ್ಯೊ. ಮೊದಕ, ಶೇವ, ಚಿವಡೊ.

**– ನ್ಹೆವರ್ಯಾ ಪ್ರಕಾರ (ಕರಚಿಕಾಯಿ ಪ್ರಕಾರ)**

ಗವಾಪಿಠಾಚೆ, ಮುಗಾ ಪಿಠಾಚೆ, ಗೊಡಾಚೆ, ಮೋದಕಾಚೆ, ಧಿಕಶ್ಯೊ, ಚುನ್ನಾಚ್, ಪುರಣಾಚೆ, ಕಣಂಗಾಚೆ, ಖವ್ಯಾಚೆ.

**– ಲಾಡವಾಚೆಪ್ರಕಾರ (ಉಂಡಿಯ ಪ್ರಕಾರಗಳು)**

ಸಾಕರಲಾಡು, ಮುಗಾಲಾಡು, ತಾಂದಳಾಲಾಡು, ಚುರಮಿರ್ರ್ಯಾಲಾಡು, ಶೇಂಗಾಲಾಡು, ಶೆವ್ಯಾಲಾಡು, ಬುಂದಿಲಾಡು, ರವ್ಯಾಲಾಡು, ಮೊತಿಚೂರಲಾಡು, ಲಾವ್ಯಾಲಾಡು, ಬೇಸನಲಾಡು, ತಿಳಾಲಾಡು, ಫೊವಾಲಾಡು, ಪಿಠ್ಯಾಲಾಡು.

**– ಕಾಪಾಚೆ ಪ್ರಕಾರ (ಕಾಪಾಗಳ ಪ್ರಕಾರ)**

ಸಾಕರಿಕಾಪಾ, ಗೋಡಕಾಪಾ, ಚಣ್ಯಾದಾಳಚೆ, ರವ್ಯಾಚೆ, ಕೆಳ್ಯಾಚೆ, ದುದಾಚೆ, ಕುವಾಳ್ಯಾಚೆ, ಬಟಾಟ್ಯಾಚೆ, ಆಂಬ್ಯಾ, ಕಣಗಾ, ನಿರಪಣಸ ಪೊಪ್ಪಯ ಸೊಯೆಚೆ, ಶೇಂಗಾಚೆ.

**– ಹಾಲವಾಚೆ ಪ್ರಕಾರ (ಹಾಲವಾಗಳ ಪ್ರಕಾರ)**

ಮೈದಾ, ಕೆಳ್ಯಾ, ಆಂಬ್ಯಾ, ಪೇರಾ, ಬಟಾಟಾ, ಕೊಂಕಣದುದ್ಯಾ, ಕುವಾಳ್ಯ, ಘರದುದ್ಯಾ, ಪಣಸ, ನಿರಪಣಸ, ಕಣಂಗ, ಪೊಪ್ಪಯ.

**– ವಡ್ಯಾಂಚೆ ಪ್ರಕಾರ (ವಡೆಗಳ ಪ್ರಕಾರ)**

ಸಾದೆವಡೆ (ತಾಂದುಳಾ ಯಾ ಗಂವಾಂಚೆ) ಗೋಡ, ತಿಕಠ ಮೊಗ್ಯಾಚೆ.

**– ಫೊವಾಚೆ ಪ್ರಕಾರ (ಅವಲಕ್ಕಿ ಪ್ರಕಾರಗಳು)**

ಕಾಲಯಲೆ, ರೊಸಾತಲೆ, ದುದಾತಲೆ, ತಾಕಾತಲೆ, ಫೊಣ್ಣೆಚೆ, ಸಾಕರಿಚೆ, ಫುಲಯಲೆ, ತಿಕಟ, ಬಟಾಟಾ,

ಯಾಂತಲೆ, ಚಿವಡೊ

– ಖೀರ ಪ್ರಕಾರ (ಪಾಯಸದ ಪ್ರಕಾರಗಳು)

ಸಾದಿಖೀರ, (ತಾಂಡೂಳ ಯಾ ಗಂವಾಪಿಠಾ) ವ್ಯಾಚೆ, ಕಣಾಗಾಚೆ, ಕೊಂಕಣದೂದಿ, ಚಣ್ಯಾದಾಳ, ಮಣದಣ) ಶೇವ್ಯಾಚೆ, ನಿರಪಣಸಾಚೆ.

– ಚಿವಡ್ಯಾ ಪ್ರಕಾರ (ಚಿವಡಾದ ಪ್ರಕಾರಗಳು) ಗ್ರಾವಾಚೆ, ಚಿರಮುಲ್ಯಾ, ಲ್ಹಾವ್ಯಾ, ಬಟಾಟಾ, ಶಾಬುದಾಣ್ಯಾ.

ಅಂದಿನ ದಿನಗಳಲ್ಲಿ ಸಂತೆ-ಪೇಟೆ- ಅಂಗಡಿಗಳು ಇರಲಿಲ್ಲ. ಆಗ ಜನರು ಮಳೆಗಾಲದ 3-4 ತಿಂಗಳಗಳಗಾಗಿ ಈ ಕೆಳಗಿನ ವಸ್ತುಗಳನ್ನು ಮನೆಯಲ್ಲಿ ಶೇಖರಿಸಿ ಇಡುತ್ತಿದ್ದರು. ಹೋಲಾ, ಮೀಟ, ಮಿಸ್ರಾಂಗ, ಸುಕೆನುಸ್ತ್ಯಾ, ಲೋಣಚೆ ಪಾಪಡ, ಸಾಂಡಗೆ ಖಳಸಾಟ, ಶೆಮ್ಯೊ ಇವೆಲ್ಲ ಮಳೆಗಾಲದಲ್ಲಿ ತಿನ್ನಲು ಶೇಖರಿಸಿ ಇಡುತ್ತಿದ್ದರು, ಚಾ ಕಾಫಿ ಇ ವಸ್ತುಗಳೂ ಗ್ರಾಮಗಳಿಗೆ ತಲುಪುವ ಮೊದಲು ಜನರು ಬೆಳಗ್ಗೆ ಎದ್ದು ಗಂಜಿ, ಅಂಬಲಿ ಕುಡಿಯುತ್ತಿದ್ದರು. ಬಾಯಿಗೆ ಹಚ್ಚಲು (ತೋರಾ, ಅಂಬೊಡೆ ಕಂಜಾ ಆವಾಳೆ ಈ ವಸ್ತು ಉಪ್ಪಿನ ನೀರಿನಲ್ಲಿ ಮುಳುಗಿಸಿಟ್ಟು ಅದರ ಮೇಲೆ ಒಜ್ಜೆ ಕಲ್ಲು ವಗೈರೆ ಇಡುತ್ತಿದ್ದರು) ಬೆಳಗೆದ್ದು ತಿನ್ನಲು ಅಕ್ಕಿಯ ರಾಗಿಯ ರೊಟ್ಟಿ, ದೋಸೆ, ಸಾನ್ನಾ ಅರಸಿನ ಎಲೆ ಬಾಳೆ ಎಲೆ ಮೇಲೆ ಅಕ್ಕಿರೊಟ್ಟಿ ಮಾಡಿ ನಂತರ ಹುರಿದು ತಿನ್ನುತ್ತಿದ್ದರು.

– ಶಂಗಾರ (ಶೃಗಾಂರ)

ಪುರಾತನ ಸೌಂದರ್ಯ ಶಾಸ್ತ್ರದಲ್ಲಿ 16 ಪ್ರಕಾರಗಳವೆ ಅಂಗಮಾಲಿಸ ಕರಚೆ ತೇಲಲಾವಚೆ, ಲೇಪಲಾವಚೆ, ಕೇಸಉಗ್ಲೊಚೆ ಕಾಳಜಿ ಘಾಲಜೆ, ಓಟರಂಗೊವಚೆ, ನೇಸಣ ನೆಸ್ಟೆ, ಫುಲಮಾಳಚಿ ಅಳಂಕಾರ ಘಾಲಚೆ, ಹಾತರಂಗೋವಚೆ ಹಾರಶಾಂತ ನೀಟಕಿನ್ನ ಪಳೋಚೆ (ಜಾತ್ರೋತ್ಸವ ಯಾ ಲಗ್ನ) ಸಮಾರಂಭದಲ್ಲ ಇವು ನೋಡಲು ಸಿಗುತ್ತಿದ್ದವು.

– **ಅಲಂಕಾರ** : ವಿವಿಧ ಪ್ರಕಾರದ ಹಾಗೂ ಆಕಾರದ ಅಲಂಕಾರ ವಸ್ತುಗಳು ಗಂಡಸರು ಹಾಗೂ ಹೆಂಗಸರು ಉಪಯೋಗಿಸುತ್ತಿದ್ದು

ಇವು ಮದುವೆ, ಜಾತ್ರೆ, ಉತ್ಸವದಲ್ಲಿ ನೋಡಲು ಸೀಗುತ್ತಿದ್ದವು.

**ಹಿಂದು ಬಾಯಲಾಲೆ ಅಲಂಕಾರಾವಸ್ತು (ಹಿಂದು ಮಹಿಳೆಯರ ಅಲಂಕಾರ ಸಾಮಗ್ರಿ)** –

* **ಮಾತ್ಯಾರ (ತಲೆಗೆ)** – ಗುಳದಿ, ಗಂಧಭೈರವ, ಗುಲಾಬ, ಫೂಲ, ಶೇವತೆ, ಚಾಂದಲಿ, ಸಾಳಕಾ, ಚಾಪಿ, ತುರೋ, ಚಾಂಪ್ಯಾ, ಆಟ, ಪಡಿ, ಸುರಂಗಾ, ವಳೇಸರ, ಕೇದಗ, ಕುಟ್ಟರ, ಕಡಿಕಡಿಫುಲಾ ಚಂದ್ರ ಪೊಕೆ ಆಂಬಾಡ್ಯ ಚಾಳ ಭಾಗರಾಗಾಚೆ ಗೊಂಡೆ ರಿಛೀರ ಕಮಳ

* **ಕಾನಾಕ (ಕಿವಿಗೆ)** – ಚಾರ ಕಡನ ತೊಪಚಿಚಾಲ ಆಶಿಲ

– ಕಾನಾಚ್ಯಾ ಪಾಳಿಕ ವೆಡಿಫುಲಾ ಚಂದ್ರ ಪಟ್ಟೊ. ಬೆಳಕಾ ಮುದ್ಯೊ ಡುರಿ ಲಾಂಬತಿ ಕಾನಂತಲೆ

– ವಾಯಲ್ಯಾ ಬೇತ್ಯಾರತ, ಬುಗಡಿ, ಪಿಲ್ಯೊ. ಗಾಂಠಿ ಬಾಲ್ಯೋಸರಪಳ

– ಪಾಳ ಆನಿ ವಾಯಲ ಬೋತ್ಯಾಮದಿ ಕಾಲಾ ಫುರಾ

– ಕಾನಾಸುಲಾ ತೆಕುನ – ಧುಮಲ್ಯೋ ಯಾ ಧುಮೊ

– ಹೆಜೆಶಿವಾಯ ಕಾನ (ಕಾನಾಕೃತಿ) ಶತಾಲೆ

* **ನಾಕಾಕ (ಮೂಗಿಗೆ)**

ನಾಕಾದೇವ್ಯಾ ಬಾಜುನ ತೊಪತಾಲೆ ವಾಳ, ನಾಧ ದಾಂಡೊ ಶೆಕತಿ ಪಿಲಿಪಿಲಿ ತರೇಕವಾರ ಪ್ರಕಾರಾಚಿ ಕರತಾಲಿ ದಾಳಜಿಪಿಲಿ, ಗುಳವಾಚಿಪಿಲಿ ಕಾಲಾಫುರ ಚಂದ್ರ ನಚಿತ್ರ ಏಕಾಧಿರಾಜಿಪಿಲಿ, ಸಾತಧಿಕಾಂಚಿ ಪಿಲಿ ಮೊತ್ಯಾಂಚಿಪಿಲಿ, ಪೊವಳ್ಯಾಂಚಿ ಪಿಲಿ

* **ಗಳ್ಯಾಕ (ಕುತ್ತಿಗೆಗೆ)**

ಮೋಹನಮಾಳ, ಬೊರಮಾಳ, ಪುಗದೊರ, ಠುಶಿ, ತಾವಚೆ ಚಿಗಳಸರಿ, ಮಣ್ಯಾಂಚಿಗಳಶಿರಿ, ಪೊವಳ್ಯಾಂಚೆಮಾಳ, ಗವಾಂಚಿಮಾಳ, ಚಂದ್ರಹಾರ, ಕಳ್ಯಾಂಚೋಹಾರ, ಚಪಲಹಾರ, ಲಕ್ಷ್ಮೀಹಾರ ಗೋಫ ಚಂದ್ರಕೋರಮಾಳ, ಚಿಂಚಪಟೊ, ವಜ್ರಧಿಶಾ, ನಲಮಣ್ಯಾಂಚಿವಮಾಳ, ಪದನಾಂಚೆಗಾಟಲೆ, ಅರ್ಧಪದನಾಂಚೆಗಾಟಲೆ ಪುತಳ್ಯಾಂಚೆಗಾಂಟಲೆ, ರುದ್ರಾಕ್ಷಾಂಚಿಮಾಳ, ಮುಯೆದಾಂಚೆ, ಗಾಂಟಲೆ, ಶೆಡೊ ಮೊತ್ಯಾಂಚಿಮಾಳಾ, ಪೊವಳ್ಯಾಂಚಿಮಾಳಾ ಕರಣೆ ಸ್ಪಟಿಕಾಂಚೆಮಾಳಾ

* **ಕಮರಾಕ (ಸೊಂಟಕ್ಕೆ)** ಕಡೆ-ಕಮರಾಪಟ್ಟೊ ಚಾವಯೇರ ಚಾವ್ಯಾಪೋಸ

* **ಭುಜಾಂಕ (ಭುಜಕ್ಕೆ)** – ಭಾಜುಬಂಧ, ಬಾವುಕರಿ, ನಾಗಮೊಡಿ, ಯೆಳ, ಕಡೆ

* **ಭಾಂಗಾತ (ಬೈತಲ)** ಭಾಂಗಾ ತಿಳೊ

* **ಹಾತಾಕ (ಕೈಗೆ)** ಗೋಟ, ಪಾಟಲ್ಯೊ, ತೊಡೊಆನಿ ಕಾಕಣ

* **ಪಾಟಲ್ಯಾಂಚೆ ಕಾಯ ಪ್ರಕಾರ** (ಪಾಟಲಿಯ ಪ್ರಕಾರಗಳು)

ತೊಡಚಿಪಾಟಲಿ, ಸರಿಯೊಂಚಿಪಾಟಲಿ, ಕಿಸಿಮಿಸಿಪಾಟಲಿ ಸಾಳಸುಳತ ಪಾಟಲಿ.

* **ಕಾಕಣಾಚಿ ಪ್ರಕಾರ** (ಬಳೆಗಳ ಪ್ರಕಾರಗಳು)

ವಾಖಾಂಚಿಕಾಕಣೆ, ಗುಳ್ಯಾಂಚಿ ಕವ್ಯಾಂಚಿ, ಅಣಸಕಾಟ್ಯಾಂಚಿ, ಜಾಳೆಚಿ, ಕುಸಾಂಚಿ, ವೇತುಆಂಚಿ, ಧೀಕಾಂಚಿ, ಪಿಡ್ಡುಕಾಂಚಿ ಹಸ್ತಿದಂತಾಚಿ

* **ತೋಡ್ಯಾಚೆ (ತೊಡೆಗಳು)**

ಲಸಣೆ ಬಿಯಾಂಚೆ ತೊಡೆ, ಫುಡಾಚೆತೆತೊಡೆ, ಸಾಳಕಾಂಚೆತೊಡೆ, ಮೊತ್ಯಾಂಚೆತೊಡೆ

* **ಹಾತಾಚ್ಯ ಬೋಟಾಂಕ (ಕೈಬೆರಳಿಗೆ)**

ನಾಗವೋಡಿ, ಸಾತಘಿರ್ಯಾಂಚಿ, ಪಿಪಳಪಾನಾಚಿ, ಸಾಳಕಾಚಿ ಮೋತ್ಯಾಚಿ, ಧಿಕಾಂಚಿ ಪೇವಳ್ಯಾಂಚಿ.

* **ಪಾಯಾಂಕ (ಕಾಲಿಗೆ)**

ಬಾಂಗಾರಾಚೆ ಪಾಯಾಕ, ಘಾಲುಜಾಯನಾ ಪರಂತು ಚಾಂದಿಯಾ ಇತರ ಧಾತುಚೆ ಪಾಯರ್ಘುಣ, ಜಂರ್ಘುರ,

ತೊಡೆ, ಉಲಾ

* **ಪಾಯಾಂ ಬೊಟಾಕ (ಕಾಲ್ಬೆರಳಿಗೆ)**

ಪಿಡೆ, ಮುದ್ಯೋ, ಮಾಶೆ, ಮಾಸಳ್ಯೋ ಪೊಲಾಕಿ, ಫುಲಾ ಬಿಂದಲಾ ಉಂಜಾ ಕಿರಗಳ ಸಲ್ಲಾ

* **ಕ್ರಿಸ್ತಾವ ಭಾಯಲಾಲೆ ಅಲಂಕಾರಾಚೆ ವಸ್ತು (ಕ್ರಿಶ್ಚನ್ ಮಹಿಳೆಯರ ಅಲಂಕಾರ ವಸ್ತು)**

– ಗಳ್ಯಾತ (ಕೊರಳಿಗೆ) ಸರಪಳ

– ಕಾನಾಕ (ಕಿವಿಗೆ) ಕಾರಬ, ಫುಲಾ, ಬೆಕಳಾ, ವೆಡಿ ಮುದ್ಯೋ ಪಿಸೇತ, ಲಾಂಬಲೆ, ಕಾನಾಂತಲೆ

– ಹಾತಾಕ (ಕೈಗೆ) ಮೊರಿಕಾಕಣ, ಬಾರಿಕ ಕಾಕಣ, ಪಾಟಲ್ಯೋ

– ಹಾತಾಬೊಟಾಕ (ಕೈಬೆರಳಿಗೆ) ಮುದಿ

– ಭುರಗ್ಯಾಚೆ (ಮಕ್ಕಳ) : ಘಾಗರಪಾಟ, ಗಾಂಟಲಿ, ಆವಾಳೆ (ಬಿಮಲಾ ಆವಾಳೆ) ವಾಳೆ ದಳಣಾಚೆ, ತಳೊ, ರಿಭಲಪಾ, ಮಣಕುಟ್ಯೋ, ಪದಕ, ಜುನ್ಯೋ, ಆಂಬಲೊ, ರಾಜಕಡಿ, ಕಡೆ, ಪಿಪಳ ಪಾನಪೆಟಿ

* **ಹಿಂದೂ ದಾಲ್ಯಾಂಚೆ ಅಲಂಕಾರ (ಹಿಂದು ಗಂಡಸರ ಅಲಂಕಾರ)**

ಬಿಕಬಾಲಿ ಪೆಟಿ, ದಂಡಕಡೆ, ಸೊಲೆ, ಚೌಕುಡಿ, ಕೆತೊಹಾರ, ಗೋಪಮುದಿ ಗಿರಿಜಾಂವ.

* **ಕ್ರಿಸ್ತಾಂವ ದಾಲ್ಯಾಂಚೆ ಅಲಂಕಾರ (ಕ್ರಿಶ್ಚನ್ ಗಂಡಸರ)**

ಸರಪಳಿ, ಮುದಿ, ಪೆಟಿ, ಮಾಸಕೊತ (ಬ್ರಾಸಲೆಟ)

* **ಕೇಶ ಶೃಂಗಾರದ ವಿವಿಧ ಪ್ರಕಾರ (ಶೃಂಗಾರದ ವಿವಿಧ ಪ್ರಕಾರಗಳು)**

ಕಲಾತ್ಮಾಕ ರೀತಿನ ಕೆಸಾಂಚೊ(ಕೂದಲಿನ) ಶೃಂಗಾರಾ ಧೊಡೇಬಾಯಲೆ, ಚಡಲಕ್ಷ ದಿಲಾಲೆ ಕೆಸಾ ಶೃಂಗಾರ ಪ್ರಕಾರ ಮಂಡಲಾರ ಖೊಪೆ, ಅಂಬಾಡೆ, ವೀಣ್ಯಾಂಚೊಆಂಬಾಡೆ ಚಲಿಯ್ಯೋ ತರೇಕವಾ ಪ್ರಕಾರಾಚೆ ಪಾತ್ಯೋಂ ವಿಣಾಯೊ, ಫೊಡ್ಯಾಶೆಪಡಿ ಲೋಳ ಚಂದ್ರ ಪಾರೆಟ ಅಶೆತರೆಚ ಕೆಸಾಚೆ ಪ್ರಕಾರ ಕರತಾಲ್ ಖೊಬ್ರೆಲತೆಲಾ ವಾಪರ ಕರತಾಲೆ ಗಾಚ ಚಾಳ್ಯೋ ಗಂಗಾವನ ಗುಟಲೆ ಆವಣಿ ಗೊಂಡೆ ತೀರ ಅಶೆವಸ್ತು ವಾಪರತಾಲೆ ಅಶೆ ಕೇಶ ಶೃಂಗಾರಕನ್ನ ತರತರೆ ಘುಲಾವಾಪರತಾಲೆ. ಫುಲಾಘಾತೇಕ ಭರಪೂರ ರಂಗಭಿರಂಗಿ ರಂಗೀತ ಬೆಗಡ ತರೆತರೆ ಘಾತೇನ ವಾಪರುನ ಫುಲಾ ಆಕರ್ಷಕ ಪದ್ಧತಿನ ಗುತ್ತಾಲೆ.

* **ಫುಲಾ (ಹೂವುಗಳು)**

ಆಬೊಲೆ, ಶೆವತಿ, ಗುಲಾಬ ರೊಜಾ, ಭುತಾಂವ, ರಾಮುಲೊ ಜಿಡೊ ಚಮೇಲಿ ಅನಂತ ಸದಾನಂದ ಜಾಯೊಜುಯೊ ಮೊಗರ (ಸಾದಿಮೊಗರೆ, ನಿತ್ಯಾಮೊಗರೆ, ಬಟನಮೊಗರೆ, ಕಸ್ತೂರಿಮೊಗರೆ) ವೇದೂಲ ಅಡುಸೊ ಪಾದರಕ ದರ್ಪಣ ಚಾಪಿ, ಕಂಸಾಕಂಟಿ, ಗೊಟಲಾ ಕೇಸರಾ ಗವಳಣಿ ವೊವಳಾಂ ಸುರಂಗಾ ಸಾಳಕಾ, ಕಾಂಚನ ಕೇಗದ, ದೇವಕೆಳವೊ ಕಣಿಕಾ ಶಂಕರ ಕೊರನೊ ಧಾಲಾ ಸಾಯಲಿ ಕುನ್ನಾ ಕಲಾವಂತ ವಾಸಾರಖೆ ಫುಲಾಘಾತಿ ಹಳಪಟಿ ರೆಭಲೊ ತುರೊ ವಳೀಸರ ಪೋಡಗೊಂಡೊ ಕಮರಿ ಅಸ್ಲೆ ಪ್ರಕಾರ ಜಸೆಜಾಯ ತಶೆಕನ್ನ ಮಾಳಟಾಲಿ.

## ಹಿಂದು ಸಮಾಜಾಚೆ ಪರಬೊ (ಹಿಂದುಗಳ ಹಬ್ಬಗಳು)

* **ಸಂಸಾರ ಪಾವಡೊ (ಚೈತ್ರಶುದ್ಧ ಪ್ರತಿಪದಾ) ಯುಗಾದಿ –**

ಯುಗಾದಿಯಂದು ಬೆಳಗ್ಗೆ ಎದ್ದು ಸ್ನಾನ ಮಾಡಿ ಹೊಸಬಟ್ಟೆ ಧರಿಸಿ ಪೂಜೆಮಾಡಿ ಬೇವಿನಎಲೆ ತಿಂದು (ಅದರ ಮೊದಲು ಏನನ್ನೂ ತಿನ್ನುವುದಿಲ್ಲ) ಆ ದಿವಸ ಮನೆಯ ದೇವರ ಕೋಣೆಯಲ್ಲಿರುವ "ಪುರಸಾಕ ಪೂಜಿಸಿ ಬೇವಿನ ಎಲೆ ಹಾಗೂ ಸಿಹಿ ಪದಾರ್ಥದ ನೈವೇದ್ಯ ತೋರಿಸುತ್ತಾರೆ. ಅಂದು ಸಂಜೆ ಭಟ್ಟರು ಎಲ್ಲರಿಗೂ ಪಂಚಾಂಗ ಪಠಣ ಮಾಡಿ ಆ ವರ್ಷದ ಮಳೆ, ಗ್ರಹಣ, ಮದುವೆ, ಮುಂಜಿ ಮುಹೂರ್ತಗಳ ಬಗ್ಗೆ ತಿಳಿಸುತ್ತಾರೆ.

* **ನಾಗರ ಪಂಚಮಿ (ಶ್ರಾವಣ ಶುದ್ಧ ಪಂಚಮಿ) –**

ಕೆಲಜನ ಗೋಡೆಯ ಮೇಲೆ ನಾಗಚಿತ್ರವನ್ನು ಬಿಡಿಸಿ ಪೂಜಿಸುತ್ತಾರೆ ಹಾಗೂ ಕೆಲ ಜನ ಮಣ್ಣಿನಿಂದ ಯಾ ಅಕ್ಕಿ ಹಿಟ್ಟಿನಿಂದ ನಾಗವನ್ನು ತಯಾರಿಸಿ ಪೂಜೆ ಮಾಡಿ ಹಾಲು ಹಾಗೂ ಭತ್ತದ ಅರಳನ್ನು ಹಾಕಿ ಪಂಚಧಾನ್ಯವನ್ನು ಹಾಕಿ ಪಂಚಕಜ್ಜಾಯ ಹಾಗೂ ಅನ್ನದ ನೈವೇದ್ಯ ತೋರಿಸುತ್ತಾರೆ. ಹೆಚ್ಚಾಗಿ ಎಲ್ಲರ ಮನೆಯಲ್ಲಿ ಪಾತೋಳಿ (ಅರಶಿಣ ಎಲೆ ಕಡುಬು) ಮಾಡುತ್ತಾರೆ. ಆ ದಿನ ನೆಲವನ್ನು, ಹೊಲವನ್ನು ಅಗೆಯುವುದು ಇತ್ಯಾದಿ ಮಾಡುವುದಿಲ್ಲ.

* **ಸುತಾ ಪ್ರನೋವ (ಶ್ರಾವಣ ಪೂರ್ಣಿಮಾ) –**

ಮನೆಯಲ್ಲಿ ಪುರುಸ್ಕಂಬ ಹಾಗೂ ದೇವರ ಪೂಜೆ ಮಾಡಿ ದೇವರಿಗೆ ನೂಲು ಹಾಕುತ್ತಾರೆ ನಂತರ ಮನೆಯಲ್ಲಿ ಎಲ್ಲ ಗಂಡಸರು ತಮ್ಮ ಕೊರಳಲ್ಲಿ ನೂಲು (ಜಾನವೆ) ಹಾಕುತ್ತಾರೆ. ಆದಿನ ಮನೆಯಲ್ಲಿ ಸಿಹಿ ಮಾಡುತ್ತಾರೆ ರಾಖಿ

ಕಟ್ಟುವುದು ನಾರಳ ಪೂರ್ಣಿಮಾ ಸಮುದ್ರಕ್ಕೆ ಟೆಂಗಿನಕಾಯಿ ಅರ್ಪಣೆ ಮಾಡುತ್ತಾರೆ.

* ನವ್ಯಾ ಪಂಚಮಿ (ಶ್ರಾವಣ ವದ್ಯ ಪಂಚಮಿ) –

ಗ್ರಾಮದ ಪ್ರತಿ ಮನೆಯಲ್ಲಿ ಒಬ್ಬ ಯಜಮಾನ ಸ್ನಾನ ಮಾಡಿ ಪೆಡಾ ಹತ್ತಿರ (ವಾರ ಕಟ್ಟೆಯ ಹತ್ತಿರ) ಹೋಗಿ ಅಲ್ಲಿ ಟೆಂಗಿನ ಕಾಯಿ ಉಡಿ ನೀಡಿ ಹೊಸಧಾನ್ಯ (ಭತ್ತದ ತೆನೆ) ತೆಗೆದುಕೊಂಡು ಮನೆಗೆ ಬರುತ್ತಾರೆ. ಬಂದು ಮಣೆಯನ್ನು ಹಾಕಿ ರಂಗೋಲಿ ಹಾಕಿ, ದೀಪವಿಟ್ಟು ಮಾವಿನ ಎಲೆಹಾಕಿ ಈ ಧಾನ್ಯದ ತೋರಣ ಹೆಣೆದು ಅದರ ಪೂಜೆಮಾಡಿ ನೈವೇದ್ಯ ಮಾಡಿ ಮೊದಲು ಆ ತೋರಣ ಮುಖ್ಯ ದ್ವಾರಕ್ಕೆ ಕಟ್ಟುತ್ತಾರೆ ಹಾಗೂ ಅದನ್ನು ಒಂದು ವರ್ಷದ ನಂತರ ಬಿಚ್ಚುತ್ತಾರೆ ಅದೇ ರೀತಿ ಮನೆಯ ಕೆಲ ವಸ್ತುಗಳಿಗೂ ಒಂದೊಂದು ತೆನೆ ಕಟ್ಟುತ್ತಾರೆ.

* ಚವತ (ಭಾದ್ರಪದ ಶುದ್ಧ ಚತುರ್ಥಿ) –

ಕೆಲಜನ ಗಣಪತಿ ಮೂರ್ತಿಯನ್ನು ಮೊದಲನೇ ದಿನ ಸಂಜೆ ಹೊತ್ತಿಗೆ ಅದನ್ನು ಮುಚ್ಚಿ ತರುತ್ತಾರೆ. ಆಗ ಮನೆಯ ಸುಹಾಸಿನಿಯರು ರಾಟಿ (ಕೆಂಪು ಕುಂಕುಮ ನೀರು) ದೀಪ ತೋರಿಸಿ ಮನೆಯ ಒಳಗೆ ಪ್ರವೇಶ ಮಾಡಿಕೊಳ್ಳುತ್ತಾರೆ. ಗಣಪತಿ ಕೂಡ್ರುವಲ್ಲಿ ಬಣ್ಣ ಬಣ್ಣದ ಕಾಗದಗಳ ಮಖರ ಮಾಡಿ ಶೃಂಗಾರ ಮಾಡಿ ತಲೆ ಮೇಲೆ ಮಾಟೋಳ (ಹಣ್ಣು-ಕಾಯಿಗಳನ್ನು) ಕಟ್ಟುತ್ತಾರೆ. ಭಟ್ಟರಿಗೆ ಮನೆಗೆ ಕರೆಸಿ ಮೂರ್ತಿ ಪ್ರತಿಷ್ಠಾನ ಮಾಡಿಸುತ್ತಾರೆ. ಗಣಪತಿ ಎದುರುಗಡೆ ಭಜನೆ ಪುಗಡಿ ನೃತ್ಯ ಮಾಡುತ್ತಾರೆ. ಮಿತ್ರರು ಸಂಬಂಧಿಕರು ಎಲ್ಲರೂ ಪೂಜೆಗೆ ಬರುತ್ತಾರೆ. ಘುಮಟಿಯ ಆರತಿಯ ನಂತರ ಪ್ರಸಾದ ಪಡೆದು ಊಟ ಮಾಡಿ ಹೋಗುತ್ತಾರೆ. ರಾತ್ರಿ ಭಾರಿಸುತ್ತಾ ನೃತ್ಯಮಾಡುತ್ತಾ ಗಣಪತಿ ವಿಸರ್ಜನೆ ಮಾಡುತ್ತಾರೆ.

* ದಸರೊ (ಅಶ್ವಿನಿ ಶುದ್ಧ ದಶಮಿ) –

ಅಶ್ವಿನಿ ಶುದ್ಧ ಪ್ರತಿಪದೆ ದಿವಸ ಘಟಸ್ಥಾಪನಾ ಮಾಡಿ 9 ಬಗೆಯ ಧಾನ್ಯವನ್ನು ಉಗಮವಾಗಲು ಹಾಕುತ್ತಾರೆ. 9 ದಿವಸ ಆ ಧಾನ್ಯಗಳಿಗೆ ಪ್ರತಿದಿನ ಹೂವಿನ ಮಾಲೆ, 9 ದಿನ ಮಾಲೆ ಹಾಕುತ್ತಾರೆ. ಮೊದಲನೆಯ ದಿನ ಒಂದು ಮಾಲೆ, ಎರಡನೇ ದಿನ ಎರಡು ಮಾಲೆ ಹೀಗೆ ಒಂಬತ್ತನೇ ದಿನ 9 ಮಾಲೆಗಳು ಹಾಗೂ ದಸರೆಯ ದಿವಸ ಅದನ್ನು ಅಲುಗಾಡಿಸಿ ಮೇಲೆ ಎಬ್ಬಿಸಿ ಪೂಜೆಯೊಂದಿಗೆ ವಿಸರ್ಜನೆ ಮಾಡುತ್ತಾರೆ. ರಾಮಾಯಣದಲ್ಲಿ ರಾಮನು ರಾವಣನನ್ನು ವಧೆ ಮಾಡಿ ಸೀತೆಯನ್ನು ಕರೆತಂದ ದಿವಸ ಎಂದು ಹೇಳುತ್ತಾರೆ. ಅದರಂತೆ ಪಾಂಡವರ ಅಜ್ಞಾತವಾಸ ಇಂದೇ ಮುಗಿದಿತ್ತು ಎಂದು ಹೇಳುತಾರೆ. ಪುರಾಣ ಕಥೆಯಲ್ಲಿ ಚಾಮುಂಡಿಯು ಮಹಿಶಾಸುರನ ವಧೆ ಮಾಡಿದ್ದು ಇಂದೇ ಎಂದು ಹೇಳುತಾರೆ.

* ದಿವಾಳಿ (ಅಶ್ವಿನಿ ವೈದ್ಯ ಚತುರ್ದಶಿಚೆ ಕಾರ್ತಿಕ ಶುದ್ಧ ದ್ವಿತೀಯಾ, ದೀಪಾವಳಿ) –

1) ಅಶ್ವಿನವದ್ಯ ಚತುರ್ದಶಿ – ನರಕ ಚತುರ್ದಶಿ ವಧಾಕಲಿ ದಿವಾಳಿ

2) ಅಶ್ವಿನ ಅಮವಾಸ್ಯೆ – ಲಕ್ಷ್ಮೀ ಪೂಜನ

3) ಕಾರ್ತಿಕ ಶುದ್ಧ ಪ್ರತಿಪದ ಧಿಂಡಲೊ

4) ಕಾರ್ತಿಕ ಶುದ್ಧ ದ್ವಿತೀಯಾ – ಭಾವಬೀಜ

1. ನರಕ ಚತುರ್ದಶಿ ವಧಾಕಲಿ ದಿವಾಳಿ –

ಈ ಹಬ್ಬದ ಮೊದಲನೇ ದಿನ ಸುಹಾಸಿನಿಯರು ನೀರು ತುಂಬುವ ಹಂಡೆಯನ್ನು ತಿಕ್ಕಿ ಸ್ವಚ್ಛ ಮಾಡಿ ಆ ಪಾತ್ರೆಗೆ ಹೂವಿನ ಅಲಂಕಾರ ಮಾಡುತ್ತಾರೆ. ವಲೆಯನ್ನು ಸಾರಿಸಿ ರಂಗೋಲಿ ಹಾಕಿ ಆ ವಲೆಯ ಮೇಲೆ ಹಂಡೆಯನ್ನು ಇಡುತ್ತಾರೆ. ಹಾಗೂ ಕೊಡಪಾನವನ್ನು ತೆಗೆದುಕೊಂಡು ಬಾವಿಕಟ್ಟೆಗೆ ಹೋಗಿ ಅಲ್ಲಿ ದೀಪ ಹಚ್ಚಿ ನೀರಿಗೆ ವೀಳ್ಯದೆಲೆ ಅರ್ಪಣೆ ಮಾಡಿ ನಂತರ ಘುಮ್ಟೆ ಬಾರಿಸುತ್ತ ಆ ನೀರನ್ನು ಒಲೆಯ ಮೇಲಿನ ಹಂಡೆಗೆ ತಂದು ಹಾಕುತ್ತಾರೆ. ಹಾಗೂ 5-6 ಸಲ ತಂದು ಹಂಡೆ ತುಂಬಿ ಇಡುತ್ತಾರೆ. ಬೆಳಗ್ಗೆ ಆ ಹಂಡೆ ವಲೆಗೆ ಬೆಂಕಿ ಮಾಡಿ ನೀರು ಕಾಯಿಸುತ್ತಾರೆ. ಎಲ್ಲರ ಮೈಗೆ ಕೊಬ್ಬರಿ ಎಣ್ಣೆ ಹಚ್ಚಿ ಎಲ್ಲರ ಸ್ನಾನದ ನಂತರ ಮನೆಯ ಅಂಗಳದಲ್ಲಿ ಪುರುಷರು ಹೊಸಬಟ್ಟೆ ಧರಿಸಿ ನಿಲ್ಲುತ್ತಾರೆ. ಮಹಿಳೆಯರು ಕೆಂಪು ಕುಂಕುಮ ನೀರಿನ (ರಾಟಿ ಉದಾಗ) ದೃಷ್ಟಿ ತೆಗೆದು ನಂತರ ಆರತಿ ಬೆಳಗುತ್ತಾರೆ. ಗಂಡಸರು ಆರತಿ ಬೆಳಗಿದ ನಂತರ ಪ್ರತಿ ಮಹಿಳೆಯರಿಗೆ ಏನಾದರೂ ಕಾಣಿಕೆ ನೀಡುತ್ತಾರೆ. ನಂತರ ಎಲ್ಲರೂ ವಿವಿಧ ಬಗೆಯ ಅವಲಕ್ಕಿ ತಿನ್ನುತ್ತಾರೆ ಹಾಗೂ ಅಕ್ಕ-ಪಕ್ಕದವರಿಗೂ ಕೊಡುತ್ತಾರೆ.

1. ಲಕ್ಷ್ಮೀ ಪೂಜನ –

ಆ ದಿನ ದೇವರ ಕೋಣೆಯಲ್ಲಿ ಲಕ್ಷ್ಮೀದೇವಿಯ ಪೂಜೆ ತಮ್ಮ ತಮ್ಮ ಅಂಗಡಿಯಲ್ಲಿ ರಾತ್ರಿ ಸಮಯದಲ್ಲಿ ಮಾಡುತ್ತಾರೆ ಹಾಗೂ ಚುರುಮುರಿಯ ನೈವೇಧ್ಯ ತೋರಿಸುತ್ತಾರೆ.

3. ಗರವಾ ಪಾಡವ್ಯೆ (ದನದ ಹಬ್ಬ)

ಕಾರ್ತಿಕ ಶುದ್ಧ ಪ್ರತಿಪದ ದಿನ ದನದ ಹಬ್ಬ ಆಚರಿಸುತ್ತಾರೆ. ಆದಿನ್ ಊರಲ್ಲಿ ಕಲಾ ತಾಂಡಗಳು ಕುಣಿಯುತ್ತವೆ. ಈ ಹಬ್ಬವು ದನಗಳಿಗೂ ಅವನ್ನು ಮೇಯಿಸಲು ಕಾಡಿಗೆ ತೆಗೆದುಕೊಂಡು ಹೋಗುವ ವ್ಯಕ್ತಿಯ ಜೀವನದ ಒಂದು ಮುಖ್ಯ ಅಂಶವಾಗಿದೆ. ಆದಿನ ಬೆಳಗ್ಗೆ ಎದ್ದು ದನಗಳನ್ನು ಸ್ವಚ್ಛವಾಗಿ ಸ್ನಾನ ಮಾಡಿಸುತ್ತಾರೆ. ಹಾಗೂ ಶೃಂಗಾರ ಮಾಡಿ ಅದರ ಕೋಡಿಗೆ, ದೇಹಕ್ಕೆ ಬಣ್ಣ ಬಳಿದು ನಂತರ ಮನೆಯ ಹಿರಿಯನು ಸ್ನಾನ ಮಾಡಿ ದನಗಳ ಪೂಜೆ ಮಾಡುತ್ತಾರೆ. ಎಲ್ಲಕ್ಕೂ ಮೊದಲು ಹೊಸ ಹಗ್ಗ (ದನಕ್ಕೆ ಕಟ್ಟುವ) ಅದರ ಪೂಜೆ ಮಾಡಿ ನಂತರ ದನಗಳ ಕಾಲು

ತೊಳೆದು ಗಂಧ, ಕುಂಕುಮ ಹೂವು ಹಾಕಿ, ಕೊರಳಲ್ಲಿ ಹೂವಿನ ಮಾಲೆ ಹಾಕಿ ಅವಕ್ಕೆ ದೋಸೆ-ಅವಲಕ್ಕಿ ತಿನ್ನಲು ಕೊಡುತ್ತಾರೆ. ಕೊರಳಲ್ಲಿ ಒಂದು ತೆಂಗಿನಕಾಯಿ ಹೋಳನ್ನು ಕಟ್ಟುತ್ತಾರೆ.

**4. ಭಾವಬೀಜ –**

ಇದು ಸಹೋದರ-ಸಹೋದರಿಯರ ಹಬ್ಬ. ಈ ದಿನ ಸಹೋದರಿ ಸಹೋದರನಿಗೆ ಎಣ್ಣೆ ಹಚ್ಚಿ ಸ್ನಾನ ಮಾಡಿಸುವುದಿದೆ. ನಂತರ ಅವನಿಗೆ ಕುಂಕುಮ ನೀರಿನಿಂದ ದೃಷ್ಟಿ ತೆಗೆದು ನಂತರ ಸಹೋದರನಿಗೆ ಇಷ್ಟವಾದ ತಿಂಡಿಯನ್ನು ನೀಡುತ್ತಾರೆ.

*** ತುಳಸಿ ಲಗ್ನ (ಕಾರ್ತಿಕ ವೈದ್ಯಾ ಏಕಾದಶಿ) –**

ತುಳಸಿ ಹಾಗೂ ಕೃಷ್ಣನ ಒಂದು ದಿನದ ಮದುವೆಯ ನೆನಪು ಎಂದು ತುಳಸಿ ಮದುವೆ ಮಾಡುತ್ತಾರೆ. ಎಂದು ಪ್ರತೀಕವಿದೆ. ತುಳಸಿಯ ಮದುವೆ ವಿರೋಬನ ಜೊತೆಗೆ ಆಗಿದೆ ಎಂದೂ ನಂಬುವವರು ಇದ್ದಾರೆ. ತುಳಸಿ ಇವಳು ಪುರಾಣದಲ್ಲಿ ಸಿಗುವ ಮಹಾಪ್ರತಿವೃತೆಯರ ಪ್ರತೀಕ ಎಂದು ಹೇಳುತ್ತಾರೆ.

*** ಮಕರ ಸಂಕ್ರಾಂತಿ –**

ಈ ದಿನ ಸೂರ್ಯ ಮಕರ ರಾಶಿಯಲ್ಲಿ ಪ್ರವೇಶಿಸುತ್ತಾನೆ. ಆದ್ದರಿಂದ ಈ ಹಬ್ಬಕ್ಕೆ ಮಕರ ಸಂಕ್ರಾಂತಿ ಎಂದು ಕರೆಯುತ್ತಾರೆ. ಕೇರಳ ಭಾಗದಲ್ಲಿ ಪೊಂಗಲ ಎಂದು ಕರೆಯುತ್ತಾರೆ. ಜನವರಿ ತಿಂಗಳ 14ನೇ ತಾರೀಖಿಗೆ ಬರುತ್ತದೆ. ಗ್ರಾಮದ ಎಲ್ಲರ ಮನೆಯಲ್ಲೂ ಮನೆಯ ಪುರುಷನ ಪೂಜೆ ಮಾಡಿ ನೈವೇದ್ಯ ತೋರಿಸುತ್ತಾರೆ. ಹಾಗೂ ಕಾಗೆಗೆ ಎಡೆ ನೀಡುತ್ತಾರೆ ಹಾಗೂ ಎಳ್ಳುಂಡಿ ಮಾಡಿ ತಿನ್ನುತ್ತಾರೆ. ಅಕ್ಕ-ಪಕ್ಕದವರಿಗೂ ನೀಡುತ್ತಾರೆ.

*** ಶಿಗಮೊ (ಹೋಳಿ) (ಫಾಲ್ಗುಣಾ ಪೂರ್ಣಿಮಾತ್ ಫಾಲ್ಗುಣ ವೈದ್ಯಾ ದ್ವಿತೀಯಾ) –**

ಈ ಹಬ್ಬ ಮೂರು ದಿನ ಇರುತ್ತದೆ. ಮೊದಲನೇಯ ದಿನ ಮೇಳ (ಕಲಾ ತಂಡಗಳ ಪ್ರದರ್ಶನ) ಎರಡನೇಯ ದಿನ ಹೋಳಿ ಹಾಗೂ ಮೂರನೇಯ ದಿನ ಗಡೆ ಎಂದು ಆಚರಿಸುತ್ತಾರೆ. 40-50 ವರ್ಷದ ಮೊದಲು ಈ ಹಬ್ಬಕ್ಕೆ ಬೇ-ರೆಯದೇ ಉತ್ಸಾಹವಿರುತ್ತಿತ್ತು. ಹೋಳಿ 8-10 ದಿನ ಮೊದಲು ಸುಗ್ಗಿ ಕುಣಿತದ ರಿಯಾಜ್ ಮಾಡುತ್ತಿದ್ದರು. ನಂತರ ದೇವರಿಗೆ ನಮನ ಮಾಡಿ ಕಲಾ ತಂಡದವರು ಬೇರೆ ಬೇರೆ ಗ್ರಾಮಕ್ಕೆ ಕಲಾ ಪ್ರದರ್ಶನಕ್ಕಾಗಿ ಹೊರಬೀಳುತ್ತಿದ್ದರು. ಕೋಲಾಟ, ಗೋಪನೃತ್ಯ ಮುಂತಾದವುಗಳನ್ನು ಪ್ರದರ್ಶಿಸುತ್ತಿದ್ದರು.

*** ಹೋಳಿ ಹುಣ್ಣಿಮೆ (ಫಾಲ್ಗುಣ ಪೂರ್ಣಿಮಾ) –**

ಅಂದು ಸಂಜೆ ಊರಿನ ಕಲಾ ತಂಡಗಳು ಹೊರಬೀಳುತ್ತವೆ. ಆ ದಿನ ಎಲ್ಲರ ಮನೆಯಲ್ಲೂ ಸಿಹಿ ತಿಂಡಿ ಮಾಡುತ್ತಾರೆ.

*** ಹೋಳಿ –**

ಹುಣ್ಣಿಮೆಯ ಮರುದಿನ ಹೋಳಿ ಆಚರಣ ಮಾಡುತ್ತಾರೆ. ಹೋಳಿಗೆ ಸ್ವಲ್ಪ ಕಡ್ಡದ ಹುಲ್ಲು ಹಾಗೂ ತೆಂಗಿನ ಒಣಗರಿ ಕಟ್ಟುತ್ತಾರೆ. ಮೊದಲನೇ ವರ್ಷ ಹಳೇ ಕಟ್ಟಿಗೆ ಕೆಳಗಡೆ ಹಾಕುತ್ತಾರೆ ನಂತರ ಬಾಳೆಹಣ್ಣು ವೈಗ್ಯೆರ ಹಾಕುತ್ತಾರೆ. ಊರ ಮುಖ್ಯಸ್ಥರು 5 ವಡಿ ಹಾಗೂ ಒಂದು ಟೆಂಗಿನಕಾಯಿ ಪೋನಿಸಿ ಅದನ್ನು ಹೋಳಿಗೆ ಕಟ್ಟುತ್ತಾರೆ ಊರ ಭಟ್ಟರು ಹೋಳಿ ಪೂಜೆ ಮಾಡಿ ಅದಕ್ಕೆ ಅಗ್ನಿ ಸ್ಪರ್ಶ ಮಾಡುತ್ತಾರೆ. ಹೋಳಿಗೆ ಕಟ್ಟಿದ ವಡೆ ಕೆಳಗಡೆ ಬಿದ್ದ ತಕ್ಷಣ ಅವನ್ನು ಸಂಗ್ರಹಿಸಿ ಎಲ್ಲರೂ ಅದರ ತುಂಡನ್ನು ಪ್ರಸಾದವೆಂದು ಹಂಚುತ್ತಾರೆ. ಹೋಳಿ ಸುಟ್ಟ ಬೂದಿಯನ್ನು ಹಣೆಗೆ ಹಚ್ಚಿ "ವಿಭೂತಿಯೆಂದು" ಮನೆಗೆ ಹೋಗಿ ಸ್ನಾನ ಮಾಡುತ್ತಾರೆ.

## ಕ್ರಿಶ್ಚಿಯನ್ ಸಮುದಾಯದ ಹಬ್ಬಗಳು –

**– ನತಾಲ (ಕ್ರಿಸ್‌ಮಸ್)**

ಇದು ಕ್ರಿಶ್ಚನ್ ಸಮುದಾಯದ ಎಲ್ಲಕ್ಕೂ ದೊಡ್ಡ ಹಬ್ಬ ಈ ಹಬ್ಬವನ್ನು ಪ್ರತಿವರ್ಷ 25 ಡಿಸೆಂಬರಕ್ಕೆ ಆಚರಿಸುತ್ತಾರೆ. ಈ ದಿನಾಂಕಕ್ಕೆ "ಜೇರು ಸ್ಲಮ" ದಲ್ಲಿ ಏಸುಕ್ರಿಸ್ತ ಒಂದು ಕೊಟ್ಟಿಗೆಯಲ್ಲಿ ಜನ್ಮ ತಾಳಿದ್ದನು ಎಂಬಅನಿಸಿಕೆ ಇರುವುದರಿಂದ ಕೆಲ ಜನ ಆದಿನ ತಮ್ಮ ಮನೆಕಡೆಗೆ ಕೊಟ್ಟಿಗೆ ಆಕೃತಿ ತಯಾರಮಾಡಿ ಅದರಲ್ಲಿ ದನಕರು-ಕುರಿ-ಮರಿಗಳನ್ನು ತಯಾರ ಮಾಡಿ ಇಡುತ್ತಾರೆ. ಬಾಲಶಿಶು ಏಸುಕ್ರಿಸ್ತನನ್ನು ತೊಡೆಯ ಮೇಲೆ ತಾಯಿ ಮೇರಿ ಕೂಡ್ರಿಸಿಕೊಂಡ ಮೂರ್ತಿ ತಯಾರ ಮಾಡಿ ಇಡುತ್ತಾರೆ. ಹಾಗೂ ಒಂದು ಕ್ರಿಸ್‌ಮಸ್ ಗಿಡವನ್ನು ತಯಾರ ಮಾಡಿ ಅಲ್ಲಿ ಇಡುತ್ತಾರೆ. ಇದು ಅತೀ ದೊಡ್ಡ ಹಬ್ಬವಾದುದರಿಂದ 10-15 ದಿನ ಮೊದಲೇ ವಿವಿಧ ಸಿಹಿ ತಿಂಡಿಗಳನ್ನು ಮಾಡುತ್ತಾರೆ. ಹಾಗೂ ಹಬ್ಬದ ದಿನ ತಮ್ಮ ಸಂಭಂಧಿಕರಿಗೂ ಇಷ್ಟ ಮಿತ್ರರಿಗೂ ಕಳಿಸಿಕೊಡುತ್ತಾರೆ. ಡಿಸೆಂಬರ 24ರ ರಾತ್ರಿ ಚರ್ಚಿನಲ್ಲಿ ಪ್ರಾರ್ಥನೆ ಮಾಡಿ ರಾತ್ರಿ 12 ಘಂಟೆಗೆ ಚರ್ಚಿನಲ್ಲಿ ಏಸುವಿನ ಜನ್ಮದ ಕಾರ್ಯಕ್ರಮದ ನಂತರ ತಮ್ಮ ತಮ್ಮ ಮನೆಗೆ ಹೋಗಿ ತಮ್ಮ ತಮ್ಮ ಶೃಂಗಾರ ಮಾಡಿದ ಮನೆಯಲ್ಲಿ ದೀಪಾಲಂಕಾರ ಮಾಡಿದ ನಕ್ಷತ್ರ ಆಕಾರದ ಮಾಡಿದ ಆಕಾಶ ಬುಟ್ಟಿಯನ್ನು ಹಚ್ಚುತಾರೆ. ಹಾಗೂ ವಿವಿಧ ಮನರಂಜನಾ ಕಾರ್ಯಕ್ರಮ ಮಾಡಿ ಸಂತೋಷದಿಂದ ಹಬ್ಬದ ಆಚರಣೆ ಮಾಡುತ್ತಾರೆ. ಈ ಹಬ್ಬ ಜನವರೆ 1ನೇ ತಾರೀಖಿನವರೆಗೂ ಆಚರಿಸುತ್ತಾರೆ. ಹೊಸವರ್ಷ ಪ್ರಾರಂಭವಾದ ದಿನ ಚರ್ಚಿನಲ್ಲಿ ಪ್ರಾರ್ಥನೆ ಮಾಡಿ ಮನೆಯಲ್ಲಿ ಸಿಹಿ ಅಡುಗೆ ಮಾಡಿ ಭೋಜನ ಮಾಡುತ್ತಾರೆ.

- ಇಂತ್ರುಜ

ಈ ಹಬ್ಬವು ಒಂದು ರೀತಿಯಿಂದ ಹಿಂದು ಜನರ ಹೋಳಿಹಬ್ಬಕ್ಕೆ ಸ್ವಲ್ಪ ಹೊಂದಾಣಿಕೆಯಿದ್ದು, ವಿವಿಧ ರೀತಿಯ ಮುಖವಾಡ ಧರಿಸಿ ಕುಣಿಯುವುದು ಬಣ್ಣ ಆಡುವುದು ಇವೆಲ್ಲ ಆಚರಿಸುತ್ತಿದ್ದರು. ಮೂರನೇದಿನ ಊರಿನ ಜನ ಢೋಲ, ತಾಸೆ, ಘುಮಟಾ ಭಾರಿಸುತ್ತಾ ಮಾಂಡೆ ಹಾಗೂ ಕಾಂತರ ಗೀತ ನೃತ್ಯ ಮಾಡುತ್ತಾರೆ ಕೊನೆಯದಿನ ಒಬ್ಬರ ಮೇಲೆ ಒಬ್ಬರು ಬಣ್ಣ ಹಾಕಿ ಆಟವಾಡುತ್ತಿದ್ದರು. ಇಂತ್ರುಜ ಮುಗಿದ ಮರುದಿನ ಬುಧವಾರ ಇದಕ್ಕೆ ಸಂಜಯ ಬುಧವಾರ ಯಾಮಲ್ಯಾಂಚೆ ಬುಧವಾರ ಎಂದು ಕರೆಯುತ್ತಾರೆ ಇಂಗ್ಲೀಷದಲ್ಲಿ "Ash Wednesday"ಎನ್ನುತ್ತಾರೆ (ಇದು ಫೆಬ್ರುವರಿ ಮಾರ್ಚ ತಿಂಗಳಲ್ಲಿ ಬರುತ್ತದೆ).

- ಪಾಸ್ಕಾ (ಇಸ್ಕರ)

ಪಾಸ್ಕಾ (Pascoa) ಪೋರ್ಚುಗೀಸರ ಶಬ್ಧ ಪಫೆಸ್ತ ಮೊದಲನೆ ರವಿವಾರ ಬರುತ್ತದೆ. ಅದು ರಾಮಾ ಆಯತಾರ, ಪೋರ್ಚುಗೀಸರ ಶಬ್ಧ Ramo ಎಂದರೆ ಗಿಡದ ಟೊಂಗೆ (Palmsunday) ಅಂದು ಚರ್ಚಿನಲ್ಲಿ ಪ್ರಾರ್ಥನೆಯಾದ ನಂತರ ಟೆಂಗಿನ ಚಿಗುರುಗರಿ ತೆಗೆದುಕೊಂಡು ಕ್ರಾಸಮಾಡಿ ಪ್ರತಿಯೊಬ್ಬರೂ ತಮ್ಮ ಕೈಯಲ್ಲಿ ಆ ಟೆಂಗಿನ ಗರಿಕ್ರಾಸ್ ಹಿಡಿದುಕೊಂಡು ಮನೆಗೆ ಹೋಗುತ್ತಾರೆ. ಅಂದಿನ ದಿನ ಜೆರುಸ್ಲಮಾ ಶಹರಕ್ಕೆ ಏಸುವಿನ ಪ್ರವೇಶವಾಯಿತು ಹಾಗೂ ಏಸುವಿನ ಶಿಷ್ಯಂದಿರು ಕೈಯಲ್ಲಿ ಖಜ್ಜೂರ ಗಿಡದ ಎಳೆಗರಿ ಕೈಯಲ್ಲಿ ಹಿಡಿದು ಕುಣಿಯುತ್ತ ಏಸುವನ್ನು ಸ್ವಾಗತಿಸಿ ಬರಮಾಡಿಕೊಂಡರೆಂದು ಪ್ರತೀತಿ ಇದೆ. ಆ ದಿನದ ನೆನಪಿಗಾಗಿ ಈ ಹಬ್ಬವನ್ನು ಆಚರಿಸುವುದಾಗಿ ಪ್ರತೀಕವಿದೆ. ಫಾಸ್ತ ಹಬ್ಬದ ನಡುವೆ 3 ದಿನ ಅತೀ ದುಃಖದ ದಿನವೆಂದು ಆಚರಿಸುತ್ತಾರೆ. ಕೊನೆಯ ಗುರುವಾರದ ಮರುದಿನ ಬರುವ ಶುಕ್ರವಾರ ಇದು ಕೊನೆಯ ಶುಕ್ರವಾರ "ಗುಡ್‌ಫ್ರೈಡೆ" ಇದನ್ನು ದುಃಖದ ದಿನವಾಗಿ ಆಚರಿಸುತ್ತಾರೆ. ಕಾರಣ ಇಂದಿನದಿನ ಏಸುವಿನನ್ನು ಶಿಲುಬೆಗೆ ಏರಿಸಿದ ದಿನ ಎಂದು ಹೇಳುತ್ತಾರೆ. ಮರುದಿನ ಶನಿವಾರ ದುಃಖದ ದಿನವಿರುತ್ತದೆ. ಮೂರನೇ ದಿನ ರವಿವಾರ ಏಸು ಸ್ವರ್ಗಕ್ಕೆ ಹೋದನೆಂಬ ದೃಷ್ಠಿಯಿಂದ ಅಂದು ಹಬ್ಬವನ್ನು ಆಚರಿಸುತ್ತಾರೆ.

- ಸೊಜ್ಯಾಂವ (ಸಂಜ್ಯಾವ)

ಪ್ರತಿವರ್ಷ 24 ಜೂನಕ್ಕೆ ಈ ಹಬ್ಬವನ್ನು ಆಚರಿಸುತ್ತಾರೆ ಅಂದು ಗಂಡಸರು ಹಾಗೂ ಮಕ್ಕಳು ಒಂದು ತಂಡ ಮಾಡಿಕೊಂಡು ಬೇರೆಯವರ ಮನೆಬಾಗಿಲಿಗೆ ಸೊಜ್ಯಾಂದ ಕುಣಿಯಲು ಹೋಗುತ್ತಾರೆ. ಮೈಮೇಲೆ ಬರಿ ಲಂಗೋಟಿ ಇರುತ್ತಿತ್ತು. ತಲೆಗೆ ಎಲೆ ಬಳ್ಳಿಯನ್ನು ಸುತ್ತಿಕೊಳ್ಳುತ್ತಿದ್ದು ಕೈಯಲ್ಲಿ ಒಂದು ಟಂಗಿನ ಕಟ್ಟಿಗೆ (ಪಿರಾಡೊ) ಹಿಡಿದು ಕೊಂಡು ಪ್ರತಿ ಮನೆಯ ಅಂಗಳದಲ್ಲಿ ಮಳೆಯಿಂದ ಉಂಟದ ರಾಡಿಯಲ್ಲಿ ಜೋರಿನಿಂದ ಬಡಿದು ಸಪ್ಪಳಮಾಡಿ ಹಾಡುತ್ತಾರೆ ಹಾಗೂ ಜನರು ನೀಡಿದ ಕಾಣಿಕೆ ಪಡೆದು ಬೇರೆ ಮನೆಗೆ ಹೋಗುತ್ತಾರೆ.

- ಹಿಂದೂ ಸಂಸ್ಕಾರ ಹಾಗೂ ಪರಂಪರಾ

* ಸಟಿ (ಸಟಿ ಮಗುಹುಟ್ಟಿದ 6ನೇ ದಿನ ಕಾರ್ಯಕ್ರಮ)

ಮೊದಲು ಹೆರಿಗೆಯು ತಾಯಿಯ ಮನೆಯಲ್ಲಿ ಆಗುವ ಪರಂಪರೆ ಇತ್ತು ಮಗು ಜನಿಸಿದ ಸುದ್ದಿಯನ್ನು ಮಗುವಿನ ತಂದೆಯ ಮನೆಗೆ ತಾಯಿಯ ಮನೆಯಿಂದ ಟೆಂಗಿನಕಾಯಿ ಹಾಗೂ ಬೆಲ್ಲದೊಂದಿಗೆ ಈ ಸಿಹಿಸುದ್ದಿ ಮುಟ್ಟಿಸುವ ವ್ಯವಸ್ಥೆ ಇತ್ತು. ಮಗುಜನಿಸಿದ 6ನೇ ದಿನ "ಸಟಿ" ಪೂಜಿಸುತ್ತಾರೆ. ಆ ದಿನ ಹೆರಿಗೆಯಾದ ಕೋಣೆಯನ್ನು ಸೆಗಣಿಯಿಂದ ಸಾರಿಸಿ ಶುದ್ಧ ಮಾಡುತ್ತಾರೆ. ಸಂಜೆ ಸಮಯಕ್ಕೆ ಮನೆ ಯಜಮಾನಿ ಬಂದು ತೆಂಗಿನ ಕಾಯಿ ಅಕ್ಕಿ. ಎಲೆ ಅಡಿಕೆ ಎಲ್ಲವನ್ನು ತಂದು ಮಣೆಯ ಮೇಲೆ ಇಡುತ್ತಾರೆ. ಬಾಳೆಎಲೆಯ ಒಂದು ದೊಣ್ಣೆ ಮಾಡಿ ಆ ಟೆಂಗಿನಕಾಯಿಯ ಮೇಲೆ ಡಬ್ಬುಹಾಕಿ ಕಾಡಿಗೆ ಕುಂಕುಮ ಹಚ್ಚಿ ಆ ದೊಣ್ಣೆಗೆ ಕಣ್ಣು ಮೂಗು ಮಾಡುತ್ತಾರೆ. ಬಂಗಾರದ ದಾಗೀನು ಆ ಕಾಯಿಗೆ ಹಾಕುತ್ತಾರೆ. ಪಿಟಕುಳ್ಯಾ ಹೂವಿನ ಮಾಲೆ ಅದಕ್ಕೆ ಹಾಕುತ್ತಾರೆ. ಆ ಸಂದರ್ಭದಲ್ಲಿ ನರವಲ್ಯಾಚೆ ಎಂಬ (ಗಾಳ ಸೂತ್ರದ ಗಿಡ) ಅದರ ಚಿಕ್ಕಟೊಂಗೆ ತಂದು ಮನೆ ಹಿತ್ತಲ ಹಾಗೂ ಮುಂದೆ ಹುಗಿಯುತ್ತಾರೆ. ನಂತರ ವೀಳೆದೆಲೆ ಹಾಗೂ ಕೆಲ ದುಡ್ಡನ್ನು ಮಗುವಿಗೂ ಬಾಣಂತಿಗೂ ನಿವಾಳಿಸಿ ಆ ಮಣೆಯ ಮೇಲೆ ಇಡುತ್ತಾರೆ. ನಂತರ ಸಟಿಯ ಮೂಜೆ ಮಾಡಿ ಅದಕ್ಕೆ ನೈವೇದ್ಯ (ಖಿಚಡಿ ವಡೆ) ತೋರಿಸುತ್ತಾರೆ. ಕೆಲಜನ ಮೀನಿನ ನೈವೇದ್ಯ ತೋರಿಸುತ್ತಾರೆ. ಬಾಣಂತಿಗೆ ಉಡಿತುಂಬಿ ಅವಳಿಗೆ ಊಟಕ್ಕೆ ನೀಡುತ್ತಾರೆ. ನಂತರ ಉಳಿದವರಿಗೆ ಊಟ ಹಾಗೂ ಅಲ್ಲಿ ನೆರೆದ ಮಹಿಳೆಯರಿಗೆಲ್ಲರಿಗೂ ಕಾಡಿಗೆ ಹಚ್ಚುತ್ತಾರೆ. ರಾತ್ರಿ ಪೂರ್ತಿ ಆ ಮಗುವನ್ನು ತೊಡೆಯ ಮೇಲೆ ಇಟ್ಟು-ಕೊಂಡೆ ಕೂಡ್ರಬೇಕು, ಬಾಣಂತಿ ಆ ರಾತ್ರಿ ಆ ಕೋಣೆಯಿಂದ ಹೊರಬರುವಂತಿಲ್ಲ ಕಾರಣ ಸಟಿದೇವಿ ಆ ರಾತ್ರಿ ಬಂದು ಮಗುವಿನ ಜಾತಕ ಬರೆಯುವುದಾಗಿ ನಂಬಿಕೆಯಿದೆ.

* ಬಾರಸೊ-ನಾಮಕರಣ

ಹೆರಿಗೆಯಾಗಿ 11ನೇ ದಿನದವರೆಗೆ ಕೂಸು ಯಾ ಬಾಣಂತಿಯನ್ನು ಶೂಲಗಿತ್ತಿ ಹೊರತು ಪಡಿಸಿ ಯಾರೂ ಮುಟ್ಟುವುದಿಲ್ಲ. 11ನೇ ದಿನದ ನಂತರ ಕೂಸು-ತಾಯಿಯನ್ನು ಸ್ನಾನ ಮಾಡಿಸಿ ಮನೆಯೊಳಗೆ ಕರೆದುಕೊಂಡು ಬರುತ್ತಾರೆ. ಭಟ್ಟರು ಮನೆಗೆ ಬಂದು ಶುದ್ಧಿಕರಣದ ಹೋಮ ಹಾಕುತ್ತಾರೆ ಹಾಗೂ ಪಂಚಗವ್ಯವನ್ನು ಮನೆಯ ಎಲ್ಲ ಭಾಗದಲ್ಲಿ ಸಿಂಪಡಿಸಿ ಮನೆಯ ಎಲ್ಲ ಸದಸ್ಯರಿಗೆ ಕುಡಿಯಲು ಕೊಡುತ್ತಾರೆ. ಮರುದಿವಸ ನಾಮಕರಣ ಕಾರ್ಯಕ್ರಮ

(ತೊಟ್ಟಿಲು) ಅಂದರೆ ಮಗುವನ್ನು ತೊಟ್ಟಿಲಿಗೆ ಹಾಕಿ ನಾಮಕರಣ ಮಾಡುವದಿನ ಸಂಜೆ ಕೆಲ ಸುಹಾಸಿನಿಯರು ಬಾಣಂತಿಗೆ ಬಾವಿಯ ಕಡೆ ಕರೆದುಕೊಂಡು ಹೋಗಿ ಪಂಚಧಾನ್ಯ ಬಾಣಂತಿಯ ಕಡೆಯಿಂದ ಬಾವಿಗೆ ಅರ್ಪಿಸಿ ಬಾವಿಪೂಜೆ ಅವಳಿಂದ ಮಾಡಿಸಿಕೊಂಡು ಬಾವಿಯಿಂದ ಒಂದು ಚಂಬು ಬಾವಿಯಿಂದ ನೀರು ತೆಗೆದು 5 ವಿವಿಧ ಬಗೆಯ ಗಿಡಗಳಿಗೆ ಹಾಕಿ ಕೊನೆಗೆ ಒಂದು ಚೊಂಬು ನೀರನ್ನು ಮನೆಯೊಳಗೆ ಒಯ್ಯಬೇಕು. ಅಂದರೆ ಅಂದಿನಿಂದ ಅವಳಿಗೆ ಬಾವಿಯನ್ನು ಮುಟ್ಟಲು ಪರವಾನಿಗೆ ಇದ್ದಂತೆ. ನಂತರ ಅವಳಿಗೆ ಉಡಲು ಹೊಸ ಸೀರೆ ನೀಡುತ್ತಾರೆ. ಅವಳು ಕೈಯಲ್ಲಿರುವ ಹಳೆ ಹಸಿರು ಬಳೆ ತೆಗೆದು ಕೆಂಪು ಬಳೆ ಹಾಕುವ ವಿಧಾನವಿದೆ. ಗಂಡನಮನೆ ಹಾಗೂ ತಾಯಿಯಮನೆಯ ಸುಹಾಸಿನಿಯರು ಅವಳ ಉಡಿ ತುಂಬುತ್ತಾರೆ. ಕೊನೆಗೆ ಕಾಡಿಗೆ ಹಚ್ಚಿ, ಹೊಸ ಬಟ್ಟೆ ಹಾಕಿ ಕೂಸಿಗೆ ತೊಟ್ಟಿಲಲ್ಲಿ ಹಾಕುವ ತಯಾರಿ ಮಾಡುತ್ತಾರೆ. ಕೊನೆಗೆ 5 ಸಲ ತೊಟ್ಟಿಲು ಬುಡದಿಂದ ತೆಗೆಯುತ್ತಾರೆ. ಹಾಗೂ ಎಲ್ಲರೂ ಸೇರಿ ತೊಟ್ಟಲಲ್ಲಿ ಹಾಕುತ್ತಾರೆ.

*** ದಾತೂಳ್ಯೊ (ಕೂಸಿಗೆ ಪ್ರಥಮ ಹಲ್ಲು ಬಂದಾಗ)**

ಮಗುವಿಗೆ ಮೊದಲನೆಯ ಹಲ್ಲು ಬಂದಾಗ ಈ ಕಾರ್ಯ ಮಾಡುತ್ತಾರೆ. ಮಗುವಿಗೆ ಮಣೆಯ ಮೇಲೆ ಕೂಡ್ರಿಸಿ ಕಲ್ಲಿ, ಶೆಂಗಾಕಾಳು, ಚಿರಮುರಿ, ಚಾಕಲೇಟು ಹೀಗೆ ವಿವಿಧ ಪದಾರ್ಥವನ್ನು 5 ಜನ ಒಂದುಗೂಡಿಸಿ ಅವನ ತಲೆಯ ಮೇಲಿನಿಂದ ಸುರಿಯುತ್ತಾರೆ.

*** ವಾಡದಿಸು (ಮೊದಲನೆ ವರ್ಷದ ಹುಟ್ಟುಹಬ್ಬ)**

ಮಗುವಿನ ಮೊದಲನೆ ಹುಟ್ಟುಹಬ್ಬವನ್ನು ಈ ರೀತಿ ಆಚರಿಸುತ್ತಾರೆ. ಅದಕ್ಕೆ ಸ್ನಾನ ಮಾಡಿಸಿ ಎತ್ತಿ ಬಟ್ಟೆ ಹಾಕಿ ಒಂದು ಮಣೆಯ ಮೇಲೆ ಕೂಡ್ರಿಸುತ್ತಾರೆ. ನಂತರ ಮಗುವಿನ ತಾಯಿ ಅದಕ್ಕೆ ಆರತಿ ಮಾಡುತ್ತಾಳೆ ಅದಕ್ಕೆ ಅನ್ನದ ಮೊದಲ ತುತ್ತನ್ನು ತಿನಿಸುತ್ತಾರೆ ಈ ಸಂದರ್ಭದಲ್ಲಿ ಖಾಸ ಆಗಿ ಅಕ್ಕಿ ಪಾಯಸ ಮಾಡುತ್ತಾರೆ (ಇಂದು ಕೇಕಕಟ್ಟ ಮಾಡುವ ಪಾಶ್ಚಿಮಾತ್ಯ ಸಂಸ್ಕೃತಿ ಬಂದಿದೆ)

*** ಜವಳಕಾಪಪ (ಮಗುವಿನ ಜವಳ ತೆಗೆಯುವುದು)**

ಮಗುವಿಗೆ ಮೊದಲಬಾರಿಗೆ ಕೂದಲು ತೆಗೆಯುವಾಗ (ಕೂದಲು) ಅದಕ್ಕೂ ವಿಧಿ ಪಾಲಿಸುತ್ತಾರೆ. ಸರಿಯಾದ ಮುಹೂರ್ತನೋಡಿ ಕ್ಷೌರಿಕನಿಗೆ ಮನೆಗೆ ಕರೆಯಿಸಿ ಮಗುವಿನ ಕೂದಲು ಕತ್ತರಿಸುತ್ತಾರೆ. ಕ್ಷೌರಿಕನಿಗೆ ಕಾಯಿ, ಅಕ್ಕಿ, ಹೊಸವಸ್ತ್ರ ವೀಳ್ಯದೆಲೆ ಅಡಿಕೆ ಹಾಗೂ ಹಣವನ್ನು ನೀಡಿ ಕಳುಹಿಸುತ್ತಾರೆ. ಮಗುವಿನ ತಲೆಗೆ ಒಂದು ವರ್ಷ ತುಂಬುವವರೆಗೆ ಕತ್ತರಿ ಹಚ್ಚುವುದಿಲ್ಲ. ಅದರಂತೆ 3 ವರ್ಷ ಪೂರ್ತಿಯಾಗುವವರೆಗೆ ಅವನ ಜವಳ ತೆಗೆಯುವುದಿಲ್ಲ. ಅದರಂತೆ ಜನ್ಮವಾದ ದಿನ ಕೂದಲು ಕತ್ತರಿಸುವದಿಲ್ಲ.

*** ಕಾನ-ನಾಕ-ತೋಪಪ (ಕಿವಿ, ಮೂಗು ಚುಚ್ಚುವುದು**

ಹೆಣ್ಣು ಯಾ ಗಂಡು ಮಗು ಇರಲಿ ಅದಕ್ಕೆ ಒಂದು ವರ್ಷ ಪೂರ್ತಿಯಾಗುವುದರೊಳಗೆ ಅದರ ಕಿವಿ ಚುಚ್ಚುವ ಪದ್ಧತಿ ಇದೆ. ಕಿವಿ ಚುಚ್ಚಿದರೆ ಒಂದು ಕಿರವಡ ಹೋಗುತ್ತದೆ ಅವನಿಗೆ ಯಾವುದೇ ಬಾಧೆ ಬರಲಾರದೆಂಬ ನಂಬಿಕೆ ಇಂದು ಸರ್ವಸಾಧಾರಣವಾಗಿ ಕಿವಿಚುಚ್ಚುವುದೆಂದರೆ ಕಿವಿಗೆ ಅಲಂಕಾರ ಮಾಡಿಕೊಳ್ಳಲು ಸಿಗಬೇಕೆಂಬ ದೃಷ್ಟಿಯೂ ಇದು ಹಿಂದಿನ ಉದ್ದೇಶವಿರಬೇಕು.

ಒಂದು ಒಳ್ಳೆಯ ಮುಹೂರ್ತ ನೋಡಿ ಮನೆಗೆ ಶೇಠ (ಸೋನಗಾರ) ಕರೆಯಿಸಿ ಮಗುವಿನ ಕಿವಿ ಚುಚ್ಚುತ್ತಾರೆ. ಯಾರಿಗೆ ಅನಕೂಲವಿದೆ ಅವರು ಬಂಗಾರದ ತಂತಿಯಿಂದ ಚುಚ್ಚಿಸಿ ಕೊಳ್ಳುತ್ತಾರೆ. ಕಿವಿಯ ನೋವು ನಿವಾರಣಗೆ ಗಿಡಮೂಲಿಕೆ ಔಷಧಿ ಬಳಸುತ್ತಿದ್ದರು. ಬಂದಂತಹ ಸೋನಗಾರರಿಗೆ ಕಾಯಿ, ಉಡಿ, ಹಣ ನೀಡಿ ಮರ್ಯಾದಿ ಮಾಡಿ, ಕಳುಹಿಸುತ್ತಾರೆ. ಅದೇ ಪದ್ಧತಿಯಂತೆ 8-10 ವರ್ಷ ಹೆಣ್ಣು ಮಗುವಿಗೆ ಮೂಗು ಚುಚ್ಚುತ್ತಾರೆ.

*** ಮುಂಜ (ಮುಂಜಿವೆ)**

ಗಾವಟಿ ಶಬ್ಧದಲ್ಲಿ ಮುಂಜ ಎಂದರೆ ಧರ್ಮಶಾಸ್ತ್ರದಲ್ಲಿ ಈ ಸಂಸ್ಕಾರಕ್ಕೆ ಉಪನಯನ ಮೂಜಿ ಬಂಧನ ವೃತ ಬಂಧನ ಹೀಗೆ ಹೆಸರುಗಳಿವೆ. ಈ ಸಂಸ್ಕಾರದಿಂದ ಅವನು ಬ್ರಹ್ಮಚರ್ಯ ಆಶ್ರಮದಲ್ಲಿ ಪ್ರವೇಶ ಮಾಡುತ್ತಾನೆ. ಈ ಸಂಸ್ಕಾರದ ನಂತರ ಅವನು ವೇದಾಧ್ಯಾಯನದ ಕಾರಣಕ್ಕೆ ಗುರುಗಳ ಕಡೆಗೆ ಹೋಗುವ ಅಧಿಕಾರ ಪ್ರಾಪ್ತವಾಗುತ್ತದೆ. ಅಂದರೆ ಅವನಿಗೆ ಎರಡನೆ ಕಣ್ಣು (ಜ್ಞಾನ ಸಿಗುವ) "ಉಪನಯನ" ಎನ್ನುತ್ತಾರೆ. ಆದ್ದರಿಂದ ಇದಕ್ಕೆ ಮುಂಜಿ ಬಂಧನ ಎನ್ನುತಾರೆ. ಈ ಸಂಸ್ಕಾರವು ಬರಿ ಭಟ್ಟರು, ಭಾಹ್ಮಣರು ಶೇಟ ಮೆಸ್ತ ಹೀಗೆ ಕೆಲ ವಿವಿಧ ಸಮಾಜಗಳಲ್ಲಿ ಮಾತ್ರ ಮಾಡುತ್ತಾರೆ.

*** ಲಗ್ನ (ಮದುವೆ)**

ಇಂದು ಮದುವೆಯಾಗುವುದಾದರೆ ಕುಲ, ಗೋತ್ರ, ಜಾತಿ, ಧರ್ಮ ಹಾಗೂ ಆರ್ಥಿಕ ಮಟ್ಟವನ್ನು ನೋಡುತ್ತಾರೆ. ನಂತರ ಕುಲದೇವರು ಹಾಗೂ ಗ್ರಾಮದೇವರಿಗೆ ಪ್ರಸಾದ ಹಚ್ಚಿ ನೋಡುತ್ತಾರೆ. ಸಮೀಪದ ರಕ್ತ ಸಂಬಂಧದಲ್ಲಿ ಮದುವೆ ಮಾಡಲು ಭಂಧನವಿದೆ. ಮೊದಲು ಮದುವೆಗಳು ಹಿರಿಯರ ಮಾತಿನಂತೆ ಆಗುತ್ತಿತ್ತು. ಮದುವೆಯಾಗುವವರೆಗೂ ಹುಡುಗಿಯು ಹುಡುಗನ ಮುಖವನ್ನು ನೋಡುತ್ತಿರಲಿಲ್ಲ. ಇಂದು ಎಲ್ಲವೂ ಬದಲಾಗಿದೆ. ಹುಡುಗನಿಗೆ ಹುಡುಗಿ ಪಸಂದವಾದರೆ ಮಾತ್ರ ಮದುವೆಯನ್ನು ನಿಶ್ಚಯಿಸುತ್ತಾರೆ.

*** ಗೋಡಸಾಕರ (ಗೋಡಕಾಲ್ತಿ)**

ಮನೆತನ ಘಟ್ಟಿ ಮಾಡುವ ಹುಡುಗನ ಮನೆಯವತಿಯಿಂದ ಪಂಚರೆಲ್ಲರು ಹುಡುಗಿಯ ಮನೆಗೆ

ಹೋಗುತ್ತಾರೆ. ಅವರ ಜೊತೆಗೆ ಊರಿನ ಕೆಲ ಮುಖಂಡರೂ ಇರುತ್ತಾರೆ. ಈ ವಿಧಿಯಲ್ಲಿ ಎರಡೂ ಕುಟುಂಬದ ವತಿಯಿಂದ 5+5 ಟೆಂಗಿನಕಾಯಿ ಹಾಗೂ ಬೆಲ್ಲವನ್ನು ಉಪಯೋಗಿಸಿ ಎರಡೂ ಕುಟುಂಬದ ಕುಲದೇವರ ಹಾಗೂ ಗ್ರಾಮ ದೇವರ ಹೆಸರಿನಿಂದ ಒಡೆಯುತ್ತಾರೆ. ಹಾಗೂ ಕೊಬ್ಬರಿ ಹೆರಜಿ ಬೆಲ್ಲವನ್ನು ಸೇರಿಸಿ ಎರಡು ಕಡೆಯ ದೇವರಿಗೆ ಬಾಳೆಎಲೆ ಮೇಲೆ ನೈವೇದ್ಯ ತೋರಿಸಿದ ನಂತರ ಎಲ್ಲರಿಗೂ ಹಂಚುತ್ತಾರೆ.

*** ಸಾಕರಪುಡೊ (ಇಳಿ ಮಾಡುವುದು) ಸಕ್ಕರೆ ಕಾರ್ಯ**

ಈ ಕಾರ್ಯಕ್ಕೆ ಮದುವೆಯಾಗಲಿರುವ ಹುಡುಗ-ಹುಡುಗಿ ಇಬ್ಬರೂ ಹಾಜರಿದ್ದು ಹುಡುಗಿಯ ಮನೆಯಲ್ಲಿ ಸಕ್ಕರೆ ಕಾರ್ಯ ಮಾಡುತ್ತಾರೆ. ಎರಡೂ ದೇವರಿಗೆ ಮರ್ಯಾದಿ ನೀಡಿದ ನಂತರ ಹುಡುಗನ ಮನೆಯ ಮುತ್ತೈದೆಯು ಹೊಸ ಸೀರೆಯೊಂದಿಗೆ ಹುಡುಗಿಯ ಉಡಿ ತುಂಬುತ್ತಾಳೆ. ನಂತರ ಹುಡುಗಿಯ ಕೈಯಲ್ಲಿ ಸಕ್ಕರೆ ತುಂಬಿದ ಪುಡಿಕೆ ನೀಡುತ್ತಾರೆ. ನಂತರ ಹುಡುಗ-ಹುಡುಗಿ ಒಬ್ಬರಿಗೊಬ್ಬರು ಬಂಗಾರದ ಉಂಗುರ ಹಾಕುತ್ತಾರೆ. ನಂತರ ಮದುಮಗಳು ಗಂಡನ ಮನೆಯವರು ನೀಡಿದಂತ ಹೊಸ ಸೀರೆಯನ್ನು ಉಟ್ಟು ಬಂದು ಹಿರಿಯರೆಲ್ಲರಿಗೂ ಕಾಲಿಗೆ ಬಿದ್ದು ಆಶೀರ್ವಾದ ಪಡೆಯುತ್ತಾಳೆ. ಮದುಮಗಳ ಮನೆಯವತಿಯಿಂದ ಮದುಮಗನಿಗೆ ಹೊಸಬಟ್ಟೆ ನೀಡುತ್ತಾರೆ ಹಾಗೂ ಅಂದು ಮದುವೆಯ ಮುಹೂರ್ತ ತ್ಯಯ ಮಾಡುತ್ತಾರೆ.

*** ಧಡವತ (ಲಗ್ನಲಾಗಚೆಕಪಡೆ) – ಮದುವೆಯ ಜವಳ**

ಮದುವೆಯ ಜವಳ ಒಂದು ಒಳ್ಳೆಯ ದಿನವನ್ನು ನಿಶ್ಚಯಿಸಿ ಆ ದಿನ ತರುವ ಮದುವೆ ಬಟ್ಟೆಗೆ ಧಡಾಯತ್ ಯಾ ಸಣಂಗ ಎನ್ನುತ್ತಾರೆ. ಮದುವೆ ಬಟ್ಟೆ ಎರಡೂ ಬದಿಯಿಂದ ಅವರವರ ಯಜಮಾನ, ಯಜಮಾನಿ, ಅಜ್ಜ-ಅಜ್ಜಿ. ಮಾಮ-ಮಾಮಿ, ಧೆಡೊ-ಧೆಡಿ, ಸಹೋದರ-ಸಹೋದರಿ ಹಾಗೂ ದೇವ-ದೇವತೆಗಳಿಗೆ ಹೊಸ ಬಟ್ಟೆ ನೀಡಿ ಮಾನಮಾಡುವ ಪದ್ಧತಿ ಇರುತ್ತದೆ.

*** ಮಾಟೋವ (ಮದುವೆ ಹಂದರ)**

ಮದುವೆಯ ಮಂಟಪ ವಿಧಿಪೂರ್ವಕ ಹಾಕುವುದು ಇರುತ್ತದೆ. ಇಂದು ಮದುವೆಗಳು ರೆಡಿಮೇಡ ಹಾಲಗಳಲ್ಲಿ ಆಗುತ್ತದೆ. ಆದರೂ ಸಹಿತ ಪರಂಪರೆ ಎಂದು ಮನೆಯ ಕಡೆ ಹಂದರ ಹಾಕುತ್ತಾರೆ. ಈ ಹಿಂದೆ ಜನರು ಮದುವೆಯ 5 ದಿನ ಮುಂಚಿತವಾಗಿ ಮದುವೆಯ ಹಂದರ ಹಾಕುತ್ತಿದ್ದರು. ಮದುವೆಯ ಮೊದಲನೆ ಆಧಾರ ಕಂಭವನ್ನು ಊರಿನ ಹಿರಿಯನು ಹಾಕುತ್ತಾನೆ. ಪ್ರತಿ ಮನೆಯಿಂದ ಒಬ್ಬ ವ್ಯಕ್ತಿ ಹಂದರ ಹಾಕಲು ಹಂದರಕ್ಕೆ ಹೂವು ಹಾಗೂ ಚಾದರಗಳನ್ನು ಕಟ್ಟಿ ಊರಿನ ಧೋಬಿ ತಯಾರ ಮಾಡಿ ಅಲಂಕರಿಸುತ್ತಾನೆ. ಮದುವೆಯ ಮೊದಲನೆ ದಿನ ಯಾ ಮಧುಮಗಳ ಮನೆಯಲ್ಲಿ ಅವಳಿಗೆ ಎಣ್ಣೆ ಅರಶಿಣ ಸ್ನಾನ ಮಾಡುವ ವಾಡಿಕೆ ಇರುವುದರಿಂದ ಚಿಕ್ಕದೊಂದು ಸ್ನಾನಕ್ಕಾಗಿ ಹಂದರವನ್ನು ಶೃಂಗಾರ ಮಾಡುತ್ತಾರೆ. ಮದುವೆ ಅಡುಗೆಗಾಗಿ ಐದು ಜನ ಮುತ್ತೈದೆಯರು ಅಡುಗೆಗಾಗಿ ಸ್ಥಳವನ್ನು ಶೆಗಣಿಯಿಂದ ಸಾರಿಸಿ 5 ವಲೆಗಳನ್ನು ನಿರ್ಮಿಸಿ ರಂಗೋಲಿ ಹಾಕಿ ಪೂಜೆ ಮಾಡುತ್ತಾರೆ.

*** ದೇವಕಾರ (ದೇವರಕಾರ್ಯ)**

ಲಗ್ನದ ಮೊದಲನೆಯ ದಿನ ದೇವರಕಾರ್ಯ ಮಾಡುತ್ತಾರೆ. ತಮ್ಮ ಇಷ್ಟ ಹಾಗೂ ಕುಲದೇವರ ಮೃತರಾದ ಹಿರಿಯರ ನೆನಪು ಮಾಡಿ ಅವರ ಹೆಸರಿನಿಂದ ಯಾರಿಗಾದರೂ ಉಪವಾಸವಿರಲು ಹೇಳಿ ಅವರಿಗೆ ಸಿಹಿ ಅಡುಗೆ ಊಟ ಬಡಿಸಿ ಹೊಸ ವಸ್ತ್ರಗಳನ್ನು ನೀಡಿ ಅವರಿಗೆ ಸನ್ಮಾನಿಸುತ್ತಾರೆ. ವಧು-ವರರ ಮನೆ ಬಾಗಿಲ ಪಕ್ಕ ದೇವಕಾರ್ಯದ ದಿನ ಒಂದು ಗಿಡದ ಚಿಕ್ಕ ಟೊಂಗೆಯನ್ನು ಹುಗಿಯುತ್ತಾರೆ (ಮಾವು, ಚೌದಂಬರಿ ಮುಂತಾದ ಪವಿತ್ರ ಚಿನ್ನದ ಗಿಡಗಳು) ಅದಕ್ಕೆ ಅರಿಷಿಣ, ಕುಂಕುಮ ಹಾಕಿ ಪೂಜೆ ಮಾಡುತ್ತಾರೆ ಕಾರಣ ಮದುವೆ ಕಾರ್ಯ ಮುಗಿಯುವವರೆಗೂ ಅದು ರಕ್ಷಣೆ ಮಾಡುತ್ತದೆಂಬ ಪ್ರತೀಕವಿದೆ.

*** ಚುಡೋ (ಬಳೆ ಹಾಕುವುದು)**

ದೇವರ ಕಾರ್ಯದ ದಿನ ಬಳೆಗಾರರನ್ನು ಮನೆಗೆ ಕರೆಯಿಸಿ ಮದುಮಗಳಿಗೆ ಹಸಿರು ಬಳೆ ತೊಡಿಸುವ ವಾಡಿಕೆ ಅದರಲ್ಲೂ ಸೋದರ ಮಾವನು ಹಾಕುತ್ತಾನೆ. ಆ ಸಮಯದಲ್ಲಿ ಅಲ್ಲಿ ನೆರೆದ ಎಲ್ಲ ಮಹಿಳೆಯರಿಗೂ ಬಳೆ ಹಾಕುತ್ತಾರೆ. ಬಳೆಗಾರನಿಗೆ ಹೊಸವಸ್ತ್ರ ಕಾಯಿ, ಅಕ್ಕಿ ವಿಳ್ಯದೆಲೆ, ಉಂಡಿ ಜೊತೆಗೆ ಹಣವನ್ನು ನೀಡಿ ಸನ್ಮಾನಿಸುತ್ತಾರೆ.

*** ವೊವಳಕ ದಿವಪ (ಮದುವೆ ಆಮಂತ್ರಣ ಅಕ್ಷತೆ ನೀಡುವುದು)**

ಹಿಂದಿನ ಕಾಲದಲ್ಲಿ ಮದುವೆಯ ಆಮಂತ್ರಣವೆಂದರೆ ಅಕ್ಷತೆಯನ್ನು ನೀಡಿ ಕರೆಯುತ್ತಿದ್ದರು. ಇಂದು ಮದುವೆಯ ಆಮಂತ್ರಣ ಪತ್ರಿಕೆ ಮುದ್ರಣ ಮಾಡಿ ನೀಡುವಂತೆ ಅಂದು ಮದುವೆ ಹಂದರ ಮೊದಲ ರಾತ್ರಿ ಅಕ್ಷತೆಯೊಂದಿಗೆ ಆಮಂತ್ರಣ ನೀಡುವ ಪದ್ಧತಿ ಇತ್ತು. ಮನೆಯ ಯಜಮಾನ ಪಂಚವಾದ್ಯ (ಓಲಗ) ದವರನ್ನು ಕರೆದುಕೊಂಡು ಆಮಂತ್ರಣ ನೀಡಲು ಹೋಗುತ್ತಿದ್ದನು. ಅವರ ಸಂಗಡ ಭಟ್ಟರು ಊರಿನ ಹಿರಿಯ ಧೋಬಿಗಳು ಕೂಡಿ ಹೋಗುತ್ತಿದ್ದರು. ಭಟ್ಟರು ಲಗ್ನದ ಮುಹೂರ್ತದ ಸಮಯ ಹೇಳುತ್ತಿದ್ದರು. ಪ್ರತಿ ಮನೆಯ ಯಜಮಾನನು ತನ್ನ ಮನೆಗೆ ಅಕ್ಷತೆಯೊಂದಿಗೆ ಬಂದ ಆಮಂತ್ರಣವನ್ನು, ಅಕ್ಷತೆಯನ್ನು ತನ್ನ ಮನೆಯ ಆರತಿ ತಟ್ಟೆಯಲ್ಲಿ ಪಡೆಯುತ್ತಿದ್ದನು. ಮನೆಯಲ್ಲಿ ಅಕಸ್ಮಾತ್ತಾಗಿ ಗಂಡಸರು ಇಲ್ಲದಿದ್ದರೆ ಅಕ್ಷತೆಯನ್ನು ಬಾಗಿಲ ಜಗುಲಿಯ ಮೇಲೆ ಇಟ್ಟು ಬರುತ್ತಿದ್ದರು. ಆಮಂತ್ರಣ ನೀಡಲು ಹೋಗುವವರಿಗೆ ತಿನ್ನಲು ಸಕ್ಕರೆ ಹಾಗೂ ನೀರು ಕುಡಿಯಲು

ಕೊಡುತ್ತಿದ್ದರು.

*** ಪುಣ್ಯಾಹವಾಚನ**

ಮದುವೆಯ ಮೊದಲು ಪುಣ್ಯಾಹವಾಚನ ಮಾಡುವ ಪದ್ಧತಿಯಿದೆ. ಇದನ್ನು ಮದುವೆಯ ಮೊದಲನೆಯ ದಿನ ಮಾಡುತ್ತಾರೆ. ಯಜಮಾನ-ಯಜಮಾನಿ ತಮ್ಮ ತೊಡೆಯಮೇಲೆ ಮದುಮಗ ಯಾ ಮದುಮಗಳನ್ನು ಕೂಡ್ರಿಸಿಕೊಂಡು ಪುಣ್ಯಾಹ ವಚನ ಮಾಡುತ್ತಾರೆ. ಮಂಟಪದಲ್ಲಿ ದೇವರನ್ನು ಪೂಜೆಗಾಗಿ ಕೂಡ್ರಿಸಿ ದೇವ-ದೇವತಿಯರಲ್ಲಿ ಮದುವೆಯ ಸಂದರ್ಭ ಯಾ ವಿಘ್ನ, ಅಡೆ-ತಡೆ ಬರಬಾರದೆಂಬ ದೃಷ್ಠಿಯಿಂದ ದೇವರಲ್ಲಿ ಬೇಡಿ ಕೊಳ್ಳುತ್ತಾರೆ. ಮದು-ಮಗಳು ಗೌರಿ ಪೂಜೆ ಮಾಡುತ್ತಾಳೆ. ಮದುಮಗಳು ತೆಗೆದುಕೊಂಡು ಹೋಗುವ ಕೆಲ ವಸ್ತುಗಳಾದ ದೀಪಲ- ದೇವರಪಾತ್ರೆಗಳು ಭಾಂಡೆ ಸಾಮಗ್ರಿಗಳನ್ನು ಗೌರಿ ಪೂಜೆಯ ಹತ್ತಿರವಿಡುತ್ತಾರೆ.

*** ಕೆಸಕಾಪಣೆ (ತಲೆಗೂದಲು ಕತ್ತರಿಸುವದು)**

ಈ ದಿವಸ ಮದುಮಗನ ಮನೆಯಲ್ಲಿ ಕ್ಷೌರಿಕನನ್ನು ಮನೆಗೆ ಕರೆಯಿಸಿ, ಮದುಮಗನ ತಲೆಗೂದಲು, ಗಡ್ಡ (ದಾಡಿ) ತೆಗೆಯುತ್ತಾರೆ. ನಂತರ ಕ್ಷೌರಿಕನಿಗೆ ಹೊಸ ವಸ್ತ್ರ, ವಿಳ್ಯದೆಲೆ, ಉಂಡಿ, ಕಾಯಿ ಹಾಗೂ ಹಣ ನೀಡಿ ಮಾನಮಾಡಿ ಕಳಸುತ್ತಾರೆ.

*** ತೇಲಲಾವಚೆ (ಎಣ್ಣೆ ಹಚ್ಚುವುದು)**

ಪುಣ್ಯಾಹ ವಾಚನ ಆದ ತಕ್ಷಣ ಮದುಮಗ/ ಮದುಮಗಳಿಗೆ ಅವರವರ ಮನೆಯಲ್ಲಿ ಎಣ್ಣೆಯಲ್ಲಿ ಅರಿಶಿಣ ಪುಡಿ ಮಿಶ್ರಣ ಮಾಡಿ (ಕೊಬ್ಬರಿ ಎಣ್ಣೆ) ಲೇಪ ತಯಾರ ಮಾಡಿಕೊಂಡು ಒಂದು ಮಾವಿನ ಗಿಡದ ಬಡಿಗೆಯ ತುದಿಗೆ 5 ಮಾವಿನ ಎಲೆಯನ್ನು ಕಟ್ಟಿ ಆ ಬಡಿಗೆಯನ್ನು 5 ಮುತ್ತೈದೆಯರು ಕೈಯಲ್ಲಿ ಹಿಡಿದುಕೊಂಡು ಒಬ್ಬೊಬ್ಬರಾಗಿ ಆ ಲೇಪನದಲ್ಲಿ ಆ ಬಡಿಗೆಯನ್ನು ಅದ್ದಿ ಅವರ ಕಾಲಿಗೆ, ಮಂಡೆಗೆ, ಭುಜಗಳಿಗೆ ಹಾಗೂ ತಲೆಗೆ ಹೀಗೆ ಐದು ಭಾಗಕ್ಕೆ ಹಚ್ಚುತ್ತಾರೆ. ಹಾಗೆ 5 ಜನ ಮುತ್ತೈದೆಯರು ಹಚ್ಚುತ್ತಾರೆ ಹಾಗೂ ಜಾನಪದ ಹಾಡು ಹಾಡುತ್ತಾರೆ ನಂತರ 5 ಜನ ಮುತ್ತೈದೆಯರು ಕೂಡಿ ಸ್ನಾನ ಮಾಡಿಸುತ್ತಾರೆ.

*** ಲಗ್ನ ದಳಪ (ಮದುವೆಗಾಗಿ ಬೀಸುವುದು)**

ಹಿಂದಿನ ಕಾಲದಲ್ಲಿ ಹಿಟ್ಟಿನ ಗಿರಣಿಗಳು ಇಲ್ಲದಿದ್ದರಿಂದ ಮದುವೆ ಹಂದರದಲ್ಲಿ 5 ದಿನದ ವರೆಗೆ ಅಕ್ಕಾಪಕ್ಕದ ಮ್ನಹಿಳೆಯರು ಬಂದು ಬೀಸುವ ಕುಟ್ಟುವ ಕಾರ್ಯವನ್ನು ಬೀಸುಕಲ್ಲುಗಳ ಮುಖಾಂತರ ಸಂಪ್ರದಾಯ ಗೀತೆಗಳನ್ನು ಹಾಡುತ್ತ ಹಿಟ್ಟನ್ನು ತಯಾರಿಸುತ್ತಿದ್ದರು ಆದರೆ ಇಂದಿನ ಆಧುನಿಕ ಗಿರಣಿಯ ಯುಗದಲ್ಲಿ ಮದುವೆ ಮಂಟಪದಲ್ಲಿ ದೇವರಕಾರ್ಯದ ದಿನ 5 ಬೀಸುಕಲ್ಲು ತಂದು 5 ಜನ ಮುತ್ತೈದೆಯರು ವಿಧಿವಿಧಾನಕ್ಕಗಿ ಭಟ್ಟರು ಹೇಳಿದ ಸಮಯದಲ್ಲಿ ಬೀಸುತ್ತಾರೆ. ಅದರ ಜೊತೆ ಮದುಮಗಳು ಕೈಜೋಡಿಸುತ್ತಾಳೆ.

*** ಫುಲಾ (ಹೂವು)**

ಮದುವೆಯ ಮೊದಲು ಮದುಮಗನ ಮನೆಯಿಂದ 5 ಮುತ್ತೈದೆಯರು ಮದುಮಗಳ ಹತ್ತಿರ ಹೋಗಿ ಅರಿಶಿಣ ಎಣ್ಣೆ ಸ್ನಾನಮಾಡಿಸಿ ತಾವು ತೆಗೆದು-ಕೊಂಡು ಹೋದ ಸೀರೆ-ಶೃಂಗಾರ ವಸ್ತು, ಹೂವು ಮುಂತಾದವು ಹಾಕಿ ತಯಾರ ಮಾಡುತ್ತಾರೆ. ಆ ವಸ್ತುಗಳು ಹೆಚ್ಚಾಗಿ ಹಸಿರುಬಣ್ಣದ್ದು ಇರುತ್ತದೆ. ನಂತರ ಅವಳಿಗೆ ಉಡಿ ತುಂಬುತ್ತಾರೆ.

*** ಬಾಸಿಂಗ**

ಮದುವೆಯ ಮೊದಲ ದಿನ ಮುತ್ತೈದೆಯರೆಲ್ಲ ಸೇರಿ (ಓಲಗದೊಂದಿಗೆ) ಬಾಶಿಂಗವನ್ನು ತರುತ್ತಿದ್ದರು. ಇಂದಿನ ಹಾಗೆ ತಯಾರ ಮಾಡಿದ ಬಾಶಿಂಗ ಇರುತ್ತಿರಲಿಲ್ಲ. ಆಗ 21 ಎಳೆಯ ಬಾಶಿಂಗ ಮಾಡಿ ಕೊಡುವ ಅಚಾರಿಗಳು ಆಬೊಲೆ ಹೂವಿನ ಗೊಂಡೆ ಮಾಡಿ ಅದಕ್ಕೆ ಹಚ್ಚುತ್ತಿದ್ದರು. ಇಂದು ಸಹಿತ ಬಾಶಿಂಗವನ್ನು ಅದೇ ತತ್ವದ ಮೇಲೆ ಮಾಡಿರುತ್ತಾರೆ. ತಲೆಗೆ ಪೇಠಾ, ಟೊಪ್ಪಿಗೆ, ಮುಂಡಾಸಿ ಸುತ್ತಿ ನಂತರ ಬಾಶಿಂಗ ಕಟ್ಟುತ್ತಾರೆ. ಸೋದರ ಮಾವ ಬಾಶಿಂಗ ಕಟ್ಟುತ್ತಾನೆ.

ಮದುಮಗ ಮದುವೆಗಾಗಿ ಮನೆಯಿಂದ ಹೊರಬೀಳುವಾಗ ಮದುಮಗನ ಸಹೋದರಿ ಅವನಿಗೆ ಯಾರದೂ ದೃಷ್ಠಿ ತಾಗಬಾರದೆಂಬ ದೃಷ್ಠಿಯಿಂದ ಅವನ ಒಂದುಗಲ್ಲಕ್ಕೆ ಕೆಂಪು ಹಾಗೂ ಒಂದುಗಲ್ಲಕ್ಕೆ ಕಪ್ಪು ಚು-ಕ್ಕೆಯ ಬೊಟ್ಟು ಇಡುತ್ತಾರೆ. ಮದುಮಗ ಹಿರಿಯರೆಲ್ಲರಿಗೂ ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾನೆ. ಮದುಮಗ ಹೊರಬೀಳುವಾಗ ಅವನ ಕೈಯಲ್ಲಿ ಮುಹೂರ್ತದ ಟೆಂಗಿನಕಾಯಿಯನ್ನು ಕೊಡುತ್ತಾರೆ ಹಾಗೂ ಚೂರಿಯ ತುದಿಗೆ ಲಿಂಬೆಹಣ್ಣನ್ನು ಹಚ್ಚಿ ಆ ಚೂರಿಯನ್ನು ಅವನ ಕೈಗೆ ನೀಡುತ್ತಾರೆ. ಮದುಮಗನು ಅಕ್ಕಪಕ್ಕದ ಹಿರಿಯರು ನಡೆಯಲಾರದಂತವರಿದ್ದರೆ ಅವರ ಮನೆಗೆ ಹೋಗಿ ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾನೆ ಹಾಗೂ ಮದುವೆ ಮಂಟಪಕ್ಕೆ ಹೋಗಲು ಹೊರಬೀಳುತ್ತಾನೆ. ಹೋಗುವಾಗ ದಾರಿಯಲ್ಲಿ ಸಿಗುವ ಎಲ್ಲ ಸೀಮೆಯ ದೇವರಿಗೆ ವೀಳ್ಯದೆಲೆ ವಿಡಾವನ್ನು ಇಟ್ಟು ಮುಂದೆ ಸಾಗುತ್ತಾರೆ.

*** ಸೀಮಂತ ಪೂಜಾ (ಸೀಮೆಯ ಪೂಜಾ)**

ಸೀಮಂತ ಪೂಜೆ ಎಂದರೆ ಊರಿನ ಸೀಮೆಯ ಪೂಜೆ. ಅಂದರೆ ಮದುಮಗ, ಮದುಮಗಳ ಸೀಮೆಗೆ ಹೋದಾಗ ಮದುಮಗಳ ತಾಯಿ-ತಂದೆ ಬಂದು ಆ ಸ್ಥಳದಲ್ಲಿ ಪೂಜೆ ಮಾಡಿ ಮದುಮಗನ ಕಾಲುತೊಳೆದು ಅವನಿಗೆ

ಕುಂಕುಮ ನೀರಿನಿಂದ ನಿವಾಳಿಸಿ ದೀಪವನ್ನು ತೋರಿಸಿ ಮದುಮಗನಿಗೆ ಏನಾದರೂ ಕಾಣಿಕೆ ನೀಡಿ, ಕುಡಿಯಲು ಹಾಲು-ಸಕ್ಕರೆ ತಿನ್ನಲು ಬಾಳೆಹಣ್ಣು ನೀಡಿ ಅವನ ಕೈಹಿಡಿದು ಅವನಿಗೆ ಉಳಿದುಕೊಳ್ಳಲು ಮಾಡಿದ ವ್ಯವಸ್ಥೆಯ ಸ್ಥಳದಲ್ಲಿ ಕಂದು ಬಿಡುತ್ತಾರೆ. ಆಗ ಮದುಮಗ ತನ್ನ ಮನೆಯಿಂದ ಹೊರಬೀಳುವಾಗ ಸಹೋದರಿ ತನ್ನ ಎರಡೂ ಗಲ್ಲಕ್ಕೆ ಹಚ್ಚಿದ ಕೆಂಪು ಹಾಗೂ ಕಪ್ಪು ಬಣ್ಣವನ್ನು ಇಲ್ಲಿ ಬಂದಮೇಲೆ ಅಳಿಸಿ ಹಾಕುತ್ತಾನೆ. ಹಾಗೂ ಕೈಯಲ್ಲಿಯ ನಿಂಬೆಹಣ್ಣು ಹಚ್ಚಿದ ಚೂರಿಯನ್ನು ತೆಗೆದು ಇಡುತ್ತಾನೆ. ಮದುವೆಯ ಸಮಯದ ತಕ್ಷಣ ಮದುಮಗ ಲಗ್ನ ಮಂಟಪಕ್ಕೆ ಬರುತ್ತಾನೆ ನಂತರ ಎಲ್ಲ ತಯಾರಿ ಆಗಿದ್ದನ್ನು ನೋಡಿ ಮದುಮಗಳನ್ನು ಅವಳ ಸೋದರ ಮಾವಾ ಹೊತ್ತುಕೊಂಡು ಬರುತ್ತಾನೆ ಆಗ ಮಹಿಳೆಯರು ಸಂಪ್ರದಾಯ ಗೀತೆಯನ್ನು ಹಾಡುತ್ತಾರೆ.

**• ಮಂಗಳಾಷ್ಟಕ**

ಮದುಮಗ-ಮದುಮಗಳ ಮಧ್ಯದಲ್ಲಿ ಅಂತರಪಟ ಹಿಡಿದು ಎರಡು ಕಡೆಯ ಭಟ್ಟರು (ಪುರೋಹಿತರು) ಎದ್ದು ನಿಂತಿರುತ್ತಾರೆ. ಮದುಮಗನಿಗೆ ಪಶ್ಚಿಮಕಡೆಗೆ ಹಾಗೂ ಮದುಮಗಳಿಗೆ ಪೂರ್ವದಿಕ್ಕಿಗೆ ಮುಖ ಮಾಡಿಸಿ ನಿಲ್ಲಿಸುತ್ತಾರೆ. ಎರಡು ಬದಿಯ ಪುರೋಹಿತರು ಮಂತ್ರ ಹೇಳಿ ನಂತರ ಮಂಗಳಾಷ್ಟಕ ಹೇಳುತ್ತಾರೆ. ಮಂಗಳಾಷ್ಟಕದ ಪ್ರತಿ ಸಾಲು ಮುಗಿದಾಗ ಮದುಮಗ-ಮದುಮಗಳ ತಲೆಯ ಮೇಲೆ ಅಕ್ಷತೆ ಹಾಕುತ್ತಾರೆ. ಎರಡು ಕಡೆಯ ಸೋದರ ಮಾವಂದಿರು ಅವರ ತಲೆಯ ಮೇಲೆ ಅಕ್ಷತೆ ಸುರುವತ್ತಲೆ ಇರುತ್ತಾರೆ. ಮಂಗಳಾಷ್ಟಕ ಮುಗಿದ ತಕ್ಷಣ ನಡುವಿನ ಅಂತರಪಟವನ್ನು ತೆಗೆದು ಹಾಕುತ್ತಾರೆ. ಮದುಮಕ್ಕಳಬ್ಬರೂ ಒಬ್ಬರಿಗೊಬ್ಬರು ಹೂವಿನ ಮಾಲೆ ಕೊರಳಿಗೆ ಹಾಕುತ್ತಾರೆ. ಮೊದಲು ಮದುಮಗಳು ಹಾರ ಹಾಕುತ್ತಾಳೆ. ಇಂದು ಹೊಸಬಗೆಯ ವಿವಿಧ ರೀತಿಯ ಹೂವಿನ ಮಾಲೆಗಳಿದ್ದರೂ ಪೂರ್ವ ಪರಂಪರೆಯಿಂದ ನಡೆದು ಬಂದ ಬೊಕಳ ಹಣ್ಣು (ವೊವಳಾ ಹೂವಿನ ಮಾಲೆ) ಹಾಕುವುದು ಇಂದಿಗೂ ಪದ್ಧತಿ ಇದೆ. ಮೊದಲು ಬೊಕಳೆ ಹೂವಿನ ಮಾಲೆ ಹಾಕಿ ನಂತರ ಉಳಿದ ಮಾಲೆಗಳನ್ನು ಹಾಕುತ್ತಾರೆ.

**• ಕನ್ಯಾದಾನ**

ಕೆಲವು ಜನರ ಮನೆತನದಲ್ಲಿ ಮದುಮಗ-ಮದುಮಗಳ ಕೊರಳಲ್ಲಿ ಮಣಿ (ಮಂಗಳಸೂತ್ರ) ಹಾಕುತ್ತಾನೆ. ಕೆಲವುಕಡೆ ಹೋಮ ಕಾರ್ಯ ಆದ ನಂತರ ಹಾಕುತ್ತಾನೆ. ತಾಯಿ ಮನೆಯ ಕರಿಮಣಿಯನ್ನು ಮದುಮಗ ಮದುಮಗಳಲ್ಲಿ ಕಟ್ಟುತ್ತಾನೆ. ಎಲ್ಲ ವಿಧಿ ವಿಧಾನಗಳಾದ ನಂತರ ಮದುಮಗಳ ತಂದೆ-ತಾಯಿ ಮದುಮಗ ಹಾಗೂ ಅವನ ತಂದೆ-ತಾಯಿಗೆ ತಮ್ಮ ಮಗಳನ್ನು ಸ್ವೀಕಾರ ಮಾಡಲು ವಿನಂತಿಸಿಕೊಳ್ಳುತ್ತಾರೆ. ಧರ್ಮ ಅರ್ಥ ಹಾಗೂ ಕಾಮ ಈ ಪುರುಷಾರ್ಥದ ದೃಷ್ಟಿಯಿಂದ ತಾನು ಸ್ವೀಕಾರಮಾಡುವುದಾಗಿ ಅವನು (ಮದುಮಗ) ವಚನ ನೀಡುತ್ತಾನೆ. ಕನ್ಯಾದಾನವು ಪರಿಪೂರ್ಣವಾಗಲೆಂದು ಮದುಮಗಳ ತಂದೆ ಬಂಗಾರದ ಒಂದು ಪುತಳಿಯನ್ನು ದಾನವಾಗಿ ನೀಡುತ್ತಾನೆ. ಹಾಗೂ ದಾರದಿಂದ ನವದಂಪತಿಗಳಿಗೆ 5 ಸುತ್ತು ಹಾಕಿ ಅದರಿಂದ ಆ ಧಾರದ ಅಡಿಗೆ ಕುಂಕುಮ ಹಚ್ಚಿ ಅರಿಶಿಣ ಬೇರನ್ನು ಕಟ್ಟಿ ಮದುಮಗಳ ಎಡಗೈಗೂ, ಮದುಮಗನ ಬಲಗೈಗೂ ಕಟ್ಟುತ್ತಾರೆ. ಇದಕ್ಕೆ ಕಂಕಣಧಾರವೆಂದು ಕರೆಯುತ್ತಾರೆ. ನಂತರ ಮದುಮಗನ ಮನೆಯವರು ಮದುಮಗಳಿಗೆ ಉಡಲು ಹೊಸಸೀರೆ ನೀಡುತ್ತಾರೆ. ಹಾಗೂ ಶೃಂಗಾರ ವಸ್ತುಗಳನ್ನು ನೀಡುತ್ತಾರೆ. ಅವಳು ಶೃಂಗಾರವಾಗಿ ಬಂದ ನಂತರ ಅವಳ ಗೋತ್ರವನ್ನು ಬದಲಾಯಿಸುತ್ತಾರೆ.

**• ವಾಯ್ಣಪೂಜಾ**

ಮದುಮಗಳ ಕೈಯಿಂದ ವಾಯ್ಣ(ತೆಂಗಿನಕಾಯಿ) ಪೂಜೆ ಮಾಡಿಸಿಕೊಳ್ಳುತ್ತಾರೆ ಇಪ್ಪತ್ತೊಂದು ಕಾಯಿಗಳು ಮದುಮಗನ ಮನೆಯಿಂದ ಬಂದಿರುತ್ತವೆ. ಮದುಮಗಳು ಆ ಕಾಯಿಗಳನ್ನು ತನ್ನ ತವರುಮನೆ ದೇವರುಗಳು ಹಾಗೂ ಗಂಡನಮನೆ ದೇವರುಗಳ ಹೆಸರಿನಿಂದ ಕಾಯಿಗಳನ್ನು ಎತ್ತಿ ಇಟ್ಟ ನಂತರ ಎರಡು ಬದಿಯ ಮುತ್ತೈದೆಯರಿಗೆ ಅವನ್ನು ನೀಡುತ್ತಾರೆ. ಈ ವಿಧಿಯಾದ ನಂತರ ಮದುಮಗಳ ತಂದೆ-ತಾಯಿಯವರು ತಮ್ಮ ಮಗಳನ್ನು ಮದುಮಗನ ತಂದೆ ತಾಯಿಗೆ ಅರ್ಪಣ ಮಾಡುತ್ತಾರೆ. (ಒಪುನದಿತಾ) ಒಪ್ಪಿಸಿ ಕೊಡುತ್ತಾರೆ. ನಂತರ ಮದುಮಗಳು ಗಂಡನ ಮನೆಗೆ ಹೋಗಲು ಸಿದ್ಧಳಾಗುತ್ತಾಳೆ. ಈ ಸಂದರ್ಭದಲ್ಲಿ ಮದುಮಗನ ಕೈಯಲ್ಲಿ ಒಂದು ಟೆಂಗಿನಕಾಯಿ ನೀಡುತ್ತಾರೆ. ಅದನ್ನು ಮದುಮಗಳು ಒಂದು ವರ್ಷವಿಡಿ ಸಂಭಾಳಿಸಿ ಇಡಬೇಕು.

**• ಘರಭರಣೆ (ಮನೆ ತುಂಬಿಸಿಕೊಳ್ಳುವುದು)**

ಮದುವೆ ದಿಬ್ಬಣ ಮದುಮಗನ ಬಾಗಿಲಿಗೆ ತಲುಪಿದ ತಕ್ಷಣ ಹೊಸಜೋಡಿಗೆ ಕೆಂಪು ಕುಂಕುಮನೀರು ಹಾಗೂ ದೀಪ ತೋರಿಸಿ ಮನೆಯೊಳಗೆ ಸ್ವಾಗತಿಸಿಕೊಳ್ಳುತ್ತಾರೆ. ಆದರೆ ಬಾಗಿಲಲ್ಲಿ ನಿಂತ ಮದುಮಗನ ಹಿರಿಯ ಮದುವೆಯಾದ ಸಹೋದರಿ ಆ ದಂಪತಿಗಳಿಗೆ ಒಳಗೆ ಹೋಗಲು ಅಡ್ಡಿಪಡಿಸುತ್ತಿದ್ದಳು ಕೊನೆಗೆ ಮದುಮಗಳು ತನ್ನ ಮಗಳನ್ನು ಅಕ್ಕನ ಮಗನಿಗೆ ಕೊಡುವುದಾಗಿ ವಾಗ್ದಾನ ಮಾಡಿದ ನಂತರವೇ ಒಳಗೆ ಬಿಡುತ್ತಿದ್ದಳು ಹಾಗೂ ಸಂಪ್ರದಾಯ ಗೀತೆ ಹಾಡುತ್ತಾರೆ.

**• ಖೆಳಮೆಳ (ಆಟ ಆಡುವುದು)**

ಮದುವೆಯ ಮರುದಿನ ಖೆಳಮೆಳ (ಆಟ) ಆಡುತ್ತಾರೆ. ಇದರಲ್ಲಿ ವಿವಿಧ ಬಗೆಯ ಆಟಗಳೂ ಉಂಟು ಆದರೆ ಇಂದು ಅದರಲ್ಲಿಯೂ ಕೆಲವು ಮುಖ್ಯವಾಗಿದ್ದನ್ನು

ಮಾತ್ರ ಮಾಡಿಕೊಂಡಿದ್ದಾರೆ. ಹಿಂದಿನ ಕಾಲದಲ್ಲಿ ಮಣ್ಣಿನ ಗಡಿಗೆಗಳಲ್ಲಿ (ಪಾತ್ರೆ) ಅಡುಗೆ ಮಾಡುತ್ತಿದ್ದರು. ಹೀಗಾಗಿ ಮದುಮಗಳಾಗಿ ಬಂದವಳ ಚಾಕಚಕ್ಯತೆಯನ್ನು ತಿಳಿದುಕೊಳ್ಳಲು 5 ವಿವಿಧ ಆಕಾರದ ಮಣ್ಣಿನ ಗಡಿಗೆಯಲ್ಲಿ ನೀರು ತುಂಬಿ ಮದುಮಗಳ ಕೈಯಿಂದ ಒಂದೊಂದು ಗಡಿಗೆಯ ಮೇಲೆ ಒಂದೂಂದು ಎತ್ತಿ ಇಡಬೇಕು. ನಂತರ ಮತ್ತೆ ಒಂದೊಂದೆ ಕೆಳಗಿಳಿಸಬೇಕು ಈ ಪ್ರಕ್ರಿಯೆಯಲ್ಲಿ ಅವಳ ಸಮಾಧಾನ, ಜಾಣತನ ಲಕ್ಷಣ ಎಲ್ಲ ಬುದ್ಧಿಗಳು ಕಂಡು ಹಿಡಿಯಲು ಸಾಧ್ಯವಾಗುತ್ತಿತ್ತು. ಅದರಂತೆ ಒಂದು ಹಿತ್ತಾಳೆಯ ಡಬರಿಯಲ್ಲಿ ಅರಶಿಣ ಕುಂಕುಮ ನೀರನ್ನು ಹಾಕಿ ಅದರಲ್ಲಿ ಒಂದು ಉಂಗುರವನ್ನು ಯಾ ನಾಣ್ಯವನ್ನು ಹಾಕುತ್ತಿದ್ದರು. ನಂತರ ನವ ದಂಪತಿಗಳು ಇಬ್ಬರೂ ಆ ನೀರಿನಲ್ಲಿ ತಮ್ಮ ಕೈಯನ್ನು ಹಾಕಿ ಮೊದಲು ಆ ವಸ್ತುವನ್ನು ಯಾರು ಹುಡುಕುತ್ತಾರೆ ಎಂಬ ಆಟ ಐದು ಬಾರಿ ಆಟದಲ್ಲಿ ಯಾರು ಹೆಚ್ಚು ಸಲ ಗೆದ್ದರೆಂದು ನೋಡುತ್ತಿದ್ದರು. ಈ ಆಟದಿಂದಾಗಿ ನವದಂಪತಿಗಳಿಗೆ ಒಂದು ಹೊಸ ಆಟ ಸೇರಿದ ಸಂಬಂಧಿಕರಿಗೆ ಒಂದು ಸಂತೋಷದ ಸಂಭ್ರಮ ಹೊಸದಾಗಿ ಹೊಸ ಸ್ಥಳಕ್ಕೆ ಬಂದ ಮದುಮಗಳಿಗೆ ಸ್ವಲ್ಪ ಹೊಸಸ್ಥಾನದ ಪರಿಸರದ ಪರಿಚಯವಾಗಿತ್ತಿತ್ತು. ಗಂಡನ ಮನೆಯ ಸಮೀಪದ ಬಂಧುಗಳ ಪರಿಚಯವಾಗಲು ಅವಕಾಶ ದೊರೆಯುತ್ತಿತ್ತು.

*** ಖಾಂದೊ ದವರಚೆ (ಟೊಂಗೆ ಇಡುವುದು)**

ಮದುವೆಯ ಮೊದಲನೆಯ ದಿನ ಮದುಮಗನ ಮನೆಯಲ್ಲಿ ಜರುಗಿದ ದೇವಕಾರ್ಯದ ಸಂದರ್ಭದಲ್ಲಿ ಒಂದು ಮಾವಿನ ಸಣ್ಣ ಟೊಂಗೆಯನ್ನು ಹುಗಿದು ಅದಕ್ಕೆ ಪೂಜೆ ಮಾಡಿ ಮದುವೆ ಕಾರ್ಯದಲ್ಲಿ ರಕ್ಷಣೆ ನೀಡಲು ಪ್ರಾರ್ಥನೆ ಮಾಡಿಕೊಂಡಿದ್ದನ್ನು, ಐದನೇ ದಿನ ಅದರ ಪೂಜಾ ವಿಧಿ ಮಾಡಿ ನಂತರ ಮದುಮಗಳು ಆ ಟೊಂಗೆಗೆ ಪೂಜೆ ಮಾಡಿ ನೈವೇದ್ಯ ತೋರಿಸುತ್ತಾಳೆ. ಇಷ್ಟು ದಿನ ತಲೆಗೆ ಕಟ್ಟಿ-ಕೊಂಡ ಬಾಸಿಂಗವನ್ನು, ಹೂಗಳನ್ನು ಬಾಳೆಗಿಡದ ಮೇಲೆ ಇಟ್ಟು ಬಾಳೆಗಿಡದ ಬುಡದಲ್ಲಿ ದೀಪಹಚ್ಚಿ ಬರುವುದು ಹಾಗೂ ಮದುಮಗಳ ಕೈಬಳೆಗಳನ್ನು ಇಂದೇ ಬದಲಾಯಿಸುತ್ತಾರೆ. ಹಸಿರು ಬಳೆಗಳನ್ನು ತೆಗೆದು ಕೆಂಪು ಬಳೆಗಳನ್ನು ಹಾಕುತ್ತಾರೆ.

*** ಪಾಂಚ ಪರತವಣ (ಐದನೇ ದಿನ ಮರಳಿ ತವರು ಮನೆಗೆ)**

ಪಾಂಚ ಪರತವಣ ಎಂದರೆ ಐದನೇ ದಿನ ಮದುಮಗಳು ಮನೆಗೆ ನವದಂಪತಿಗಳು ಹೋಗುವ ದಿನ. ಅಂದು ಮದುಮಗಳ ಮನೆಯಿಂದ ಸಹೋದರ ಯಾ ಸಂಬಂಧಿಗಳು ಆಮಂತ್ರಣ ತೆಗೆದುಕೊಂಡು ಬರುತ್ತಾರೆ. ಆಗ ನವದಂಪತಿಗಳು ಅವರ ಕುಟುಂಬದ ಸದಸ್ಯರು ಸಮೀಪದ ನೆರೆಹೊರೆಯವರು ಸೇರಿಕೊಂಡು ಮದುಮಗಳ ಮನೆಗೆ ಹೋಗುತ್ತಾರೆ. ಅಲ್ಲಿ ಅವರೆಲ್ಲರ ಅತ್ಯುತ್ತಮ ಅಥಿತಿ ಸತ್ಕಾರ ಮಾಡಿ ಉತ್ತಮ ಅಡಿಗೆ ಮಾಡಿ ಹಾಕುತ್ತಾರೆ. ಹಾಗೂ ಮರಳುವಾಗ ಎಲ್ಲರಿಗೂ ವಿಶೇಷ ಏನಾದರೂ ಕಾಣಿಕೆ ನೀಡಿ ಕಳುಹಿಸುತ್ತಾರೆ.

ಹೊಸ ಮದುಮಗಳ ಪಾಲಿಗೆ ವರ್ಷವಿಡಿ ಬಹಳಷ್ಟು ಸಂತೋಷದ ಘಳಿಗೆಗಳು ಬರುತ್ತದೆ. ಹಲವಾರು ಹಬ್ಬ, ಹರಿದಿನಕ್ಕೆ ಅವಳಿಗೆ ಒಂದೊಂದು ಹೊಸರೀತಿ ಅನುಭವ ದೊರೆಯುತ್ತದೆ. ಹೊಸಮದುಮಗಳಿಗೆ ಗಣೇಶ ಹಬ್ಬ ಹಾಗೂ ದೀಪಾವಳಿಗೆ ತವರು ಮನೆಯಿಂದ ವಜೆ (ವಿವಿಧ ತಿಂಡಿ ತಿನಿಸುಗಳು ಉಡುಗೊರೆ ನೀಡುವ ಪದ್ಧತಿ ಇದೆ.) ಅಲ್ಲದೆ ಅಳಿಯನಿಗೆ ಮಣಿ-ಛತ್ರಿ-ಮಗಳಿಗೆ ಸೀರೆ ಇತ್ಯಾದಿ ಸಂಸಾರಕ್ಕೆ ಬೇಕಾದ ಸಾಮಗ್ರಿ ನೀಡುತ್ತಾರೆ.

*** ಗುರುವಾರಿಣಚಿ ಫುಲಾ (ಬಸಿರು ಮಹಿಳೆಗೆ ಹೂ ಮುಡಿಸುವುದು)**

ಮೊದಲನೆಯ ಬಾರಿಗೆ ಗರ್ಭ ಧರಿಸಿದಾಗ ಅವಳ ತಾಯಿಯ ಹಾಗೂ ಗಂಡನ ಕುಟುಂಬದವರೆಲ್ಲರಿಗೂ ಸಂತೋಷದ ಅನುಭವವಾಗುತ್ತದೆ. 5ನೇ ತಿಂಗಳಿಗೆ ಹೂ ಮುಡಿಸುತ್ತಾರೆ. ಈ ಕಾರ್ಯ ಉತ್ತಮ ಮುಹೂರ್ತ ನೋಡಿ ಮಾಡುತ್ತಾರೆ. ಇದು ಗಂಡನ ಮನೆಯಲ್ಲಿ ಮೊದಲು ಆಚರಣೆಯಾಗುತ್ತದೆ. ಈ ಕಾರ್ಯದ ನಂತರ ಅವಳು ಎರಡನೆಯ ಹೂವು ಮುಡಿಯಬಹುದಾಗಿದೆ. ಈ ದಿನ ಅವಳು ಎಲ್ಲವನ್ನು ಹಸಿರು ಬಣ್ಣದ್ದೇ ಧರಿಸಬೇಕು. ಹಸಿರು ಬಳೆ, ಹಸಿರು ಸೀರೆ, ಹಸಿರು ರವಿಕೆ, ಅವಳಿಗೆ ಬಹಳಷ್ಟು ಅಲಂಕಾರ ಮಾಡಿ ಬಹಳಷ್ಟು ಹೂ ಮುಡಿಸಿ 5 ಜನ ಮುತ್ತೈದೆಯರಿಂದ ಅವಳ ಉಡಿ ತುಂಬುತ್ತಾರೆ. (ಆದರೆ ತೆಂಗಿನ ಕಾಯಿ ಉಪಯೋಗಿಸುವುದಿಲ್ಲ) ಈ ಸಂದರ್ಭದಲ್ಲಿ ಚಿಕ್ಕ ಮಕ್ಕಳನ್ನು ಕೂಡ್ರಿಸುತ್ತಾರೆ. ಇದೇ ರೀತಿ 7ನೇ ತಿಂಗಳು ಹೂ ಮುಡಿಸುತ್ತಾರೆ. ಅವಳ ಎದುರುಗಡೆ ವಿವಿಧ ಬಗೆಯ ತಿಂಡಿ ತಿನಿಸು ಮಾಡಿ ಇಡುತ್ತಾರೆ. ಅವಳಿಗೆ ಇಷ್ಟವಾದುದನ್ನು ಅವಳು ತಿನ್ನುತ್ತಾಳೆ. ಅದೇ ರೀತಿ ಅವಳನ್ನು ತವರು ಮನೆಗೆ ಕಳುಹಿಸುವ ವ್ಯವಸ್ಥೆ ಮಾಡುತ್ತಾರೆ. ಕಾರಣ ಪ್ರಥಮ ಹೆರಿಗೆ ತವರು ಮನೆಯಲ್ಲಿ ಆಚರಿಸುವ ರೀತಿ ಇದೆ.

**ಕ್ರಿಸ್ತಾಂವ ಸಮಾಜಾಚೆ ಸಂಸ್ಕಾರ (ಕ್ರಿಶ್ಚಿಯನ ಸಮುದಾಯದ ಸಂಸ್ಕಾರ)**

*** ಬಾಲತಿಮ (ಬಾತಿಸ್ಮ ಪವಿತ್ರ ಸ್ನಾನ)**

ಮಗುವಿನ ಜನನ ಮೊದಲನೆ ಪ್ರಸೂತಿಯು ತವರು ಮನೆಯಲ್ಲಿ ಆಗುತ್ತದೆ. 7ನೇ ತಿಂಗಳು ಅನುಕೂಲವಾದ ದಿನ ಗರ್ಭಿಣಿಗೆ ಹಸಿರು ಬಳೆಯನ್ನು ತೊಡಿಸುತ್ತಾರೆ. ಹಾಗೂ ತವರು ಮನೆಗೆ ಕರೆದುಕೊಂಡು ಹೋಗುತ್ತಾರೆ. ಮಗು ಜನಸಿದ ಸುದ್ಧಿಯನ್ನು ಮಗುವಿನ ತಂದೆಯ ಮನೆಗೆ ಕೊಬ್ರಿ-ಬೆಲ್ಲದ ಸಿಹಿಯೊಂದಿಗೆ ತಲುಪಿಸುತ್ತಾರೆ. 6ನೇ ದಿನ ಸಂಜೆಗೆ ಶೂಲಗಿತ್ತಿಗೆ ಟಂಗಿನಕಾಯಿ ಉಡಿನೀಡಿ ಕಳಿಸಿಕೊಡುತ್ತಾರೆ. ಅವಳು ಹೋಗುವಾಗ ಹೊರಳಿ ನೋಡಬಾರದು. ಆರಾತ್ರಿ

ೂಸಿಗೆ ಕೆಳಗೆ ಇಡಲು ಬರುವುದಿಲ್ಲ ಬಾಣಂತಿಗೆ ಹೊರಗೆ ಹೋಗಲು ಅವಕಾಶವಿಲ್ಲ. ಬಾಲತಿಮ (ಪಾದ್ರಿ ಸಿಂಪಡಿಸುವ ಪವಿತ್ರಾ ನೀರು) ನಂತರ ಆ ಮಗು ಕ್ರಿಶ್ಚಿಯನ್ ಧರ್ಮ- ಕ್ಕೆ ಸೇರುತ್ತದೆ. ಕ್ರಿಶ್ಚಿಯನ್ ಧರ್ಮದಲ್ಲಿ ಈ ವಿಧಿ ಮಾಡದೇ ಮುಂದಿನ ಸಂಸ್ಕಾರಗಳನ್ನು ಮಾಡಲು ಆಗದು.

*** ಕ್ರಿಜ್ಮ (ಕ್ರಿಸ್ಮ) (ಮಗುವಿಗೆ 7 ವರ್ಷಕ್ಕೆ ಮಾಡುವ ವಿಧಾನ)**

ಬಲತಿಮ ನಂತರ ಕ್ರಿಶ್ಚಿಯನ್ ಧರ್ಮದಲ್ಲಿ ಮಗುವಿನ ಜೀವನದಲ್ಲಿ ಎರಡನೇ ಸಂಸ್ಕಾರ ಬರುತ್ತದೆ. ಅದಕ್ಕೆ ಕ್ರಿಜ್ಮ ಎನ್ನುತ್ತಾರೆ. ಈ ಸಂಸ್ಕಾರವನ್ನು ಮಗುವಿಗೆ 7 ವರ್ಷ ಪೂರ್ತಿಯಾದ ನಂತರ ಮಾಡುತ್ತಾರೆ. ಊರಲ್ಲಿಯ ಚರ್ಚಿಗೆ ಬಿಷೋಪರು ಯಾವಾಗ ಭೇಟಿ ನೀಡಲಿದ್ದಾರೆ ಎಂದು ತಿಳಿದು, ಯಾಕೆಂದರೆ 3 ರಿಂದ 5 ವರ್ಷದಲ್ಲಿ ಬಿಷಪರು ಒಂದೊಂದು ಚರ್ಚಿಗೆ ಭೇಟಿಯಿಡುತ್ತಾರೆ. ಆರೀತಿ ಆಯಾ ವಠಾರದ ಚರ್ಚಿನಲ್ಲಿ ಬಿಷೋಪರ ಭೇಟಿಯಂದು 7ವರ್ಷ ಪೂರ್ತಿಯಾದ ಮಕ್ಕಳಿಗೆ (ರೋಜಾರ ದೊತುನ) ಅಂದರೆ ಕ್ರಿಶ್ಚಿಯನ್ ಧರ್ಮದ ಶಿಕ್ಷಣ ನೀಡಿ ತಯಾರು ಮಾಡಿರುತ್ತಾರೆ. ಕ್ರಿಸ್ಮ ವಿಧಿಯನ್ನು 7 ವರ್ಷದ ನಂತರ 12 ವರ್ಷದ ಮೊದಲು ಮಾಡಬೇಕು.

*** ಕೋಮುನ್ಯಾವ (ಮೀಸಾಚಿ ಭೇಟ)**

8 ವರ್ಷದ ನಂತರ ಮಗುವಿಗೆ ಈ ಸಂಸ್ಕಾರವು ಮಕ್ಕಳಿಗೆ ಎಂಟುವರ್ಷ ಪೂರ್ತಿಯಾದ ನಂತರ ಯಾವಾಗಲಾದರೂ ಮಾಡಬಹುದು. ರವಿವಾರದ ಪ್ರಾರ್ಥನೆಯ ದಿನ ಈ ಸಂಸ್ಕಾರ ಮಾಡುತ್ತಾರೆ. ಈ ಮಕ್ಕಳಿಗೆ ವಿಶೇಷ ವೇಷವನ್ನು ಹಾಕಿರುತ್ತಾರೆ. ಪಾದ್ರಿ ಶೆರೆಯಲ್ಲಿ ಮುಳಗಿಸಿದ ಪೂರ್ತಿ ಕುಲಾವ (ಪಾವ) ಮಗುವಿನ ನಾಲಗೆ ಮೇಲೆ ಇಡುತ್ತಾರೆ. ಮಗು ಆಮೇನ ಎಂದು ಆ ಪಾವ ತಿನ್ನಬೇಕು. ಪಾರ್ತಿಕುಲಾವ ಎಂದರೆ ಏಸುಕ್ರಿಸ್ತನ ಅಸ್ತ್ರ ಹಾಗೂ ಶೆರೆ ಅಂದರೆ ಅವನ ರಕ್ತ ಎಂದು ನಂಬುತ್ತಾರೆ. ಈ ಸಂಸ್ಕಾರದಿಂದ ಏಸು ಮಗುವಿನ ದೇಹದಲ್ಲಿ ಪ್ರವೇಶ ಮಾಡುತ್ತಾನೆ ಎಂಬ ಪ್ರತೀಕವಿದೆ. ಈ ಸಂಸ್ಕಾರದ ನಂತರ ಪ್ರತಿ ರವಿವಾರದ ಹಾಗೂ ಹಬ್ಬದ ಪ್ರಾರ್ಥನೆಯ ನಂತರ ಅವನು ಪಾದ್ರಿಯಿಂದ ಆಶೀರ್ವಾದ ಪಡೆಯುತ್ತಾನೆ.

*** ಕುಮಸಾರ (ಪ್ರಾಯಶ್ಚಿತ್ತ ಸಂಸ್ಕಾರ)**

ಇಂದಿನ ದಿನಗಳಲ್ಲಿ ಮನುಷ್ಯನ ಕಡೆಯಿಂದ ಚಿಕ್ಕ-ಪುಟ್ಟ ಗುನ್ನೆಗಳು-ಅಪರಾಧಗಳು ಆಗುತ್ತದೆ. ತಿಳಿಯದೇ ನಮ್ಮಿಂದಾಗುವ ಈ ಅಪರಾಧಗಳಿಂದಾಗಿ ದೇವರ ಆಶೀರ್ವಾದವು ನಮ್ಮ ಮೇಲೆ ಕಡಿಮೆಯಾಗುತ್ತದೆ. ಎಂದು ಕ್ರಿಶ್ಚನ್ ಬಾಂಧವರು ತಿಳಿದಿದ್ದಾರೆ. ಈ ಆಘಾತಕದಿಂದ ಮುಕ್ತರಾಗುವ ದೃಷ್ಟಿಯಿಂದ ಚರ್ಚ್ಗೆ ಹೋಗಿ ಪಾದ್ರಿಯ ಎದುರಿಗೆ (ಕುಮಸಾರ) ಪ್ರಾಯಶ್ಚಿತ್ತ ಬೇಡಿಕೊಳ್ಳುತ್ತಾರೆ. ಅಂದರೆ ನನ್ನಕೈಯಿಂದಾದ ತಪ್ಪನ್ನು ಒಪ್ಪಿಕೊಂಡಿದ್ದೇನೆ. ನನ್ನನ್ನು ಕ್ಷಮಿಸು ಎಂದು ಬೇಡಿಕೊಳ್ಳುತ್ತಾರೆ. ಇದಕ್ಕೆ ಕುಮಸಾರ ಎನ್ನುತ್ತಾರೆ.

*** ಸಾಂತೆಸಾವ (ಪಿಡೆಸ್ತಾಂಚಿ ಮಾಖಣೆ) ಪೀಡಿತರ ಬೇಡಿಕೆ**

ಅಕಸ್ಮಾತಾಗಿ ಮನುಷ್ಯ ಸಾಯುವನೆಂಬುದು ಖಾತ್ರಿಯಾಯಿತೆಂದರೆ ಪಾದ್ರಿಯನ್ನು ಮನೆಗೆ ಕರೆತರುತ್ತಾರೆ. ಪಾದ್ರಿ ಅವನ ಹಣೆಗೆ, ಕಣ್ಣಿಗೆ, ಮೂಗಿಗೆ, ತನ್ನ ಕೈಯಲ್ಲಿರುವ ಚಿಕ್ಕ ಶಿಲುಬೆಯಿಂದ ಪವಿತ್ರ ನೀರನ್ನು ಸಿಂಪಡಿಸುತ್ತಾರೆ. ಅವನ ಆತ್ಮಕ್ಕೆ ಶಾಂತಿ ಲಭಿಸಲೆಂದು ಬೇಡಿಕೊಳ್ಳುತ್ತಾರೆ. ಜರಅವನಿಗೆ ಕುಮಸಾರ ಪ್ರಾಯಶ್ಚಿತ್ತ ಮಾಡಿಸಿಕೊಳ್ಳುವುದಿದ್ದರೆ ಅದನ್ನೂ ಮಾಡುತ್ತಾರೆ.

*** ಓರ್ದಿನೆಸಾವ (ಆರ್ದಿನೆಸಾವ) ಮದುವೆಯಾಗದೇ ಪಾದ್ರಿಯಾಗುವವರಿಗೆ**

ಪಾದ್ರಿ/ಮಾದ್ರಿ ಆಗುವ ಸಲುವಾಗಿ ಯಾರು ಧಾರ್ಮಿಕ ಸಂಸ್ಕಾರ ಮಾಡುತ್ತಾರೆ. ಅವರಿಗೆ ಆರ್ದಿನೆಸಾವ ಎಂದು ಕರೆಯುತ್ತಾರೆ. ಈ ಸಂಸ್ಕಾರವೆಂದರೆ ಯಾರಿಗೆ ಪಾದ್ರಿ/ಮಾದ್ರಿಯಾಗುವದಿದೆ ಹಾಗೂ ಮದುವೆಯಾಗದೇ ಉಳಿಯುವವರಿಗೆ ಈ ಸಂಸ್ಕಾರವನ್ನು ಬಹಳ ಜವಾಬ್ದಾರಿಯಿಂದ ಮಾಡುತ್ತಾರೆ. ಪಾದ್ರಿಯಾಗುವ ಸಂಸ್ಕಾರಕ್ಕೆ ನಿಮಾಣಿ ಖರಾರ (ಕೊನೆಯ ಕರಾರ) ಎಂದೂ ಕರೆಯುತ್ತಾ- ರೆ. ಪಾದ್ರಿ ಸಂಸ್ಕಾರ ಕಲಿಯುವವರಿಗೆ ಗೋವಾ ಹಾಗೂ ಗೋವಾದ ಹೊರಗೆ ವಿವಿಧ ಮಠಗಳು ಸಂಸ್ಥೆಗಳು ಇವೆ. ಡಿಯೊಸೇಶನ ಸಾನಾಯದಯಾ ನಾರಭರೇತ ಸಂಸ್ಥೆಯ ಹಾಗೆ ಪಾದ್ರಿ ಸಂಸ್ಕಾರ ಕಲಿಸುವ ಸಂಸ್ಥೆಗಳುಗೋವಾದಲ್ಲಿವೆ. 18 ವರ್ಷ ಆದ ಮಗುವಿಗೆ ಅವನಿಗೆ ಇಚ್ಛೆ ಇದ್ದರೆ ಅವನು ಆ ಸಂಸ್ಥೆಯಲ್ಲಿ ಪ್ರವೇಶ ಪಡೆದುಕೊಳ್ಳುತ್ತಾನೆ. ಈ ಸಂಸ್ಕಾರದ ಸಮಯದಲ್ಲಿ ಬಿಳಿ ಬಣ್ಣದ ವೇಶವನ್ನು ಧರಿಸಬೇಕಾಗುತ್ತದೆ.

*** ಕಾಜರ (ಲಗ್ನ) ಮದುವೆ**

ಇಂದು ಹಿಂದೂ ಧರ್ಮದಲ್ಲಿ ಮದುವೆ ಮೊದಲು ಕಾನೂನಿನಂತೆ ನೋಂದಣಿ ಮಾಡಿಕೊಳ್ಳುತ್ತಾರೋ ಅದೇ ರೀತಿ ಕ್ರಿಶ್ಚಿಯನ್ ಧರ್ಮದಲ್ಲೂ ಮದುವೆ ಮೊದಲು ಸಿವಿಲ್ ರಜಿಸ್ಟಾರ ಕಛೇರಿಯಲ್ಲಿ ನೋಂದಣಿ ಮಾಡಿಕೊಳ್ಳಬೇಕಾಗುತ್ತದೆ. ಕ್ರಿಶ್ಚಿಯನ್ನರು ಸೋದರ ಸಂಬಂಧದಲ್ಲಿ ಮದುವೆಯಾಗುವುದಿಲ್ಲ ಹುಡುಗ- ಹುಡುಗಿಯ ಒಪ್ಪಿಗೆಯಾದ ಮೇಲೆ ಎರಡೂ ಮನೆಯವರು ಇದಕ್ಕೆ ಸಹಮತ ನೀಡಿದ ನಂತರ ತಮ್ಮ ತಮ್ಮ ಪಾದ್ರಿ ಹತ್ತಿರ ಹೋಗಿ ವಿಷಯ ತಿಳಿಸುತ್ತಾರೆ. ಪಾದ್ರಿ ಸಂಬಂಧ ಪಟ್ಟ ಹುಡುಗ ಹುಡುಗಿಯ ಚರ್ಚಿನಲ್ಲಿರುವ ಧಾರ್ಮಿಕ ದಾಖಲೆಗಳನ್ನು ಪರಿಶೀಲಿಸಿ ನಂತರ ಮದುವೆಯಾಗಲಿರುವ ಜೋಡಿಯ ವಯಸ್ಸು ಇತ್ಯಾದಿ ತಾಳಮಾಡಿ ನೋಡುತ್ತಾರೆ. ಎರಡೂ ಕಡೆಯಿಂದ ಸಮಾಧಾನಕರ ಉತ್ತರ ಸಿಗುವುದಾದರೆ

ಮದುವೆಯ ಮುಂದಿನ ಮೆಟ್ಟಿಲು ಏರುತ್ತಾರೆ. ಮದುವೆ ಮೊದಲು ಬರುವ ೩ ರವಿವಾರದೊಳಗೆ ಚರ್ಚಿನಲ್ಲಿ ಜರುಗುವ ಪ್ರಾರ್ಥನೆಯಲ್ಲಿ ಪಾದ್ರಿ ಮದುವೆಯ ವಿಷಯ ಪ್ರಸ್ತಾಪಿಸುತ್ತಾನೆ. ಹುಡುಗ-ಹುಡುಗಿ ತಂದೆ-ತಾಯಿ ಹೆಸರು ಊರು, ಕೇರಿ ವ್ಯವಸಾಯ್ ಏನಾದರೂ ಶಾರೀರಿಕ ವ್ಯಂಗಗಳಿದ್ದರೂ ಸಹಿತ ಮಾಹಿತಿ ನೀಡುತ್ತಾರೆ. ಇದಕ್ಕೆ ಚೀಟಿ ಓದುವುದೆಂದು "ಛಿಟ ವಾಚಪ" ಎಂದು ಕರೆಯುತ್ತಾರೆ. ಎರಡು ರವಿವಾರ ಯಾರಾದರೂ ವಿರೋಧವಿಲ್ಲದಿದ್ದರೆ ಮೂರನೇ ರವಿವಾರ ಮದುವೆ ತ್ಯಯುವಾದ ಬಗ್ಗೆ ಜಾಹಿರಮಾಡುತ್ತಾರೆ. ಇದಾದ ನಂತರ ಮುಂದಿನ ವಿಧಿ ಪ್ರಾರಂಭವಾಗುತ್ತದೆ.

*** ಚುಡೊ (ಬಳೆ ತೊಡಿಸುವುದು)**

ಮದುವೆಗೆ ಸುಮಾರು ಒಂದು ತಿಂಗಳು ಇರುವಾಗ ಮದುಮಗಳಿಗೆ ಬಳೆತೊಡಿಸುವ ಪದ್ಧತಿ ಇದೆ. ಬಳೆಯನ್ನು ಸೋದರ ಮಾವನು ತೊಡಿಸುತ್ತಾನೆ. ಬಳೆಗಾರನನ್ನು ತನ್ನ ಮನೆಗೆ ಕರಿಸಿ ಈ ವ್ಯವಸ್ಥೆ ಮಾಡುತ್ತಾನೆ. ಕೆಂಪು, ಹಳದಿ, ಹಸಿರು, ಬಿಳಿ ಎಲ್ಲ ಬಣ್ಣದ್ದು ಒಂದೊಂದು ಡಜನ್ ಬಳೆ ಅವಳ ಕೈಗೆ ಹಾಕುತ್ತಾರೆ. ಅವಳ ಜೊತೆಗೆ ಉಳಿದ ಮಹಿಳೆಯರಿಗೂ ಹಾಕುವ ವ್ಯವಸ್ಥೆ ಇರುತ್ತದೆ. ಬಳೆಗಾರನಿಗೆ ನೀಡುವ ಎಡೆ (ಹಣ) ಬೇರೆಯಿರುತ್ತದೆ. ಆದರೆ ಉಳಿದ ಹೆಣ್ಣು ಮಕ್ಕಳು ತಮ್ಮ ತಮ್ಮ ಕೈಯಲ್ಲಿದ್ದ ಹಣವನ್ನು ಕಾಣಿಕೆಯೆಂದು ಇಡುತ್ತಾರೆ.

*** ಸಾಡೆಕಾಡಪ (ಸೀರೆ ತೆಗೆಯುವುದು)**

ಮೊದಲಿನ ಹಾಗೆ ಈಗ ಮದುಮಗಳು ಸೀರೆ ಉಡುವುದಿಲ್ಲ ಆದರೂ ವಿಧಿಗಾಗಿ ಉಡಬೇಕಾಗುತ್ತದೆ. ಇದಕ್ಕೆ ಮದುವೆಯ ಶಾಲು ಯಾ ಮೊದಲ ಸೀರೆ-ಯೆಂದು ಕರೆಯುತ್ತಾರೆ. ಇದಕ್ಕೆ ರವಿಕೆ ಹೊಲಿಯಲು ಬಟ್ಟೆ ಕತ್ತರಿಸಬೇಕಾಗುತ್ತದೆ. ಆದ್ದರಿಂದ ಆ ವಿಧಿಗೆ ಸಾಡೆಕಾಪಡ ಎನ್ನುತ್ತಾರೆ. ಮದುವೆಯ ಶಾಲು ಮದುಮಗನು ತೆಗೆಯುವದಿರುತ್ತದೆ. ಸೀರೆಯ ಬಣ್ಣ ಕೆಂಪು ಯಾ ಗುಲಾಬಿ ಇರಬೇಕು. ಆ ವಿಧಿಯ ದಿನ ಮದುಮಗಳನ್ನು ಮದುಮಗನ ಮನೆಗೆ ಕರೆಯಿಸಿ ಕೊಳ್ಳುತ್ತಾರೆ. ಒಂದು ಚಾಪೆಯ ಮೇಲೆ ಏಸುವಿನ ಮೂರ್ತಿ ಇಡುತ್ತಾರೆ. (ಶಿಲುಬೆ) ಅಲ್ಲಿ ದೀಪ ಬೆಳಗುತ್ತಾರೆ. ನಂತರ ಶಿಲಬೆಯು ಸೀರೆಯ ಎರಡು ತುಂಡುಗಳನ್ನು (ಎಳೆ) ಕತ್ತರಿಸಿ ಆ ಮೂರ್ತಿಯ ಹತ್ತಿರ ಇಡುತ್ತಾರೆ. ಅಲ್ಲಿ ಸೇರಿದವರೆಲ್ಲ ಅದಕ್ಕೆ ನಮಸ್ಕರಿಸುತ್ತಾರೆ. ಸಿಹಿ ಹಂಚುತ್ತಾರೆ. ನಂತರ ಮದುಮಗಳ ಅಳತೆ ಪಡೆದು-ಕೊಂಡು ಬಟ್ಟೆ ಹೊಲೆಯುತ್ತಾನೆ.

*** ದೋಶ (ಕರಪ) ಸಿಹಿತಿಂಡಿ**

ಮದುವೆಯ ಕೆಲದಿನ ಮೊದಲು ಮದುವೆಗಾಗಿ ಮಾತ್ರ ಸಿಹಿತಿಂಡಿ ಅಂದರೆ (ದೋಶ) ಮಾಡುವ ಕಾರ್ಯ ಪ್ರಾರಂಭವಾಗುತ್ತದೆ. ಕಡ್ಲಿಬೇಳೆ, ಸಕ್ಕರೆ ಹಾಗೂ ತೆಂಗಿನಕಾಯಿ ಹಾಕಿ ಮಾಡಿದ ಕಾಪಾ (ತಿಂಡಿ) ಒಳ್ಳೆಯ ದಿನ ನೋಡಿ ಮಾಡುತ್ತಾರೆ.

*** ದಳಪ (ಬೀಸುವುದು)**

ಮದುವೆಯ ಅಡಿಗೆಗೆ ಬೇಕಾಗುವ ಅಕ್ಕಿಯ ಹಿಟ್ಟನ್ನು ಮೊದಲು ಮನೆಯಲ್ಲೆ ತಯಾರಿಸುತ್ತಿದ್ದರು. (ಕಾರಣ ಗಿರಣಿಗಳಿರಲಿಲ್ಲ) ಅದನ್ನು ಸಹಿತ ಮುತ್ತೈದೆಯರು ಬೀಸುತ್ತಾರೆ. ಮೊದಲನೆಯ ಮುಟ್ಟಿಗೆಯನ್ನು ಬೀಸುಕಲ್ಲಿಗೆ ಮದುಮಗಳು ಯಾ ಮದುಮಗ ಹಾಕಬೇಕು.

*** ಭಾತುಕಡಪ (ಭತ್ತ ಕುದಿಸುವುದು)**

ಮದುವೆಗೆ ಬೇಕಾಗುವ ಅಕ್ಕಿಯನ್ನು ಪ್ರತಿ ಮನೆಯಲ್ಲಿ ತಯಾರಿಸುತ್ತಿದ್ದರು. ಆಗ ಅಕ್ಕಿ ತಯಾರಿಸಲು ಭತ್ತವನ್ನು ವಿಧಿ ಪೂರ್ವಕ ಕುದಿಸುತ್ತಿದ್ದರು. ಅಕ್ಕ-ಪಕ್ಕದ ಹಾಗೂ ಸಂಬಂಧಿಕರು, ಮುತ್ತೈದೆಯರು ಸೇರಿ ಕುದಿಸುತ್ತಾರೆ (ಕುಚ್ಚಲಕ್ಕಿ) ಹಾಗೂ ನಂತರ ಒಣಗಿಸಿ ಅದ-ರಿಂದ ಕುಟ್ಟಿ ಅಕ್ಕಿಯನ್ನು ಮಾಡುತ್ತಿದ್ದರು.

*** ಬಿಕ್ಯಾ ಜಿವಣ**

ಮದುವೆಯ ಮೊದಲು ಭಿಕ್ಯಾಜೆವಣ ಹಾಕುವ ವಾಡಿಕೆ. ಇದೇನೆಂದರೆ ಮದುವೆಯ ಮೊದಲನೆದಿನ ಮನೆತನದ ವಂಶವಳಿಯಲ್ಲಿ ಮಡಿದವರೆಲ್ಲರ ನೆನಪು ಮಾಡಿ ಆ ದಿವಸ ಸತ್ತವರ ಹೆಸರಿನಲ್ಲಿ ಕೆಲವರನ್ನು ಕರೆದು ಅವರಿಗೆ ಮಾನ-ಸನ್ಮಾನ ನೀಡಿ ಊಟಕ್ಕೆ ಕೂಡ್ರಿಸುತ್ತಾರೆ. ಊಟದ ನಂತರ ಗಂಡಸರಿಗೆ ಎಲೆ ಅಡಿಕೆ ಬೀಡಿ, ಸಿಗರೇಟು ನೀಡುತ್ತಾರೆ. ಹೆಂಗಸರಿಗೆ ತಲೆಗೆ ಎಣ್ಣೆ ಹಾಕುತ್ತಾರೆ. ಅಂದು ಊರಲ್ಲಿರುವ ಭಿಕ್ಷುಕರಿಗೆ ಹೊಟ್ಟೆ ತುಂಬ ಊಟ ಹಾಕುತ್ತಾರೆ.

*** ಕೆಸಕಾಪಣೆ (ಕೂದಲು ಕತ್ತರಿಸುವುದು)**

ಮದುವೆಯ ಮೊದಲು ಕ್ಷೌರಿಕನನ್ನು ಮನೆಗೆ ಕರೆಯಿಸಿ ತಲೆಗೂದಲು, ಮೀಸೆ, ಗಡ್ಡ ಸರಿಪಡಿಸುವ ವಿಧಾನವಿದೆ. ಅವನ ಜೊತೆಗೆ ಮನೆಯ ಗಂಡಸರೂ ಮಾಡಿಸಿಕೊಂಡು ಕ್ಷೌರಿಕನಿಗೆ ಮಾನ-ಸನ್ಮಾನ ಮಾಡಿ ಹಣವನ್ನು ನೀಡಿ ಕಳುಹಿಸುತ್ತಾರೆ.

*** ರೊಸಲಾವಪ (ತೆಂಗಿನ ನೀರು ಹಚ್ಚುವ ವಿಧಿ)**

ಮದುವೆಯ ಮೊದಲು ಮದುಮಗಳಿಗೂ ಮದುಮಗನಿಗೂ ಅವರವರ ಮನೆಯಲ್ಲಿ ತೆಂಗಿನ ಕಾಯಿ ರುಬ್ಬಿದ ನೀರನ್ನು ಮುತ್ತೈದೆಯರು ಮದುಮಗಳಿಗೂ ಹಾಗೂ ಮದುಮಗನಿಗೂ ಅವರ ಮೈಗೆ ಲೇಪನಮಾಡುತ್ತಾರೆ.

*** ದೊತವಾದೆಣೆ (ಮದುವೆ ಕಾಣಿಕೆ)**

ಕ್ರಿಶ್ಚಿಯನ್ ಮದುವೆಯಲ್ಲಿ ಇದಕ್ಕೆ ಬಹಳ ಮಹತ್ವವಿದೆ. ಮದುವೆಯ ಮಾತುಕತೆಯಾದ ತಕ್ಷಣ

ಕೊಡತೊಗೊಳ್ಳುವ ವಿಷಯ ಮಾತನಾಡುತ್ತಾರೆ. ಬಂಗಾರ-ಶೃಂಗಾರವಸ್ತು, ಬಟ್ಟೆ, ಪಾತ್ರೆಗಳು ಹಾಗೂ ಸಂಸಾರಕ್ಕೆ ಬೇಕಾಗುವ ವಿವಿಧ ವಸ್ತು ಯಾ ಅವು ಯಾವುದೂ ಕೇಳದೆ ಬರಿ ಹಣವನ್ನು ಹುಡುಗಿಯ ತಂದೆ-ತಾಯಿ ನೀಡಬೇಕು. (ಹಣ ಪಡೆದುಕೊಂಡ ತಾವೇ ಮದುಮಗಳಿಗೆ ತಂದು ಕೊಡುವ ವಾಡಿಕೆಯೂ ಇದೆ) ಕಾಣಿಕೆಯನ್ನು ಮದುಮಗನ ಮನೆಗೆ ಕಳಿಸಿಕೊಡುವ ಮೊದಲು ಮದುಮಗಳ ಮನೆಯಲ್ಲಿ ಆ ವಸ್ತುಗಳನ್ನು ಹೊಂದಿಸಿ ಇಡುತ್ತಾರೆ. ಅದನ್ನು ನೋಡಲು ಸಂಬಂಧಿಕರು ಅಕ್ಕ-ಪಕ್ಕದವರೂ ಮುದ್ದಾಂ ಆಗಿ ಬರುತ್ತಾರೆ. ಮುಂದೆ ಅದನ್ನು ತೆಗೆದುಕೊಂಡು ಮದುಮಗಳ ಸಹೋದರ ಮದುಮಗನ ಮನೆಗೆ ಕೊಡಲು ಹೋಗುತ್ತಾನೆ. ಹಿಂದೆ ಮೋಟಾರು ವಾಹನಗಳಿರಲಿಲ್ಲ, ಆಗ ಯಾವುದಾದರೂ ಗಟ್ಟಿಮುಟ್ಟಾದ ಬಾಡಿಗೆ ಆಳುಗಳನ್ನು ಪಡೆದು ಅವನ ತಲೆಯಮೇಲೆ ಹೊತ್ತುಕೊಂಡು ಹೋಗುತ್ತಿದ್ದರು. ಹೋದವರಿಗೆ ಮದುಮಗನ ಮನೆಯಲ್ಲಿ ಮಾನ-ಸನ್ಮಾನ ಮಾಡುತ್ತಿದ್ದರು.

* ರೆಸ್ತರ

ಮದುವೆಯ ಮುಖ್ಯ ವಿಧಿ ಏನೆಂದರೆ ರೆಸ್ತರ. ಈ ವಿಧಿಯಾದ ತಕ್ಷಣ ಮದುಮಗ ಮತ್ತು ಮದುಮಗಳು ಧರ್ಮಶಾಸ್ತ್ರದ ರೀತಿಯಿಂದ ಗಂಡ-ಹೆಂಡಿರಾಗುತ್ತಾರೆ. ರೆಸ್ತರ ಮದುಮಗನ ಊರಿನ ಚರ್ಚಿನಲ್ಲಿ ನಡೆಯುತ್ತದೆ. ಈ ದಿನ ಮದುಮಗನ ಸಹೋದರಿ ಮದುಮಗಳಿಗೆ ಸೀರೆ ಉಡಿಸಿ ಬರುತ್ತಾಳೆ. ಕಾಲಿನ ಉಗುರಿನಿಂದ ಹಿಡಿದು ತಲೆಯವರೆಗಿನ ಎಲ್ಲಾ ಶೃಂಗಾರ ಸಾಮಗ್ರಿ ಅವಳೇ ತೆಗೆದುಕೊಂಡು ಬರುತ್ತಾಳೆ. ಮದುಮಗಳ ಎಲ್ಲಾ ಬಟ್ಟೆ ಶೃಂಗಾರ ವಸ್ತ್ರ, ಬಿಳಿಬಣ್ಣದ್ದು (ಶ್ವೇತ) ಇರುತ್ತವೆ. ಮದುಮಗಳ ಜೊತೆ ಒಬ್ಬ ಧೇಡಿ ಹಾಗೂ 3 ಜನ ಆಚಿಜ (3 ಜನ ಚಿಕ್ಕ ಬಾಲಕಿಯರು) ಇರುತ್ತಾರೆ. ಅವರಿಗೆ ಗುಲಾಬಿ ಬಣ್ಣದ ವೇಶ ತೊಡಿಸುತ್ತಾರೆ. ಧೇಡಿಯಾಗುವ ಮಾನವು ಮದುಮಗಳ ಚಿಕ್ಕ ಸಹೋದರಿಗೂ ಧೇಡೊ (ಮದುಮಗನ ಜೊತೆ ಇರುವವ) ಆಗುವ ಮಾನ ಮದುಮಗನ ಚಿಕ್ಕ ಸಹೋದರನಿಗೆ ಇರುತ್ತದೆ. ಅಲ್ಲದೇ ಮದುಮಗಳ ಜೊತೆ ಒಬ್ಬ ಕರವಲಿ ಮದುಮಗನ ಜೊತೆಗೂ ಒಬ್ಬ ಕರವಲಿ (ಅವನ ಸಹೋದರಿ) ಇರುತ್ತಾಳೆ. ಮದುವೆಗೆ ಬೇಕಾದ ಅಕ್ಕಿ ವಿಧಿ ಪೂರ್ವಕವಾಗಿ ತೊಳೆಯಬೇಕಾಗುತ್ತದೆ. ಅದನ್ನು ತೆಗೆದು ಕೊಡುವುದು ಹಾಗೂ ಅಡಿಗೆಗೆ ಬೇಕಾದ ಕುಂಬಳಕಾಯಿ ಹೊಸ್ತಿಲ ಮೇಲೆ ಇಟ್ಟು ಒಡೆಯುವ ಕಾರ್ಯ ಕರವಲಿ/ಕರವಲ ಮಾಡಬೇಕಾಗುತ್ತದೆ. ಅದಲ್ಲದೇ ಬರಹೋಗುವವರ ಕಡೆ ಲಕ್ಷಕೊಡುವುದು, ಅವರ ಕ್ಷೇಮ ವಿಚಾರ ಮಾರ್ಗದರ್ಶನ ನೀಡುವ ಕೆಲಸ ಇವರದೇ ಇರುತ್ತದೆ.

ಮದುಮಗ ಹಾಗೂ ಮದುಮಗಳು ತಮ್ಮ ತಮ್ಮ ಹಿರಿಯರ ಆಶೀರ್ವಾದ ಪಡೆದು ಚರ್ಚಿನೊಳಗೆ ಹೋಗುತ್ತಾರೆ. ಆಗ ಗೀತೆಗಳನ್ನು ಹಾಡುತ್ತಾರೆ. ಮದುಮಗಳು ಚರ್ಚಿನ ಬಾಗಿಲು ತಲುಪಿದ ತಕ್ಷಣ ಧೆಡೋ ಬಂದು ಅವಳ ಕೈಯಲ್ಲಿ ಹೂವಿನ ತುರಾಯಿ ನೀಡಿ ಅವಳ ಗಲ್ಲಕ್ಕೆ ಸ್ಪರ್ಷ ಮಾಡಿ ಒಳಗೆ ಸ್ವಾಗತಿಸುತ್ತಾನೆ. ಮದುಮಗ ಮದುಮಗಳು ಇಬ್ಬರೂ ಸೇರಿ ಚರ್ಚಿನ ದೇವರ ಸನ್ನಿಧಿಯಲ್ಲಿ ಮಂಡಿಯೂರಿ ಕುಳಿತು ಕೊಳ್ಳುತ್ತಾರೆ. ದೇವರಿಗೆ ನಮನ ಮಾಡಿದ ನಂತರ ಪಾದ್ರಿ ಬಂದು ಮದುಮಗಳ ಕೈಯನ್ನು ಮದುಮಗನ ಕೈಯಲ್ಲಿ ಕೊಡುತ್ತಾನೆ ಹಾಗೂ ಇಬ್ಬರ ಕಡೆಯಿಂದಲೂ ಒಬ್ಬರಿಗೊಬ್ಬರು ಸುಖ-ದುಃಖದಲ್ಲಿ ಭಾಗಿಯಾಗುವ, ಸಂಕಷ್ಟದ ಸಮಯದಲ್ಲಿ ಸಾಥ ನೀಡುವ ಒಬ್ಬರಿಗೊಬ್ಬರು ಏಕನಿಷ್ಠೆಯಿಂದ ಬಾಳುವ ವಾಗ್ದಾನವನ್ನು ಪಡೆಯುತ್ತಾರೆ. ನಂತರ ಉಂಗುರಗಳಿಗೆ ಪವಿತ್ರ ನೀರು ಸಿಂಪಡಿಸಿ ಅವರಿಬ್ಬರ ಕಡೆಗೆ ಕೊಡುತ್ತಾನೆ. ಪಾದ್ರಿ ಹಾಗೂ ನೆರೆದ ಸಮಸ್ತ ಜನರ ಗಾಯನದ ಮಧ್ಯೆ ಅವರಿಬ್ಬರೂ ಒಬ್ಬರಿಗೊಬ್ಬರು ಉಂಗುರ ಹಾಕುತ್ತಾರೆ. ಅವರ ತಲೆಯ ಮೇಲೆ ಪಾದ್ರಿ ಪವಿತ್ರ ನೀರು ಸಿಂಪಡಿಸಿದ ಮೇಲೆ ಚರ್ಚಿನಲ್ಲಿ ಪ್ರಾರ್ಥನೆಯಾಗುತ್ತದೆ. ಮದುಮಗಳು-ಮದುಮಗ ಇಬ್ಬರೂ ಶಪತವನ್ನು ತೆಗೆದುಕೊಳ್ಳುತ್ತಾರೆ. ನಂತರ ಚರ್ಚಿನಲ್ಲಿರುವ ಮದುವೆ ಪುಸ್ತಕದಲ್ಲಿ ತಮ್ಮ ರುಜುಹಾಕುತ್ತಾರೆ. ನಂತರ ಮದುವೆ ದಿಬ್ಬಣ ಮದುಮಗನ ಮನೆ ಕಡೆಗೆ ಹೋಗಲು ಹೊರಬೀಳುತ್ತದೆ. ಹಾಗೂ ಮದುಮಗನ ಮನೆಬಾಗಿಲಲ್ಲಿ ಹಿರಿಯರೆಲ್ಲಸೇರಿ ಇವರಿಗೆ ಬರಮಾಡಿಕೊಳ್ಳುತ್ತಾರೆ. ಮದುಮಗಳು ಮನೆಯೊಳಗೆ ತನ್ನ ಬಲಗಾಲನ್ನು ಇಟ್ಟು ಪ್ರವೇಶ ಮಾಡುತ್ತಾಳೆ ನಂತರ ನವದಂಪತಿಗಳು ಆ ಮನೆ ದೇವರ ಜಗುಲಿಯ ಕೆಳಗೆ ಮೊಣಕಾಲೂರಿ ಪ್ರಾರ್ಥನೆ ಮಾಡುತ್ತಾರೆ. ನೆರೆದವರೆಲ್ಲರೂ ದೇವರ ಗೀತಗಾಯನ ಮಾಡುತ್ತರೆ.

ಮರುದಿವಸ ಮದುಮಗನ ಮನೆಯಲ್ಲಿ ನವಜೋಡಿಗೆ ಆಶಿರ್ವಾದ ಮಾಡಲು ಮನೆ ಅಕ್ಕ-ಪಕ್ಕದ ಹಿರಿಯರು ಬರುತ್ತಾರೆ. ಆಶೀರ್ವಾದ ನೀಡಿ ತಾವು ತಂದ ಕಾಣಿಕೆಯನ್ನು ಕೊಡುತ್ತಾರೆ. ಹಾಗೂ ಮಧ್ಯಾಹ್ನ ನವದಂಪತಿಗಳು ಮದುಮಗನ ಕುಟುಂಬದ ಸದಸ್ಯರು ಹಿರಿಯರು ಗೆಳೆಯರೂ ಸೇರಿ ಮದುಮಗಳ ಮನೆಗೆ ಊಟ-ಕ್ಕೆ ಹೋಗುತ್ತಾರೆ. ಇದಕ್ಕೆ "ಮಾವೊಡಿ"ಯಾ ಫಳಜೆವಣ ಎನ್ನುತ್ತಾರೆ. ಈ ಕಾರ್ಯಕ್ಕೆ ಮದುಮಗಳು ಗಂಡನ ಮನೆಯವರ ಸೀರೆಉಟ್ಟು ಹೋಗಿರುತ್ತಾಳೆ. ರಾತ್ರಿ ವೇಳೆ ಮದುಮಗಳ ಮನೆಯಲ್ಲಿ ಊಟ ಮುಗಿಸಿ ಹೋದವರೆಲ್ಲ ಮರಳಿ ಬರುತ್ತಾರೆ ಆದರೆ ನವದಂಪತಿಗಳು ಮದುಮಗಳ ಮನೆಯಲ್ಲಿ ಆರಾತ್ರಿ ಉಳಿಯುತ್ತಾರೆ. ಈ ಅಡುಗೆಯಲ್ಲಿ ವಿಶೇಷವಾಗಿ 5 ತರಹದ ಫರಾಳ ಮಾಡಿರುತ್ತಾರೆ.

ನವದಂಪತಿಗಳ ಪ್ರಥಮ ರಾತ್ರಿ ಹಾಸಿಗೆ ಮದುಮಗನ ಸಹೋದರಿ ಹಾಕಬೇಕು ಮುಂಜಾನೆ

ಎದ್ದಾಗ ಮದುಮಗ ಹಾಸಿಗೆ ಹತ್ತಿರ ಏನಾದರೂ ಕಾಣಿಕೆ ಇಡಬೇಕು. ಮದುವೆಯಾದ ನಂತರ ಬರುವ ಮೊದಲನೇ ರವಿವಾರ ಹೊಸ ಜೋಡಿಯು ಚರ್ಚಿಗೆ ಪ್ರಾರ್ಥನೆಗಾಗಿ ಹೋಗುವ ಪದ್ಧತಿ ಇದೆ.

♦♦♦♦



# 21. ವಿಶ್ವ ಕೊಂಕಣಿ ಕೇಂದ್ರ ಸಂಸ್ಥಾಪಕ ಶ್ರೀ ಬಸ್ತಿ ವಾಮನ ಶೆಣೈ

■ ಡಾ. ವಸಂತ ಬಾಂದೇಕರ-ಕಾರವಾರ

ಏಕೈಕ ವಿಶ್ವಕೊಂಕಣಿ ಸರದಾರ ಪ್ರಶಸ್ತಿ ವಿಜೇತ ಬಸ್ತಿ ವಾಮನ ಶೈಣೈಯವರು 1934 ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬಂಟವಾಳ ಪ್ರಮುಖ ಗೌಡಸಾರಸ್ವತ ಕುಟುಂಬದಲ್ಲಿ ಜನಿಸಿದ ಶ್ರೀ ಬಸ್ತಿ ಮಾಧವ ಶೈಣೈಯವರ ಸುಪುತ್ರ ಬಸ್ತಿ ವಾಮನ ಶೈಣೈರವರು ಬಂಟವಾಳದ ಎಸ್. ವ್ಹಿ. ಎಸ್. ಪ್ರೌಢಶಾಲೆಯಲ್ಲಿ 1952ರಲ್ಲಿ ತಮ್ಮ ಮಾಧ್ಯಮಿಕ ಶಿಕ್ಷಣವನ್ನು ಮುಗಿಸಿದರು.

1968ರಲ್ಲಿ ಕರ್ನಾಟಕದ ಬೆಳಗಾವಿ ಜಿಲ್ಲೆ ರಾಯಬಾಗದ ಸಿಂಡಿಕೇಟ್ ಬ್ಯಾಂಕಿನ ನೂತನ ಶಾಖೆಯಲ್ಲಿ ಬ್ಯಾಂಕ ಅಧಿಕಾರಿಯಾಗಿ ಇವರು ಸೇವೆ ಪ್ರಾರಂಭಿಸಿದರು. ಆ ಪ್ರದೇಶದಲ್ಲಿ ಒಂದು ಕೃಷಿ ಕ್ರಾಂತಿಯನ್ನೇ ಮಾಡಿದರು. 56 ವರ್ಷದ ಹಿಂದೆ ಶ್ರೀ ಬಸ್ತಿ ವಾಮನರು ಈ ಪ್ರದೇಶದ ಕೃಷಿ ಅಭಿವೃದ್ಧಿಗೆ ನೀಡಿದ ನಾಯಕತ್ವವನ್ನು ಅಲ್ಲಿನ ಜನರು ಇಂದಿಗೂ ನೆನಪಿಸಿಕೊಳ್ಳುತ್ತಾರೆ. ಅಂದು "ದಿ ಹಿಂದೂ" ಮೊದಲಾದ ಪತ್ರಿಕೆಗಳ ಪ್ರಶಂಸೆಗೂ ಪಾತ್ರರಾದರು. ಅಲ್ಲಿಂದ ಮುಂದೆ ಸಿಂಡಿಕೇಟ ಬ್ಯಾಂಕಗಳಲ್ಲಿ ವಿವಿಧ ಜವಾಬ್ದಾರಿಗಳನ್ನು ವಹಿಸಿ ಎಲ್ಲ ಹಂತಗಳಲ್ಲಿ ಗುರುತಿಸಿಕೊಂಡ ಹಿರಿಮೆ ಶ್ರೀ ಶೈಣೈಯವರಿಗೆ 1972 ರಿಂದ 1976 ರವರೆಗೆ ಪಾಣೆ ಮಂಗಳೂರು ಶಾಖಾಧಿಕಾರಿಯಾಗಿ 1976-78ರಲ್ಲಿ ಬಂಟ್ವಾಳ ಶಾಖೆಯಲ್ಲಿ 1978-82 ಶಿವಮೊಗ್ಗದಲ್ಲಿ 1982-84 ಬೆಂಗಳೂರಿನಲ್ಲಿ, 1984-88 ಮೂಡಬಿದ್ರೆ 1988 ರಿಂದ ನಿವೃತ್ತಿಯಾಗುವವರೆಗೆ ಮಂಗಳೂರಿನಲ್ಲಿ ಬಸ್ತಿಯವರು ಬ್ಯಾಂಕಿಂಗ್ ವ್ಯವಸ್ಥೆಯ ಸಾಮಾಜಿಕ ಮತ್ತು ಆರ್ಥಿಕ ಹೊಣೆಗಾರಿಕೆಯನ್ನು ಅತ್ಯಂತ ಯಶಸ್ವಿಯಾಗಿ ನಿರ್ವಹಿಸುವ ಮೂಲಕ ಸಂಸ್ಥೆಯ ಹಾಗೂ ಸಮಾಜದ ಅಭಿನಂದನೆಗೆ ಪಾತ್ರರಾದರು.

ಬಸ್ತಿ ವಾಮನ ಶೈಣೈ ಬಹುಮುಖ ಪ್ರತಿಭೆಯ ವ್ಯಕ್ತಿತ್ವ ಅವರದು, ಸಾಹಿತಿ ಮತ್ತು ಕಲಾಪ್ರೇಮಿಯಾಗಿದ್ದ ಸ್ವತ ಬರಹಗಾರರಾದ ಅವರು ಮೂಡಬಿದರೆಯಲ್ಲಿದ್ದಾಗ ಮಾಜಿ ಸಚಿವರಾದ ಶ್ರಿ ಅಮರನಾಥ ಶೆಟ್ಟಿ ಅವರ ನಾಯಕತ್ವದಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಅತ್ಯಂತ ಯಶಸ್ವಿಯಾಗಿ ನಡೆಸಲು ಸಹಕರಿಸಿದರು. ಬಂಟವಾಳದ ಇನ್ನೊಂದು ಪ್ರತಿಷ್ಠಿತ ಸಂಸ್ಥೆಯಾದ ಸರಸ್ವತಿ ಕಲಾ ಪ್ರಸಾರಕ ಸಂಘ ಅಭಿವೃದ್ಧಿಗಾಗಿ ಅವರು ಶ್ರಮಿಸಿದರು. ಯುವಜನರಲ್ಲಿ ಭಾರತೀಯ ಶಾಸ್ತ್ರೀಯ ಸಂಗೀತ ಸಂಸ್ಕೃತಿ ಹಾಗೂ ಭರತ ನಾಟ್ಯವನ್ನು ಜನಪ್ರಿಯಗೊಳಿಸಲು ಆರಂಭಿಸಿದ ಸ್ಪಿಕಮೆಕೆ ಸಂಸ್ಥೆಯನ್ನು ಬಂಟವಾಳಕ್ಕೆ ಕರೆದುತಂದ ಭಗೀರಥ ಅವರು.

ಧರ್ಮಶೃದ್ಧೆ ಅವರಲ್ಲಿ ಅಪಾರವಾಗಿತ್ತು ಬಂಟವಾಳದ ಶ್ರೀ ತಿರುಮಲ ವೆಂಕಟರಮಣ ಸ್ವಾಮಿ ದೇವಸ್ಥಾನದಲ್ಲಿ ನಡೆದ ಸಹಸ್ರ ಕುಂಭಾಭಿಷೇಕ ಶ್ರೀ ಗಾಯತ್ರಿಜಪ ಯಜ್ಞ ಮತ್ತು ಶ್ರೀ ಲಘು ವಿಷ್ಣು ಹವನ ಕಾರ್ಯ ಕ್ರಮಗಳನ್ನು ಸಂಘಟಿಸುವಲ್ಲಿ ಇವರದೇ ಪ್ರಮುಖ ಪಾತ್ರ ಶಿವಮೊಗ್ಗಾದ ಗೌಡಸಾರಸ್ವತ ಕಲ್ಯಾಣ ಮಂದಿರಕ್ಕೆ ನೂತನ ಭೋಜನ ಶಾಲೆಯನ್ನು ನಿರ್ಮಿಸುವಲ್ಲಿ ಇವರ ಕೊಡುಗೆ ಅಪಾರವಾಗಿದೆ. ಸಮಾಜಸೇವೆ ಶ್ರೀ ಬಸ್ತಿಯವರ ಬದುಕು ಬ್ಯಾಂಕ ಸಂಸ್ಥೆ ಸೇವಾಸಂಸ್ಥೆ ಹಾಗೂ ಧಾರ್ಮಿಕ ಸಂಸ್ಥೆಗಳ ಮೂಲಕ ಅವರು ಮಾಡಿದ ಸಮಾಜ ಸೇವೆ ಚಿರಸ್ಮರಣೀಯ. ಮೂಡಬಿದರೆಯಲ್ಲಿ ಸಾರ್ವಜನಿಕ ವಾಚನಾಲಯ, ಮಾಹಾತ್ಮ ಗಾಂಧಿಪಾರ್ಕ, ರೋಟರಿ ಇಂಗ್ಲೀಷ ಶಾಲೆ ಬಂಟ್ವಾಳದಲ್ಲಿ ರೋಟರಿ ಅಧ್ಯಕ್ಷರಾಗಿ ಅಜ್ಜಿಬೆಟ್ಟು ಶಾಲೆಯ ಕಟ್ಟಡ ನಿರ್ಮಾಣ ಇವು ಈ ಪ್ರದೇಶದ ಜನರ ಮನಸ್ಸಿನಲ್ಲಿ ಸದಾ ಹಸಿರಾಗಿ ಉಳಿಯುವ ಕಾರ್ಯಗಳು.

1995 ಇಸವಿ ಡಿಸೆಂಬರ 16, ಕೊಂಕಣಿ ಪ್ರೇಮಿಗಳಿಗೆ ಮರೆಯಲು ಸಾಧ್ಯವಾಗದ ದಿನವಾಗಿದೆ ಅದು ಪ್ರಥಮ ವಿಶ್ವ ಕೊಂಕಣಿ ಸಮ್ಮೇಳನಕ್ಕೆ ಸಾಕ್ಷಿಯಾದ ದಿನ. ವಿಶ್ವದೆಲ್ಲೆಡೆಯಿಂದ ಕೊಂಕಣಿ ಮಾತ್ರ ಭಾಷಿಕರು ಮಂಗುಳೂರಿನತ್ತ ಹರಿದು ಬಂದಿದ್ದರು ಡಿಸೆಂಬರ 16 ರಿಂದ 21 ರವರೆಗೆ ನಡೆದ ವಿಶ್ವ-ಕೊಂಕಣಿ ಸಮ್ಮೇಳನದ ಮುಖ್ಯ ಸಂಚಾಲಕರಗಿ ಶ್ರೀಯುತ ಬಸ್ತಿ ವಾಮನ ಶೈಣೈಯವರ ನೇತ್ರತ್ವದಲ್ಲಿ ಯಶಸ್ವಿಯಾಗಿತ್ತು, ಇಲ್ಲಿಂದ ಶ್ರೀಯುತರು ಕೊಂಕಣಿ ತೇರನ್ನು ಎಳೆಯುತ್ತ ಮುಂದುವರಿಸಿಕೊಂಡು ಹೋದರು. 1997-2001 ರವರೆಗೆ ಶ್ರೀಯುತರು ಕರ್ನಾಟಕ ಕೊಂಕಣಿ ಅಕಾಡೆಮಿಯ ಅಧ್ಯಕ್ಷರಾಗಿ ಸಮರ್ಥ ಕಾರ್ಯ ನಿರ್ವಹಿಸಿದ್ದಾರೆ.

ಈ ಪ್ರಥಮ ವಿಶ್ವಕೊಂಕಣಿ ಸಮ್ಮೇಳನ ಇವರ ಬದುಕಿನಲ್ಲಿ ಒಂದು ತಿರುವು ಬಂದಿತ್ತು. ಈ ಸಮ್ಮೇಳನದ ನಂತರ ಇವರ ಕೈಯಲ್ಲಿ ರೂ. 15 ಲಕ್ಷ ಖಾತೆಯಲ್ಲಿ ಉಳಿತಾಯವಾಗಿತ್ತು ಆ ಹಣವನ್ನು ಬೀಜ ಬಿತ್ತಿ ವಿಶ್ವಕೊಂಕಣಿ ಕೇಂದ್ರ ನಿರ್ಮಿಸುವ ದೂರದರ್ಶ ಯೋಜನೆ ಅವರಲ್ಲಿ ಮೂಡಿತು. ಈ ಚಿಂತನೆಗೆ ಪೂರಕವಾಗಿ ದೈವೇಚ್ಛೆಯಂತೆ ಶಕ್ತಿನಗರದಲ್ಲಿ 3 ಎಕರೆ ಜಾಗದಲ್ಲಿ ಇದನ್ನು ನಿರ್ಮಿಸುವದೆಂದು ನಿರ್ಧಾರವಾಯಿತು. ಇವರ ಯೋಜನೆಗೆ ದಿ. ಕೆ. ಕೆ. ಪೈ, ಶ್ರೀ ಜಗದೀಶ ಶೆಣೈ, ವೆಂಕಟೇಶ ಬಾಳಿಗಾ ಮುಂತಾದ ಮಹನೀಯರು ಜೊತೆಗೂಡಿ ಈ ಯೋಜನೆಯ ರೂಪುರೇಷೆ ತಯಾರಿಸಲ್ಪಟ್ಟಿತು.

ದಿನಾಂಕ 5 ಸಪ್ಟೆಂಬರ 2005 ರಂದು ಶಕ್ತಿನಗರ 3 ಎಕರೆ ಭೂಮಿಯಲ್ಲಿ ಪೂಜನ ಮಾಡಿ ಶಿಲಾನ್ಯಾಸ ಕಾರ್ಯಕ್ರಮ ನೆರವೇರಿಸಿತು. ಇದರಲ್ಲಿ ಕರ್ನಾಟಕದ ಮಾಜಿ ಮಂತ್ರಿಗಳಾದ

ಆರ್. ವ್ಹಿ. ದೇಶಪಾಂಡೆಯವರು ಕೇಂದ್ರಿಯ ಮಂತ್ರಿ ಶ್ರೀ ಆಸ್ಕರ ಫರ್ನಾಂಡಿಸ, ಕೊಂಕಣಿ ಭಾಷಾ ಮಂಡಳದ ಅಧ್ಯಕ್ಷರಾದ ಫಾ. ಎರಿಕ್ ಕಾಸ್ತಾ, ಶ್ರೀ ಬೆಲಸಿಯಸ್ ಎಂ. ಡಿಸೋಜಾ ಶಾಸಕರಾದ ಶ್ರೀ ಯೋಗೇಶ ಭಟ ಮುಂಬಯಿ, ಶ್ರೀ ಎಸ್.ಎಸ್. ರಾವ್ ಇವರ ಸಮ್ಮುಖದಲ್ಲಿ ಬೆಂಗಳೂರಿನ ಶ್ರೀ ಬಿಲ್ಡರ ದಯಾನಂದ ಪೈರವರು ಶಿಲಾನ್ಯಾಸ ಮಾಡಿದರು. ಹಾಗೂ ಹಲವಾರು ದಾನಿಗಳ ಆರ್ಥಿಕ ನೆರವಿನಿಂದ ದಯಾನಂದ ಪೈರವರು 25 ಲಕ್ಷ ಬೆಂಗಳೂರಿನ ಎನ್. ಆರ್. ಆಯ್. ಶ್ರೀ ರೋನಾಲ್ಡ ಕೊಲಾಸೋರವರು ಕೊಂಕಣಿ ರಿಸರ್ಚಸೆಂಟರಿಗಾಗಿರೊ 30 ಲಕ್ಷ ದಾನ ನೀಡಿದರು. ಕಾರ್ಪೋರೇಶನ ಬ್ಯಾಂಕದವರು ರೂ. 20ಲಕ್ಷ, ಕೆನರಾ ಬ್ಯಾಂಕರವರು 25ಲಕ್ಷ, ಅಭುದಾಬಿಯ ಶ್ರೀ ಎಸ್. ಎ. ರಾವರವರು 25 ಲಕ್ಷ, ಮಂಗಳೂರಿನಲ್ಲಿರುವ ಮಂಗಳೂರು ಗಣೇಶ ಬೀಡಿಯ ಮಾಲಕರಾದ ಶ್ರೀ ಎ. ಜಗನ್ನಾಥ ಶೈಣೈರವರು ರೂ. 25 ಲಕ್ಷ, ಎಸ್. ಎಲ್. ಶೇಠ ಜ್ಯುವಲರ್ಸ ರೂ. 5 ಲಕ್ಷ, ಸರಸ್ವತಿ ಬ್ಯಾಂಕಿನವರು ರೂ. 20 ಲಕ್ಷ ಹೀಗೆ ಬಹಳಷ್ಟು ಜನ ಧಾನ ಮಾದಿದ್ದು ಅಂದಾಜು 3.5 ಕೋಟಿಯಲ್ಲಿ ದಿನಾಂಕ 17-01-2009 ರಂದು ಗೋವಾದ ಮುಖ್ಯಮಂತ್ರಿಗಳಾದ ದಿಗಂಭರ ಕಾಮತರವರು ಉದ್ಘಾಟನೆ ಮಾಡಿದರು. ಆ ಸಮಯದಲ್ಲಿ ಗೋವಾದ ಮಾಜಿ ಮುಖ್ಯಮಂತ್ರಿ ಶ್ರೀ ಲಝಿನೋ ರಿಫಿ ಫೆಲೆರೊ ತರಂಗ ಪತ್ರಿಕೆಯ ಸಂಪಾದಕರಾದ ಸಂಧ್ಯಾ ಎಸ್. ಪೈ. ಉದ್ಯಮಿ ರೊನಾಲ್ಡ ಕೊಲಾಸೊ ಬೆಂಗಳೂರಿನ ಸೆಂಚುರಿ ಬಿಲ್ಡರ್ಸ್‌ನ ಪಿ. ದಯಾನಂದ ಪೈ. ಮುಂತಾದವರು ಉಪಸ್ಥಿತರಿದ್ದರು. ಇದೇ ಸಂದರ್ಭದಲ್ಲಿ ವಿಶ್ವಕೊಂಕಣಿ ಕೇಂದ್ರದ ರುವಾರಿಯಾದ ಬಸ್ತಿ ವಾಮನ ಶೈಣೈಯವರನ್ನು ಸನ್ಮಾನಿಸಲಾಯಿತು. ವಿಶ್ವಕೊಂಕಣಿ ಕೇಂದ್ರದ ವಿವಿಧ ಸಂಕೀರ್ಣಗಳಲ್ಲಿ ಸಂಶೋಧನಾ ಕೋಣೆ, ಅಡ್‌ಮಿನಿಸ್ಟ್ರಿಟಿವ್ ಬ್ಲಾಕ್, ವಾಚನಾಲಯ 125 ಜನರಿಗಾಗಿ ಮಿನಿ ಕನ್‌ವೆನ್ಷನ್ ಹಾಲ್, ವಸ್ತುಸಂಗ್ರಹಾಲಯ ಸಂವಾದ ಕೊಠಡಿ ಕೀರ್ತಿ ಮಂದಿರದಲ್ಲಿ ಮಹಾನ ಕೊಂಕಣಿಗರ ವರ್ಣಚಿತ್ರ ಮುಂತಾದವು ಇವೆ.

ಶ್ರೀ ಬಸ್ತಿಯವರ ಯಶಸ್ಸಿನಲ್ಲಿ ಹೆಚ್ಚಿನ ಪಾಲು ಸಲ್ಲಬೇಕಾದ ಅವರ ಧರ್ಮ ಪತ್ನಿಯವರಿಗೆ ಅವರು ಎಲ್ಲರ ಅಚ್ಚು ಮೆಚ್ಚಿನ ಸಾವಿತ್ರಿ ಮಾಯಿಯಾಗಿ ಮನೆಯ ಜವಾಬ್ದಾರಿಯನ್ನು ಪೂರ್ತಿ ತೆಗೆದುಕೊಂಡು ಮಕ್ಕಳು-ಅಥಿತಿಗಳು, ಕೆಲಸದವರು ಎಲ್ಲರನ್ನು ತಮ್ಮದೇ ಕರ್ತವ್ಯವೆಂದು ತಿಳಿದು ನಿರ್ವಹಿಸುತ್ತಿದ್ದರಿಂದ ವಾಮನರಾವವರು ಕೊಂಕಣಿ ಅಭಿಯಾನ ಬೊಂವ್ಡಿ ಹಾಗೂ ಹಲವಾರು ಅಂದೋಲನಗಳಲ್ಲಿ ವರ್ಷದ 300 ದಿನವೂ ದೇಶ ವಿದೇಶ ಕೊಂಕಣಿಗರನ್ನು ಭೇಟಿಯಾಗಿ ವಿಶ್ವಕೊಂಕಣಿ ಕೇಂದ್ರದ ಧನ ಸಹಾಯದ ಕಾರ್ಯವನ್ನು ಮಾಡಿಕೊಂಡು ಬಂದಿದ್ದರು.

ಕೊಂಕಣಿಯ ಕೆಲಸ ದೇವರ ಕೆಲಸ ದೇವರ ಸೇವೆ ಮಾಡುವುದು ನನ್ನ ಕರ್ತವ್ಯ ಎಂದು ನಂಬಿ ನಿಷ್ಠೆಯಿಂದ ಪ್ರೀತಿಯಿಂದ ಕೊಂಕಣಿಗರನ್ನೆಲ್ಲ ಒಟ್ಟುಗೂಡಿಸಿ ಜಗತ್ತಿನೆಲ್ಲೆಡೆ ನೆಲೆಸಿರುವ ಕೊಂಕಣಿಗರ ಮೂಲಬೇರು ನಮ್ಮ ದೇಶ ದಲ್ಲಿರುವುದನ್ನು ಅವರಿಗೆ ನೆನಪಿಸುವ ಕಾರ್ಯವನ್ನು ಅವರು ಪರದೇಶಗಳಿಗೆ ಹೋದಾಗಲೆಲ್ಲ ಮಾಡಿದ್ದಾರೆ. ಪರದೇಶದಲ್ಲಿರುವ ಕೊಂಕಣಿ ಕುಟುಂಬದ ಸದಸ್ಯರಿಗೆ ತಮ್ಮ ನೆಲ ಸಂಸ್ಕೃತಿ ಭಾಷೆ ಇದನ್ನೆಲ್ಲ ಪರಿಚಯಿಸುವ ಸಲುವಾಗಿ ಮಂಗಳೂರಿನಲ್ಲಿ ವಿಶ್ವ ಕೊಂಕಣಿ ಕೇಂದ್ರವನ್ನು ಸ್ಥಾಪಿಸಿ ಅದರ ಹಲವಾರು ಯೋಜನೆಗಳನ್ನು ಹಾಕಿ ಪೂರೈಸುತ್ತ ಸಾಗಿದ್ದಾರೆ.

ನವ್ಹೆಂಬರ 2009ರಲ್ಲಿ ಶ್ರೀ ಬಸ್ತಿ ವಾಮನ ಶೈಣೈಯವರು 75 ವರ್ಷ ಪೂರೈಸಿದ ಸಂದರ್ಭದಲ್ಲಿ ಕೊಂಕಣಿಭಾಷಿಕ ವಿವಿಧ ಸಮುದಾಯದ ಗಣ್ಯರೆಲ್ಲ ಸೇರಿ ಅವರ ಹುಟ್ಟುಹಬ್ಬವನ್ನು ಸಾರ್ವಜನಿಕವಾಗಿ "ಎಪ್ಪತ್ತೈದರ ಸಂಭ್ರಮ" ಎಂಬ ಹೆಸರಿನ ಸ್ಮರಣ ಸಂಚಿಕೆಯನ್ನು ಹೊರತಂದಿದ್ದಾರೆ. ಆ ಸಮಿತಿಯಲ್ಲಿ ಅಧ್ಯಕ್ಷರು ಡಾ. ದಯಾನಂದ ಪೈ., ಉಪಾಧ್ಯಕ್ಷರು ಶ್ರೀಮತಿ ಸಂಧ್ಯಾ ಪೈ. ಶ್ರೀ ಎಸ್. ಎಮ್. ರಾವ್, ಶ್ರೀ ವಸಂತ ಭಟ, ಶ್ರೀ ವ್ಹಿ ಆರ್. ಕಾಮತ, ಶ್ರೀ ಜೊನ್ಸ, ಡಿಸಿಲ್ವಾ ಕುಡುಪಿ ಜಗದೀಶ ಶೆನಾಯ ಶ್ರೀ ಉದಯ ಎಲ್. ಬೇಂದ್ರೆ ಶ್ರೀ ಬಿ. ಆರ್. ಭಟ, ಫಾ ಏರಿಕಕ್ರಾಸ್ತಾ, ಶ್ರೀ ಗಿಲ್ಬರ್ಟ ಡಿಸೋಜಾ , ಶ್ರೀ ರಂಗನಾಥ ಶೇಠ, ಶ್ರೀ ಕೆ. ಜಿ. ಮಲ್ಯಾ, ಶ್ರೀ ರಂಗನಾಥ ಬಾಳಿಗಾ, ಕೆ. ಮೋಹನ ಪೈ. ಶ್ರೀ ಪ್ರದೀಪ ಜಿ. ಪೈ. ಶ್ರೀ ವಿಯಾಜ್ ಡಿಸೋಜಾ. ಶ್ರೀ ಕುಂಬಳೆ ನರಸಿಂಹ ಪ್ರಭು, ಶ್ರೀ ಗಣಪತಿ ಪೈ. ಇಂಥ ಅಗ್ರಮಾನ್ಯ ಗಣ್ಯರು ಸೇರಿ ವಿಜ್ರಂಭಣೆಯಿಂದ ಆಚಾರಿಸಿದರು.

ವಿಶ್ವಕೊಂಕಣಿ ಕೇಂದ್ರದಲ್ಲಿ ವಿವಿಧ ಭಾಗಗಳಿವೆ ವರ್ಲ್ಡ ಇನಸ್ಟಿಟ್ಯೂಟ್ ಆಫ್ ಕೊಂಕಣಿ ಲ್ಯಾಂಗವೇಜ್, ಮಿನಿ ಕನ್‌ವೆನ್ಶನ್ ಥೇಟರ್, ಎಡ್ಮಿನಿಸ್ಟ್ರೇಟಿವ್ ಬ್ಲಾಕ್, ವರ್ಲ್ಡ ಕೊಂಕಣಿ ಮ್ಯೂಜಿಯಂ, ವರ್ಲ್ಡ ಕೊಂಕಣಿ ಲೈಬ್ರರಿ ಹಾಲ್ ಆಫ್, ಫೇಮ್ ಸೆಮಿನಾರ್ ಹಾಲ್, ಕಳೆದ 11 ವರ್ಷದಿಂದ ತರಬೇತಿ ಕಾರ್ಯಗಾರಗಳು ಸಾಂಸ್ಕೃತಿಕ ಪ್ರದರ್ಶನಗಳು ಜರುಗುತ್ತಲಿವೆ. ಇಂದು 85 ವರ್ಷ ವಯೋವೃದ್ಧರಾಗಿದ್ದರೂ ವಿಶ್ವಕೊಂಕಣಿ ಕೇಂದ್ರದ ಅಭಿವೃದ್ಧಿಗಾಗಿಯೇ ಸದಾ ಚಿಂತಿಸುತ್ತ ವಿವಿಧ ಹೊಸಹೊಸ ಯೋಜನೆಗಳೊಂದಿಗೆ ಸಾಗಿದ್ದಾರೆ. ಕೊಂಕಣಿ ಕಲೆ, ಸಾಹಿತ್ಯ, ಸಂಸ್ಕೃತಿಗಾಗಿ ವಿವಿಧ ಕ್ಷೇತ್ರದಲ್ಲಿ ಸಾಧಿಸಿದ ಗಣ್ಯರನ್ನು ಪ್ರತಿವರ್ಷ ವಿಶ್ವಕೊಂಕಣಿ ಅವಾರ್ಡ ಹೆಸರಿನಿಂದ ಸನ್ಮಾನಿಸುತ್ತ ಬಂದಿದ್ದಾರೆ. ವಿಮಲಾ ಪೈ. ವಿಶ್ವ ಕೊಂಕಣಿ ಜೀವಮಾನ ಸಾಧನೆಗಾಗಿ ಪುರಸ್ಕಾರ ನೀಡುತ್ತ ಬಂದಿದ್ದಾರೆ.

ವಿಶ್ವಕೊಂಕಣಿ ಕೇಂದ್ರವು ಜಗತ್ತಿನಲ್ಲಿರುವ ಎಲ್ಲ ಕೊಂಕಣಿಗರ ತವರು ಮನೆಯಾಗಿದ್ದು ಭಾರತದ ವಿವಿಧ ರಾಜ್ಯದ ಹಾಗೂ ವಿಶ್ವದ ವಿವಿಧ ದೇಶದಲ್ಲಿ ನೆಲೆಸಿರುವ ಕೊಂಕಣಿಗರು ಅಭಿಮಾನದಿಂದ ಇಲ್ಲಿಗೆ ಒಂದು ಸಲವಾದರೂ ಬಂದು ಸಂದರ್ಶನ ಪಡೆಯುತ್ತಿದ್ದಾರೆ. ಈ ವಿಶ್ವ ಕೊಂಕಣಿ ಕೇಂದ್ರವು ವಿವಿಧ ಭಾಷಿಕರಿಗೆ ಒಂದು ಮಾದರಿಯಾಗಿದೆ. ಎನ್ನಬಹುದು. ವಿಶ್ವಕೊಂಕಣಿ ಕೇಂದ್ರ ಬಸ್ತಿ ವಾಮನ ಶೆಣೈಯವರ ದೂರದೃಷ್ಟಿಯಂತ ಭಾರತೀಯ ಪ್ರಾಚೀನ ಸಂಸ್ಕೃತಿ ನಾಲಂದ ವಿಶ್ವವಿದ್ಯಾಲಯದ ಒಂದು ಪರಿಕಲ್ಪನೆ ಇದೆ. ಈ ಕೊಂಕಣಿಯ ಮಹಾನ ಸಾಧಕರು ನೂರಾರು ವರ್ಷ ಬಾಳಿಕೆ ಕೊಂಕಣಿ ಅಭಿವೃದ್ಧಿಯಾಗಲಿ ದೇವರು ಅವರಿಗೆ ಉತ್ತಮ ಆಯುಷ್ಯ ಆರೋಗ್ಯ ನೀಡಲೆಂದು ಹಾರೈಕೆ.

◆◆◆◆

# 22. ಮಾಂಡ ಸೊಭಾಣ ಸಂಸ್ಥಾಪಕ ಏರಿಕ್ ಓಝ್ಹಾರಿಯೊ ಮಂಗಳೂರು

■ ಡಾ. ವಸಂತ ಬಾಂದೇಕರ-ಕಾರವಾರ

ಕರ್ನಾಟಕದ ಮಂಗಳೂರಿನ ಶಕ್ತಿನಗರದ ಮುಕಾಳೆಯಲ್ಲಿ ಕಲಾಂಗಣದಲ್ಲಿ ಮಾಂಡಸೋಭಾಣ ಎಂಬ ಸಂಸ್ಥೆ ಕಳೆದ 35 ವರ್ಷದಿಂದ ಕೊಂಕಣಿ ಕಲಾ-ಸಾಹಿತ್ಯ-ಸಂಸ್ಕೃತಿ ರಕ್ಷಣೆ ಹಾಗೂ ಅಭಿವೃದ್ಧಿಗಾಗಿ ನಿರಂತರವಾಗಿ ಕಾರ್ಯನಿರ್ವಹಿಸುತ್ತ ಬಂದಿದೆ ಇಂದು ಕರ್ನಾಟಕವಲ್ಲದೇ ಮಾಂಡಸೋಭಾಣ ಸಂಸ್ಥೆ ವಿಶ್ವದ ವಿವಿಧ ಭಾಗದಲ್ಲೂ ಪ್ರಸಿದ್ಧಿಯಾಗಿದೆ. ಇದರ ಕನಸುಗಾರರೂ ಜನ್ಮದಾತರೂ ಅದಕ್ಕಾಗಿ ತಮ್ಮ ಬದುಕನ್ನೇ ಪಣವಾಗಿಟ್ಟವರೇ ಶ್ರೀ ಎರಿಕ್ ಅಲೆಕ್ಸಾಂಡರ ಓರಛಾರಿಯೊರವರು. ಇಂದು ತಮ್ಮ 71ನೇ ವರ್ಷದಲ್ಲೂ ಪಾದರಸದಂತೆ ಅದರ ಶ್ರೇಯಸ್ಸಿಗಾಗಿ ಹಗಲು ರಾತ್ರಿ ದುಡಿಯುತ್ತಿದ್ದಾರೆ.

ಈ ಎರಿಕ ಅಲೆಕ್ಸಾಂಡರ ಓರಛಾರಿಯವರ ಜನ್ಮ ದಿನಾಂಕ 18-05-1949 ರಂದು ಮಂಗಳೂರಿನ ಬಡಕುಟುಂಬದಲ್ಲಿ ಜನನವಾಯಿತು. ಸರಿಯಾಗಿ ಉಣ್ಣಲು ತಿನ್ನಲು ಆಹಾರದ ಕೊರತೆ, ಉಡಲು ಬಟ್ಟೆಯ ಕೊರತೆ ಇಂತಹದರಲ್ಲಿಯೇ ಸೆಂಟ್ ಜೋಸೆಫ್ ಅಸಲಮ ಎಲಿಮೆಂಟರಿ ಶಾಲೆಯಲ್ಲಿ 6ನೇ ವರ್ಗದವರೆಗೆ ಕಲಿತರು. ಶಾಲೆಯಲ್ಲಿ ಅತ್ಯುತ್ತಮ ಜಾಣ ವಿದ್ಯಾರ್ಥಿಯಾಗಿದ್ದರು. 6ನೇ ವರ್ಗದ ನಂತರ ಕಾನಯಾದ ಸಂತ ರೀಟಾ ಹೈಯರ್ ಪ್ರೈಮರಿ ಸ್ಕೂಲಿಗೆ ಸೇರ್ಪಡೆಯಾದರು. ಚಿಕ್ಕವರಿದ್ದಾಗಲೇ ಅವರಿಗೆ ಸಂಗೀತದ ಒಲವು ಹಾಡುಗಾರಿಕೆ ನಾಟಕದಲ್ಲಿ ಪಾತ್ರಗಳ ಅಭಿರುಚಿ ಇತ್ತು. ಎರಿಕರವರ ಬದುಕಿನಲ್ಲಿ ಒಂದು ತಿರುವು ಬಂದಿತ್ತು, ಅದೇನೆಂದರೆ, ಧರ್ಮಗುರುವಾಗಿ ಜನರ ಸೇವೆ ಮಾಡುವುದು. ಅದಕ್ಕಾಗಿಯೇ 1800 ಕಿ.ಮೀ. ದೂರದ ಮಂಗಳೂರಿನಿಂದ ಅಜಮೇರದ ಸಂತ ಥೆರೆಸಾ ಮೈನರ ಸೆಮಿನರಿಯಲ್ಲಿ ವಿದ್ಯಾರ್ಥಿಯಾಗಿ ಸತತ 5 ವರ್ಷ ಕಲಿಯುವ ಅವಕಾಶ ದೊರೆಯಿತು. ಆದರೆ ಬಡಕುಟುಂಬದ ಇವರಿಗೆ ಹಣಕಾಸಿನ ದೃಷ್ಟಿಯಿಂದ ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗಿತ್ತು. ಪ್ರತಿ ಸಂಜೆ ಎಲ್ಲಾ ವಿದ್ಯಾರ್ಥಿಗಳಿಗೆ ಧರ್ಮದ ಪಾಠದ ಜೊತೆಗೆ ಒಂದು ತಾಸಿನ ನೃತ್ಯ ಸಂಗೀತ, ಗಾಯನ ಸ್ಪರ್ಧೆಗಳಡುತ್ತಿದ್ದರು, ಅದರಲ್ಲಿ ಎರಿಕ ಮುಂಚೂಣಿಯಲ್ಲಿದ್ದರು. ಮುಖ್ಯವಾಗಿ ಅವರಿಗೆ ಅಲ್ಲಿ ಲ್ಯಾಟಿನ ಭಾಷೆ ಕಲಿಯಲು ಹಾಗೂ ಇಂಗ್ಲೀಷ ಸುಧಾರಣೆಗೆ ಅನುಕೂಲವಾಯಿತು ಇದೇ ಸಂದರ್ಭದಲ್ಲಿ ಚಲನಚಿತ್ರ ನಟ ನಜರುದ್ದೀನ ಶಾ ಜೊತೆಗೆ ಒಂದು ನಾಟಕದಲ್ಲಿ ಪಾತ್ರ ನಿರ್ವಹಿಸುವ ಸುಸಂಧಿ ದೊರೆಯಿತು. ಹಾಗೂ ರಾಜಸ್ಥಾನದಲ್ಲಿ ಅಲ್ಲಿಯ ಲೋಕಸಂಗೀತ ಕಲಿಯಲುಅವಕಾಶ ಲಭಿಸಿತು. 1965ರಲ್ಲಿ ಭಾರತ-ಪಾಕಿಸ್ತಾನ ಯುದ್ಧವಾದಾಗ ಮರಳಿ ಮಂಗಳೂರಿಗೆ ಬಂದು ಸೆಂಟ ಅಲೇಸಿಸ್ ಹೈಸ್ಕೂಲದಿಂದ ಮೆಟ್ರಿಕ ಹಾಗೂ ಕಾಲೇಜದಿಂದ ಬಿ.ಕಾಂ. ಕಲಿಯತೊಡಗಿದರು. ಕಾಲೇಜಿನಲ್ಲಿದ್ದಾಗ ಆಲ್. ಇಂಡಿಯಾ ಕ್ಯಾಥೋಲಿಕ ಯುನಿವರ್ಸಿಟಿ ಫೇಡರೆಶನ್‌ದ ಸದಸ್ಯರಾಗಿ ಕಾಲೇಜುವತಿಯಿಂದ ಹಲವಾರು ರಾಷ್ಟ್ರೀಯ ಸೆಮಿನಾರದಲ್ಲಿ ಹೋಗಿ ಮಿಂಚಿದರು. ಕಾಲೇಜಿನಲ್ಲಿ ಉತ್ತಮ ಗಾಯಕರಾಗಿ ಹೊರಹೊಮ್ಮಿದರು ಆಗ ಪ್ರೇಮಕುಮಾರ ನಂದಿಗದ್ದಾ ಎಂಬ ಕೊಂಕಣಿ ಗಾಯಕ ಹಾಗೂ ಸಂಗೀತಕಾರ ವಿಲ್ಪಿ ರೆಮಿಂಟಸ್‌ರವರು ಕ್ಲಾಸಿನ ಮಿತ್ರರಾಗಿದ್ದರು. ಹೀಗಾಗಿ ಕಾಲೇಜು ಅಂತರಕಾಲೇಜು ಕಾಂಪಿಟೇಷನ್‌ದಲ್ಲಿ ಭಾಗವಹಿಸಿ ಪ್ರಶಸ್ತಿ ಬಾಚಿದ್ದರು.

ಎರಿಕ ಓರಛಾರಿಯೊ ಶಾಲೆಯಲ್ಲಿದ್ದಾಗಲೂ, ಅಜಮೀರದಲ್ಲಿದ್ದಾಗಲೂ ಯಾವುದೇ ನಾಯಕತ್ವದ ಲಕ್ಷಣ ಹೊಂದಿರಲಿಲ್ಲ. ಆದರೆ ಮಂಗಳೂರಿನ ಸಂತ ಅಲೋಸೊಯಸ್ ಕಾಲೇಜು ವಿದ್ಯಾರ್ಥಿಯಾಗಿದ್ದಾಗ ಮಾತ್ರ ಯಾವುದೇ ಸಮಸ್ಯೆಗಳಾದರೆ, ವಿದ್ಯಾರ್ಥಿಗಳಿಗೆ ಅನ್ಯಾಯವಾದರೆ ಅದರ ನೇತ್ರತ್ವ ವಹಿಸಿ ಆ ಸಮಸ್ಯೆಯನ್ನು ಪೂರ್ತಿಯಾಗಿ ನೆರವೇರಿಸುವ ಸಾಮರ್ಥ್ಯ ಹೊಂದಿದ್ದರು. ಅವರ ಕಾಲೇಜಿನ ಒಬ್ಬ ವಿದ್ಯಾರ್ಥಿಗೆ ಒಂದು ಪ್ರೈವೇಟ್ ಸಂಸ್ಥೆಯು ಬಸ್ಸು ಹಾಯಿಸಿ ನಿಲ್ಲದೇ ಹೋಯಿತು. ಆಗ ಎರಿಕ್ ಆಶಾಲಾ ಸಂಘದ ಸದಸ್ಯನಾಗಿದ್ದರಿಂದ ತಕ್ಷಣ ಅವನು ಘಟನ ಸ್ಥಳಕ್ಕೆ ಹೋಗಿ, ಕಾಲೇಜು ಮಕ್ಕಳನ್ನು ಸೇರಿಸಿ ಆ ಅನ್ಯಾಯದ ವಿರುದ್ಧ ಬಲವಾಗಿ ಖಂಡನೆ ಮಾಡಿದ್ದರಿಂದ ಇವರಿಗೆ ಸರಕಾರಿ ಕಾಲೇಜು ವಿದ್ಯಾರ್ಥಿಗಳು ಸಹಕಾರ ನೀಡಿ ಮೋಲಿಸ ಲಾಠಿ ಚಾರ್ಜ, ಗೋಲಿಬಾರ ಆಗಿ ಒಬ್ಬನ ಮರಣವೂ ಆಯಿತು.

1971ರಲ್ಲಿ ಇಂದಿರಾಗಾಂಧಿ ಪ್ರಧಾನಮಂತ್ರಿಯಾಗಿದ್ದ ಸಂದರ್ಭದಲ್ಲಿ ಪಶ್ಚಿಮ ಬಂಗಾಲದ ಗಡಿಯಲ್ಲಿ ನೂರಾರು ನಿರಾಶ್ರಿತರ ತಾಣಗಳನ್ನು ಮಾಡಲಿದ್ದು ಅವರ ಸೇವೆಗಾಗಿ ಯುವಕರಿಗಾಗಿ ಬಿ.ಬಿ.ಸಿ ರೇಡಿಯೋ ವಾರ್ತೆ ಮೂಲಕ ಸೇವೆಮಾಡಲಿಚ್ಚಿಸುವವರಿಗೆ ಆಹ್ವಾನವಿತ್ತು ಅದರಿಂದ ಏರಿಕ್‌ರವರು ಉತ್ತೇಜಿತರಾದರು. ಕಾರಣ ಹಿಂದೆ ಶಾಲೆಯಲ್ಲಿದ್ದಾಗ, ಭಾರತದ ಸೈನ್ಯಸೇರಿ ಸೇವೆ ಮಾಡುವ ಹಂಬಲವಿತ್ತು ಆದರೆ ಕಾರಣಾಂತರದಿಂದ ಅದು ಇಡೇರಲಿಲ್ಲ. ಆದ್ದರಿಂದ ಬಂಗಾಲದ ಗಡಿಯಲ್ಲಿರುವ ನಿರಾಶ್ರಿತರ ಸೇವೆಗೆ ಅವಕಾಶ ದೊರೆಯಿತು. ಹಾಗೂ ಬಿಷೊಫ ರೆ. ಫಾ. ಹೆನರಿ ಡಿಸೋಜಾರವರ ನೇತ್ರತ್ವದಲ್ಲಿ ಬಂಗಾಲದ ಗಡಿಯಲ್ಲಿರುವ ಮಾಲಿಯಾ ಪೋಟ ಎಂಬ

ನಿರಾಶ್ರಿತರ ಶಿಭಿರದಲ್ಲಿ ಎರಿಕ್‌ರವರಿಗೆ ಮುಖಾಮುಖಿಯಾಗಿ ಹಸಿದವರ, ನಿಸ್ತೇಜರ, ಅಪಘಾತವಾದವರ ಮನೆಮಠ ಕಳೆದುಕೊಂಡವರ ದರ್ಶನವಾಯಿತು. ಹಾಗೂ ಅವರ ಸೇವ ಮಾಡುವ ಸೌಭಾಗ್ಯ ದೊರೆಯಿತು. ಯುರೋಪ ಹಾಗೂ ಅಮೇರಿಕಾದಿಂದ ಹಲವಾರು ಸಮಾಜ ಸಂಘಟನೆಗಳು ಅಲ್ಲಿ ಬಂದು ಸೇವಾ ಕಾರ್ಯದಲ್ಲಿ ತೊಡಗಿಸಿಕೊಂಡರು. ಆದರೆ ಎರಿಕ್‌ರವರ ಗಮನಕ್ಕೆ ಒಂದು ಮಹತ್ವದ ವಿಷಯ ಗಮನಕ್ಕೆ ಬಂದಿತು. ಅದೇನೆಂದರೆ ಧಾರ್ಮಿಕ ಕ್ಷೇತ್ರವಾದ ಚರ್ಚಿನಲ್ಲೂ ಸಹಿತ ಲಂಚಕೋರತನ ನಡೆಯುವುದೆಂದು. ಉತ್ತಮ ಹಾಲಿನ ಡಬ್ಬಗಳು, ಬೋರ್ನ್‌ವಿಟಾ ಡಬ್ಬ, ಕಂಬಳ ಶಾಲುಗಳು ದಾನವಾಗಿ ಬಂದ ವಸ್ತುಗಳು ಕಾಳು ಸಂತೆಯಲ್ಲಿ ಮಾರಾಟ ಮಾಡುವುದನ್ನು ಕಂಡ ಎರಿಕ್‌ನು ಸಹಿಸಲಾರ, ಅನ್ಯಾಯದ ವಿರುದ್ಧ ಹೋರಾಡಿ ಸಂಬಂಧಪಟ್ಟವರಿಗೆ ತಕ್ಕ ದಂಡ ಸಿಗುವಂತೆ ಮಾಡಿದರು. ಅಲ್ಲಿ ನಿರಾಶ್ರಿತರ ಶಿಭಿರದ $1^1/_2$ ತಿಂಗಳ ಪೂರ್ತಿ ಕೆಲಸ ಮುಗಿದ ನಂತರ ಮರಳ ಮಂಗಳೂರಿಗೆ ಬಂದರು ಹಾಗೂ ನಿರುದ್ಯೋಗಿಯಾದ ಅವರು ಒಂದು ಕ್ಯಾಶು (ಗೋಡಂಬಿ) ಕಂಪನಿಯಲ್ಲಿ ಲೆಕ್ಕ ಪತ್ರ ಬರೆಯುವ ಕೆಲಸಕ್ಕೆ ಸೇರಿದರು. ಅಂದು ತಿಂಗಳ ಪಗಾರ 60ರೂಪಾಯಿ ಮಾತ್ರ. ಅದರಲ್ಲೂ ಹಣ ಉಳಿಸಲು ಕಿಲೋ ಮೀಟರ ಕಾಲ್ನಡಿಗೆಯಲ್ಲೇ ಓಡುತ್ತಿದ್ದರು.

ಮುಂದೆ ಒಂದು ಸ್ಥಿರವಾದ ನೌಕರಿ ಕರ್ನಾಟಕ ಬ್ಯಾಂಕಿನ ಕಾರ್ಕಳ ಶಾಖೆಯಲ್ಲಿ ಪ್ರಥಮ ಸೇವೆ ಮಾಡಲು ಅವಕಾಶ ದೊರೆಯಿತು. ಹಾಗೂ ಕರ್ನಾಟಕ ಬ್ಯಾಂಕ ನೌಕರರ ಸಂಘದ ಖಾಜಾಂಚಿಯಾಗಿಯೂ ಆಯ್ಕೆಯಾದರು ಹಾಗೂ ಒಂದು ವರ್ಷದ ನಂತರ ಮುಂಗಳೂರು ಕೇಂದ್ರ ಕಛೇರಿಗೆ ವರ್ಗಾವಣೆಗೊಂಡರು.

ಒಂದು ದಿನ ಮುಂಗಳೂರಿನಲ್ಲಿ ಒಂದು ದಾರಿ ದಾಟುವಾಗ ಎರಿಕರ ದೃಷ್ಠಿಗೆ ಎದುರಿನ ಕಟ್ಟಡದ ಹತ್ತಿರ ಬಹಳಷ್ಟು ಜನ ಹಾಗೂ ಅದರ ಸೇರಿದ್ದು ಕಂಡಿತು, ಮುಂದೆ ಹೋಗಿ ನೋಡಿದಾಗ ತನ್ನ ತಂದೆ ಹಾಗೂ ಅವರ ಕೆಲವು ಮಿತ್ರರಿದ್ದರು. ಅವರೆಲ್ಲ ಮೌನ ಮೆರವಣಿಗೆ ಮಾಡುತ್ತಿದ್ದಾರೆ. ಆಗ ಎರಿಕರವರಿಗೆ ಅರ್ಥವಾಯಿತು, ಅವರೆಲ್ಲ ಜೆಪ್ಪು ವರ್ಕಶಾಪ್ ಕಾರ್ಮಿಕರೆಂದು. ಅವರಿಗೆ ಕಡಿಮೆ ವೇತನ ನೀಡಿದ್ದಲ್ಲದೇ ಅವರ ಜೊತೆ ಅಮಾನವೀಯ ವರ್ತನೆ ಆಡಳತದವರು ಮಾಡುತ್ತಿದ್ದಾರೆಂದು. ಅದಕ್ಕಾಗಿ ಅವರು ಹೋರಾಡುತ್ತಿದ್ದಾರೆಂದು ಅರಿವಾಯಿತು. ಆಗ ಇವರೆಲ್ಲ ಸೇರಿ ಎರಿಕ್‌ನ ಹತ್ತಿರ ಅಳಲನ್ನು ತೋಡಿಕೊಂಡು ಅವನನ್ನು ತಮ್ಮ ಈ ಸಮಸ್ಯೆಗೆ ನಾಯಕನಾಗಿ ಹೋರಾಡಲು ವಿನಂತಿಸಿದರು. ಅದಕ್ಕೆ ಎರಿಕ್ ಒಪ್ಪಿಕೊಂಡರು. ಇಂದು ಎರಿಕ್ ಅಲೆಕ್ಸಾಂಡರ ಎಂದು ಹೆಸರಿಟ್ಟಿದ್ದು ಸಾರ್ಥಕವಾಯಿತು ಕಾರಣ (ಎರಿಕ್ ಎಂದರೆ ಮನಸ್ಸನ್ನು ಆಳುವವ ಅಲೆಕ್ಸಾಂಡರ ಎಂದರೆ, ಜನರನ್ನು ರಕ್ಷಿಸುವ) ಎರಿಕ್‌ರವರು ತಮ್ಮ ಬ್ಯಾಂಕ ನೌಕ-ರಿಯ ಜೊತೆಗೆ ವಿವಿಧ ಸಂಘಟನೆಗಳ ನಾಯಕ (ಲೀಡರ) ರಾಗಿ ಕಾರ್ಯನಿರ್ವಹಿಸ ಹತ್ತಿದರು.

ಎರಿಕರವರಿಗೆ ಬಾಲ್ಯದಿಂದಲೇ ಸಂಗೀತದ ಹುಚ್ಚು ಹೀಗಾಗಿ ಅವರ ಬದುಕಿನಲ್ಲಿ ಬಾಳಸಂಗಾತಿಯಾಗಿ ಬಾಲ್ಯದಿಂದಲೇ ಉತ್ತಮ ಗಾಯಕಿಯಾಗಿ ಹಲವಾರು ಪ್ರಶಸ್ತಿ ಪಡೆದ ಕೊಂಕಣಿ ಆಬೊಲೆ ಎಂಬ ಬಿರುದಾಂಕಿತ ಪ್ರಶಸ್ತಿಯೂ ಅವಳಿಗೆ ದೊರಕಿದೆ. ಅವಳೇ ಜಾಯಸಿ ಎಂಬುವಳು ಡಿಸೆಂಬರ 1974 ರಂದು ಅವಳ ಜೊತೆಗೆ ಮದುವೆಯಾಯಿತು. ಅವಳು ಉತ್ತಮ ಆಚಾರ ವಿಚಾರ ಹೊಂದಿದ ಅವಳು ಎರಿಕರವರ ಗುಣ ಧರ್ಮಕ್ಕೆ ಹೇಳ ಮಾಡಿಸಿದ ಸಂಗಾತಿಯಾಗಿದ್ದಳು. ಎರಿಕರವರ ಸಂಘರ್ಷದ ಬದುಕಿನಲ್ಲಿ ಹಲವಾರು ಕವಿ-ಸಾಹಿತಿ, ಗಾಯಕರು, ಸಂಗೀತಕಾರರು ಭೇಟಿಯಾದರು. ಎರಿಕರವರು ಮಾತ್ರಭಾಷೆ ಕೊಂಕಣಿಗಾಗಿಯೇ ಹೆಚ್ಚು ಶ್ರಮಿಸುತ್ತಿದ್ದರು. ಅದೇ ಸಂದರ್ಭದಲ್ಲಿ ಅವರಿಗೆ ಪ್ರಸಿದ್ಧ ವಿಚಾರವಾದಿ, ನಾಟಕಕಾರ, ಗೀತಕಾರ ಹಾಗೂ ಕೊಂಕಣಿಗಾಗಿ ಸದಾ ದುಡಿಯುತ್ತಿರುವ ಸಾಹಿತಿ ಚಾಫ್ರಾ ಡಿಕೊಸ್ತಾರವರ ಪರಿಚಯವಾಯಿತು. ಸರಳ ವ್ಯಕ್ತಿತ್ವದ ಅವರ ಗೆಳೆತನದಿಂದ ಎರಿಕರವರ ಸಾಹಿತ್ಯ, ಸಂಗೀತ ಸಂಯೋಜನೆ ಬೆಳೆಯಲು ಅನುಕೂಲವಾಯಿತು. ಆದರೆ ಚಾಫ್ರಾರವರು ತಮ್ಮ ಚಿಕ್ಕ ವಯಸ್ಸು 61 ಇದ್ದಾಗ 1992 ಡಿಸೆಂಬರಲ್ಲಿ ಮೃತರಾದರು. ಇದು ಎರಿಕರವರ ಬದುಕಿಗೆ ಕೊಂಕಣಿ ಕ್ಷೇತ್ರಕ್ಕೂ ದೊಡ್ಡ ಘಾತವೆಂದು ಹೇಳಬಹುದು.

ಎರಿಕರವರು ಹುಟ್ಟು ಯಾವುದೇ ಸಂಗೀತ ಕಲಿತವರಲ್ಲ, ಆದರೆ ಅವರು ಇಂದು ಪ್ರಸಿದ್ಧ ಸಂಗೀತ ಸಂಯೋಜಕರೂ, ಗಾಯಕರೂ ಆಗಿ ಸುಮಾರು ಒಂದು ಸಾವಿರ ಗೀತಗಳನ್ನು ಸಂಯೋಜನೆ ಮಾಡಿದ್ದಾರೆ. 16 ಆಡಿಯೋ ಅಲ್ಬಮ್ 4 ವಿಡಿಯೋ ಆಲ್ಬಮ್ 8 ಪಬ್ಲಿಕೇಷನ್‌ಗಳು ಕಂಡಿವೆ.

♦♦♦♦

# 23. ಮಾಂಡಸೋಭಾಣ ಸಂಸ್ಥೆಯ ಜನ್ಮ

■ ಡಾ. ವಸಂತ ಬಾಂದೇಕರ-ಕಾರವಾರ



ಕರ್ನಾಟಕ ಕೊಂಕಣಿ ಭಾಷೆ ಸಾಹಿತ್ಯ ಸಂಗೀತ ಹಾಗೂ ಜನಪದ ಕಲೆಯ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಲು ಶ್ರೀ ಎರಿಕ ಓರಭಾರಿಯವರ ನೇತ್ರತ್ವದಲ್ಲಿ ೨85ರಲ್ಲಿ ಶ್ರೀ ಚಾಪ್ರಾಡಿಕೊಸ್ಟಾ ಶ್ರೀ ಮೆಲ್ವಿನ್ ರೊಡ್ರಿಗಿಸ್ ಮುಂತಾದವರು ಸೇರಿ ಮಂಗಳೂರಿನ ಶಕ್ತಿನಗರದ ಮಕಾಳೆಯಲ್ಲಿ ಕಲಾಂಗಣವನ್ನು ನಿರ್ಮಿಸಿದರು. ಎರಿಕರವರು ಕೊಂಕಣಿ ಭಾಷೆ ಸಾಹಿತ್ಯ ಸಂಗೀತದ ಅಭಿವೃದ್ಧಿಗಾಗಿ ನಿರಂತರವಾಗಿ (1985-2020) 35 ವರ್ಷದಿಂದ ತಮ್ಮ ಬದುಕನ್ನು ಅದರ ಏಳ್ಗೆಗಾಗಿ ಅರ್ಪಿಸಿದ್ದಾರೆ, ಅದರಲ್ಲಿ ಅವರ ಕೆಲ ಮೈಲುಗಲ್ಲುಗಳು -

– ಕೊಂಕಣಿ ಜಾಗೃತಿಗಾಗಿ ಕಲಾತಿರುಗಾಟ ಸಂಗೀತ ತಂಡದೊಂದಿಗೆ -

* 1995 ಭೋವಂಡಿ ಸಪ್ಟೆಂಬರ 9 ರಿಂದ ನವ್ಹೆಂಬರ 12 75 ದಿವಸದಲ್ಲಿ ಭಾರದಲ್ಲಿ 72 ಪ್ರಯೋಗಗಳು

* 1996 ಜುಲೈ 12 ರಿಂದ ಅಗಸ್ಟ 20 (40 ದಿನ) ಯು.ಎಸ್.ಎ., ಯು.ಕೆ. ದಲ್ಲಿ

* 1997 ದಾಯ್ಜಿದಿವ್ಯಯಾತ್ರೆ ಫೆಬ್ರುವರಿ – ಮೇ 29 100 ದಿನ 10361 ಮನೆಗಳಿಗೆ ಸಂದರ್ಶನ

* 1997 ಗಲ್ಫಯಾತ್ರೆ ಅಕ್ತೋಬರ 5 ರಿಂದ ಡಿಸೆಂಬರ 15, 72 ದಿನ 67 ಕಾರ್ಯಕ್ರಮ.

* 1998 ಹೈದರಾಬಾದ ಮುಂಬಯಿ ಯಾತ್ರೆ – ಸಪ್ಟೆಂಬರ 6 ರಿಂದ ನವೆಂಬರ 30, 86 ದಿನ 76 ಕಾರ್ಯಕ್ರಮ.

* 2001 ಸಂಸ್ಕೃತಿ ಬಚಾವ ಆಂದೋಲನ ಅಭಿಯಾನ, ಸಪ್ಟೆಂಬರ 9, ಅಕ್ಟೋಬರ 18 – 40 ದಿನ 60 ಬೀದಿ ನಾಟಕ

* 2002 ಗಲ್ಫ ಅಭಿಯಾನ, ಮೇ 10 ರಿಂದ ಜೂನ 30 – 50 ದಿನ

ಕಲಾಂಗಣ ಕಟ್ಟುವ ಕನಸು ಎರಿಕ್‌ರವರು ಕಂಡದ್ದು 1992 ರಲ್ಲಿ ಆದರೆ ನನಸಾಗಿದ್ದು 4 ವರ್ಷದ ನಂತರ 1992 ರಲ್ಲಿ ಶಕ್ತಿನಗರದ ಮಕಾಳೆಯಲ್ಲಿರುವ ಕಾಸ್ಟೋಲಿನ ಕುಟುಂಬದವರು 45 ಸೆಂಟ್ಸ ದಾನವಾಗಿ ನೀಡಿದರು ಹಾಗೂ 1 ಡಿಸೆಂಬರ 1996 ರಂದು ಶಿಲಾನ್ಯಾಸ ಕಾರ್ಯಕ್ರಮ ಜರುಗಿತು 5 ವರ್ಷದ ನಂತರ 1 ಡಿಸೆಂಬರ 2001 ರಲ್ಲಿ ಕಲಾಂಗಣ ಮೊದಲ ಭಾಗವನ್ನು ಸುಪ್ರಸಿದ್ಧ ಹಿಂದಿ ಚಲನಚಿತ್ರ ನಿರ್ದೇಶಕರಾದ (ಕೊಂಕಣಿ ಭಾಶಿಕ) ಶ್ರೀ ಶ್ಯಾಮ ಬೆನೆಗಲರವರ ಅಮೃತ ಹಸ್ತದಿಂದ ನೆರವೇರಿತು, ವಿಶೇಷವಾಗಿ ಇಲ್ಲಿ ಕೊಂಕಣಿ ಭಾಶಿಕ ವಿವಿಧ 40 ಸಮುದಾಯದ ದಂಪತಿಗಳಿಂದ ಎರಡೆರಡು ಇಟ್ಟಂಗಿಗಳನ್ನು ಇಟ್ಟು ಎಲ್ಲ ಸಮುದಾಯದ ನೆನಪಿಗಾಗಿ ಒಂದು ಕೊಂಕಣಿ ಧ್ವಜ ಸ್ಥಂಬವನ್ನು ನಿರ್ಮಿಸಿದ್ದರು. ಕಾರವಾರದಿಂದ (ವಸಂತ ಬಾಂದೇಕರ) ನೇತ್ರತ್ವದಲ್ಲಿ 10 ವಿವಿಧ ಕೊಂಕಣಿ ಭಾಷಿಕ ಸಮುದಾಯಗಳ ದಂಪತಿಗಳು ಭಾಗವಹಿಸಿದ್ದರು.

**ನಿರಂತರವಾಗಿ ಮಾಂಡ ಸೋಭಾಣ ವತಿಯಿಂದ ಜರುಗಿದ ಕಾರ್ಯಕ್ರಮಗಳಲ್ಲಿ ಕೆಲವುಗಳು :**

– 1988 ಪ್ರಥಮ ಜಾಗತಿಕ ಬೈಲಾಶೋ (ಕೊಂಕಣಿ ನೃತ್ಯ)

– 1991 ಮಾಂಡೊ ಫೆಸ್ತ ಆರ್ಕೆಷ್ಟ್ರಾ 356 ಗಾಯಕರು

– 1992 ಪರಬ (ಹಬ್ಬ) ಪ್ರಥಮ ಅಖಿಲ ಭಾರತ ಕೊಂಕಣಿ ಸಾಂಸ್ಕೃತಿಕ ಉತ್ಸವ 9 ದಿನ

– 1993 ಸಾಂತ (ಸಂತೆ) ಪ್ರಥಮ ಅಖಿಲ ಭಾರತ ಕೊಂಕಣಿ ಜಾತ್ರೆ ಪ್ರದರ್ಶನ 23 ದಿನ

– 1995 ಪ್ರಥಮ ಜಾಗತಿಕ ಕೊಂಕಣಿ ಸಭೆ

– 1996 ಪುನೋವ (ಹುಣ್ಣಿಮೆ) 12 ಸುಪ್ರಸಿದ್ಧ ಕಲಾವಿದರ ಪ್ರದರ್ಶನ

– 2003 ಮಾಂಡೊ ಉತ್ಸವ 954 ಗಾಯಕರು 25 ಪೀಸ ಆರ್ಕೆಸ್ಟ್ರಾ

– 2004 ಕೊಂಕಣಿ ಮಹೋತ್ಸವ 8 ದಿನ ಕೊಂಕಣಿ ಕಲಾ ಪ್ರದರ್ಶನದ ಹಬ್ಬ

– 2004 ಕೊಂಕಣಿ ಟಿವಿ 2 ಸಿರಿಯಲ್‌ಗಳು ರಾಜಮಾಜಾ ಹಾಗೂ ಶೋಧ 1-2 27-01-2008 ಜಗದ ಅತಿ ದೊಡ್ಡ ಕೊಂಕಣಿ ನಿರಂತರ ಗಾಯನ ಮಾರಾಥಾನ 2009 ಗಿನ್ನಿಸ್ ದಾಖಲೆಯಾಗಿದೆ.

– 2009 ಪ್ರಥಮ ವಿಶ್ವಕೊಂಕಣಿ ಮ್ಯೂಜಿಕ್ ಅವರ್ಡ

– 2010 ಪ್ರಥಮ ವಿಶ್ವಕೊಂಕಣಿ ಸಾಂಸ್ಕೃತಿಕ ಕಾರ್ಯಕ್ರಮ (ನಿರಂತರ 25 ದಿನ) ಅಂದಿನ ರಾಷ್ಟ್ರಪತಿಗಳಾದ ಶ್ರೀಮತಿ ಪ್ರತಿಭಾ ಪಾಟಿಲರಿಂದ ಉದ್ಘಾಟನೆ.

ಕೊಂಕಣಿ ಅಭಿವೃದ್ಧಿಗಾಗಿ ನಿರಂತರವಾಗಿ ಮಾಡುತ್ತ ಬಂದಿರುವ ಚಟುವಟಿಕೆಗಳು :-

* ತಿಂಗಳ ಥೇಟರ – "ಮಹಿನ್ಯಾಮಂಚ" ಎಂಬ ಹೆಸರಿನಿಂದ ಪ್ರತಿ ತಿಂಗಳ ಪ್ರಥಮ ರವಿವಾರದಂದು ಥಿಯೇಟರಲ್ಲಿ ಯಾವುದೇ ಒಂದು ಕಾರ್ಯಕ್ರಮ ಜನೆವರಿ 2002 ರಿಂದ ನಿರಂತರವಾಗಿ 18 ವರ್ಷದಿಂದ ನಡೆಯುತ್ತ

ಬಂದಿದೆ.

* ತರಬೇತಿಗಳು ಹಾಗೂ ವರ್ಕ್ ಶಾಪ್‌ಗಳು – ರಜಾದಿನಗಳಲ್ಲಿ ಮಕ್ಕಳಿಗೂ ಯುವಕರಿಗಾಗಿ ವಿವಿಧ ತರಬೇತಿ ಜರುಗುತ್ತವೆ.

* ಕಲ್ಚರಲ್ ಕ್ಯಾಂಪ – ಕೊಂಕಣಿ, ಜಾನಪದ, ಇತಿಹಾಸ, ಸಂಸ್ಕೃತಿಗೆ ಸಂಬಂಧಿಸಿದ ಕಲಾಪ್ರಕಾರಗಳ ಕ್ಯಾಂಪಗಳಾಗಿವೆ.

* ಸೆಮಿನಾರ ಹಾಗೂ ಕಾನಫರೆನ್ಸ್ – ಬರೀ ಕೊಂಕಣಿಗಾಗಿಯಲ್ಲದೇ ಯಾವುದೇ ಭಾಷೆ ಸಾಹಿತ್ಯ ವಿಚಾರ ಸಂಕೀರ್ಣಗಳು ಸೌಹಾರ್ದಯುತವಾಗಿ ಇಲ್ಲಿ ನಡೆಯುತ್ತದೆ.

* ರಿಸರ್ಚ ಎಂಡ್ ಡೊಕ್ಯುಮೆಂಟೇಶನ್ – ಕೊಂಕಣಿ ವಿವಿಧ ಆಯಾಮುಗಳಲ್ಲಿ ಶೋಧಗಳಗಾಗಿ ಹಾಗೂ ದಾಖಲೆಗಳನ್ನಾಗಿ ಮಾಡಲು ಪ್ರಯತ್ನಿಸುವುದು.

* ರಿಹರ್ಸಲ್ ಹಾಗೂ ಪ್ರಾಕ್ಟೀಸ್ – ಪ್ರತಿದಿನ ಥೇಟರಗಳಲ್ಲಿ ಶಾಲ ಮಕ್ಕಳು ಯುವಕರು ಬಂದು ರಿಹರ್ಸಲ್ ಮಾಡುತ್ತ ಇರುತ್ತಾರೆ. ಕಲಾಂಗಣ ರಚನೆ ಮಾಡುವಾಗ ವಿವಿಧ ಭಾಗಗಳನ್ನು ಮಾಡಿದ್ದು

* ಎಂಫ್ಲಿಥೇಟರ – ಪರ್ಸನಾಲಟಿ ಡೆವಲೊಪಮೆಂಟಸ್ಕೂಲ, ಲೈಬ್ರರಿ.

* ಮ್ಯೂಜಿಯಮ್ – ವೇದಿಕೆ, ಎಸಿ. ಸಭಾಂಗಣ, ಹಾಸ್ಟೆಲಬ್ಲಾಕ್ (40 ಕ್ಯಾಪೆಸಿಟಿ)

ಎರಿಕ್‌ರವರ ಪತ್ನಿ ಜೊಯ್ಸಿ ಉತ್ತಮ ಗಾಯಕರಿದ್ದುದರಿಂದ ಕಲಾವಿದರ ಬದುಕಿನ ಬಗ್ಗೆ ಅರಿವು ಇದ್ದುದರಿಂದ ಗಂಡನಿಗೆ ಅವನ ಬದುಕಿನ ಕನಸಿನ ಸಂಗೀತ ತಂಡದ ಪ್ರಮುಖ ಗಾಯಕಿಯಾಗಿ ಸಹಕಾರಿಯಾಗಿ ಅವನ ಪ್ರತಿ ಸುಖ–ದುಃಖದಲ್ಲಿ ಭಾಗಿಯಾದಳು. ಮಗಳು ಸಹಿತ ಕೆಲಕಾಲ ಅವರ ತಂಡದಲ್ಲಿ ಗಾಯಕಿಯಾಗಿ ಮಿಂಚಿದಳು.

ಎರಿಕ ಓಝಾರಿಯೊ ಇಂದು 70 ವರ್ಷದ ವಯೋವೃದ್ಧರಿದ್ದರೂ ತಮ್ಮ ನಿರಂತರ ಕೊಂಕಣಿ ಸೇವೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. 2004 ರಲ್ಲಿ ಸೊದ ಕಾರ್ಯಕ್ರಮ ಪ್ರಾರಂಭಿಸಿದ್ದು 2020 ರಲ್ಲಿ ಸೊದ 5 ಆಚರಣೆಯಾಗಲಿದೆ ಹಲವಾರು ಬದುಕಿನ ಆದಯವನ್ನು ಅದಕ್ಕಾಗಿಯೇ ಸಮರ್ಪಣೆ ಮಾಡಿದ್ದಾರೆ. ಇಂದಿಗೂ ಹೊಸ ಹೊಸ ಯೋಜನೆಗಳನ್ನು ಮಾಡುತ್ತಲೇ ಸಾಗಿದ್ದಾರೆ. ಇವರ ಪ್ರಾಮಾಣಿಕ ಸೇವೆಯ ಹಾಗೂ ಕೊಂಕಣಿ ಶ್ರದ್ಧೆಯನ್ನು ಅರಿತ ಹಲವಾರು ಧಾನಿಗಳು ಇಂದಿಗೂ ತಮ್ಮಿಂದಾದಷ್ಟು ಸಹಾಯ ಮಾಡುತ್ತಿದ್ದಾರೆ. ಶ್ರೀಯುತರ ಬದುಕಿನುದ್ದಕ್ಕೂ ಶಿಸ್ತು ನಿಯಮ ಸಮಯಪ್ರಜ್ಞೆ ಇದಕ್ಕಾಗಿ ಯಾರೊಂದಿಗೂ ರಾಜಿಯಾಗದೇ ತಮ್ಮ ಪ್ರತಿನಿತ್ಯದ ಸಮಯದ ಜೊತೆಗೆ ಶಿಸ್ತಿನಿಂದ ನಿರಂತರವಾಗಿ ದುಡಿಯುತ್ತಿದ್ದಾರೆ. ಆದ್ದರಿಂದಲೇ ವಿಶ್ವದ ಕೊಂಕಣಿಗರ ಅಚ್ಚುಮೆಚ್ಚಿನ ಎರಿಕ್ ಓರಿಭಾರಿಯೊ ಆಗಿ ಎಲ್ಲರ ನಾಲಗೆಯ ಮೇಲೆ ಕುಳಿತಿದ್ದಾರೆ. ಇವರಿಗೆ ಇನ್ನೂ ಹೆಚ್ಚಿನ ಆಯುಷ್ಯ ಆರೋಗ್ಯ ನೀಡಲಿ ಎಂದು ದೇವರಲ್ಲಿ ಪ್ರಾರ್ಥನೆ.

♦♦♦♦



# 24. ಕಾರವಾರದ ಕೊಂಕಣಿ ಸಂಘಟಕ ದಿ. ದೀಪಕ ಗಾಂವಕರ

■ ಡಾ. ವಸಂತ ಬಾಂದೇಕರ–ಕಾರವಾರ

ಇಂದು ನಮಗೆ ಪತ್ರಿಕೆ ಮಾಧ್ಯಮದಿಂದ ಹಲವಾರು ಜನರು ಪತ್ರಿಕೆಗಳಲ್ಲಿ ತಮ್ಮ ದೊಡ್ಡ ದೊಡ್ಡ ಛಾಯಾಚಿತ್ರಗಳನ್ನು ಹಾಕಿ ಸಮಾಜ ಸೇವೆ ಸೋಗಿನಿಂದ ಕ್ಯಾಮರಾಗೆ ಪೋಸುಕೊಟ್ಟು ಪ್ರಚಾರ ಗಿಟ್ಟಿಕೊಳ್ಳುತ್ತಿದ್ದಾರೆ. ಕೆಲವರು ಖುರ್ಚಿ ಮೋಹದಿಂದಾಗಿ ಒಬ್ಬರಿಗೊಬ್ಬರ ಮೇಲೆ ಕೆಸರನ್ನು ಚೆಲ್ಲಿಕೊಳ್ಳುತ್ತಾರೆ. ಆದರೆ ನಿಜವಾಗಿ ಸಮಾಜ ಸೇವೆ ಮಾಡುವ ಕೆಲವ್ಯಕ್ತಿಗಳು ಎಲೆಮರೆಕಾಯಿಯಾಗಿ ಬದುಕಿನುದ್ದಕ್ಕೂ ತಮ್ಮ ಸ್ವಾರ್ಥವನ್ನು ಬಿಟ್ಟು, ಊಟ ನಿದ್ದೆ ಬಿಟ್ಟು ಹಿಡಿದ ಕೆಲಸವನ್ನು ಪೂರ್ಣಗೊಳಿಸುವವರೆಗೆ ಬಿಡದೇ ಸಮಾಜಕ್ಕೆ ಆಸ್ತಿಯಾಗಿ ಜನರಿಗೆ ಮಾದರಿಯಾಗಿ ಈ ಜಗದಿಂದ ನಿರ್ಗಮಿಸುತ್ತಾರೆ. ಅಂಥವರಲ್ಲಿ ಕಾರವಾರದ ದಿವಂಗತ ದೀಪಕ ಗಾಂವಕರರವರು ಒಬ್ಬರು.

11ನೇ ಅಖಿಲಭಾರತೀಯ ಕೊಂಕಣಿ ಸಾಹಿತ್ಯ ಸಮ್ಮೇಳನವು ದಿನಾಂಕ 9 ಫೇಬ್ರುವರಿ 1992ರಲ್ಲಿ ಕಾರವಾರದಲ್ಲಿ ಮಾಡುವುದಾಗಿ ನಿರ್ಧರಿಸಲ್ಪಟ್ಟಿತ್ತು. ಅದನ್ನು ಕಾರವಾರದ ಕೊಂಕಣಿ ಭಾಸಆನಿ ಸಂಸ್ಕೃತಿಕೇಂದ್ರ ಅವರ ನೇತ್ರತ್ವದಲ್ಲಿ ಮಾಡಲು ನಿಶ್ಚಯವಾಗಿತ್ತು. ಈ ಸಂಸ್ಕೃತಿ ಕೇಂದ್ರವನ್ನು 1990ರಲ್ಲಿ ದೀಪಕ ಗಾಂವಕರರವರ ಮುಂದಾಳತ್ವದಲ್ಲೇ ಸ್ಥಾಪಿಸಲ್ಪಟ್ಟಿತ್ತು.

ಶ್ರೀ ದಿ. ದೀಪಕ ಗಾಂವಕರರವರು ಕಾರವಾರದಲ್ಲಿ ಸಾಗರ ದೀಪ ಎಂಬ ತಮ್ಮ ಸ್ವಂತ ಮುದ್ರಣಾಲಯವನ್ನು ನಡೆಸುತ್ತಿದ್ದರು. ಈ ಗಡಿ ಭಾಗವು ಕನ್ನಡ, ಕೊಂಕಣಿ, ಮರಾಠಿ 3 ಭಾಷೆಗಳ ಭಾಗವಾಗಿದ್ದರಿಂದ ಇಲ್ಲಿ ಮೂರು ಭಾಷಿಕ ಕವಿಗಳು ಹಾಗೂ ಸಾಹಿತಿಗಳ ಪುಸ್ತಕಗಳು ಮುದ್ರಣಗೊಳ್ಳುತ್ತಿದ್ದವು. ಈ ಕಾರಣದಿಂದ ದೀಪಕ ಗಾಂವಕರರವರ ಈ ಮುದ್ರಣಾಲಯಕ್ಕೆ ಸಾಹಿತಿ, ಕವಿ, ಪತ್ರಕರ್ತರು ಸಹಿತ ಇಲ್ಲಿಗೆ ಬರುತ್ತಿದ್ದರು, ಜೊತೆಗೆ ವಿವಿಧ ರಾಜ್ಯದ ಕೊಂಕಣಿ, ಮರಾಠಿ, ಕವಿ, ಸಾಹಿತಿಗಳ ಜೊತೆಗೆ ಇವರ ಒಡನಾಟವಿತ್ತು. ಈ ಕಾರಣದಿಂದ 11ನೇ ಅಖಿಲ ಭಾರತೀಯ ಕೊಂಕಣಿ ಸಾಹಿತ್ಯ ಸಮ್ಮೇಳನವು ಕಾರವಾರದಲ್ಲಿ ಜರುಗಲು ಕಾರಣವಾಯಿತು.

ಈ ಸಮ್ಮೆಳನಕ್ಕಾಗಿ ದೀಪಕರವರು ಒಂದು ಕಾರ್ಯಕಾರಿ ಸಮಿತಿಯನ್ನು ರಚಿಸಿದ್ದರು. ಪ್ರೊ. ಪಿ. ವಿ. ದೇಸಾಯಿ, ಶ್ರೀಮತಿ ಆಶಾ ಪಾಲನಕರ, ಶಿಕ್ಷಕ ಶ್ರೀ ಪಿ. ಜಿ. ನಾಯ್ಕ, ಶ್ರೀ ನಾರಾಯಣ ಪವಾರ, ಪ್ರೊ. ಅಂದ್ರಾಡೆ,



ಶ್ರೀ ಅನಂತ ಬಸರೂರ, ಶ್ರೀ ಶ್ಯಾಮಸನ್ ಡಿಸೋಜಾ, ಶ್ರೀ ಮಹಾಬಳೇಶ್ವರ ಸೈಲ್, ಪ್ರೊ. ಹೇಮಂತ ಫಾಯದೇ, ಶ್ರೀ ಪ್ರಕಾಶ ಪಾಲನಕರ ಈ ಕಾರ್ಯಕ್ರಮದ ಪ್ರಧಾನ ಕಾರ್ಯದರ್ಶಿಯಾಗಿ ಸ್ವತಃ ದೀಪಕ ಗಾಂವಕರವರಿದ್ದರು.

ಈ ಕಾರ್ಯಕ್ರಮದ ನಿಮಿತ್ತ, ಅಥಿತಿಗಳನ್ನು ವಿಚಾರಗೋಷ್ಠಿಗಾಗಿ ಉಪನ್ಯಾಸಕರನ್ನು, ಕಲಾ ತಂಡಗಳನ್ನು, ಪ್ರಾಯೋಜಕರನ್ನು ವಿವಿಧ ಗಣ್ಯರನ್ನು ಸಂಪರ್ಕಿಸಲು ಆಮಂತ್ರಣ ನೀಡಲು ಸ್ವತಃ ದೀಪಕರವರು, ಕರ್ನಾಟಕ, ಗೋವಾ, ಮಹಾರಾಷ್ಟ್ರ, ಕೇರಳದಲ್ಲಿ ಸಂಚರಿಸಿ ಬಂದಿದ್ದರು. ಪ್ರತಿ ದಿವಸ ಕಾರ್ಯಕಾರಿ ಸಮಿತಿ ಸಭೆ ಕರೆದು ಕಾರ್ಯಕಲಾಪಗಳ ವಜಳಣಿ ಮಾಡುತ್ತಿದ್ದರು. ಸದರ ಕಾರ್ಯಕ್ರಮವು ನಗರ ಸಭಾ ಟ್ಯಾಗೋರ ಬಯಲ ರಂಗಮಂದಿರದಲ್ಲಿ ಮಾಡಲು ತೀರ್ಮಾನಿಸಲಾಗಿತ್ತು. ಆ ಅಲಂಕೃತ ಭವ್ಯ ವೇದಿಕೆಗೆ ಕೊಂಕಣಿ ಪರಿಷತ್ ಸಂಸ್ಥಾಪಕ ದಿ. ಮಾಧವ ಮಂಜುನಾಥ ನಗರ ಎಂಬ ಹೆಸರಿಡಲಾಗಿತ್ತು. 8, 9 ಫೇಬ್ರುವರಿ 1992 ರಂದು ನಡೆದ ಈ ಕಾರ್ಯಕ್ರಮಕ್ಕೆ ಸಮ್ಮೇಳಾಧ್ಯಕಾರಾಗಿ ಎಡ್ವಿನ್ ಜೆ. ಏಫ್. ಡೀಸೋಜಾ, ಕಾರ್ಯಕ್ರಮದ ಉದ್ಘಾಟಕರಾಗಿ ಶ್ರೀಮತಿ ಆಶಾ ಪಾಲನಕರ ಹಾಗೂ ಕಾರ್ಯಾಧ್ಯಕ್ಷರಾಗಿ ಪ್ರೊ. ಪುರುಷೋತ್ತಮ ವ್ಹಿ. ದೇಸಾಯಿಯವರಿದ್ದರು.

ಶ್ರೀ ದೀಪಕ ಗಾಂವಕರರವರ ನಿರಂತರ

ಪರಿಶ್ರಮದಿಂದ ಭಾರತದ ವಿವಿಧ ಭಾಗದ ಕೊಂಕಣಿ ಕವಿ, ಸಾಹಿತಿಗಳು, ಅಭಿಮಾನಿಗಳು ಈ ಕಾರ್ಯಕ್ರದಮದಲ್ಲಿ ಭಾಗಿಯಾಗಿದ್ದರು. ಅಖಿಲ ಭಾರತ ಮಟ್ಟದಲ್ಲಿ ಇಷ್ಟುದೊಡ್ಡ ಕಾರ್ಯಕ್ರಮಕ್ಕೆ ಲಕ್ಷಾಂತರ ಹಣಬೇಕು. ದೀಪಕ ಗಾಂವಕರರವರ ಪ್ರಯತ್ನದಿಂದ, ಸ್ಮರಣ ಸಂಚಿಕೆ ಮಾಧ್ಯಮದಿಂದ ಅಲ್ಪಸ್ವಲ್ಪ ಹಣವನ್ನು ಕೂಡಿಹಾಕಿದ್ದರು. ದೀಪಕರವರ ಸಹೋದರ ಇಂಜಿನೀಯರಿದ್ದ ಕೇವಲ 12 ದಿನಗಳಲ್ಲಿ 1 ಲಕ್ಷ ರೂ. ಹಣವನ್ನು ಸಂಗ್ರಹಮಾಡಿದ್ದರು. ಈ ಕಾರ್ಯಕ್ರಮದಲ್ಲಿ ವಿವಿಧ ಸಾಧಕರನ್ನು ಸನ್ಮನಿಸಲಾಯಿತು. ವಿವಿಧ ಕೊಂಕಣಿ ಚಿಂತಕರು ವಿಚಾರ ಮಂಡನೆ ಮಾಡಿದರು. ವಿವಿಧ ಕವಿಗಳು ಕಾವ್ಯ ವಾಚನ ಮಾಡಿದರು. ಹಾಗೂ ಗೋವಾ, ಕಾರವಾರ ಭಾಗದ ಕಲಾವಿಧರಿಂದ ಕೊಂಕಣಿ ಕಾರ್ಯಕ್ರಮಗಳು ಜರುಗಿದವು.

ಕಾರವಾರದಲ್ಲಿ ಜರುಗಿದ 11 ನೇ ಅಖಿಲ ಭಾರತೀಯ ಕೊಂಕಣಿ ಸಾಹಿತ್ಯ ಸಮ್ಮೇಳನ ಯಶಸ್ವಿಯಾಗಲು ದೀಪಕ ಗಾಂವಕರ ಎಂದು ಎದೆ ತಟ್ಟಿ ಹೇಳಬಹುದು. ಕಾರಣ ಅವರು ಕೊಂಕಣಿ ಭಾಷಿಕರಲ್ಲದೇ ಕನ್ನಡ ಸಾಹಿತಿ, ಕವಿ, ಪತಿಕ್ರೆಯವರಿಗೆ ಅದರಲ್ಲಿ ಸೇರಿಸಿಕೊಂಡು ಕಾರವಾರದ ಆ ಕಾರ್ಯಕ್ರಮದ ನಿಮಿತ್ತವಾಗಿ ಹಲವರು ಕೊಂಕಣಿಯ ಹೊಸ ಮುಖಗಳನ್ನು ಪರಿಚಯಿಸಿದರು. ಅದರಲ್ಲಿ ನಾನೂ ಒಬ್ಬನು. ನನಗೆ ಸಾಹಿತ್ಯ ಸಮ್ಮೇಳನದಲ್ಲಿ ಸ್ವರಚಿತ ಸ್ವಾಗತ ಕೊಂಕಣಿ ಗಾಯನ ಹಾಡಲು ಅವಕಾಶ ಮಾಡಿಕೊಟ್ಟರು. ನಂತರ ಕೊಂಕಣಿಗೆ ರಾಷ್ಟ್ರೀಯ ಸ್ಥಾನಮಾನ ಸಿಕ್ಕ ಸಂತೋಷದ ಸಂಭ್ರಮಾಚರಣೆ ಅಗಸ್ಟ 1993ರಲ್ಲಿ ಮಂಗಳೂರಿನಲ್ಲಿ ರಾಜ್ಯ ಮಟ್ಟದ ಕೊಂಕಣಿ ಪ್ರತಿಭಾ ಸ್ಪರ್ಧೆಗೆ ನನ್ನನ್ನು ಹುರಿದುಂಬಿಸಿ 2-3 ಸಲ ರಿಹರ್ಸಲ್ ಮಾಡಿಸಿ ಹಣಕಾಸಿನ ನೆರವು ನೀಡಿ ಮಂಗಳೂರಿಗೆ ಕಳಿಸಿದ್ದರು. ರಾಜ್ಯದ 625 ಸ್ಪರ್ಧಾಳುಗಳಲ್ಲಿ ರಾಜ್ಯಕ್ಕೆ ಪ್ರಥಮ ಸ್ಥಾನ ನನಗೆ ಲಭಿಸಿತ್ತು. ಆಗ ಅವರು ಬಹಳ ಸಂತೋಷ ಪಟ್ಟಿದ್ದರು. ಹಾಗೂ ಮೇಲಿಂದಮೇಲೆ ಚಿಕ್ಕಪುಟ್ಟ ಕೊಂಕಣಿ ಕಾರ್ಯಕ್ರಮ ಮಾಡಲು ಪ್ರೋತ್ಸಾಹಿಸುತ್ತುದ್ದರು. ಅವರ ಪ್ರೇರಣೆಯಿಂದ ಹಲವಾರು ಕಲಾವಿದರು, ಸಾಹಿತಿಗಳು ಮುಂದೆ ಬಂದಿದ್ದಾರೆ.

ದೀಪಕ ಗಾಂವಕರವರ ಬದುಕು ಬಹಳ ಸರಳವಾಗಿತ್ತು. ಒಂದು ಪ್ಯಾಂಟು ಮೈಮೇಲೆ ಜುಬ್ಬಾ. ಕಾಲಲ್ಲಿ ಚಪ್ಪಲ ಹಾಗೂ ಹೆಗಲಿಗೆ ಒಂದು ಜೋಳಿಗೆಯಂತಹ ಚೀಲ ಅದರಲ್ಲಿ ವಿವಿಧ ಪುಸ್ತಕಗಳು ಹಾಗೂ ಸದಾ ಒಂದು ಕ್ಯಾಮೆರಾ ಇರುತ್ತಿತ್ತು. ಎಲ್ಲಿಯಾದರೂ ಕೊಂಕಣಿಗೆ ಸಂಬಂಧಿಸಿದ ಕಾರ್ಯಕ್ರಮವಿದ್ದರೆ ಅವರು ಅಲ್ಲಿ ಹಾಜರಾಗಿ ತಮ್ಮ ಕ್ಯಾಮರಾದಾಲ್ಲಿ ಚಿತ್ರಗಳನ್ನು ಸೆರೆಹಿಡಿಯುತ್ತಿದ್ದರು. ಅದರಂತೆ ಕೊಂಕಣಿ ಭಾಷಿಕ ವಿವಿಧ ಜಾತ್ರೆ ಉತ್ಸವಗಳ ಛಾಯಾಚಿತ್ರಗಳನ್ನು ಸಂಗ್ರಹಿಸುತ್ತಿದ್ದರು.

ಇವರು ಎಂದಿಗೂ ಖುರ್ಚಿಗಾಗಿ ಬಡಿದಾಡಿದವರಲ್ಲ. ಇವರ 11ನೇ ಅಖಿಲಭಾರತ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆಯನ್ನು ಅವಲೋಕಿಸಿದ ಇವರೇ ನೇಮಿಸಿದ ಆ ಕಾರ್ಯಕ್ರಮದ ಸಮಿತಿ ಪದಾಧಿಕಾ ಸದಸ್ಯರ ಛಾಯಾಚಿತ್ರ ನೋಡಲು ಸಿಗುತ್ತವೆ. ಆದ ಇವರ ಛಾಯಾಚಿತ್ರ ಎಲ್ಲೂ ಕಾಣಲು ಸಿಗದು. ವೇದಿ ಕಾರ್ಯಕ್ರಮದಲ್ಲೂ ಕಾಣಸಿಗದು.

ಕೊಂಕಣಿ, ಕಲೆ, ಸಾಹಿತ್ಯ ಸಂಘಟನೆಗಾ ಕಾರವಾರದಲ್ಲಿ ದೀಪಕ ಗಾಂವಕರವರು ತಮ್ಮ ಅವಿರತ ಪ್ರಯತ್ನದಿಂದ ಬೆಳಕು ಚೆಲ್ಲುತ್ತಿದ್ದರು. ಆದರೆ ತಮ್ಮ ಕಾರವಾರಿ ಕೊಂಕಣಿಗರ ದುರ್ಭಾಗ್ಯವೋ ಏನೋ ದೀಪಕರವರ ಆರೋಗ್ಯದಲ್ಲಿ ಏರುಪೇರಾಗಿ ಬೆಳಗುತ್ತ ಸಾಗಿದ ಆ ದೀಪವು ಆರಿಹೋಯಿತು. ಹಾಗೂ ನಮ್ಮನ್ನು ಕತ್ತಲಲ್ಲಿ ಹಾಕಿತು. ಅಂದಿನಿಂದ ಇಂದು ಅವರು ಸ್ಥಾಪಿಸಿದ ಕೊಂಕಣಿ ಭಾಷಾ ಕೇಂದ್ರ ಇಂದಿಗೂ ಅನಾಥವಾಗಿ ಉಳಿದಿದೆ. ಇಂಥ ನಿಸ್ವಾರ್ಥ ಮಹಾನ ಮಾತೃಭಾಷಾ ಪ್ರೇಮದೊಂದಿಗೆ ಸಕಲಭಾಷೆಗಳಗೂ ಪ್ರೋತ್ಸಾಹ ನೀಡಿ ಕಣ್ಮರೆಯಾದ ದೀಪಕನಿಗೆ ಎಲ್ಲರ ಪರವಾಗಿ ಅವರ ಆತ್ಮಕ್ಕೆ ಶಾಂತಿಸಿಗಲೆಂದು ಪ್ರಾರ್ಥನೆ.

♦ ♦ ♦ ♦

# 25. 52 ವರ್ಷದ ಕೊಂಕಣಿ ಸೇವೆಯ ಡಾ. ವಸಂತ ಬಾಂದೇಕರ



■ ಶ್ರೀ ನಾಗೇಶ ಅಣ್ವೇಕರ-ಕಾರವಾರ

ಹಲವಾರು ಜನ ಯಾವುದಾರೊಂದು ಕ್ಷೇತ್ರದಲ್ಲಿ ಪರಿಣಿತರಾಗಿ ಸಮಾಜದಲ್ಲಿ ಚಿರಪರಿಚಿತರಾಗಿರುತ್ತಾರೆ. ಆದ-ರೆ. ಕೆಲವರು ಮಾತ್ರ ಬಹುಮುಖ ಪ್ರತಿಭೆಯ ವ್ಯಕ್ತಿಯಾಗಿ ಎಲ್ಲರೂ ಹುಬ್ಬೇರಿಸುವಂತೆ ಮಾಡುತ್ತಾರೆ. ಅಂಥವರಲ್ಲಿ ಉತ್ತರ ಕನ್ನಡ ಜಿಲ್ಲಾ ಕಾರವಾರ ತಾಲೂಕಿನ ಸದಾಶಿವಗಡ ಗ್ರಾಮದ ಡಾ. ವಸಂತ ಶಾಂತರಾಮ ಬಾಂದೇಕರರವರು. ಈಗ ಅವರಿಗೆ 74 ವರ್ಷಗಳು. ಆದರೆ ಅವರ ದೇಹ ರಚನೆ ಪಾದರಸದಂತೆ ಮಾಡುವ ಚಟುವಟಿಕೆ ನೋಡಿದರೆ 40 ವರ್ಷದ ತರುಣರಂತೆ ಕಾಣುತ್ತಾರೆ. ಇವರು ತಮ್ಮ ವಿಶಿಷ್ಟ ಕಾರ್ಯದಿಂದಲೇ ಜಿಲ್ಲೆಯ ಮೂಲೆ ಮೂಲೆಯ ಜನರಿಗೆ ಚಿರಪರಿಚಿತರು. ರಾಜ್ಯ, ರಾಷ್ಟ್ರ, ಅಂತರಾಷ್ಟ್ರೀಯ ಮಟ್ಟದ ಪ್ರಶಸ್ತಿ ಪಡೆದ ಪ್ರಸಿದ್ಧ ಕಲಾವಿದರು.

ಇವರ ಮಾತೃಭಾಶೆ ಕೊಂಕಣಿ ಇದ್ದರೂ ಬಹುಮುಖ ಪ್ರತಿಭೆಯ ಕಲಾವಿದರು. ರಾಜ್ಯಭಾಷೆ ಕನ್ನಡ, ರಾಷ್ಟ್ರಭಾಷೆ ಹಿಂದಿ ಪಕ್ಕದ ರಾಜ್ಯದ ಭಾಷೆ ಮರಾಠಿಯಲ್ಲೂ ತಡೆರಹಿತ 100 ನಿಮಿಷ ಏಕವ್ಯಕ್ತಿ ಕಾರ್ಯಕ್ರಮ ಕಳೆದ 33 ವರ್ಷದಿಂದ ನೀಡುತ್ತ ಬಂದಿದಿದ್ದಾರೆ. ನಾನು ನಾಗೇಶ ಅಣ್ವೇಕರ ಕೊಂಕಣಿ ಭಾಷಿಕ, ದೈವಜ್ಞ ಬ್ರಾಹ್ಮಣ ಸಮುದಾಯದ ಮೂಲ ಮಂಚಿಕೇರಿ ಗ್ರಾಮ, ಯಲ್ಲಾಪುರ ತಾಲೂಕಿನವನು ಬಾಲ್ಯದಿಂದಲೇ ಕಾವ್ಯ ರಚನೆ, ಯಕ್ಷಗಾನ ತಾಳಮದ್ದಲೆಯಲ್ಲಿ ಅಭಿರುಚಿ. ಶಾಲೆಗಳಲ್ಲಿ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದೆನು. (ಕನ್ನಡ, ಕೊಂಕಣಿ ಎರಡೂ ಭಾಷೆಯಲ್ಲಿ) ಆದರೆ 1993ರಲ್ಲಿ 27 ವರ್ಷದ ಹಿಂದೆ 'ಉದರ ಪೋಷಣೆಗಾಗಿ' ಕಲಿತ ಬಂಗಾರದ ದಾಗೀನು ತಯಾರಿಸುವ ಕೆಲಸದ ನಿಮಿತ್ತ ಕಾರವಾರಕ್ಕೆ ಬಂದು ನಂದನಗದ್ದಾ ಟೋಲನಾಕಾ ಹತ್ತಿರ ಮನೆ ಮಾಡಿಕೊಂಡು ಕೆಲಸ ಮಾಡ ಹತ್ತಿದೆನು.



1994ರಲ್ಲಿ ಜಿಲ್ಲಾಡಳಿತದಿಂದ ಕಾರವಾರ ಬೀಚಿನ ಮೇಲೆ ಕರಾವಳಿ ಉತ್ಸವ ಆಚರಿಸುವುದಾಗಿ ಪತ್ರಿ-ಕೆಯ ಮುಖಾಂತರ ತಿಳಿಯಿತು. ಅದರಂತೆ 1992-93 ಎರಡು ವರ್ಷ ಯಶಸ್ವಿಯಾಗಿ ಮಾಡಿರುವುದಾಗಿಯೂ ತಿಳಿಯಿತು. ಕರಾವಳಿ ಉತ್ಸವ ದಿನಾಂಕ 26,27,28 ಫೇಬ್ರುವರಿ ಹಾಗೂ ಮಾಚ್ರ 1 ರಂದು ಏರ್ಪಡಿಸಲಾಗಿತ್ತು. ನಾನು ಎರಡನೇ ದಿನ 27 ರಂದು ಸಂಜೆ ಕಾರ್ಯಕ್ರಮ ನೋಡಲು ಹೋಗಿದ್ದೆನು. ರಾತ್ರಿ ಧಾರವಾಡದ ಬಾಲೆಖಾನ ಸಿತಾರವಾದಕರ ಕಾರ್ಯಕ್ರಮ ಮುಗಿದಿತ್ತು ಹಾಗೂ ಮುಂದಿನ ಕಾರ್ಯಕ್ರಮ ಪ್ರಸಿದ್ಧ ಮರಾಠಿ ಭಕ್ತಿ ಸಂಗೀತ ಗಾಯಕ ಅಜೀತಕಡ ಕಡೆಯವರದ್ದಿತ್ತು. ಆದರೆ ಅವರಿಗೆ ವೇದಿಕೆಗೆ ಬರಲು 20 ನಿಮಿಷ ವಿಳಂಬವಿರುವುದರಿಂದ ಆ ಸಮಯದಲ್ಲಿ ತಮ್ಮನ್ನು ರಂಜಿಸಲು ಸ್ಥಳೀಯ ಪ್ರಸಿದ್ಧ ಹಾಸ್ಯ ಕಲಾವಿದರಾದ ವಸಂತ ಬಾಂದೇಕರ ಬರಲಿದ್ದಾರೆ ಎಂದು ನಿರೂಪಕರು ಹೇಳಿದ ತಕ್ಷಣ ಪ್ರೇಕ್ಷ-ರಿಂದ ಕರತಾಡನವಾಯಿತು. 40ರ ಆಸುಪಾಸಿನ ಪ್ಯಾಂಟು ಜುಬ್ಬಾ ಧರಿಸಿದ ವಸಂತರವರು ಸತತ 20 ನಿಮಿಷ ಕನ್ನಡ ಕೊಂಕಣಿ ಮರಾಠಿ ಮೂರು ಭಾಷೆಗಳಲ್ಲಿ ವಿವಿಧ ಹಾಸ್ಯ ಕಲಾಪ್ರದರ್ಶನಗಳನ್ನು ನೀಡಿ ನೆರದ 40000 ಪ್ರೇಕ್ಷಕರನ್ನು ರಂಜಿಸಿದರು. ಮರುದಿನ ಸಭಾಕಾರ್ಯಕ್ರಮಕ್ಕೆ ಅಂದಿನ ಉಪಮುಖ್ಯಮಂತ್ರಿಗಳಾದ ಮಾನ್ಯ ಜೆ. ಎಚ್. ಪಟೇಲರು ವೇದಿಕೆಗೆ ಬರಲು ವಿಳಂಭವಾಗಿ ಪ್ರೇಕ್ಷಕರು ಗದ್ದಲ ಮಾಡುತ್ತಿರುವಾಗ ವ್ಯವಸ್ಥಾಪಕರು ಮತ್ತೆ ವಸಂತ ಬಾಂದೇಕರವರಿಗೆ ವೇದಿಕೆಗೆ ಕಳುಹಿಸಿದರು. ಸತತ 20 ನಿಮಿಷ ವಸಂತರವರು ನೆರೆದ ಜನರ ಬೇಸರ ಕಳೆದರು. ಕೊನೆಯ ದಿನ ಮಾರ್ಚ 1 ರಂದು ವಿಶೇಷವಾಗಿ ಮಂಗಳೂರಿನ ಸುಪ್ರಸಿದ್ಧ ಕೊಂಕಣಿ ತಂಡ ಎರಿಕ್ ಒಂಭಾರಿಯೇರವರ ಮಾಂಡಸೋಬಾಣದ ಕಾರ್ಯಕ್ರಮವಿತ್ತು,. ಅದರ ಮಧ್ಯದಲ್ಲಿ ಕೊಂಕಣಿ ಹಾಸ್ಯ ಕಲಾಪ್ರದರ್ಶನದೊಂದಿಗೆ ಜನರನ್ನು ರಂಜಿಸಿದರು. 2-3 ದಿನದ ನಂತರ ಸ್ಥಳೀಯ ಪತ್ರಿಕೆಗಳಲ್ಲಿ ಮೂರುದಿನ ಸತತವಾಗಿ ಸ್ಥಳೀಯ ಕಲಾವಿದ ವಸಂತರವರು ಪ್ರೇಕ್ಷಕರನ್ನು ರಂಜಿಸಿದರೆಂಬುದುದಾಗಿ ವರದಿಯಾಗಿತ್ತು.

ಈ ವರೆಗೆ ವಸಂತ ಬಾದೇಕರವರ ಬಗ್ಗೆ ನಾನು ಪತ್ರಿಕೆಯಿಂದಲೇ ತಿಳಿದುಕೊಂಡಿದ್ದೆ. ಈ ಮೂರು ದಿನ ಸಮಕ್ಷಮ ಅವರ ಕಾರ್ಯಕ್ರಮ ನೋಡಲು ಅವಕಾಶ ಲಭಿಸಿತು. ಹಾಗೂ ಅವರ ಬಗ್ಗೆ ಅರಿಯಲು ಇನ್ನೂ ಹೆಚ್ಚಿನ ಆಸಕ್ತಿ ಮೂಡಿತು. ಹೀಗಾಗಿ ನಾನು ಸ್ವತ ಅವರನ್ನು ಭೇಟಿಯಾಗಲು ಅವರ ಮನೆಗೆ ಹೋದೆನು. ಅವರು ನನ್ನನ್ನು ಆತ್ಮೀಯವಾಗಿ ಬರಮಾಡಿಕೊಂಡರು. ಹಾಗೂ ಚಹಾ ಪಾನಿಯ ನಂತರ ಅವರ ಸಾಧನೆ ಬಗ್ಗೆ ನಾನು ಕೇಳಿದಾಗ

ಅವರು ಅದರ ಹಿಂದೆ ಇರುವ ಅವರ ಕಠಿಣ ಪರಿಶ್ರಮದ ಬಗ್ಗೆ ಹೇಳಿದ್ದನ್ನು ಕೇಳಿ ನಾನು ವಿಸ್ಮಿತನಾದೆನು ಕಾರಣ ಅಂದು ಅವರಿಗೆ 47ವರ್ಷ ವಯಸ್ಸಾಗಿತ್ತು. ಅವರು ತಮ್ಮ 12ನೇ ವಯಸ್ಸಿನಿಂದಲೇ ಕಲಾರಂಗಕ್ಕೆ ಪಾದಾರ್ಪಣೆ ಮಾಡಿದ್ದರಂತೆ ತಂದೆಯವರು ಧಾರವಾಡ ಪೋಲೀಸ ಹೆಡಕ್ವಾರ್ಟರ್ಸನಲ್ಲಿ ಪೋಲಿಸ ಅಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದರು. ಶಾಲಾ ಬಾಲಕರಾಗಿದ್ದಾಗಲೇ ಇವರ ಕಂಠಸಿರಿ ಚೆನ್ನಾಗಿದ್ದುದರಿಂದ ಸತತ 7 ವರ್ಷ (ಪೋಲಿಸರು ವರ್ಷಕ್ಕೊಮ್ಮೆ ಸಾರ್ವಜನಿಕ ಗಣೇಶೋತ್ಸವದಲ್ಲಿ ಮಾಡುವ ನಾಟಕದಲ್ಲಿ ಸ್ತ್ರೀ ಪಾತ್ರ ಮಾಡಿ ಆ ಭಾಗದಲ್ಲೇ ಪ್ರಸಿದ್ಧರಾಗಿದ್ದರಂತೆ) 1968ರಲ್ಲಿ ಆಕಾಶವಾಣಿ ಧಾರವಾಡದ ಕೊಂಕಣಿ ಜಾಯಿ-ಜುಯ ಕಾರ್ಯಕ್ರಮದಲ್ಲಿ ಸತತ 6-7 ವರ್ಷ ಪಾತ್ರ ಮಾಡಿದ ಅನುಭವವಂತೆ 1968ರಲ್ಲಿ ಧಾರವಾಡದಲ್ಲಿ ಇವರು ಸ್ಥಾಪಿಸಿದ ಯಂಗ್‌ಸ್ಟಾರ್ ಎಂಬ ಆರ್ಕೆಸ್ಟ್ರಾ ಸತತ 8 ವರ್ಷ ನೂರಾರು ಕಾರ್ಯಕ್ರಮದೊಂದಿಗೆ ಪ್ರಸಿದ್ಧಿ ಪಡೆಯಿತು (ಬಾಂದೇಕರ ಅಂದು ಸ್ಥಾಪಿಸಿದ ಆರ್ಕೆಸ್ಟ್ರಾ ಕರ್ನಾಟಕದಲ್ಲೇ ಪ್ರಥಮ ಎಂದು ವಿಜಯ ಕರ್ನಾಟಕ ಲವಲವಿಕೆ ಪುಟದಲ್ಲಿ ದಿನಾಂಕ 25-08-2013 ರಂದು ಉಲ್ಲೇಖವಿದೆ.) ಇದು ಬಾಂದೇಕರವರ ಹಲವಾರು ದಾಖಲೆಗಳಲ್ಲಿ ಇದೊಂದು ಎಂದು ಹೇಳಿದರು. ಇವರ ಕಲಾಪರಿಚಯದ ಬಗ್ಗೆ 1978 ರಲ್ಲಿ (42 ವರ್ಷದಹಿಂದೆ) ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ವರದಿಯಾಗಿದೆ. 1977 ರಲ್ಲಿ ಇವರ ಕಲೆ ಹಾಗೂ ಸಂಘಟನಾ ಚತುರತೆ ಕಂಡು ಅವರು ನೌಕರಿ ಮಾಡುವ ಕಿರ್ಲೋಸ್ಕರ ಕಂಪನಿ ಹುಬ್ಬಳ್ಳಿಯ ವರ್ಕ್ಸ್ ಮ್ಯಾನೇಜರ ಶ್ರೀ ಎಸ್. ಎನ್. ಟೆಂಬೆ ಸ್ವತ ಗಾಯಕರಿದ್ದುದರಿಂದ ಬಾಂದೇಕರರಿಗೆ ಕಂಪನಿ ಆರ್ಕೆಸ್ಟ್ರಾ ಸ್ಥಾಪಿಸಲು ವಾದ್ಯಾಪರಿಕರ, ಡ್ರೆಸ್, ನೌಕರರಲ್ಲಿಯ ಕಲಾವಿದರ ರಿಹರ್ಸಲ ಮಾಡಲು ಸಹಕಾರ ನೀಡಿ ಸತತ 5 ವರ್ಷ ಯಶಸ್ವಿ 20-25 ಕಾರ್ಯಕ್ರಮ ನೀಡಿದರಂತೆ. 1982 ರಲ್ಲಿ ಸ್ವರಚಿತ ಕೊಂಕಣಿ ಗೀತೆಗಳ ಆರ್ಕೆಸ್ತ್ರಾ ಸ್ಟ್ರಾ ಚಾರಿಟ್ ಶೋ ಯಶಸ್ವಿಯಾದರೆ. ಸ್ವರಚಿತ ಕನ್ನಡ ನವ್ಯ ಗೀತೆಗಳ ಕ್ಯಾಸೆಟನ್ನು ವಿಜಯಾ ರಿಕಾರ್ಡಿಂಗನವರು ಹೊರಹಾಕಿದರು.

1983ರಲ್ಲಿ ಹುಬ್ಬಳ್ಳಿಯಲ್ಲಿ ಸಹೋದರಿ ಸೀಮಾ ಹಾಗೂ ಶಶಿಕಲಾ ಸಹೋದರ ಗಣೇಶರವರೊಂದಿಗೆ ಹುಬ್ಬಳ್ಳಿಯು ಆಯ್ದ ಕಲಾವಿದರೊಂದಿಗೆ ಮೆಲೊಡಿ ಕಾಂಪೋಜರ್ಸ್ ಎಂಬ ಆರ್ಕೆಸ್ಟ್ರಾ ಪ್ರಾರಂಭಿಸಿದ್ದು 3 ವರ್ಷದಲ್ಲಿ ನೂರಾರು ಯಶಸ್ವಿ ಕಾರ್ಯಕ್ರಮಗಳು ಅದರಲ್ಲಿ 30-40 ಚಾರಿಟಿಶೋಗಳು ಚಿತ್ರನಟರಾದ ವಿಷ್ಣುವರ್ಧನ-ಭಾರತಿ, ಪ್ರಭಾಕರ, ಜಯಮಾಲಾ, ರಾಜೇಶ, ದಿನೇಶ, ತಾರಾ, ಅಭಿನಯ, ಸುಂದರರಾಜ ಹಾಗೂ ಹಿಂದಿ ಕಾಮೆಡಿ ಕಿಂಗ್ ಜಾನಿಲಿವ್ವರ ಜೊತೆ ಗೋವಾ ಹಾಗೂ ಮಹಾರಾಷ್ಟ್ರದಲ್ಲಿ ಮಾಡಿದ ಚಾರಿಟಿ ಶೋ ಕರ್ನಾಟಕದ ಆರ್ಕೆಸ್ಟ್ರಾ ಎಂಬ ದಾಖಲೆಯಾಗಿದೆ. ಆದರೆ ಸತತ ಕಾರ್ಯಕ್ರಮ ರಾತ್ರಿ ಜಾಗರಣೆ ಹಗಲು ಕಿರ್ಲೋಸ್ಕರ ಕಂಪ[ನಿ] ಸೇಲ್ಸ್ ಡಿಪಾರ್ಟಮೆಂಟ ಆಫೀಸು ಕೆಲಸ ಈ ಎರಡ[ರ] ಮಧ್ಯೆ ಬಾಂದೇಕರ ಆರೋಗ್ಯ ಹದಗೆಟ್ಟಿತು ಹಾಗೂ ನೌಕ[ರಿ] ತ್ಯಜಿಸಿ ಆರ್ಕೆಸ್ಟ್ರಾ ಮೆಲೊಡಿ ಕಾಂಪೋರ್ಟ್ಸ್ ಸಹೋದ[ರಿ] ಸೀಮಾ ಅವಳ ಗಂಡ ಜಯಶೀಲ ಕೈಯಲ್ಲಿ ನೀಡಿ ತಮ್ಮ ಕುಟುಂಬ ಸಮೇತ ಸ್ವಂತ ಊರಿನ ಮನೆ ಸದಾಶಿವಗ[ಡ] ಕಾರವಾರದಲ್ಲಿ ಬಂದು ನೆಲೆಸಿದರಂತೆ ಅವರು ಹುಬ್ಬಳ್ಳಿಯಲ್ಲಿ ಕಟ್ಟಿದ ಆರ್ಕೆಸ್ಟ್ರಾ ಮೆಲೊಡಿ ಕಾಂಪೋಜರ್ಸ್ ಸತತ 36 ವರ್ಷ ಹೆಸರು ಮಾಡಿ ಸಹೋದರಿ ಗಂಡ ಜಯಶೀಲ 2019ರಲ್ಲಿ ಮೃತರಾದ ನಂತರ ಅದು ಸ್ಥಗಿತಗೊಂಡಿತು.

1986 ನವೆಂಬರ ತಿಂಗಳಲ್ಲಿ ಬಾಂದೇಕರರು ಕಾರವಾರಕ್ಕೆ ಬಂದ ನಂತರ ಅನಾರೋಗ್ಯರಾದರೂ ಸುಮ್ಮನೆ ಕೂಡ್ರದೇ ತಮ್ಮ ಕಲಾಸೇವೆಯೊಂದಿಗೆ ಅನುಭವದ ಆಧಾರದೊಂದಿಗೆ ಸ್ವರಚಿತ ಗೀತಗಾಯನ ಅಣುಕು ಹಾಸ್ಯ ಏಕಪಾತ್ರಾಭಿನಯದ ಜೊತೆಗೆ ಕಾರ್ಯಕ್ರಮ ಮಾಡುವ ದೃಷ್ಟಿಯಿಂದ ಉತ್ತರ ಕನ್ನಡ ಜಿಲ್ಲಾ ವಾರ್ತಾಧಿಕಾರಿಯಾಗಿ ಶ್ರೀ ಬಸವರಾಜ ಪಾರಾ ಆರೋಗ್ಯ ಇಲಾಖೆಯು, ವಿವಿಧ ಯೋಜನೆಗಳಾದ ಏಡ್ಸ್, ಗುಟಾಕಾ, ಹೆಂಡ, ದುಶ್ಚಟಗಳು, ಸಾಕ್ಷರತಾ, ಪರಿಸರ, ರಕ್ತದಾನ, ನೇತ್ರದಾನ ಮುಂತಾದವುಗಳನ್ನು ಮಾಡಲು ಅವಕಾಶ ಮಾಡಿ ಕೊಡಬೇಕಾಗಿ ವಿನಂತಿಸಿದರು. ಈ ಮೊದಲು ಜಿಲ್ಲೆಯಲ್ಲಿ ಕಲಾವಿದರು ಇಂಥ ಕಾರ್ಯಕ್ರಮ ಮಾಡಲು ಲಭ್ಯವಿರದ ಕಾರಣ ದೂರದ ಜಿಲ್ಲೆಗಳಾದ ಬಿಜಾಪುರ, ಬೆಳಗಾವಿಯಿಂದ ಜನಪದ ಗಾಯನ ತಂಡಗಳು ಬಂದು ಹೋಗುತ್ತಿದ್ದವಂತೆ. ಆದ್ದರಿಂದ ವಸಂತ ಬಾಂದೇಕರರವರ ಕಲಾ ಪ್ರಕಾರ ಸ್ವ-ರಚಿತ ಗೀತ ಗಾಯನ ಪ್ರದರ್ಶನ ನೋಡಿದ ನಂತರ ಸರ್ಕಾರಿ ಎಲ್ಲಾ ಯೋಜನಾ ಪ್ರಚಾರಕ ಕಾರ್ಯಕ್ರಮಗಳನ್ನು (ಜಿಲ್ಲೆಯ 11 ತಾಲೂಕಿನಲ್ಲಿಯೂ) ಮಾಡಲು ಅವಕಾಶ ಮಾಡಿಕೊಟ್ಟರು.

ವಸಂತ ಬಾಂದೇಕರರು ಕಾರವಾರ ತಾಲೂಕಿನ ನದಿ ಭಾಗದ ಕೊಂಕಣಿ ಗ್ರಾಮಗಳಿಗಾಗಿ ಕೊಂಕಣಿಯಲ್ಲೂ, ಜೊಯಿಡಾ-ಹಳಿಯಾಳ ತಾಲೂಕಿನಲ್ಲಿ ಮರಾಠಿಯಲ್ಲೂ 8 ತಾಲೂಕಿನಲ್ಲಿ ಕನ್ನಡದಲ್ಲಿ ಕಾರ್ಯಕ್ರಮ ನಂತರ 8 ವರ್ಷ ಮಾಡಿ ಯಶಸ್ವಿಯಾದರಂತೆ ಮೊಬೈಲ್ ರಿಕ್ಷಾ ಸರಿಯಾದ ಬಸ್ ವ್ಯವಸ್ಥೆ ಇರದ ಆ ದಿನಗಳು ಜೊಯಿಡಾ ತಾಲೂಕಿನಲ್ಲಿ ಕಾಡಿನಲ್ಲಿ ನಡೆದುಕೊಂಡೇ ಹೋಗಬೇಕು. ಒಂದು ಕಾರ್ಯಕ್ರಮಕ್ಕೆ ರೂ. 75/- ಮಾತ್ರ ಸಂಭಾವನೆ, ಆದರೆ ಬಾಂದೇಕರ ಈ ಕಾರಣದದಿಂದ ಜಿಲ್ಲೆಯ ಎಲ್ಲ ಗ್ರಾಮದ ಚಿರಪರಿಚಿತ ಕಲಾವಿದರಾಗಿದ್ದರು. ಅಂದಾಜು 500-600 ಕಾರ್ಯಕ್ರಮ ಮಾಡಿದ್ದರು. ಅಂತೆಯೇ ಜಿಲ್ಲೆಯ ವಿವಿಧ ಭಾಗದಿಂದ ಸಾರ್ವಜನಿಕ ಉತ್ಸವದಲ್ಲಿ ಇವರಿಗೆ ಕಾರ್ಯಕ್ರಮಗಳು ದೊರೆಯ ತೊಡಗಿದವಂತೆ.

1993 ರಲ್ಲಿ ಮಂಗಳೂರಿನಲ್ಲಿ ಜರುಗಿದ

(ಕೊಂಕಣಿ ಭಾಷೆಗೆ ಸ್ಥಾನಮಾನ ಸಿಕ್ಕ ನೆನಪಿಗಾಗಿ) ಪ್ರಥಮ ವಿಜಯೋತ್ಸವದ ಅಂಗವಾಗಿ ಸಂಭ್ರಮ ಎಂಬ ಕಾರ್ಯಕ್ರಮದ ಅಂಗವಾಗಿ ರಾಜ್ಯ ಮಟ್ಟದ ಪ್ರತಿಭಾ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ಅದರಲ್ಲಿ ರಾಜ್ಯದ ವಿವಿಧ ಭಾಗದಿಂದ 625 ಕೊಂಕಣಿ ಭಾಷಿಕ ಸ್ಪರ್ಧಾಳುಗಳು ಭಾಗವಹಿಸಿದ್ದರು. ಅದರಲ್ಲಿ ವಸಂತ ಬಾಂದೇಕರರವರು ರಾಜ್ಯಮಟ್ಟಕ್ಕೆ ಪ್ರಥಮ ಪ್ರಶಸ್ತಿ ಮಾಂಡ ಸೋಬಾಣರವರ ಉತ್ಯುತ್ತಮ ನಟಪ್ರಶಸ್ತಿಯನ್ನು 20-08-1993 ರಂದು ಶ್ರೀ ಕೆ. ಕೆ. ಪೈ ಸಿಂಡಿಕೇಟ ಬ್ಯಾಂಕ ಚೇರಮನ್‌ರ ಅಮೃತ ಹಸ್ತದಿಂದ ದೊರೆಯಿತು. ಅದೇ ವರ್ಷ ರಾಷ್ಟ್ರ ಮಟ್ಟದ ಸ್ಪರ್ಧೆಯಲ್ಲಿ ಧ್ವಿತೀಯ ಸ್ಥಾನವನ್ನು ಪಡೆದರಂತೆ.

ವಸಂತ ಬಾಂದೇಕರವರ ಸಂಘರ್ಷ ಸಾಧನೆಯನ್ನು ಗಮಿನಿಸಿದಾಗ ನನಗೂ ಬಹಳಷ್ಟು ಅನುಭವ ಪ್ರೇರಣೆ ದೊರೆಯಿತು. ನನ್ನ ಕಾವ್ಯ ರಚನೆ, ಯಕ್ಷಗಾನ, ತಾಳಮದ್ದಲೆಯನ್ನು ಮುಂದೆ ಸಾಗಿಸಿಕೊಂಡು ಹೋಗಲು ದಾರಿದೀಪಯಾಯಿತು. ಅದೇ ಸಂದರ್ಭದಲ್ಲಿ 1995 ಫೆಬ್ರುವರಿ 11, 12 ರಂದು ಶಿರ್ಸಿಯಲ್ಲಿ 20ನೇ ಅಖಿಲ ಭಾರತ ಕೊಂಕಣಿ ಅಧಿವೇಶನ ಆಯೋಜಿಸಲಾಗಿತ್ತು. ಸಮ್ಮೇಳನಾಧ್ಯಕ್ಷರು ಶ್ರೀ ವ್ಹಿ. ಎಸ್. ಸೊಂದೆ, ಅಧ್ಯಕ್ಷತೆ ಡಾ. ಕಾಶಿನಾಥ ಮಹಾಲೆ, ಉದ್ಘಾಟಕರು ಮಂತ್ರಿಗಳಾದ ಶ್ರೀ ಆರ್. ವ್ಹಿ. ದೇಶಪಾಂಡೆಯವರು. ಆ ಕಾರ್ಯಕ್ರಮಕ್ಕೆ ವಿವಿಧ ರಾಜ್ಯದ ಕಲಾವಿದರು, ಸಾಹಿತಿಗಳೂ, ಸೇರಿದ್ದರು ಅದರಲ್ಲಿ ಪ್ರಮುಖವಾಗಿ ಮಂಗಳೂರಿನ ಶ್ರೀ ಬಸ್ತಿ ವಾಮನ ಶೆಣೈ, ಶ್ರೀ ಏರಿಕ್ ಓರಭಾರಿಯ ಕೇರಳದ ಶ್ರೀ ಪುರುಷೋತ್ತಮ ಮಲ್ಯಾ, ಶ್ರೀ ವಿ. ಎಸ್. ಶೆನಾಯ ಗೋವಾದ ಡಿ. ತಾನಾಜಿ ಹಳದಣಕರ, ಡಾ. ಜಯಂತಿ ನಾಯ್ಕ, ಶ್ರೀಮಹಾಬಳೇಶ್ವರ ಸೈಲ್, ಡಾ. ಮನೋಹರ ಸರ ದೇಸಾಯಿ ರವೀಂದ್ರ ಕೆಳಕರ ಮುಂಬಯಿಯಿಂದ ಶ್ರೀ ಜೆ. ಬಿ. ಮೊರಾಯಿಸ್, ಶ್ರೀ ಜಿ. ಬಿ. ಸ್ವಿಕೆರಾ ಮುಂತಾದವರು ಉಪಸ್ತಿತರಿದ್ದರು. ಎರಡನೆಯ ದಿನ ಫೆಬ್ರುವರಿ 12 1995 ರಂದು ಸಮಾರೋಪ ಸಮಾರಂಭಕ್ಕಾಗಿ ನಾನೂ ಉಪಸ್ಥಿತನಿದ್ದೆನು. ಸಂಜೆ 5 ಘಂ-ಟೆಗೆ ಸಮಾರೋಪ ಸಮಾರಂಭ ಮುಕ್ತಾಯ ಮಾಡಿದರು. ಸಂಜೆ 7 ರಿಂದ 9 ರವರೆಗೆ ವಿವಿಧ ಕೊಂಕಣಿ ಸಾಂಸ್ಕೃತಿಕ ಕಾರ್ಯಕ್ರಮಗಳಿದ್ದವು. ಸಮಾರೋಪ ಸಮಾರಂಭ ಮುಗಿದು ಎಲ್ಲರೂ ಚಹ ತಿಂಡಿಯನ್ನು ಸ್ವೀಕಸುವ ಸಂದರ್ಭದಲ್ಲಿ ಸಮಾರೋಪ ಸಮಾರಂಭದಲ್ಲಿ ಗಾಯನ ಮಾಡಬೇಕಾಗಿದ್ದ ಶ್ರೀಮತಿ ಹಾಲಾಡಿ ಲಕ್ಷ್ಮೀಯವರ ತಂಡ ತಡವಾಗಿ ಬಂದು ತಲುಪಿತ್ತು. ಅವರಿಗೆ 30 ನಿಮಿಷದ ಅವಕಾಶ ನೀಡಲು ಸಭಾಗೃಹದಲ್ಲಿ ಎಲ್ಲರನ್ನೂ ಕೂಡ್ರಿಸಲಾಯಿತು. ಹಾಗೂ ಅವರ ವಾದ್ಯವೃಂದದವರು ಸೆಟಿಂಗ ಮಾಡಲು 20 ನಿಮಿಷ ಬೇಕಾಗಿತ್ತು ಆ ಸಮಯದಲ್ಲಿ ಕೊಂಕಣಿಗರನ್ನು ರಂಜಿಸಲು ವಸಂತ ಬಾಂದೇಕರಗೆ ವೇದಿಕೆ ನೀಡಲಾಯಿತು. ಅವರ ಆ ಕಾರ್ಯಕ್ರಮ ಎಲ್ಲರಿಗೂ ಹಿಡಿಸಿತು ವಿಶೇಷವಾಗಿ ಎದುರಿಗೆ ಕುಳಿತ ಡಾ. ಮನೋಹರ ಸರದೇಸಾಯಿ ಹಾಗೂ ಗೋವಾದ ದಾಮೋದರ ಮೌಜಿ ಹಸ್ತಲಾಘನ ಮಾಡಿ ಮತ್ತೊಮ್ಮೆ ವೇದಿಕೆಯಲ್ಲಿ ಕಾರ್ಯಕ್ರಮ ಮಾಡಲು ಒತ್ತಾಯಿಸಿದರು. ಅವರ ಬೇಡಿಕೆಯಂತೆ ಹಾಲಾಡಿ ಲಕ್ಷ್ಮೀಯವರ ಕಾರ್ಯಕ್ರಮ ನಂತರ ಬಾಂದೇಕರರು ಪುನಃ 15-20 ನಿಮಿಷ ಯಶಸ್ವಿಯಾಗಿ ಕಾರ್ಯಕ್ರಮ ನೀಡಿದರು. ಈ ಮಧ್ಯೆ ಅಂದು ಸಂಜೆ ನಡೆಯಬೇಕಿದ್ದ ಕಲಾ ತಂಡಗಳು ಅಲ್ಲಿ ಉಪಸ್ಥಿತರಿದ್ದುದರಿಂದ ಸಭಾಗೃಹದಲ್ಲಿ ನೆರೆದ ಸಭಿಕರು ಮತ್ತೆ ಸಂಜೆ ತಿರುಗಿ ಬಾರದೆಂದು ತಿಳಿದು ಎಲ್ಲ ಕಾರ್ಯಕ್ರಮ ಆಗಲೇ ಮುಗಿಸಲು ಸಂಘಟಕರಲ್ಲಿ ವಿನಂತಿಸಿ ಅದರಂತೆ ಮಾಡಿದರು. ಈ ಪ್ರಸಂಗದಲ್ಲಿ ಆಯೋಜಕರ ವಿನಂತಿ ಮೇರೆಗೆ ಬಾಂದೇಕರರು ಮತ್ತೆ ಎರಡು ಸಲ ವೇದಿಕೆಗೆ ಬಂದರು ಅಂದರೆ ಆ ದಿನ 4 ಸಲ ವೇದಿಕೆಗೆ ಬಂದು ಕೊನೆಗೆ ಮ್ಯಾನ ಆಪ್ ದಿ ಕಲ್ಚರಲ್ ಡೇ ಎಂದು ಪ್ರಶಸ್ತಿ ಪಡೆದು-ಕೊಂಡರು. ಈ ಕಾರ್ಯಕ್ರಮದ ನಂತರ ಬಾಂದೇಕರರಿಗೆ ಗೋವಾ ಕರ್ನಾಟಕ ಮಹಾರಾಷ್ಟ್ರ, ಕೇರಳ ರಾಜ್ಯದ ವಿವಿಧ ಕೊಂಕಣಿ ಸಂಘಟನೆಗಳಿಂದ ನೂರಾರು ಕಾರ್ಯಕ್ರಮಗಳು ದೊರೆತವು.

1995ರಲ್ಲಿ ಉಡುಪಿಯಲ್ಲಿ ಜರುಗಿದ ಅಖಿಲಭಾರತೀಯ ಕೊಂಕಣಿ ನಾಟಕ ಸ್ಪರ್ಧೆಯಲ್ಲಿ ವಸಂತರವರು ಸ್ವರಚಿತ ನಾಟಕ, ಪಾತ್ರಧಾರಿ ನಿರ್ದೇಶನ ಮಾಡಿ ತಂಡದೊಂದಿಗೆ ಹೋಗಿ ಕಾರ್ಯಕ್ರಮ ನೀಡಿ ಬಂದರು. ವಸ್ಂತ ಬಾಂದೇಕರರು ಕೊಂಕಣಿ ಭಾಶೆ ಕಲೆ ಸಾಹಿತ್ಯಕ್ಕಾಗಿ ಹೆಚ್ಚು ಒತ್ತು ಕೊಟ್ಟವರು ಆಕಾಶವಾಣಿ ಕಾರವಾರ, ಗೋವಾ, ಬೆಂಗಳೂರುನಿಂದ ಹಾಗೂ ದೂರದರ್ಶನ ಬೆಂಗಳೂರು, ಪಣಜಿಯಿಂದ ಕೊಂಕಣಿ ಕಾರ್ಯಕ್ರಮ ನೀಡಿದರು. ಕರಾವಳಿ ಉತ್ಸವ ಪ್ರಾರಂಭದಿಂದ 1992 ರಿಂದ ಯಾವುದೇ ಕಾರ್ಯಕ್ರಮಕ್ಕೆ ಅವಕಾಶ ಪಡೆದುಕೊಂಡು ಪ್ರದರ್ಶನ ನೀಡಿ ಯಶಸ್ವಿಯಾಗಿದ್ದಾರೆ. 1999ರಲ್ಲಿ ಕಾರವಾರದಲ್ಲಿ ಪ್ರಥಮ ಬಾರಿ ಸಚಿವರಾದ ಶ್ರೀ ಪ್ರಭಾಕರ ರಾಣೆಯವರ ನೇತ್ರತ್ವದಲ್ಲಿ ಅಂತರಾಷ್ಟ್ರೀಯ ಸಪ್ತಾಹ ಆಯೋಜಿಸಲಾಗಿತ್ತು 40 ದೇಶದ ಯುವಕರು ಸೇರಿದ್ದು ಪ್ರತಿದಿನ ಸಂಜೆ ವಿವಿಧ ಸಂಸ್ಕೃತಿ ಕಾರ್ಯಕ್ರಮಗಳು 7 ದಿನವು ಜರುಗುತ್ತಿದ್ದವು. ಈ ಕಾರ್ಯಕ್ರಮಕ್ಕೆ ಸಾಂಸ್ಕೃತಿಕ ಕಾರ್ಯದರ್ಶಿಯಾಗಿ ವಸಂತ ಬಾಂದೇಕರರವರನ್ನು ಆಯ್ಕೆ ಮಾಡಲಾಗಿತ್ತು. ವಸಂತರವರು 7 ದಿನವೂ ಪ್ರತಿ ದಿನ 1-2 ರಂತೆ ವಿವಿಧ ಕೊಂಕಣಿ ಕಲಾ ಪ್ರಕಾರಗಳ ಪ್ರದರ್ಶನಕ್ಕೆ ಅವಕಾಶ ಮಾಡಿಕೊಟ್ಟರು ಹಾಗೂ ಯಶಸ್ವಿಯಾದರು.

2000ನೇ ಇಸ್ವಿಯಲ್ಲಿ ಬೆಂಗಳೂರಿನ ಪ್ರಸಿದ್ಧ ಝೇಂಕಾರ ಕ್ಯಾಸೆಟ್ ಕಂಪನಿಯವರು ವಸಂತ ಬಾಂದೇಕರವರು 'ಏಷ್ಟು ನಗ್ತೀರಿ ನಗ್ರಿ' ಎಂಬ ಕ್ಯಾಸೆಟ್ ಹೊರತಂದಿದೆ. 2007 ರಲ್ಲಿ ನ್ಹವಿಮೆಳಾ ಆಚರಣೆಯಾದಾಗ 3-4 ಕೊಂಕಣಿ ಜನಪದಕ್ಕೂ ಪ್ರಕಾರಗಳಿಗೆ ಅವಕಾಶ ಮಾಡಿಕೊಟ್ಟರು. 2007ರಲ್ಲಿ ಗೋವಾದ ಪಣಜಿಯಲ್ಲಿ 25ನೇ ಅಖಿಲಭಾರತ ಕೊಂಕಣಿ ಅಧಿವೇಶನ 10, 11, 12

ಫೆಬ್ರುವರಿ 2007 ರಂದು ಆಯೋಜಿಸಲಾಗಿತ್ತು. ನಾನು ಸಹಿತ ಕಾವ್ಯವಾಚನಕ್ಕಾಗಿ ಅವ್ಹಾನಿತನಾಗಿ ಉಪಸ್ಥಿತನಿದ್ದೇನು. ಮೊದಲನೆಯ ದಿನ ವಸಂತ ಬಾಂದೇಕರವರ ಹಾಸ್ಯ ಕಲಾಪ್ರದರ್ಶನವಿತ್ತು ಸಮ್ಮೇಳನಾಧ್ಯಕ್ಷರು ಡಾ. ಶಾಂತರಾಮ ನಾಯಕ ಅಧ್ಯಕ್ಷರು ಪಾಲಮೊರಾಯಸ್ ಉದ್ಘಾಟಕರು, ಗೋವಾರಾಜ್ಯಪಾಲರಾದ ಶ್ರೀ ಎಸ್. ಸಿ. ಝುಮೀರರವರಿದ್ದರು. ವಸಂತ ಬಾಂದೇಕರರವರ ಹಾಸ್ಯ ಆಯೋಜಕರಿಗೂ ಹಾಗೂ ಪ್ರೇಕ್ಷಕರಿಗೂ ಆಕರ್ಷಿಸಿದ್ದರಿಂದ ಸತತ ಮೂರುದಿನ ವಿವಿಧ ವಿಚಾರಗೋಷ್ಠಿ ಮಧ್ಯೆ ಜನರ ಬೇಸರ ಕಳೆಯಲು ವಸಂತ ಬಾಂದೇಕರರು ಪ್ರತಿಬಾರಿ ವೇದಿಕೆಗೆ ಬಂದು ತಮ್ಮ ಉತ್ಕರ್ಷ ದರ್ಜೆಯ ಕಾರ್ಯಕ್ರಮ ನೀಡಿ (ಮಧ್ಯ ಮಧ್ಯೆ 10 ನಿಮಿಷ) ಹೋಗುತ್ತಿದ್ದರು. ಆಗ 3 ದಿನ ಊಟದ ಸಮಯದಲ್ಲಿ ವಿವಿಧ ರಾಜ್ಯದಿಂದ ಬಂದ ಕೊಂಕಣಿ ಅಭಿಮಾನಿಗಳು ಇವರ ಜೊತೆ ನಿಂತು ಫೊಟೋ ತೆಗೆದುಕೊಳ್ಳುತ್ತಿದ್ದರು. ಅಷ್ಟರ ಮಟ್ಟಿಗೆ ಬಾಂದೇಕರರು ಪ್ರಖ್ಯಾತರಾಗಿದ್ದರು ಮುಂದೆ 2009ರಲ್ಲಿ ಕುಮಟಾದಲ್ಲಿ ಜರುಗಿದ 17ನೇ ಸಾಹಿತ್ಯ ಸಮ್ಮೇಳನದಲ್ಲಿ ತಮ್ಮ ಕೊಂಕಣಿ ಕಾರ್ಯಕ್ರಮದಿಂದ ಜನರನ್ನು ರಂಜಿಸಿದರು.

ಸಾಹಿತಿಯಾಗಿ ಇವರು ಲರ್ನ್ ಕೊಂಕಣಿ ಇನ್ 30 ಡೇಜ ಎಂಬ ದೇವನಾಗರಿಯಲ್ಲಿ ಬರೆದು ಪ್ರಕಟಿಸಿ ಮಾರಾಟ ಮಾಡಿದ 1000 ಪ್ರತಿಗಳು ಕೆರಳ, ಮಂಗಳೂರು, ಗೋವಾ, ಮಹಾರಾಷ್ಟ್ರದಲ್ಲೂ ಕಾರವಾರದ ಸೀಬರ್ಡ ನೌಕಾನೆಲೆಗೆ ವಿವಿಧ ರಾಜ್ಯದವರಿಗೆ ಕೊಂಕಣಿ ಕಲಿಯಲು ಸಹಕಾರಿಯಾಗಿದ್ದರಿಂದ ಬೇಗನೇ ಮಾರಾಟಗೊಂಡವು. ಕಾರವಾರದಲ್ಲಿ ಕೊಂಕಣಿ ಭವನ ಕಟ್ಟಲು ದಿ. ಶ್ರೀನಿವಾಸ ನೀಲಾವರವರು ತಮ್ಮ ಕಡವಾಡದ 1 ಎಕರೆ ಭೂಮಿಯನ್ನು ಕೊಂಕಣಿ ಭವನ ಕಟ್ಟಲು ವಸಂತ ಬಾಂದೇಕರರ ಪ್ರೇರಣೆಯಿಂದ ದಾನವಾಗಿ ನೀಡಲು ಮುಂದೆ ಬಂದಿದ್ದರಿಂದ ಅಂದಿನ ಕೊಂಕಣಿ ಅಕಾಡೆಮಿ ಅಧ್ಯಕ್ಷರಾದ ಶ್ರೀ ಎರಿಕ್ ಓಝೂರಿಯಾರವರು ಕಡವಾಡಕ್ಕೆ ಬಂದು ಪತ್ರಿಕಾಗೋಷ್ಠಿ ಮಾಡಿಯೂ ಹೋಗಿದ್ದರು. ಆದರೆ ನೀಲಾವರ ಕುಟುಂಬದ ಕೆಲ ಸದಸ್ಯರ ಆಕ್ಷೇಪಣೆಯಿಂದ ಆಯೋಜನೆ ಕೈಬಿಡಲಾಯಿತು.

ವಸಂತ ಬಾಂದೇಕರವರ ಕೊಂಕಣಿ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರದವರು ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ ಸದಸ್ಯರಾದ ತಕ್ಷಣ ವಸಂತ ಬಾಂದೇಕರರವರು ಒಂದು ಯೋಜನೆಯನ್ನು ಮಾಡಿದರು. ರಾಜ್ಯ ಮಟ್ಟದ ಕೊಂಕಣಿ ಜಾಗೃತ ಅಭಿಯಾನ-09 ಎಂಬ ಹೆಸರಿನಿಂದ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಕೊಂಕಣಿಗರು ವಾಸಿಸುತ್ತಿರುವುದರಿಂದ ಕಳೆದ 15 ವರ್ಷದಿಂದ ಸ್ಥಾಪನೆಯಾದಾಗನಿಂದ ಅಕಾಡೆಮಿ ದಕ್ಷಿಣ ಕನ್ನಡ, ಉಡುಪಿ, ಉತ್ತರಕನ್ನಡ 3 ಜಿಲ್ಲೆಗಳಲ್ಲಿ ಮಾತ್ರ ಕಾರ್ಯಕ್ರಮಗಳಾಗುತ್ತ ಬಂದಿದ್ದವು. 25 ಜನರ ಯುವಕ ಯುವತಿಯರ ಕೊಂಕಣಿ ವಿವಿಧ ಕಲಾಪ್ರಕಾರಗಳಾದ ಕೊಂಕಣಿ ಮಹಿಳಾ ಸಂಪ್ರದಾಯ ಗೀತೆಗಳು ಫುಗಡಿ ನೃತ್ಯ ಧಾಲೊಮಾಂಡೊ, ಕೋಲಾಟ ಕಾಂತರಗೀತ, ಕಾಂತರನಾಚ ಪುರುಷರ ಗುಮಟ ಸುವಾರಿ, ಖೇಳಪ್ರಸಂಗ, ಜಾದೂ. ಶಾಡೊಪ್ಲೆ, ಹಾಸ್ಯ ಏಕಪಾತ್ರಾಭಿನಯ, ನಾಟಕುಳೊ ಮುಂತಾದವುಗಳನ್ನು ತಮ್ಮ ನೇತ್ರತ್ವದೊಂದಿಗೆ ತಯಾರಮಾಡಿಕೊಂಡು ಅಕಾಡೆಮಿ ಅಧ್ಯಕ್ಷರಾದ ಶ್ರೀ ಕುಂದಾಪುರ ನಾರಾಯಣ ಖಾರ್ವಿ ಹಾಗೂ ರಿಜಿಸ್ಟಾರ ಶಿವರುದ್ರಪ್ಪನವರ ಮಾರ್ಗದರ್ಶನದಲ್ಲಿ ಆಯಾ ಜಿಲ್ಲೆಗಳಿಗೆ ಹೋಗಿ ವಿವಿಧ ಕೊಂಕಣಿ ಸಂಘಟಕರು. ಕನ್ನಡ ಸಂಘಟಕರು, ಜಿಲ್ಲಾ ವಾರ್ತಾಧಿಕಾರಿ, ಕನ್ನಡ ಸಂಸ್ಕೃತಿ ಇಲಾಖೆಯ ಸಹಾಯಕ ನಿರ್ದೇಶಕರನ್ನು ಸಂಪರ್ಕಿಸಿ ಪತ್ರಿಕಾವರದಿಗಾರರನ್ನು ಸಂಪರ್ಕಿಸಿ ಜಿಲ್ಲಾ ರಂಗಮಂದಿರದಲ್ಲಿ ಕಾರ್ಯಕ್ರಮದ ದಿನಾಂಕ ಅತಿಥಿಗಳನ್ನು ಮಾಡಿಕೊಂಡು ಬರುತ್ತಿದ್ದರು ಹಾಗೂ ಆ ದಿನಾಂಕದಂದು ಸರಿಯಾದ ಸಮಯಕ್ಕೆ ತಂಡದೊಂದಿಗೆ ಹಾಜರಾಗುತ್ತಿದ್ದರು. ಕೊಂಕಣಿ ತಂಡದ ವಿವಿಧ ಕಾರ್ಯಕ್ರಮಗಳು ಅಲ್ಲಿಯ ಕೊಂಕಣಿ ಕುಟುಂಬಗಳಿಗೆ ಆಕರ್ಷಿಸಿದರೆ ಕನ್ನಡದ ಜನರಿಗೆ ಪ್ರಥಮಬಾರಿ ಕೊಂಕಣಿ ಕಲಾ ಪ್ರಕಾರ ನೋಡಲು ಅವಕಾಶ ಒದಗಿತ್ತು. ನಾನು ಆ ಕಲಾತಂಡದಲ್ಲಿ ಕೊಂಕಣಿ ಕಾವ್ಯವಾಚಕ ಕವಿ ಹಾಗೂ ತಾಳಮದ್ದಲೆ ಕೊಂಕಣಿ ಕಲಾವಿದನಾಗಿ ಭಾಗವಹಿಸಿದ್ದೆ. 2009 ಸಪ್ಟೆಂಬರ 05 ರಂದು ಬೆಳಗಾವಿಯಿಂದ ಕಾರ್ಯಕ್ರಮ ಪ್ರಾರಂಭವಾಗಿ ಚಿಕ್ಕೋಡಿ,ಬಾಗಲಕೊಟ, ಬಿಜಾಪುರ, ಗುಲ್ಬರ್ಗಾ, ಬೀದರ, ಹೊಸಪೇಟ, ಬಳ್ಳಾರಿ, ಕೊಪ್ಪಳ, ಗದಗ, ದಾವಣಗೆರೆ, ಹುಬ್ಬಳ್ಳಿ, ಧಾರವಾಡ, ಮೈಸೂರು, ಚಾಮರಾಜನಗರ, ಬೆಂಗಳೂರು ಮುಂತಾದ ಭಾಗದಲ್ಲಿ ಯಶಸ್ವಿ ಕಾರ್ಯಕ್ರಮಗಳು ಜರುಗಿದವು. ಈ ಸಾಧನೆ ಈ ಮೊದಲು ಅಕಾಡೆಮಿಯಲ್ಲಿ ಈ ಹಿಂದೆ ಆಗಲಿಲ್ಲ ಅದರ ನಂತರವೂ ಆಗಲಿಲ್ಲ. ಇವರ ಸಂಚಾಲಕತ್ವದಲ್ಲಿ ರಾಜ್ಯ ಕೊಂಕಣಿ ಮಹಿಳಾ ಉತ್ಸವ ಮಕ್ಕಳ ಉತ್ಸವ, ನಾಟಕ ಉತ್ಸವ ಹೀಗೆ ವಿಭಿನ್ನ ಕಾರ್ಯಕ್ರಮಗಳಾದವು. ಕಾರವಾರ (ಗೋವಾ ಗಡಿಭಾಗ) ದಲ್ಲಿ ಇವರು 2010ರಲ್ಲಿ ಅಲ್ಲಿ ನೆಲೆಸಿರುವ ಕನ್ನಡ, ಕೊಂಕಣಿ, ಮರಾಠಿ ಭಾಷಿಕರಿಗಾಗಿ ಒಂದು ಯೋಜನೆ ತಯಾರಿಸಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ನೆರವಿನಿಂದ (ಅಧ್ಯಕ್ಷರಾದ ಶ್ರೀ ಮುಖ್ಯ ಮಂತ್ರಿ ಚಂದ್ರುರವರ) ಸುಮಾರು 300 ವಿವಿಧ ಭಾಷಿಕ ಕಲಾತಂಡಗಳ ಜಾನಪದ ಕಲಾ ಪ್ರಕಾರಗಳ ದರ್ಶನ ಈ ಭಾಗದ ಜನರಿಗೆ ಸದಾಶಿವಗಡ, ಕಾರವಾರ ಭಾಷಾ ಭಾವೈಕ್ಯ ಸಮಾವೇಶದ ಹೆಸರಿನಿಂದ ಯಶಸ್ವಿಯಾಗಿ ಜರುಗಿತು.

2003 ರಲ್ಲಿ ವಿವಿಧಸಂಗೀತ ವಾದ್ಯಗಳ ಅನುಕರಣೆಗಾಗಿ ಇವರು ಗಿನ್ನಿಸ ದಾಖಲೆ ಮಾಡಿದರು. 6 ತಿಂಗಳು ಕೊಂಕಣಿ ಭಾಶಿಕ ಗ್ರಾಮಗಳಿಗೆ ಭೇಟಿ ನೀಡಿ ಕೊಂಕಣಿಗರ ಪುರಾತನ ಗೃಹಬಳಕೆ ವಸ್ತುಗಳ ಛಾಯಾಚಿತ್ರಗಳನ್ನು ಗ್ರುಹವಸ್ತುಗಳ ಪ್ರದರ್ಶನ ಮಾಡಿದ್ದು ಸಾವಿರಾರು ಪ್ರೇಕ್ಷಕರನ್ನು ಆಕರ್ಷಿಸಿತು. 2004 ರಲ್ಲಿ

ಂದಿನ ಯುವ ಪೀಳಗೆಗೆ ನಮಗೆ ಸ್ವಾತಂತ್ರ್ಯ ದೊರಕಿಸಿ ಾಡಲು ಸಾವಿರಾರು ಹುತಾತ್ಮರು ಬಲಿದಾನ ನೀಡಿದ ುಹತ್ವ ಆಗಲೆಂದು ತಮ್ಮ ಮನೆ ಅಂಗಳದಲ್ಲಿ ಶ್ರೀ ಭಾರತ ಾತಾ ಮಂದಿರ ಸ್ಥಾಪಿಸಿ ಭಾರತ ಮಾತೆಯ ಭಾವಚಿತ್ರ ಾಗೂ ವಿವಿಧ ಹುತಾತ್ಮರ ಭಾವಚಿತ್ರ ಜನನ-ಮರಣ ಿನಾಚರಣೆ ಆಚರಿಸುತ್ತ ಕಳೆದ 15 ವರ್ಷದಿಂದ ಬಂದಿದ್ದಾರೆ.

2011 ಹಾಗೂ 13 ರಲ್ಲಿ 500 ಡಿಜಿಟಲ ಬ್ಯಾನರ ಒಂದು ಬ್ಯಾನರ 8"ಉತ್ತ 4"ಅಗಲ) ಒಂದರಂತೆ 500 ್ಯಾನರ ಮೂಲಕ ಭಾರತದ ಎಲ್ಲ ರಾಜ್ಯದ ಸಂಪೂರ್ಣ ಮಾಹಿತಿ ಅಖಂಡ ಭಾರತದ ಎಲ್ಲ ರಾಜ್ಯದ ಸಂಪೂರ್ಣ ಮಾಹಿತಿ ವರ್ಣರಂಜಿತ ಛಾಯಾಚಿತ್ರಗಳೊಂದಿಗೆ ಅಂಕಿ ಅಂಶದೊಂದಿಗೆ ಎಲ್ಲವನ್ನು ಅಖಂಡ ಭಾರತದ ದರ್ಶನವನ್ನು ಒಂದೇ ಸೂರಿನಡಿ ನೋಡಲು ಸಿಗುವ ಈ ಕಾರ್ಯಕ್ರಮ ಜಿಲ್ಲಾಧಿಕಾರಿಗಳಾದ ಶ್ರೀ ಅಮರ ನಾರಾಯಣ ರವರ ಅಧ್ಯಕ್ಷತೆಯಲ್ಲಿ ಯಶಸ್ವಿಯಾಗಿ ಜರುಗಿ ಸಾವಿರಾರು ಶಾಲಾ ಮಕ್ಕಳು ಹಾಗೂ ಸಾರ್ವಜನಿಕರು ಅದರ ಉಪಯೋಗ ಪಡೆದರು.

2015 ರಲ್ಲಿ ಪ್ರಥಮ ಬಾರಿಗೆ ಗಡಿಭಾಗದ ಸದಾಶಿವಗಡದಲ್ಲಿ ಕನ್ನಡ ಕೊಂಕಣಿ, ಮರಾಠಿ ನಾಟಕೋತ್ಸವ ಆಯೋಜಿಸಿ (ಗೌರವಾಧ್ಯಕ್ಷರಾಗಿ) ಯಶಸ್ವಿಯಾದರು. 2015ರಲ್ಲಿ ಕರ್ನಾಟಕ ಜಾನಪದ ವಿಶ್ವವಿದ್ಯಾಲಯ ಹಾವೇರಿಯಲ್ಲಿ ಜರುಗಿದ ರಾಷ್ಟ್ರೀಯ ವಿಚಾರ ಸಂಕೀರ್ಣದ ಸಂದರ್ಭದಲ್ಲಿ ಕೊಂಕಣಿಯ 3-4 ಜಾನಪದ ಕಲಾತಂಡಗಳ ಪ್ರದರ್ಶನ ನೀಡಿ ಯಶಸ್ವಿಯಾದರು. ಮಂಗಳೂರಿನ ಶ್ರೀ ಬಸ್ತಿ ವಾಮನ ಶೈಣೈಯವರ ವಿಶ್ವಕೊಂಕಣಿ ಕೇಂದ್ರದಿಂದ ಮುಂಬಯಿಯಲ್ಲಿ ಜರುಗುವ ಜಾಗೃತ ಅಭಿಯಾನಕ್ಕೆ ಸಾಂಸ್ಕೃತಿಕ ರಾಯಭಾರಿಯಾಗಿ ಆಯ್ಕೆಯಾಗಿ ಯಶಸ್ವಿ ಕಾರ್ಯಕ್ರಮ ಮಾಡಿ ಬಂದರು. ಕಾರವಾರದಲ್ಲಿ ಎರಡು ಬಾರಿ ಇವರಿಗೆ ಆದರ್ಶದಂಪತಿಗಳ ಬಿರುದು ನೀಡಿ ಜಿಲ್ಲಾ ಕ್ಯಾಥೋಲಿಕ ಸಮಾಜ ಹಾಗೂ ಕರಾವಳ ಉತ್ಸವದಲ್ಲಿ ಸನ್ಮಾನಿಸಿದ್ದಾರೆ.

ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ ಹಾಗೂ ಕಾರವಾರ ಗೆಳೆಯರ ಬಳಗದ ಸಂಯುಕ್ತ ಆಶ್ರಯದಲ್ಲಿ ಕಾರವಾರದಲ್ಲಿ ಜರುಗಿದ ಪ್ರಥಮ ಕೊಂಕಣಿ ಕರಾವಳ ಉತ್ಸವದ ಕಾರ್ಯಾಧ್ಯಕ್ಷರಾಗಿ ಆಯ್ಕೆಯಾಗಿ ಯಶಸ್ವಿಯಾದರು. ವಸಂತ ಬಾಂದೇಕರವರು ಪ್ರತಿವರ್ಷ ಅಗಸ್ಟ 20ರಂದು ಕೊಂಕಣಿ ಮಾನ್ಯತಾ ದಿನಾಚರಣೆಯನ್ನು ತಮ್ಮ ಮನೆ ಅಂಗಳದ ಶ್ರೀ ಭಾರತ ಮಾತಾ ಮಂದಿರದಲ್ಲಿ ಆಚರಿಸುತ್ತಾ ಬಂದಿದ್ದಾರೆ.

2016ರಲ್ಲಿ ಭಾರತ್ಸ ಸರ್ಕಾರದ ಸಾಂಸ್ಕೃತಿಕ ಕೇಂದ್ರ ನಾಗಪೂರದವರು ಆಯೋಜಿಸಿದ 7 ರಾಜ್ಯಗಳ ವಿವಿಧ ಜನಪದ ಕಲಾ ಪ್ರಕಾರಗಳ ಲೋಕೋತ್ಸವ ಮಹಾರಾಷ್ಟ್ರ ಹಾಗೂ ಗೋವಾದ ವಿವಿಧ 6 ಸ್ಥಳಗಳಲ್ಲಿ ಜರುಗಿದ ಕಾರ್ಯಕ್ರಮದ ವಸಂತ ಬಾಂದೇಕರರವರು ಸಾಂಸ್ಕೃತಿಕ ರಾಯಭಾರಿಯಾಗಿ ಹಾಗೂ ಗೋವಾ ಕೊಂಕಣಿ ತಂಡದ ಉಸ್ತುವಾರಿಯಾಗಿ ಯಶಸ್ವಿಯಾಗಿದ್ದಾರೆ.

2010ರಲ್ಲಿ ಮೋಹನ ಆಳ್ವಾರವರು ಆಯೋಜಿಸಿದ ಪ್ರಥಮ ವಿಶ್ವ ಸಾಂಸ್ಕೃತಿಕ ಮೇಳ ಮಂಗಳೂರಿನಲ್ಲಿ ನಿರಂತರ 25 ದಿವಸ ಜರುಗಿತ್ತು. ಅಂದಿನ ರಾಷ್ಟ್ರಪತಿ ಶ್ರೀಮತಿ ಪ್ರತಿಭಾ ಪಾಟೀಲರು ಉದ್ಘಾಟನೆ ಮಾಡಿದ್ದರು. ಒಂದು ದಿನ ಉತ್ತರ ಕನ್ನಡದ ಕೊಂಕಣಿಯ ವಿವಿಧ ಜನಪದ 10 ಕಲಾ ತಂಡಗಳ ಪ್ರದರ್ಶನವಿತ್ತು ಅದರ ಉಸ್ತುವಾರಿ ಹಾಗೂ ಉತ್ತರ ಕನ್ನಡ ಜಿಲ್ಲೆಯ ಸಮಸ್ತ ಕೊಂಕಣಿಗರ ಪರವಾಗಿ ವಸಂತ ಬಾಂದೇಕರರ ರಾಯಭಾರಿಯಾಗಿ ಆಯ್ಕೆಯಾಗಿ ಆದಿನ ವೇದಿಕೆಯಲ್ಲಿ ಉಪಸ್ಥಿತರಿದ್ದು ಸನ್ಮಾನ ಸ್ವೀಕರಿಸಿದರು ಹಾಗೂ 10 ವಿವಿಧ ಕಲಾತಂಡಗಾ ಯಶಸ್ವಿ ಕಾರ್ಯಕ್ರಮ ನೀಡಿದರು.

ತಮ್ಮ ಚತುರ್ಭಾಷಾ ತಡೆರಹಿತ 100 ನಿಮಿಷದ ಏಕವ್ಯಕ್ತಿ ಕಲಾ ಪ್ರದರ್ಶನದಲ್ಲಿ ಭಾರತೀಯ ಸಂಸ್ಕೃತಿ ದರ್ಶನ ನೀಡುತ್ತಾರೆ. ವಿವಿಧ ಭಾರತೀಯ ಸಂಗೀತ ವಾದ್ಯಗಳ ಅನುಕರಣೆ, ವಿವಿಧ ರಾಜ್ಯದ ಜಾನಪದ ಕಲಾ ಪ್ರಕಾರಗಳ ದರ್ಶನ, ಭಾರತದ ವಿವಿಧ ಶಾಸ್ತ್ರೀಯ ಗಾಯಕರ ವಿವಿಧ ಶೈಲಿಗಳ ಅನುಕರಣೆ ವಿವಿಧ ಹಿಂದಿ ಪಾರ್ಶ್ವ ಗಾಯಕ, ಗಾಯಕಿಯರ (14) ಗಾಯಕರ ಅನುಕರಣೆ ವಿವಿಧ ಹಾಸ್ಯ ಚಟಾಕಿಗಳು, ವಿವಿಧ ನಡೆಯುವ ನಗುವ, ಅಳುವ, ಗೊರಕೆಯ ಶೈಲಿಗಳು. ಈ ವರೆಗೆ 33 ವರ್ಷದಲ್ಲಿ ಏಕವ್ಯಕ್ತಿ ಕಾರ್ಯಕ್ರಮ ಭಾರತದ ವಿವಿಧ ಭಾಗದಲ್ಲಿ ಸುಮಾರು 3900 ಕಾರ್ಯಕ್ರಮ ನೀಡಿದ್ದು, ಅದರಲ್ಲಿ ಕೊಂಕಣಿ ಕಾರ್ಯಕ್ರಮ ಅಂದಾಜು 1200 ಇವೆ. ಇವರು ರಚನೆಯ ವಿವಿಧ ವಿಷಯದ ಕುರಿತು 6 ಕೊಂಕಣಿ ಪುಸ್ತಕಗಳು ಕರ್ನಾಟಕ ಕೊಂಕಣಿ ಅಕಾಡೆಮಿಯಿಂದ ಪ್ರಕಟವಾಗಿವೆ. 2016ರಲ್ಲಿ ಕಾರವಾರ ಆಕಾಶವಾಣಿಯಿಂದ ಕೊಂಕಣಿ ಕಾರ್ಯಕ್ರಮ ಸ್ಥಗಿತಗೊಂಡಾಗ ಬಾಂದೇಕರವರು ಕೊಂಕಣಿ ವಿವಿಧ ಕವಿ ಸಾಹಿತಿ ಕಲಾವಿದರ ಪರವಾಗಿ ಮನವಿ ಸಲ್ಲಿಸಿದ್ದು, ಅದರ ಪರಿಣಾಮ ನಾನು ಅಕಾಡೆಮಿ ಸದಸ್ಯನಾಗಿದ್ದ ನಮ್ಮ ಹಾಗೂ ಅಧ್ಯಕ್ಷರಾದ ಶ್ರೀ ಆರ್. ಪಿ. ನಾಯ್ಕರವರ ಪ್ರಯತ್ನದಿಂದ ಮತ್ತೆ ಪ್ರಾರಂಭವಾಯಿತು.

2017ರಲ್ಲಿ 42 ವಿವಿಧ ಕೊಂಕಣಿ ಭಾಷಿಕ ಸಮುದಾಯದವರಿಗಾಗಿ ಬಾಯಿಯಿಂದ ಕೊಂಕಣಿಮಾತೆ ಎನ್ನುತ್ತಿದ್ದರು. ಆದರೆ ಅವಳನ್ನು ಯಾರೂ ನೋಡಿರಲಿಲ್ಲ. ಶ್ರೀ ವಸಂತ ಬಾಂದೇಕರವರು ತಮ್ಮ ಪರಿಕಲ್ಪನೆಯಿಂದ ಶ್ರೀ ಕೊಂಕಣಿಮಾತಾ ಭಾವಚಿತ್ರ ನಿರ್ಮಾಣ ಮಾಡಿ ವಿವಿಧ ಕೊಂಕಣಿ ಭಾಷಿಕ ಮುಖಂಡರ ಹಾಗೂ ಕೊಂಕಣಿ ಅಕಾಡೆಮಿ ಅಧ್ಯಕ್ಷರ ಸಮ್ಮುಖದಲ್ಲಿ ಲೋಕಾರ್ಪಣೆಗೊಂಡಿತು. ಇಂದು ಕೊಂಕಣಿ ಮಾತಾ ಭಾವಚಿತ್ರಕ್ಕೆ ಪ್ರತಿದಿನ ಭಾರತಾ ಮಾತಾ ಮಂದಿರದಲ್ಲಿ ಧೂಪ, ದೀಪದ ಪೂಜೆಯಾಗುತ್ತಲಿದೆ.

ವಸಂತ ಬಾಂದೇಕರರ ಈ ವರೆಗೆ 33

ವರ್ಷದಲ್ಲಿ ವಿವಿಧ ರಾಜ್ಯದ ಕೊಂಕಣಿ, ಕನ್ನಡ, ಮರಾಠಿ ಸಂಘಟನೆಗಳಿಂದ ಸುಮಾರು 200ಕ್ಕೂ ಮೀರಿ ಸತ್ಕಾರ ಸನ್ಮಾನಗಳಾಗಿವೆ. ಅದರಲ್ಲಿ ಸುಮಾರು 20 ಬಿರುದಾಂಕಿತ ಸನ್ಮಾಗಳಿವೆ. ವಿವಿಧ ಮಠಾದೀಶರು, ವಿಶ್ವವಿದ್ಯಾಲಯದ ಕುಲಪತಿಗಳು ಸೇರಿದ್ದು, ಪ್ರಮುಖವಾಗಿ ಡಾ. ಗಂಗುಬಾಯಿ ಹಾನಗಲ್, ಡಾ. ವಿರೇಂದ್ರ ಹೆಗ್ಗಡೆ, ಡಾ. ಪಂಚಾಕ್ಷರಿ ಗವಾಯಿಗಳು ಡಾ. ಶಿವಯೋಗಿ ಮುರಘಾಶರಣರು ಇದ್ದಾರೆ.

ವಸಂತ ಬಾಂದೇಕರವರ 58 ವರ್ಷ (1959-2017) ನಿರಂತರ ಕಲಾಸೇವೆ ಜೊತೆಗೆ ಜಾಗೃತ ಅಭಿಯಾನ ಮಾಡಿದುದನ್ನು ಪರಿಗಣಿಸಿ ಯುವವ್ಹಾರಸಿಟಿ ಆಫ್ ಸೌಥ ಅಮೆರಿಕಾದಿಂದ ಗೌರವ ಡಾಕ್ಟರೇಟ ಪ್ರಶಸ್ತಿ ದೊರೆಯಿತು. ಬಹುಷ ಕೊಂಕಣಿ ಭಾಷಿಕ ಕಲಾವಿದನಿಗೆ ಸಿಕ್ಕ ಪ್ರಥಮ ಗೌರವ ಪ್ರಶಸ್ತಿ ಇರಬಹುದು. ವಸಂತ ಬಾಂದೇಕರರ (1959-2020) 60 ವರ್ಷ ನಿರಂತರ ಕಲಾಸೇವೆಯ ಮೈಲುಗಲ್ಲುಗಳನ್ನು ಅವಲೋಕಿಸಿದಾಗ ವಸಂತ ಬಾಂದೇಕರ ರಂಗಕಲಾಕ್ಷೇತ್ರದಲ್ಲಿ ತಾವು ಬೆಳೆಯುವುದರ ಜೊತೆಗೆ ಧಾರವಾಡ, ಹುಬ್ಬಳ, ಕಾರವಾರದಲ್ಲಿ ಸುಮಾರು 500ಕ್ಕೂ ಮೀರಿ ಕಲಾವಿದರನ್ನು ವೇದಿಕೆಗೆ ತಂದು ಪರಿಚಯಿಸಿ ಅದರ ಕಲಾ ಭವಿಷ್ಯಕ್ಕೆ ಅನುವು ಮಾಡಿಕೊಟ್ಟಿದ್ದಾರೆ. 1968ರಲ್ಲಿ ಇವರು ಧಾರವಾಡದಲ್ಲಿ ಸ್ಥಾಪಿಸಿದ ಆರ್ಕೆಸ್ಟ್ರಾದಲ್ಲಿ ಹಾಡಿ ಹೋದ ಗುರುರಾಜ ಕಲಾಲಬಂಡಿ ಧಾರವಾಡದಲ್ಲಿ ಕಾಲೇಜು ವಿದ್ಯಾರ್ಥಿಯಾಗಿದ್ದ ಇವರಲ್ಲಿ ಹಾಡಿ ಮುಂದೆ ಬೆಂಗಳೂರಿಗೆ ಹೋಗಿ ಗುರು, ಮಂಜುಳಾ ಖ್ಯಾತಿಯ ಆರ್ಕೆಸ್ಟ್ರಾ ಸಂಸ್ಥಾಪಕರಾದರು. ಇನ್ನೊಬ್ಬ ಬೆಂಗಳೂರಿನ ಮೋಹನ ಜಿಂಪೆಟ್ಸ್ ಆರ್ಕೆಸ್ಟ್ರಾ (ಇವರ ವಾದ್ಯ ವೃಂದದಲ್ಲಿ ಡಾ. ರಾಜಕುಮಾರ ಹಾಡುತ್ತಿದ್ದರು) ಸಂಸ್ಥಾಪಕರು ಮೂಲ ಬಿಜಾಪುರದವರು. ಹೆಸರು ಸಂಗಮೇಶ ಹಿರೇಮಠ, ಇವರು ಬಾಂದೇಕರರ ಧಾರವಾಡ ಆರ್ಕೆಸ್ಟ್ರಾದಲ್ಲಿ ಹಾಡಿ ಮುಂದೆ ಬೆಂಗಳೂರಿಗೆ ಹೋಗಿದ್ದರು. ಇನ್ನು ಕನ್ನಡದ ಪ್ರಸಿದ್ಧ ಚಲನಚಿತ್ರ ನಟ ಸತ್ಯಜೀತ (ಸಯ್ಯದ) 1980-82ರಲ್ಲಿ ವಸಂತ ಬಾಂದೇಕರರ ಹುಬ್ಬಳ್ಳಿ ಆರ್ಕೆಸ್ಟ್ರಾದಲ್ಲಿ ಮಹಮ್ಮದ ರಫಿ ಹಾಡನ್ನು ಹಾಡುತ್ತಿದ್ದರು. ಇನ್ನೊಬ್ಬ ಕನ್ನಡ ಚಿತ್ರ ನಟ ಜಾಡರ ಏಂಖವರು ಇವರ ತಂಡದ ಕಲಾವಿದರಾಗಿದ್ದರು. ಹಿಂದಿ ಚಿತ್ರರಂಗದ 70ರ ದಶಕದ ಚಿತ್ರನಟಿ ಶ್ಯಾಮಿಲಿ ಇವರ ಧಾರವಾಡ ತಂಡದ ಗಾಯಕಿ, ಧಾರವಾಡ ಪ್ರಸಿದ್ಧ ವಾಯಲಿನ್ ಕಲಾವಿದ ಶ್ರೀ ವಾದಿರಾಜ ನಿಂಬರಗಿ ಇವರ 1968ರ ಧಾರವಾಡ ವಾದ್ಯವೃಂದದ ಪ್ರಥಮ ಕಲಾವಿದರು. ಗಿಟಾರಿಸ್ಟ ಮಧು, ಮನು ಉತ್ತಂಗಿ ಸಹೋದರರು ಪರದೇಶದಲ್ಲಿ ನೆಲೆಸಿದರು. ತಬಲಾ ಕಲಾವಿದ ಪ್ರಕಾಶ ಹುನಗುಂದ ಲಕ್ಷ್ಮೀಕಾಂತ ಪ್ಯಾರೆಲಾಲ ತಂಡ ಸೇರಿಕೊಂಡರು. ಇವರ ಹುಬ್ಬಳ್ಳಿ ತಂಡದ 4 ಜನ ಕಲಾವಿದರಾದ ಶ್ರೀ ರಾಜು ಮುಳ್ಳುರ, ಸ್ಯಾಡ್ರಿಕ್ ಝುಂಜೊ, ಜೂಡಿ ಚೌಕಣ್ಣವರ, ಮಹಮ್ಮದ ಅಶ್ರಫ ಹುಬ್ಬಳ್ಳಿ ರೇಲ್ವೆ ಇಲಾಖೆಯ ಆರ್ಕೆಸ್ಟ್ರಾ (ಕಲಾವಿದ ಕೊಟಾದಲ್ಲಿ) ನೌಕರಿಗೆ ಸೇರಿಕೊಂಡರು. ಕಾರವಾರಕ್ಕೆ ಬಂದನಂತರ 1992 ರಿಂ ಇಂದಿನವರೆಗೆ ಹಲವಾರು ಕೊಂಕಣಿ ಕಲಾವಿದರನ್ ಸಂಘಟಿಸಿ ಕರಾವಳಿ ಉತ್ಸವದಲ್ಲಿ ಪ್ರತಿವರ್ಷ ಅವಕಾಶಮಾ ಕೊಡುತ್ತಿದ್ದಾರೆ. ಹಾಗೂ ರಾಜ್ಯ, ರಾಷ್ಟ್ರ ಅಂತರಾಷ್ಟ್ರೀಂ ಉತ್ಸವಗಳಲ್ಲಿ ಪರಿಚಯಿಸಿದ್ದಾರೆ. ಹೀಗಾಗಿ ಇಂದಿಗ ಹುಬ್ಬಳ್ಳಿ-ಧಾರವಾಡದ ಕಲಾವಿದರು ಸ್ವಾರ ಮೇಕ ಎಂದು ಕರೆಯುತ್ತಾರೆ. ಅಂತೆಯೇ ಹುಬ್ಬಳ್ಳಿ-ಧಾರವಾ ಅವಳಿನಗರದ ವಿವಿಧ ಸಾಂಸ್ಕೃತಿಕ ಸಂಘಟನೆಗಳ ಸೇರಿ ಹುಬ್ಬಳ್ಳಿ, ಧಾರವಾಡದ ನಗರ ಸಭಾ ಸದಸ್ಯರ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು ಸೇರಿ ದಿನಾಂ 06-06-2015 ರಂದು ಧಾರವಾಡದ ವಿದ್ಯಾವರ್ಧ ಸಂಘದ ಸಭಾಭವನದಲ್ಲಿ ನೆರೆದ ಪ್ರೇಕ್ಷಕರ ಸಮ್ಮುಖದ "ಹುಬ್ಬಳ್ಳಿ, ಧಾರವಾಡ ಸಾಂಸ್ಕೃತಿಕ ಭೀಷ್ಮ" ಎಂದು ಸನ್ಮಾನಿಸಿ ಗೌರವಿಸಿದ್ದು ಬಾಂದೇಕರರ ಸೇವೆಯ ಪ್ರತಿಫಲ ಕೊಡುಗೆ ಎನ್ನಬಹುದು. ಕೊಂಕಣಿ ಜಾನಪದ ಕಲೆಗಳನ್ನು ಉಳಿಸಿ, ಬೆಳೆಸಿ ಅದರ ಬಗ್ಗೆ ಪೂರ್ತಿ ಅಧ್ಯಯನ ಮಾಡಿದ ಅವರನ್ನು ಮಂಗಳೂರು ಯುನಿವರ್ಸಿಟಿ ಕೊಂಕಣಿ ಎಂ. ಎ. ವಿದ್ಯಾರ್ಥಿಗಳಿಗೆ ಕೊಂಕಣಿ ಉಪನ್ಯಾಸ ನೀಡಲು ಆಹ್ವಾನಿಸಿದ್ದು ಅಲ್ಲಿಯೂ ಯಶಸ್ವಿಯಾದರು.

ಇವರ ನಿರಂತರ ಕೊಂಕಣಿ ಸೇವೆಯನ್ನು ಪರಿಗಣಿಸಿ ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ ಕೊಂಕಣಿ ಕಿರೀಟ ನೀಡಿ ಸನ್ಮಾನಿಸಿತು. ನಂತರ 2018ನೇ ಸಾಲಿನ ಜೀವಮಾನ ಸಾಧನೆಗಾಗಿ ಗೌರ ಪ್ರಶಸ್ತಿ ನೀಡಿ ಸನ್ಮಾನಿಸಿತು. ಕರ್ನಾಟಕ ಸರ್ಕಾರವು ಎರಡನೆ ಬಾರಿಗೆ ಕೊಂಕಣಿ ಅಕಾಡೆಮಿ ಸದಸ್ಯರನ್ನಾಗಿ 2019-21 ಸಾಲಿಗೆ ಆಯ್ಕೆ ಮಾಡಿದ್ದು, ಇತ್ತೀಚಿಗೆ ಕರ್ನಾಟಕ ಕೊಂಕಣಿ ಅಕಾಡೆಮಿ ಸ್ಥಾಪನೆಯಾಗಿ 25 ವರ್ಷಾಚರಣೆ ಅಂಗವಾಗಿ ಉಡುಪಿ, ಕಾರ್ಕಳದಲ್ಲಿ 22, 23 ಫೆಬ್ರುವರಿ 2020 ರಂದು ಕಾಪ್ಯ ಉತ್ಸವ ಆಚರಿಸಿದ್ದು, ವಸಂತ ಬಾಂದೇಕರರನ್ನು ಸ್ಮರಣ ಸಂಚಿಕೆಯ ಸಂಪಾದಕರನ್ನಾಗಿ ಆಯ್ಕೆ ಮಾಡಿದ್ದು ಅದರಲ್ಲೂ ಯಶಸ್ವಿಯಾಗಿದ್ದಾರೆ.

52 ವರ್ಷದಿಂದ ನಿರಂತರವಾಗಿ ಕೊಂಕಣಿ ಅಭಿವೃದ್ಧಿಗಾಗಿ ವಿವಿಧ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸುತ್ತ ಬಂದಿರುವ ಇವರು ಮೂಲತಃ ಅತ್ಯುತ್ತಮ ಹಾಕಿಪಟುವಾಗಿ ಯುನಿವರ್ಸಿಟಿ ಬ್ಲ್ಯೂ 1966ರಲ್ಲಿ ಆಗಿದ್ದು, ಇತ್ತೀಚೆಗೆ 2016-17-18 ಸತತ ಮೂರು ವರ್ಷ ಕಾರವಾರ ತಾಲೂಕಾ ಹಿರಿಯ ನಾಗರಿಕರ ಕ್ರೀಡೆ ಹಾಗೂ ಸಾಂಸ್ಕೃತಿಕ ಸ್ಪರ್ಧೆಯಲ್ಲಿ ಹೆಟ್ರಿಕ್ ಚಾಂಪಿಯನ್ ಆಗಿ ಮಿಂಚಿದ್ದಾ-ರೆ. ತಮ್ಮ 74ರ ಇಳಿವಯಸ್ಸಿನಲ್ಲೂ ಹೊಸಹೊಸ ಯೋಜನೆಯೊಂದಿಗೆ ಹೊಸಹೊಸ ಪ್ರಯೋಗಗಳನ್ನು ಮಾಡುತ್ತಲೇ ಇರುತ್ತಾರೆ. 1000 ವರ್ಷದ ಕೊಂಕಣಿ ಇತಿಹಾಸದಲ್ಲಿ ಡಾ.ವಸಂತ ಬಾಂದೇಕರರು ವಿಶ್ವದ 42 ಕೊಂಕಣಿ ಭಾಷಿಕ ಸಮುದಾಯದವರಿಗೆ ಕೊಂಕಣಿ ಮಾತೆಯನ್ನು ಪರಿಚಯಿಸಿದ್ದು ಒಂದು ಐತಿಹಾಸಿಕ ದಾಖಲೆ

ನ್ನಬಹುದು.

ಬದುಕಿನುದ್ದಕ್ಕೂ ಕಲೆ-ಸಾಹಿತ್ಯ-ಭಾಷೆ-ಸಂಸ್ಕೃತಿಗಾಗಿ ದುಡಿದ ಇವರು ಹಲವಾರು ಸಂಘ ಸಂಸ್ಥೆಗಳ ಪದಾಧಿಕಾರಿ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ. ತಮ್ಮ ಭಾವಿಬದುಕಿಗಾಗಿ ಏನನ್ನೂ ಉಳಿಸಿಕೊಳ್ಳದ ಇವರು ಸರಳ ಸಜ್ಜನಿಕೆಯ ಬದುಕಿನೊಂದಿಗೆ ಕಾಲ್ನಡಿಗೆಯಿಂದಲೇ ಓಡಾಡುತ್ತಿರುತ್ತಾರೆ. ಕರ್ನಾಟಕ ಸರ್ಕಾರದ ಅಶಕ್ತ ಕಲಾವಿದರ ಮಾಶಾಸನದಲ್ಲಿ ತೃಪ್ತಿಯಾಗಿದ್ದಾರೆ. ಇವರ ಯಶಸ್ವಿಗೆ ಇವರ ಧರ್ಮಪತ್ನಿ ಶ್ರೀಮತಿ ಲಕ್ಷ್ಮೀಯವರ ಸಿಂಹಪಾಲು ಇದೆ ಎನ್ನುತ್ತಾರೆ. 3 ಜನ ಗಂಡುಮಕ್ಕಳು ಸ್ವೌದ್ಯೋಗ ಹಿರಿಯ ಮಗ ಕಿಶೋರ ಆಟೋಸ್ಕ್ಯಾನ್ ಗ್ಯಾರೆಜ್ ಮಾಲಿಕರಾಗಿ ಕಳೆದ 25 ವರ್ಷದಿಂದ ನಡೆಸುತ್ತಿದ್ದು ಕಾರವಾರ ಕರೊಕೆಕ್ಲಬ್ ಹುಟ್ಟುಹಾಕಿ ಹವ್ಯಾಸಿ ಕಾರವಾರದ ಡಾಕ್ಟರ ಬ್ಯಾಂಕ ಮ್ಯಾನೇಜರ, ಸರ್ಕಾರಿ ಅಧಿಕಾರಿಗಳು, ಕಲಾವಿದರಾಗಿ 3-4 ವರ್ಷದಲ್ಲಿ ಹಲವಾರು ಕಾರ್ಯಕ್ರಮ ನೀಡಿದ್ದಾರೆ. ಅವರ ಪತ್ನಿ ಶಾರದಾ ಯೋಗಾ ಶಿಕ್ಷಕರಾಗಿದ್ದಾರೆ. ಎರಡನೆ ಮಗ ಸುರೇಂದ್ರ ಕೈಗಾದಲ್ಲಿ ಕೆಲಸ, ಅವನ ಪತ್ನಿ ಶಿವಾನಿ ತೆಂಗಿನ ಕಾಯಿ ಮೂರ್ತಿ ಕೆತ್ತನಾ ಕೇಂದ್ರ ನಡೆಸುತ್ತಿದ್ದಾಳೆ. ಮೂರನೆಯ ಮಗ ಮಹೇಶ ಆಟೋ ಗ್ಯಾರೇಜ್ 4 ವ್ಹೀಲರ ಎಂಜಿನಿಯರ್ ಜೊತೆಗೆ ಡಿ. ಜೆ. ಸೌಂಡ್ ಸಿಸ್ಟಮ್ ನಡೆಸುತ್ತಿದ್ದಾನೆ. ಅವನ ಹೆಂಡತಿ ಸುಚಿತಾ ಪೇಪರ ಬ್ಯಾಗ ತಯಾರಿ ಮಾಡುವ ಕಸುಬು. ವಸಂತ ಬಾಂದೇಕರ ಹೆಂಡತಿ ಲಕ್ಷ್ಮೀ ಕಳೆದ 33 ವರ್ಷದಿಂದ ಮಹಿಳಾ ಟೇಲರಿಂಗ್ ವ್ಯವಸಾಯ ಮಾಡುತ್ತ ಬಂದಿದ್ದಾರೆ. ಹೀಗೆ ಇವರ ಕುಟುಂಬ ಒಂದು ಮಾದರಿ ಅಪರೂಪದ ಕುಟುಂಬವಾಗಿದೆ. 6 ಜನ ಮೊಮ್ಮಕ್ಕಳು ಹಿರಿಯ ಮೊಮ್ಮಗಳು ಸಂಜನಾ ಆರ್ಕಿ-ಟೆಕ್ಟ್ ಇಂಜಿನಿಯರಿಂಗ್ ಮಾಡುತ್ತಿದ್ದಾಳೆ. ಶಿಸ್ತುಬದ್ಧ ಅಡಭರವಿಲ್ಲದ ಸರಳ ಜೀವನ ಇಷ್ಟಪಡುವ ವ್ಯಕ್ತಿ. ಪುಸ್ತಕಗಳ ಸಂಗ್ರಹ, ಹೂಗಿಡಗಳನ್ನು ಬೆಳೆಸಿ ಅದರ ಪೋಷಣೆ ಹಾಗೂ ರಕ್ಷಣೆ. ಕಳೆದ ಸುಮಾರು 25 ವರ್ಷದಿಂದ ಡಾ. ವಸಂತ ಬಾಂದೇಕರರ ಜೊತೆಗೆ ನನ್ನ ಒಡನಾಟವಿದ್ದು ಅವರಿಂದ ಬಹಳಷ್ಟು ಕಲಿಯಲು ನನಗೆ ಲಭಿಸಿದೆ. ಮುಖ್ಯವಾಗಿ ಸಹನೆ, ಶಿಸ್ತು, ಸಮಯಪ್ರಜ್ಞೆ, ನಿರಂತರ ಆಶಾವಾದಿ, ಪ್ರಯತ್ನವಾದಿ, ದೂರದೃಷ್ಟಿ, ಅಸಾಧ್ಯವೆನ್ನುವ ಮಾತು, ಪ್ರತಿಫಲಕ್ಕಾಗಿ ಕಾಯದೇ ಕಾರ್ಯಮಾಡುವುದು, ಕೆಲಸಕ್ಕೆ ನಾವು ಅಂಜಬಾರದು, ಕೆಲಸವು ನಮಗೆ ಅಂಜಬೇಕು ಎಂಬ ತತ್ವ. ಪರೋಪಕಾರಿ ಬುದ್ಧಿ ಕೆಲಸವನ್ನು ಚಾಲೆಂಜ ಆಗಿ ಸ್ವೀಕರಿಸುವುದು, ಹೊಗಳಿಕೆಗೆ ಹಿಗ್ಗದೇ, ತೆಗಳಿಕೆಗೆ ಕುಗ್ಗದೇ ಹಿಡಿದ ಕಾರ್ಯವನ್ನು ಸಾಧಿಸುವುದು.

ಕಾರವಾರದಲ್ಲಿ ಕೊಂಕಣಿ ವಿಷಯದ ಬಗ್ಗೆ ಯಾರಿಗಾದರೂ ಮಾಹಿತಿ ಬೇಕಾದಲ್ಲಿ ವಸಂತ ಬಾಂದೇಕರರಿಗೆ ಪತ್ರಕರ್ತರು ಸಹಿತವಾಗಿ ಸಂಪರ್ಕಿಸುತ್ತಾರೆ. ನಿಜವಾಗಿಯೂ ಡಾ. ವಸಂತ ಬಾಂದೇಕರರು ಕಲಾ ದೃಷ್ಟಿಯಿಂದಲೂ ಕೊಂಕಣಿ ದೃಷ್ಟಿಯಿಂದಲೂ ನಮ್ಮ ಉತ್ತರ ಕನ್ನಡ ಜಿಲ್ಲೆಯ ಆಸ್ತಿಯಾಗಿದ್ದಾರೆ. ಅವರಿಗೆ ದೇವರು ಇನ್ನೂ ಹೆಚ್ಚಿನ ಆಯುಷ್ಯ ಆರೋಗ್ಯ ನೀಡಿ ದಯಪಾಲಿಸಲೆಂದು ಹಾರೈಕೆ.

♦♦♦♦



# 26. ಶ್ರೀ ರಾಮ ಚರಿತ ಮಹಾಕಾವ್ಯ ರಚನಾಕಾರ ದಿ. ವಿಶ್ವನಾಥ ಶೇಟ್

■ ಶ್ರೀ ವಾಸುದೇವ ಶಾನಭಾಗ-ಶಿರ

ಕೊಂಕಣಿ ಭಾಷೆಯ ಪ್ರಥಮ ಷಟ್ಪದಿ ಮಹಾಕಾವ್ಯ 'ಶ್ರೀ ರಾಮ ಚರಿತ' ರಚನಾಕಾರರಾದ ಶ್ರೀ ವಿಶ್ವನಾಥ ಶೇಟ್ ಅವರು ಉ. ಕ. ಜಿಲ್ಲಾ ಸಿದ್ದಾಪುರ ತಾಲೂಕಿನ ಹಾರ್ಸಿಕಟ್ಟಾ ಗ್ರಾಮದವರು. ಇವರು ಸತತ 10 ವರ್ಷಗಳಕಾಲ ಶ್ರಮವಹಿಸಿ ಈ ಮಹಾಕಾವ್ಯವನ್ನು ಭಾಮಿನೀ ಷಟ್ಪದಿಯಲ್ಲಿ ರಚಿಸಿದ್ದಾರೆ. ಆ ಮೂಲಕ ಕೊಂಕಣಿ ಭಾಷೆಯಲ್ಲಿ ಷಟ್ಪದಿ ಮಹಾಕಾವ್ಯಗಳಿಲ್ಲ ಎಂಬ ಕೊರತೆಯನ್ನು ನೀಗಿಸಿದ್ದಾರೆ. ಈ ಕೃತಿಯನ್ನು

ಉತ್ತರಕನ್ನಡ ಜಿಲ್ಲಾ ಕೊಂಕಣಿ ಪರಿಷತ್ತು ಪ್ರಕಟಿಸಿದೆ. ದಿ. 1-12-1950ರಲ್ಲಿ ಸಿದ್ದಾಪುರ ತಾಲೂಕಿನ ಕಟ್ಟೆಕೈ ಎಂಬ ಹಳ್ಳಿಯಲ್ಲಿ ಶ್ರೀಮತಿ ಪಾರ್ವತಿ ಮತ್ತು ಶ್ರೀ ಸುಬ್ರಾಯ ಶೇಟ್ ದಂಪತಿಗಳ ಪುತ್ರರಾಗಿ ಜನಿಸಿದ ವಿಶ್ವನಾಥ ಅವರು ಓದಿದ್ದು ಕೇವಲ ಎಂಟನೆಯ ತರಗತಿಯವರೆಗೆ ಮಾತ್ರ. ಮನೆಯ ಆರ್ಥಿಕ ಸಂಕಷ್ಟಗಳಿಂದಾಗಿ ಮುಂದೆ ಓದಲಾಗದೇ ಕುಲಕಸುಬಾದ ಚಿನ್ನದ ಆಭರಣ ತಯಾರಿಕೆಯಲ್ಲಿ ತೊಡಗಿ-ಕೊಂಡರು. ಸಿದ್ದಾಪುರ ಸೀಮೆಯಲ್ಲಿ ನಡೆಯುವ ಯಕ್ಷಗಾನ ಬಯಲಾಟಗಳನ್ನು ನೋಡುತ್ತಿದ್ದ ಬಾಲಕ ವಿಶ್ವನಾಥರ ಮೇಲೆ ಅವು ಅಚ್ಚಳಿಯದ ಪ್ರಭಾವ ಹೊಂದಿದ್ದರಿಂದ ಕ್ರಮೇಣ ಯಕ್ಷಗಾನ ರಂಗದಲ್ಲಿ ಆಸಕ್ತಿ ಮೂಡುವಂತಾಯಿತು. ಅದಕ್ಕೆ ಸರಿಯಾಗಿ ಯಕ್ಷಗಾನ ಭಾಗವತರಾಗಿದ್ದ ಮಂಜುನಾಥ ಭಟ್ಟ ಶಿರಳಗಿಯವರು ಇವರ ಪ್ರತಿಭೆಗೆ ನೀರೆರೆಯುತ್ತಾ, ವಿಶ್ವನಾಥರನ್ನು ಓರ್ವ ಯಕ್ಷಕಲಾವಿದರನ್ನಾಗಿಸಿದರು. ಪ್ರಾಯಕ್ಕೆ ಬಂದಾಗ ಉದರ ಪೋಷಣೆಗಾಗಿ ಹಾರ್ಸಿಕಟ್ಟೆಯ ಅಶೋಕ ಪ್ರೌಢಶಾಲೆಯಲ್ಲಿ ಜವಾನನಾಗಿ ಕೆಲಸ ಮಾಡುತ್ತಲೇ ಹವ್ಯಾಸಿ ಯಕ್ಷಗಾನ ಕಲಾವಿದರಾಗಿ ರೂಪುಗೊಂಡರು. ಮುಂದೆ ಇವರಲ್ಲಿರುವ ಅಗಾಧ ಪ್ರತಿಭೆಯನ್ನು ಬೆಳಕಿಗೆ ತಂದವರು ಯಕ್ಷಗಾನ ಗುರು ರಾಜ್ಯ ಪ್ರಶಸ್ತಿ ವಿಜೇತ ಶ್ರೀ ಹೊಸ್ತೋಟ ಮಂಜುನಾಥ ಭಾಗವತರು. ಅವರಿಂದ ಯಕ್ಷಗಾನದ ಎಲ್ಲ ಆಯಾಮಗಳನ್ನು ಕಲಿತು ಪ್ರಾವಿಣ್ಯ ಪಡೆದರು. ಪಾತ್ರನಿರ್ವಹಣೆ ಅಷ್ಟೇ ಎಲ್ಲಕ್ಕಿಂತ ಹೆಚ್ಚಾಗಿ ಪ್ರಸಾಧನ ಕಲೆ ಹಾಗೂ ಪ್ರಸಂಗರಚನೆಯನ್ನು ತನ್ನದಾಗಿಸಿಕೊಂಡರು. ಯಕ್ಷಗಾನಕಲೆಯ ಆಹಾರ್ಯಕದ ಅಂಗೋಪಾಂಗಗಳನ್ನೆಲ್ಲ ಶಾಸ್ತ್ರೋಕ್ತವಾಗಿ ಅಭ್ಯಾಸ ಮಾಡಿದ್ದರಿಂದಲೇ ಮುಂದೆ 'ಯಕ್ಷಗಾನ ಆಹಾರ್ಯ ಕಮ್ಮಟ' ಗ್ರಂಥ ರಚಿಸಿ ಯಕ್ಷಗಾನ ಲೋಕದ ಮಹಾನ್ ವಿದ್ವಾಂಸರಿಂದ ಪ್ರಶಂಸೆಗೆ ಪಾತ್ರರಾಗುವಂತಾಯಿತು. ಇದು ಯಕ್ಷಲೋಕದ ಎಲ್ಲ ಆಯಾಮಗಳನ್ನು ಸ್ಪರ್ಶಿಸು ಕೈಪಿಡಿಯಾಗಿದೆ. ಅನಂತರ ಇವರ ಆಸಕ್ತಿ 1968 ರಿಂ ಹೊರಳಿದ್ದು ಯಕ್ಷಗಾನದ ವೇಷಭುಷಣಗಳ ತಯಾರಿಯತ್ತ ಮೂಲತಃ ಚಿನ್ನದ ಕುಸುರಿ ಕಲೆಯ ಕುಲಕಸುಬನ್ನು ಮೈಗೂಡಿಸಿಕೊಂಡಿದ್ದ ವಿಶ್ವನಾಥರಿಗೆ ಈ ಕಲೆ ಸುಲಭವಾಗಿ ಒಲಿಯಿತು. ಯಕ್ಷಗಾನವನ್ನು ಆಕರ್ಷಿಸುವುದು ಅದರ ವೇಷ ಭೂಷಣಗಳಿಂದ ಹಾಗೂ ಆಭರಣಗಳಿಂದ. ಈ ಆಭರಣ ತಯಾರಿಕೆಯಲ್ಲಿ ವಿಶ್ವನಾಥ ಶೇಟ್ ಅವರು ಯಕ್ಷರಂಗಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡುತ್ತಾ ಬರುತ್ತಿರುವುದರಿಂದ 2012-13ನೇ ಸಾಲಿನ ಯಕ್ಷಗಾನ, ಬಯಲಾಟ ಅಕಾಡೆಮಿ ಪ್ರಶಸ್ತಿಗೆ ಭಾಜನರಾಗಿದ್ದಾರೆ.

ಯಕ್ಷಗಾನ ಕಲೆ ಇಂದು ವಿಶ್ವದಾದ್ಯಂತ ಪರಿಚಯವಾಗುತ್ತಿದೆ. ಅದರಲ್ಲೂ ವಿಶ್ವನಾಥ ಶೇಟ್ ಯಕ್ಷಗಾನಕ್ಕೆ ಅತೀ ಅವಶ್ಯವಿರುವ ಪ್ರಸಾಧನ ತಯಾರಿಸುವುದರಲ್ಲಿ ಸಿದ್ಧಹಸ್ತರಾಗಿರುವುದರಿಂದ ಎಲ್ಲರಿಗೂ ಚಿರಪರಿತರು. ವಿಶ್ವನಾಥ ಶೇಟ್ ಅವರಿಗೆ ಯಕ್ಷಗಾನ ವೇಷಭೂಷಣ ತಯಾರಿಸುವ ಕಲೆ ತನ್ನಿಂದ ತಾನೇ ಕರಗತವಾಗುತ್ತ ಬಂದು ಇಂದು ಇವರು ತಯಾರಿಸಿದ ಎದೆಗವಚ, ಕಿರಿಟ, ಭುಜಕೀರ್ತಿ, ವೀರಗಾಸೆ, ಕರ್ಣಕುಂಡಲ, ಮುಂಡಾಸು ಮುಂತಾದ ಪರಿಕರಗಳು ಬಡಗುತಿಟ್ಟಿನ ಅನೇಕ ಕಲಾವಿದರನ್ನು ಮೆರಸಿವೆ. ಅಂಥ ಆಭರಣಗಳ ಭಾರವನ್ನು

ಹಗುರಗೊಳಸಿದ ಕೀರ್ತಿಯೂ ಇವರದ್ದಾಗಿದೆ. ಇವರು ತಯಾರಿಸಿದ ಕೆಲವು ಯಕ್ಷಗಾನದ ಆಭರಣಗಳು ಇಂಗ್ಲೆಂಡಿನ ಮ್ಯೂಸಿಯಂನಲ್ಲಿ ಪ್ರದರ್ಶನಗೊಂಡಿವೆ. ಗ್ರಾಮೀಣ ಪ್ರದೇಶದಲ್ಲಿ ಹುಟ್ಟಿ ಬೆಳೆದು ತಮ್ಮದೇ ಆದ ಕರ-ಕುಶಲತೆಯಿಂದ ಯಕ್ಷ ರಂಗದ ದಿಗ್ಗಜರು, ವಿದ್ವಾಂಸರು ಮೆಚ್ಚುವ ಕಾರ್ಯವನ್ನು ಮಾಡಿರುವುದು ಮೆಚ್ಚಲೇ ಬೇಕಾಗಿದೆ. ಹುಟ್ಟಿ ಬೆಳೆದಿದ್ದು ಹಾಗೂ ತಮ್ಮ ಜೀವನದ ಹಾದಿಯನ್ನು ಸವೆಸುತ್ತಿರುವುದು ಗ್ರಾಮೀಣ ಪ್ರದೇಶದಲ್ಲಿ ಅಪ್ಪಟ ಗ್ರಾಮೀಣ ಪ್ರತಿಭೆಯಾಗಿ ಈಗ ಇಡೀ ಯಕ್ಷಗಾನ ರಂಗ ಇವರತ್ತ ನೋಡುವಂತಾಗಿದೆ. ವಿಶ್ವನಾಥ ಶೇಟ್ ತಾವು ತಯಾರಿಸಿದ ಯಕ್ಷಗಾನ ವೇಷ ಭೂಷಣಗಳ ಪೆಟ್ಟಿಗೆಯನ್ನು ಮಾಡಿಕೊಂಡು ಮೂವತ್ತಕ್ಕೂ ಹೆಚ್ಚುವರ್ಷ

ಸುಮಾರು 43000 ಕ್ಕಿಂತ ಹೆಚ್ಚು ಕಲಾವಿದರಿಗೆ ಬಣ್ಣವನ್ನು ಹಚ್ಚಿ ಯಕ್ಷರಂಗಕ್ಕೆ ತಂದವರು. ಯಕ್ಷಗಾನದ ನೇಪಥ್ಯದಲ್ಲಿಯೇ ಹೆಚ್ಚು ಗುರುತಿಸಿಕೊಳ್ಳುತ್ತಿದ್ದ ಇವರು ಜಿಲ್ಲೆ, ರಾಜ್ಯವಲ್ಲದೇ ದೆಹಲಿ, ಚನ್ನೈ, ಹೈದರಾಬಾದ್, ಗೋವಾ

ಮುಂತಾದ ಕಡೆಗಳಲ್ಲಿ ರಂಗದ ನೇಪಥ್ಯದ ಸೌಂದರ್ಯವನ್ನು ಯಕ್ಷರಂಗದ ಮುಖೇನ ಕಲಾಸಕ್ತರಿಗೆ ಉಣಬಡಿಸಿದ್ದಾರೆ. ಇವರು ತಯಾರಿಸಿದ ವೇಷ ಭೂಷಣಗಳು ಹಲವಾರು ಕಡೆ ಪ್ರದರ್ಶನಗೊಂಡು ಬಹುಮಾನವನ್ನು ಪಡೆದುಕೊಂಡಿವೆ. ಜಾನಪದ ಶಿಲ್ಪಿಗಳ ಕಾರ್ಯಾಗಾರಗಳಲ್ಲಿ ಇವರು ತಯಾರಿಸಿದ ಕಿರೀಟ-ಕ್ಕೆ ಪುರಸ್ಕಾರ ದೊರೆತಿದೆ. ಯಕ್ಷಗಾನದಲ್ಲಿ ಮೊದಲು ಸ್ತ್ರೀ ಪಾತ್ರಧಾರಿಗಳಿಗೆ ಆಭರಣಗಳರಲ್ಲ (ಉದಾ : ತೋಳಬಂದಿ, ಶಿರೋಭೂಷಣ, ಕರ್ಣಾಭರಣ, ಹಾರ, ಕೈಬಳೆ, ವಡ್ಯಾಣ ಇತ್ಯಾದಿ) ಅದನ್ನು ತಯಾರಿಸಿ ಪರಿಚಯಿಸಿದ ಕೀರ್ತಿ ಕೂಡಾ ಶೇಟ್ ಅವರಿಗೆ ಸಲ್ಲುತ್ತದೆ. ಖ್ಯಾತ ಸಾಹಿತಿ ಜ್ಞಾನಪೀಠ ಪ್ರಶಸ್ತಿ ವಿಜೇತ ಶಿವರಾಂ ಕಾರಂತರು ಇವರ ಯಕ್ಷಗಾನ ವೇಷಭೂಷಣದ ಪರಿಕಲ್ಪನೆಗೆ ಮೆಚ್ಚುಗೆ ವ್ಯಕ್ತಪಡಿಸಿ ಶಹಬಾಸ್ ನೀಡಿದ್ದನ್ನು ಇಂದಿಗೂ ನೆನಪಿಸಿಕೊಳ್ಳುತ್ತಾರೆ. ಯಕ್ಷಗಾನ ವೇಷ ಭೂಷಣಗಳನ್ನು ದಕ್ಷಿಣೋತ್ತರ ಕನ್ನಡ ಜಿಲ್ಲೆಗಳ ಅನೇಕ ಕಲಾವಿದರಿಗೆ ಹಾಗೂ ಮೇಳಗಳಿಗೆ ಪೂರೈಸಿದ ತೃಪ್ತಿ ಇವರದು. ಅಲ್ಲದೇ ಯಕ್ಷಗಾನದ ಶಿರೋಭೂಷಣ ಹಾಗೂ ಮುಂಡಾಸನ ಸ್ಮರಣಿಕೆಯನ್ನಾಗಿ ರೂಪಿಸಿದ ಕೀರ್ತಿಯು ಇವರದ್ದಾಗಿದೆ.



ಆಕರ್ಷಕ ಮದುವೆ ಬಾಶಿಂಗಗಳನ್ನು ತಯಾರಿಸುವುದರಲ್ಲಿಯೂ ಸಿದ್ಧಹಸ್ತರು. ಇದರ ಜೊತೆ-ಗೆ ಮರದ ವಸ್ತುಗಳ ಕೆತ್ತನೆಯಲ್ಲಿ ಕೂಡ ತಮ್ಮನ್ನು ತೊಡಗಿಸಿಕೊಳ್ಳುತ್ತ ಬಂದಿದ್ದಾರೆ. ಹಾಗೆ ತಯಾರಿಸಿದ ಅನೇಕ ಕೆತ್ತನೆಗಳು ಅವರ ಬಳಿ ಇದೆ. ಇವೆಲ್ಲದಕ್ಕೂ ಒಂದೊಂದು ಶಾಸ್ತ್ರೀಯ, ಪೌರಾಣಿಕ ಹಿನ್ನೆಲೆಯನ್ನು ಅವರು ವಿವರಿಸುತ್ತಾರೆ. ಮತ್ತು ಅದರ ಬಗ್ಗೆ ಸುದೀರ್ಘ ಅಧ್ಯಯನ ಮಾಡುತ್ತಾರೆ. ಇವಕ್ಕೆಲ್ಲ ಅವರ ಪತ್ನಿ ಮಾದೇವಿ ಶೇಟ್, ಪುತ್ರರಾದ ಕೃಷ್ಣಮೂರ್ತಿ ಹಾಗೂ ಮನೋಜ ಸಾಥ್ ನೀಡುತ್ತಾರೆ. ಕಲೆಯನ್ನು ಬೆಳೆಸಿ ಉಳಿಸುತ್ತಿರುವ ಈ ಕಲಾವಲ್ಲಭನಿಗೆ ಅಸಾಧ್ಯ ಎಂಬ ಪದವೇ ಗೊತ್ತಿಲ್ಲ.

ಕನ್ನಡ ಯಕ್ಷಗಾನ ಕ್ಷೇತ್ರದ ವಿವಿಧ ಕಲಾ ಪ್ರಕಾರಗಳಲ್ಲಿ ಸೇವೆ ಸಲ್ಲಿಸಿದ ವಿಶ್ವನಾಥ ಶೇಟ್ ಅವರು ತಮ್ಮ ಮಾತೃಭಾಷೆ ಕೊಂಕಣಿಯನ್ನು ಯಾವತ್ತು ಮರೆಯಲಿಲ್ಲಾ ಕನ್ನಡದ ಜೊತೆ ಜೊತೆಗೆ ಕೊಂಕಣಿ ಸಾಹಿತ್ಯಕ್ಕೂ ಇವರ ಸೇವೆ ಸಂದಿದೆ. ಓರ್ವ ಅಪ್ತರೊಂದಿಗೆ ಕಟ್ಟಿದ ಪಂಥಕ್ಕಾಗಿ

ಕೊಂಕಣಿಯಲ್ಲಿ ಯಕ್ಷಗಾನ ಪ್ರಸಂಗಗಳನ್ನು ರಚಿಸಲು ಆರಂಭಿಸಿದರು. ಅಲ್ಲಿಯವರೆಗೆ ಕೊಂಕಣಿ ಕಲಾವಿದರು ಭಾಗವತರು ಹೇಳುವ ಪದ್ಯಗಳನ್ನು ಕನ್ನಡದಲ್ಲಿಯೇ ಹೇಳಿ ಅರ್ಥವನ್ನು ಮಾಡಿ ಕೊಂಕಣಿಯಲ್ಲಿ ಹೇಳುತ್ತಿದ್ದರು. ಆದರೆ ವಿಶ್ವನಾಥ ಶೇಟ್ ಅವರು ಧರ್ಮಾಂಗದ ದಿಗ್ವಿ-ಜಯ ಶ್ಯಮಂತಕೋಪಾಖ್ಯಾನ, ಹರಿದರ್ಶನ(ಬಲಿಯ ವಧೆ) ಶರಸೇತು ಬಂಧನ, ಮ್ಹಾಳಸಾ ಚರಿತ್ರೆ, ಕಂಬಲಾಶ್ವ ಜೈತ, ಶ್ರೀಕೃಷ್ಣ ರಾಯಭಾರ, ಅಹಲ್ಯೋದ್ಧಾರ, ಕರ್ಣಕುಂತಿ, ಸಂದರ್ಶನ ಮುಂತಾದ ಯಕ್ಷಗಾನ ಪ್ರಸಂಗಗಳನ್ನು ಕನ್ನಡ ಹಾಗೂ ಕೊಂಕಣಿಯಲ್ಲಿ ಬರೆದದ್ದಲ್ಲದೇ ಅವಯಗಳನ್ನೆಲ್ಲ ತಮ್ಮದೇ ಯಕ್ಷಗಾನ ತರಭೇತಿ ಕೇಂದ್ರ ಸ್ಥಾಪಿಸಿ ಮಕ್ಕಳಿಗೆ ತರಭೇತಿ ನೀಡಿ ಉತ್ತರಕನ್ನಡ ಜಿಲ್ಲೆಯಷ್ಟೇ ಅಲ್ಲದೇ ನವದೆಹಲಿ ಮುಂಬೈ, ಚನ್ನೈ, ಹೈದರಾಬಾದ್, ಮುಂತಾದ ಕಡೆ ಪ್ರದರ್ಶಿಸಿ ಭೇಷ್ ಎನಿಸಿಕೊಂಡಿದ್ದರು. ಇವರು ಪ್ರಸ್ತುತ ಪಡಿಸಿದ ಕೊಂಕಣಿ ಯಕ್ಷಗಾನಗಳು ಗೋವಾ ಹಾಗೂ ಬೆಂಗಳೂರು ದೂರದರ್ಶನದಲ್ಲಿ ಪ್ರಸಾರವಾಗಿವೆ. ಧಾರವಾಡ, ಮಂಗಳೂರು ಆಕಾಶವಾಣಿ ಕೇಂದ್ರಗಳಿಂದಲೂ ಬಿತ್ತರವಾಗಿವೆ. ಅಷ್ಟೇ ಅಲ್ಲದೇ ಜಯದೇವ ಕವಿಯ ಗೀತಗೋವಿಂದವನ್ನು ಕೊಂಕಣಿಯಲ್ಲಿ ಬರೆದಿದ್ದಾರೆ. ಇವರ "ಗಮಕ ಕಲೆ" ಗ್ರಂಥವನ್ನು ಕೊಂಕಣಿ ಅಕಾಡೆಮಿ ಪ್ರಕಟಿಸಿದೆ. ಮ್ಹಾಳಸಾ ಚರಿತ್ರೆ ಹಾಗೂ ಚವತಿ ಚಂದ್ರ ಪ್ರಸಂಗಗಳನ್ನು ಸರಸ್ವತಿ ಪ್ರಭಾ ಮಾಸಿಕ ಪತ್ರಿಕೆಯವರು ಪ್ರಕಟಿಸಿದ್ದಾರೆ. ಕನ್ನಡಕ್ಕೆ ಮಾತ್ರ ಸೀಮಿತವಾಗಿದ್ದ ಗಮಕ ಕಲೆಯನ್ನು ಕೊಂಕಣಿ ಭಾಷೆಯು ಪರಿಚಯಿಸಿ ಅನೇಕ ಕಡೆ ಪ್ರದರ್ಶಿಸಿದ್ದಾರೆ. ಇದು ಕೂಡ ದೂರದರ್ಶನ ಚಂದನವಾಹಿನಿಯಲ್ಲಿ ಪ್ರಸಾರವಾಗಿದೆ.

ಇಷ್ಟೆಲ್ಲ ಬಹುಮುಖ ವ್ಯಕ್ತಿತ್ವದ ಕಲಾವಿದರಾದ ವಿಶ್ವನಾಥ ಶೇಟ್ ಅವರನ್ನು ಅನೇಕ ಪ್ರಶಸ್ತಿಗಳು ಹುಡುಕಿಕೊಂಡು ಬಂದಿವೆ. 1998ರಲ್ಲಿ ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿಯು ಇವರಿಗೆ ಕೊಂಕಣಿ ಜಾನಪದ ಪ್ರಶಸ್ತಿ ನಿಡಿದೆ. ಅಖಿಲ ಭಾರತ 55ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಇವರು ಕಲಾ ಪ್ರದರ್ಶನಕ್ಕೆ ಪ್ರಥಮ ಪುರಸ್ಕಾರ ಬಂದಿದೆ. ಉ.ಕ. ಜಿಲ್ಲಾ 14ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಇವರನ್ನು ಸನ್ಮಾನಿಸಲಾಗಿದೆ. ಕರ್ನಾಟಕ ಯಕ್ಷಗಾನ ಬಯಲಾಟ ಅಕಾಡೆಮಿ 2012-13ನೇ ಸಾಲಿನಲ್ಲಿ ಪ್ರಸಾಧನ ಕಲೆಗಾಗಿ ರಾಜ್ಯಪ್ರಶಸ್ತಿ ನೀಡಿ ಗೌರವಿಸಿದೆ.

ಸುಮಾರು 25ಕ್ಕೂ ಹೆಚ್ಚು ಸಂಘ ಸಂಸ್ಥೆಗಳು ಇವರ ಪ್ರತಿಭೆಯನ್ನು ಗುರುತಿಸಿ ಸನ್ಮಾನಿಸಿ ಸತ್ಕರಿಸಿದ್ದಾರೆ. ಪ್ರಸ್ತುತ ಶ್ರೀ ರಾಮಚರಿತ ಕೊಂಕಣಿ

ಮಹಾಕಾವ್ಯವನ್ನು ರಚಿಸಿ "ಮಹಾಕವಿ" ಎನಿಸಿದ್ದಾರೆ. ದಿ. 26-03-2017ರಂದು ಶಿರಸಿಯಲ್ಲಿ ಈ ಗ್ರಂಥದ ಲೋಕಾರ್ಪಣಾ ಸಮಾರಂಭದಲ್ಲಿ ಉ.ಕ.ಜಿಲ್ಲಾ ಕೊಂಕಣಿ ಪರಿಷತ್ತು ರೂಪಾಯಿ 1,35,000/- ಗೌರವಧನ ನೀಡಿ ವಿಶ್ವನಾಥ ಶೇಟ್‌ರನ್ನು ಸತ್ಕರಿಸಿದೆ.

♦♦♦♦

# 27. ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ಪಡೆದ ಕೊಂಕಣಿ ಸಾಹಿತಿಗಳಯಾದಿ

ಸಂಗ್ರಹ: ಡಾ. ವಸಂತ ಬಾಂದೇಕರ, ಕಾರವಾ

| ಅ.ನಂ. | ವರ್ಷ | ಕೃತಿ | ಹೆಸರು |
|---|---|---|---|
| 1 | 1977 | ಹಿಮಾಲಯಾಂತ(ಪ್ರವಾಸಕಥನ) | ರವೀಂದ್ರ ಕೇಳಕರ |
| 2 | 1978 | ಮನ್ನಿಪುನವ(ನಿಬಂಧಗಳು) | ಡಿ.ಕೆ. ಸುಂಖಟನಕರ |
| 3 | 1979 | ದೊರ್ಯಾಗಾಜೇಂಟಾ(ಕವನ ಸಂ.) | ಆರ್.ವಿ.ಪಂಡಿತ |
| 4 | 1980 | ಪಿಸೋಆಮ (ಕ. ಸಂ.) | ಮನೋಹರ ಸರದೇಸಾಯಿ |
| 5 | 1981 | ಸಸ್ಯಾ (ಕ. ಸಂ.) | ಬಿ. ಬಿ. ಬೊರ್ಕರ |
| 6 | 1982 | ಖಾಬ್ರಿ (ನಿಬಂಧಗಳು) | ಲಕ್ಷ್ಮಣರಾವ್ ಸರದೇಸಾಯಿ |
| 7 | 1983 | ಕಾರ್ಮೋಲಿನ(ಕಾದಂಬರಿ) | ದಾಮೋದರ ಮೌಜಿ |
| 8 | 1984 | ಚೌರಂಗ(ಎಕಪಾತ್ರಾಭಿನಯ) | ಪುಂಡಲಿಕ ನಾಯ್ಕ |
| 9 | 1985 | ಭಿತೋರ್ಲೆ ತುಫಾನ (ಕ. ಸಂ.) | ಜೆ.ಬಿ. ಮೊರಾಯಸ್ |
| 10 | 1986 | ಹಾವಮನಿಸ ಅಶ್ವಥಾಮಾ (ಕ. ಸಂ.) | ಪ್ರಕಾಶ ಡಿ. ಪಡಗಾಂವಕರ |
| 11 | 1987 | ಪಂಜಿ ಆತ್ಮಾಮ್ಹಾತಾರಿ ಝೂಲಿ(ಚಿಕ್ಕ ಕಥೆಗಾಳು) | ಅರವಿಂದ ಮಾಂಬ್ರೊ |
| 12 | 1988 | ವ್ಹಕಲ ಪಾವ್ನ (ಚಿ. ಕ.) | ಚಂದ್ರಕಾಂತ ಕಿನಿ |
| 13 | 1989 | ಸಂಶಯಾಚೆ ಕಾನ (ಕ. ಸಂ.) | ಸಿ. ಎಫ್ ಡಿಕೊಸ್ಟಾ |
| 14 | 1990 | ಸಾವಳಗೊರಿ (ಕ. ಸಂ.) | ರಮೇಶ ಬಿ. ವೆಲುಸ್ಕಾರ |
| 15 | 1991 | ಸಪನಫುಲ್ಲ (ಚಿ. ಕ.) | ಮೀನಾ ಕಾಕೋಡಕರ |
| 16 | 1992 | ವಂಶಾಕುಲಾಚೆದೆಣೆ (ಕ. ಸಂ.) | ನಾಗೇಶ ಕರಮಳಿ |
| 17 | 1993 | ತರಂಗ (ಚಿ. ಕ.) | ಮಹಾಬಳೇಶ್ವರ ಸೈಲ್ |
| 18 | 1994 | ಅಂತರಯಾಮಿ (ಚಿ. ಕ.) | ಗೋಕುಲದಾಸ ಪ್ರಭು |
| 19 | 1995 | ಗೋಮಾಂಚಲತೆ ಹಿಮಾಂಚಲ (ಪ್ರ.ಕ.) | ದೀಲೀಪ ಬೊರ್ಕರ |
| 20 | 1996 | ನಿಲಂ ನಿಲಂ ಬ್ರಹ್ಮ (ಕ. ಸಂ.) | ಸಂಕರ ರಮನಿ |
| 21 | 1997 | ಭುಯಂಚಾಫಿ (ಪೆನ್ ಪೊರ್ಟರೈಟ) | ಶೀಲಾ ಕೊಳಂಕರ |
| 22 | 1998 | ಅಶಿಂ ಅಶಿಂಲಾರಾ (ಕ. ಸಂ.) | ಜಾನ. ಬಿ. ಸಿಕ್ವೆರಾ |
| 23 | 1999 | ಅಂತರನಾದ (ಕ. ಸಂ.) | ಶರತಚಂದ್ರ ಶೆನಾಯ |
| 24 | 2000 | ಚಂಪೆಲಿ ಸಾಂಜ (ಕ. ಸಂ.) | ಪಾಂಡುರಂಗ ಭನಗುಯ |
| 25 | 2001 | ಯಮನ (ಕ. ಸಂ.) | ಮಾಧವ ಬೊರಕರ |
| 26 | 2002 | ಭೊಗದಂಡ (ಕಾದಂಬರಿ) | ಹೇಮಾ ನಾಯ್ಕ |
| 27 | 2003 | ಪಂಗ (ಚಿ. ಕಥೆಗಳು) | ಸಶಾಂಕ ಸೀತಾರಾಮ |
| 28 | 2004 | ಅತಂಗ (ಚಿ. ಕಥೆಗಳು) | ಜಯಂತಿ ನಾಯ್ಕ |
| 29 | 2005 | ಭಾಂಗರ ಸಾಲ (ಚಿ. ಕ.) | ಎನ್. ಶಿವದಾಸ |
| 30 | 2006 | ಜೈ ಕೈ ಜುಯಿ(ನಿಬಂಧಗಳು) | ದತ್ತಾ ದಾಮೋದರ ನಾಯ್ಕ |
| 31 | 2007 | ದಿಶಾ (ಕಾದಂಬರಿ) | ದೇವಿದಾಸ ಕದಮ |
| 32 | 2008 | ಘಾಣಕಾಯಿ ನಿಯತಿಚೆ (ಕಾದಂಬರಿ) | ಅಶೋಕ ಕಾಮತ |
| 33 | 2009 | ಕಿರವಂತ (ಕ. ಸಂ.) | ಜೆಸೆ ಫರ್ನಾಂಡಿಸ್ |
| 34 | 2010 | ಕಾಯಲಾಚೆ ಶ್ರದ್ಧಾ (ಕ. ಸಂ.) | ಅರುಣ ಸಾಖರದಾಂಡೆ |
| 35 | 2011 | ಪ್ರಕೃತಿಚೋ ಪಾಸ್ (ಕ. ಸಂ.) | ಮೆಲವಿನ ರೋಡ್ರಿಗ್ಸ್ |
| 36 | 2012 | ಕಾವ್ಯಾಸೂತ್ರ (ಕ. ಸಂ.) | ಕಾಶಿನಾಥ ಶಾಂಭಾ ಲೊಲೆಕರ |
| 37 | 2013 | ಮನಮೊಥ್ಯಾನ(ನಿಬಂಧಗಳು) | ತುಕಾರಾಮ ರಾಮ ಶೇಠ |
| 38 | 2014 | ಮಂಥನ (ನಿಬಂಧಗಳು) | ಮಾಧವಿ ಸರದೇಸಾಯಿ |
| 39 | 2015 | ಕರ್ಣಪರ್ವ (ನಾಟಕ) | ಉದಯ ಭೇಂದ್ರೆ |
| 40 | 2016 | ಕಾಳೆಭಾಂಗರ(ಕಾದಂಬರಿ) | ಎಡವಿನ ಜೆ.ಎಫ್. ಡಿಸೋಜಾ |
| 41 | 2017 | ಬಾಂಧ ಆನಿ ಹರಕಥಾ (ಚಿ.ಕ.) | ಗಜಾನನ ಜೊಗ |
| 42 | 2018 | ಚಿತ್ರಲಿಪಿ (ಕ. ಸಂ.) | ಪರೇಶ ನರೇಂದ್ರ ಕಾಮತ |
| 43 | 2019 | ದಿ ವರ್ಡ್ಸ (ಕ. ಸಂ.) | ನಿಲ್ಬಾ ಎ. ಬಾಂದೇಕರ |

# 28. ವಿವಿಧ ಭಾಷಿಕ ಕೊಂಕಣಿ 42 ಸಮುದಾಯಗಳ ಸಂಕ್ಷಿಪ್ತ ಮಾಹಿತಿ

ಡಾ. ವಸಂತ ಬಾಂದೇಕರ-ಕಾರವಾರ

1) ಗೌಡ ಸಾರಸ್ವತ ಬ್ರಾಹ್ಮಣ
2) ದೈವಜ್ಞ ಬ್ರಾಹ್ಮಣ
3) ರಾಜಾಪುರ ಸಾರಸ್ವತ ಬ್ರಾಹ್ಮಣ (ಆರ್.ಎಸ್.ಬಿ.)
4) ಕ್ರೈಸ್ತ ಕ್ಯಾಥೋಲಿಕ್
5) ಚಾರೋಡಿ ಕ್ರೈಸ್ತರು
6) ಸಿರಿಯನ್ ಕ್ರೈಸ್ತರು
7) ಕುಡುಬಿ ಯಾ ಕುಣುಬಿ
8) ಖಾರ್ವಿ
9) ಕ್ರೈಸ್ತ ಸಿದ್ದಿ
10) ಮುಸ್ಲಿಂ ಸಿದ್ದಿ
11) ಹಿಂದೂ ಸಿದ್ದಿ
12) ನವಾಯ್ತ್ (ನವಾಯತ)
13) ದಾಲ್ದಿ
14) ಮೇಸ್ತ
15) ಆಚಾರಿ
16) ಭಂಡಾರಿ
17) ಕುಂಬಾರ್
18) ವ್ಹಾಜಂತ್ರಿ
19) ಮಾಡಕಾರ ಭಂಡಾರಿ
20) ವೈಶ್ಯವಾಣಿ
21) ಗೋಮಾಂತಕ ಬಾಂದಿ
22) ಗೋಮಾಂತಕ ದೇವಳಿ
23) ಗೋಮಾಂತಕ ಕಲಾವಂತ
24) ಮಡ್ವಳ್ (ಮಡಿವಾಳ)
25) ಕೋಮಾರಪಂಥ
26) ಗೌಳ್ಳಿ
27) ಕೆಲ್ಶಿ ನಾಪಿತ
28) ಗಾಬಿತ
29) ಚಪ್ಪೆಕಾರ್ ಸಾರಸ್ವತ
30) ಚಿತ್‌ಪಾವನ ಬ್ರಾಹ್ಮಣ
31) ಗುಡಿಗಾರ
32) ಮ್ಹಾರ್ – ಅಂಬೇಡ್ಕರ್‌ರಾಯ್ಟ್
33) ಕೊಂಕಣ ಮರಾಠಾ
34) ಜಮಾಯತಿ
35) ಗಾವಡೆ
36) ಚಾಂಬಾರ (ಚರ್ಮದ ಕೆಲಸಗಾರರು)
37) ಗೋಸಾವಿ
38) ಶೇರುಗಾರ (ರಾಮ ಕ್ಷತ್ರಿಯ)
39) ಕುಡಾಲ ದೇಶಸ್ತ ಆದ್ಯ ಗೌಡ ಬ್ರಾಹ್ಮಾಣ
40) ಚಿತ್ರಾಪುರ ಸಾರಸ್ವತ ಬ್ರಾಹ್ಮಾಣ
41) ಬಾಲಾವಲಿಕರ ಸಾರಸ್ವತ ಬ್ರಾಹ್ಮಾಣ
42) ಪಡ್ತಿ

**ಗೌಡ ಸಾರಸ್ವತ ಬ್ರಾಹ್ಮಣ (ಜಿ.ಎಸ್.ಬಿ.)**

ಈ ಜನ ಮೂಲತಃ ಗೋವಾದಲ್ಲಿ ವಾಸ್ತವ್ಯ ಮಾಡಿದವರಿದ್ದು ಪೋರ್ಚುಗೀಸರ ದಬ್ಬಾಳಿಕೆಯಿಂದ ತಮ್ಮ ಜೀವ ಹಾಗೂ ಧರ್ಮದ ರಕ್ಷಣೆಗಾಗಿ ಕರ್ನಾಟಕಕ್ಕೆ ವಲಸಿಗರಾಗಿ, ಕರ್ನಾಟಕದ ಕೊಂಕಣಿ ಪ್ರದೇಶ (ಸಮುದ್ರದ ದಂಡೆಗುಂಟ)ದಲ್ಲಿ ತಮ್ಮ ಕುಲದೇವರು ಹಾಗೂ ಇಷ್ಟದೇವರ ಜೊತೆಗೆ ಬಂದರು. ಕನ್ನಡ ಭಾಷೆಯ ಪ್ರಭಾವದಲ್ಲಿ ಕರ್ನಾಟಕದಲ್ಲಿ ವಾಸಿಸುತ್ತದ್ದರೂ ತಮ್ಮ ಮಾತೃಭಾಷೆ ಕೊಂಕಣಿಯನ್ನು ಮಾತ್ರ ಮರೆಯಲಿಲ್ಲ. ಅದನ್ನು ಈಗಲೂ ಜೀವಂತವಾಗಿ ಇಟ್ಟಿದ್ದಾರೆ. ದಿಲ್ಲಿಯಿಂದ 50-60ಮೈಲಿನ ಅಂತರದ ಮೇಲೆ ಇತಿಹಾಸ ಹೇಳುವಂತೆ ಒಂದು ಸಾರಸ್ವತ ನದಿ ಇದ್ದು ಅದರ ತೀರದ ಮೂಲನಿವಾಸಿಗಳಾದ ಇವರು ಸಾರಸ್ವತ ಬ್ರಾಹ್ಮಣ ಎಂದು ಕರೆಯಲ್ಪಡುತ್ತಾರೆ.

**ಧಾರ್ಮಿಕ ಜೀವನ :**

ಸಾರಸ್ವತ ಮೂಲ ಪುರುಷ ಭೃಗಮುನಿ ಇವರು ಬ್ರಹ್ಮ-ವಿಷ್ಣು ಶಂಕರದೇವರ ಪರೀಕ್ಷೆಗೆ ಹೋಗಿ ಅವರನ್ನು ಸೋಲಿಸಿ, ವಿಷ್ಣುವಿನಿಂದ ಸೋತು ನಂತರ "ಶ್ರೀನಿವಾಸ"ನಾಗಿ ಜನಿಸಿದನು. ಸಾರಸ್ವತರವರನ್ನು ಶ್ರೀಮಾನ್ನ ನಾರಾಯಣ ಎಂದರೆ ಶ್ರೀನಿವಾಸ ಹೆಸರಿನ ವೆಂಕಟರಮಣನ ಪೂಜೆ ಮಾಡುತ್ತಾರೆ. ಸಾರಸ್ವತ ಜನ ಮನೆಯಲ್ಲಿ ಪೂಜೆ ಆರಾಧನೆ ಹಾಗೂ ವಿವಿಧ ಬಗೆಯ ಧಾರ್ಮಿಕ ನೀತಿಯನ್ನು ಪಾಲಿಸುತ್ತಾರೆ. ಇವರ ಆಚರಣೆಯ ಹಬ್ಬಕ್ಕೆ "ಉತ್ಸವ" ಎನ್ನುತ್ತಾರೆ. ಆರಾಧ್ಯ ದೇವರ ಯಜ್ಞ, ಕೀರ್ತನೆ ಹಾಗೂ ಅನ್ನದಾನ ಮಾಡುತ್ತಾರೆ.

ಗಣಪತಿ, ವಿಷ್ಣು, ಶಿವ, ಬ್ರಹ್ಮ, ರಾಮಾ, ಇತ್ಯಾದಿ ಇವರಲ್ಲಿ ದೇವರುಗಳಾದರೆ; ಪಾರ್ವತಿ, ರಾಧಾ, ಸರಸ್ವತಿ ಇತ್ಯಾದಿ ಪ್ರಮುಖ ದೇವತೆಗಳು. ಜಿ.ಎಸ್.ಬಿ.ಯವರಲ್ಲಿ ಪಂಗಡಗಳಿವೆ. ಸ್ಮಾರ್ಥರು ತಮ್ಮ ಹಣೆಗೆ ತಿಲಕವಿಟ್ಟರೆ ವೈಷ್ಣವರು ಉದ್ದತಿಲಕ ಇಡುತ್ತಾರೆ. ಘುಗಡಿ ಹಾಗೂ ಕಥಕ್ಕಳಿಯಂತಹ ನೃತ್ಯಗಳು ಇವರಿಗೆ ಬಲು ಇಷ್ಟ.

**ಹಬ್ಬಗಳು :**

ಇವರ ಹಬ್ಬಗಳಲ್ಲಿ ಗಣೇಶ ಉತ್ಸವ, ದೀಪಾವಳಿ,

ಗೋಕುಲಾಷ್ಟಮಿ, ತುಳಸಿ ಮದುವೆ ಇವು ಹೆಚ್ಚಿನ ಪ್ರಮುಖ ಹಬ್ಬಗಳು ಮನೆಯ ಹಬ್ಬಗಳಾದರೆ ಬ್ರಹ್ಮರಥೋತ್ಸವ ಸಾರ್ವಜನಿಕ ಹಬ್ಬಗಳಾಗಿವೆ.

**ಬೃಹ್ಮರಥೋತ್ಸವ ತೇರು :**

ಪ್ರತಿ ಜನವರಿಯಲ್ಲಿ ಜರಗುವ ಹಬ್ಬಕ್ಕೆ 'ಬೃಹ್ಮರಥೋತ್ಸವ' ಎಂದು ಕರೆಯುತ್ತಾರೆ. ಹಬ್ಬದ ಆಚರಣೆ 5 ರಿಂದ 6 ದಿನಗಳವರೆಗೆ

ಇರುತ್ತದೆ. ಮೊದಲನೇ ದಿನ ಧ್ವಜಾರೋಹಣ ಮಾಡುತ್ತಾರೆ. ಆ ಕಂಬಕ್ಕೆ "ಗಣಾಖಾಂಬೋ" ಎಂದು ಕ-ರೆಯುತ್ತಾರೆ. ಈ ಕಂಬದ ಮೇಲೆ

ಗರುಡ ಹಾಗೂ ಹನುಮಾನನ ಚಿತ್ರವಿದ್ದು ಬಾವುಟ ಹಚ್ಚುತ್ತಾರೆ. ನಂತರ ಕಂಬಕ್ಕೆ ತೆಂಗಿನಕಾಯಿ, ಬಾಳೆಗೊನೆ, ಪಪ್ಪಾಯಿ, ಇತ್ಯಾದಿ ಕಟ್ಟುತ್ತಾರೆ. ಜಾತ್ರೆಗೆ ಬಂದವರಿಗೆ 8-30 ಗಂಟೆಯಿಂದ 11-30 ಗಂಟೆಯವರೆಗೆ ಗಂಜಿಯನ್ನು ನೀಡುತ್ತಾರೆ. ಮಧ್ಯಾಹ್ನ ಫಲ್ಲಕ್ಕಿ ಉತ್ಸವ

ಇರುತ್ತದೆ. ರಾತ್ರಿ 3 ಗಂಟೆಗೆ ಬಂಡಿಉತ್ಸವ ಇರುತ್ತದೆ. ವೇದೋಪದೇಶ, ಭಜನೆ, ಮಾಳಉತ್ಸವ. ನಾಲ್ಕನೇ ದಿ: ಸಣ್ಣ ರಥೋತ್ಸವ ಆಗ ವಾಲಿಉತ್ಸವ ಹಾಗೂ ರಾತ್ರಿ ( ಗಂಟೆಗೆ ಆರಾಧನೆಯಾದ ತಕ್ಷಣ ದೇವರನ್ನು ಭೃಗಬೇ ಉತ್ಸವಕ್ಕೆ ಕರೆದುಕೊಂಡು ಹೋಗುತ್ತಾರೆ. ದೇವಸ್ಥಾನ ಸಂಬಂಧಿಸಿದ ಊರಿಗೆ ಹೋಗಿ ಶಿಕಾರಿ ಹಿಡಿದು-ಕೊಂಡು ಬರುತ್ತಾರೆ. ಇದೆಲ್ಲವನ್ನು ಪಾಲ್ಕಿಉತ್ಸವದಲ್ಲಿ ನೋಡಲು ಸೀಗುತ್ತದೆ. ಬೆಳಗ್ಗೆ ಸೀಯಾಳದ ಅಭಿಷೇ ಸಂಜೆ 5 ಗಂಟೆಗೆ ಬಂಗಾರದ ಫಲ್ಲಕ್ಕಿಯಲ್ಲಿ ಉತ್ಸ ಮೂರ್ತಿ ಹಾಗೂ ಪೂಜಾಮೂರ್ತಿಯನ್ನು ಕೂರಿ ರಥಕ್ಕೆ 5 ಸಲ ಪ್ರದಕ್ಷಿಣೆ ಹಾಕುತ್ತಾರೆ. ಅದರ ನಂತ ಎರಡು ದೇವರಿಗೆ ರಥದಲ್ಲಿ ಕೂರಿಸುತ್ತಾರೆ. ಒಳಗಿದ್ದ ಎಲ್ಲಾ ಅರ್ಚಕರು ಪೂಜೆ ಮಾಡುತ್ತಾರೆ. ಅಲ್ಲಿಂದ ರಾತ್ರಿ 11ರವರೆಗೆ ರಥೋತ್ಸವವಾಗುತ್ತದೆ.

♦♦♦♦

**ದೈವಜ್ಞ ಬ್ರಾಹ್ಮಣ**

"ದೈವ" ಎಂದರೆ ದೇವರು "ಜ್ಞ" ಎಂದರೆ ತಿಳಿದಿರುವವರು, ಜ್ಞಾನ ಹೊಂದಿರುವವರು-ಇವರೇ ದೈವಜ್ಞರು. ಸುಮಾರು ಒಂದುಸಾವಿರ ವರ್ಷದ ಹಿಂದೆ ದೈವಜ್ಞ ಜನರು ಬಂಗಾಲದಿಂದ ಗೋವಾಕ್ಕೆ ಬಂದರು. ಅವರ ಅನಿಸಿಕೆಯಂತೆ ಅವರ ಸಂಸ್ಕೃತಿಯ ಕೆಲಭಾಗ ಬಂಗಾಲ ಸಂಸ್ಕೃತಿಗೆ ಅತೀ ಸಮೀಪವಿದೆ. ಇವರು ಬ್ರಾಹ್ಮಣರಾದರೂ ಮೀನು ಸೇವನೆ ಮಾಡುತ್ತಾರೆ. ಇದರಲ್ಲಿ ಬಂಗಾಲದ ಪ್ರಭಾವವಿದೆ. ಕಾರವಾರದ ದೈವಜ್ಞ ಸಮುದಾಯದವರ ಒಳಗೂ ಇದೇ ತರವಾಗಿದೆ. ಇವರು ಮಾಂಸಾಹಾರಿಗಳಾಗಿದ್ದಾರೆ.

ಇವರ ಕುಲದೇವರು ಗೋವಾ ಹಾಗೂ ಬಂಗಾಲಕ್ಕೆ ಸಂಬಂಧಪಟ್ಟಿದೆ. ಈ ಸಮಾಜದ ವಿಮಲೇಶ್ವರ ಕುಲದೇವ ಇದಕ್ಕೆ ಸಾಕ್ಷಿ. ಎಂದರೆ ಇವರಿಗೆ ಗೋವಾದಲ್ಲಿ 'ರೇವಣಕರ' ಎನ್ನುತ್ತಾರೆ. ಇನ್ನೊಂದು ಕುಲದೇವರು ಕಾಮಾಕ್ಷಿ ಗೋವಾದ ಶಿರೋಡಾ ಹಳ್ಳಿಯಲ್ಲಿದೆ. ವಿಶೇಷವೆಂದರೆ ಈ ದೇವಿಯ ಮೂಲನಿವಾಸಸ್ಥಾನ ಆಸ್ಸಾಮದ ಗೌಹಾತಿಯಲ್ಲಿದೆ. ಆದ್ದರಿಂದ ಇವರು ಮೂಲ ಬಂಗಾಲದವರು ಎಂದು ಭಾವಿಸಬಹುದು. ಇದಲ್ಲದೆ ಗೋವಾದ ರವಳನಾಥ, ಸೋಮೇಶ್ವರ, ಸಾತೇರಿ, ಮಹಾಲಸಾ ಇತ್ಯಾದಿಗಳು ಈ ಜನರ ಕುಲದೇವರುಗಳಾಗಿವೆ.

ದೈವಜ್ಞ ಬ್ರಾಹ್ಮಣರಿಗೆ ವಿಶ್ವಕರ್ಮನ ಮೇಲೆ ಬಲು ಅಭಿಮಾನ ಇವರ ಮೂಲಮನೆ ಬಂಗಾರದ ಕಸುಬಾಗಿದೆ. ಆದ್ದರಿಂದಲೇ ಈ

ಜನ ವಿಶ್ವಕರ್ಮನಿಗೆ ತಮ್ಮ ಗುರು ಎಂದು ಗೌರವಿಸುತ್ತಾರೆ. ಹಿಂದೂ ಸಮಾಜದ ಮಹಾನ್ ಸಂತ ನರಹರಿ ಸೋನಾರ್ ದೈವಜ್ಞ ಸಮಾಜದಲ್ಲಿ 1313 ಇಸವಿಯಲ್ಲಿ ಸೊಲ್ಲಾಪುರದ ಪಂಡರಾಪುರದಲ್ಲಿ(ಮಹಾರಾಷ್ಟ್ರ) ಜನಿಸಿದ. ಅವರ ಆಲ್ಲುಜ್ "ಸೋನಾರ್", ಅವನು ದೈವಜ್ಞ ಬ್ರಾಹ್ಮಣ ಸಮಾಜದ ಸದಸ್ಯನಾಗಿದ್ದು ಅವನು (ನರಹರಿಸೊನಾರನು) ತನ್ನನ್ನು ಪಾಂಡುರಂಗವಿಠಲನಿಗೆ ಸಮರ್ಪಣೆ ಮಾಡಿ ಮಹಾನ್ ಸಂತನಾದನು.

**ಕುಳ್ಯೆ(ಕುಲ) ಕಸಬು :**

ಬಹಳಷ್ಟು ಜನ ಬಂಗಾರದ ಕೆಲಸ ಮಾಡುತ್ತಾರೆ. ಕೆಲವು ಜನ ದೇವಸ್ಥಾನದಲ್ಲಿ ಪೂಜೆ ಪುನಸ್ಕಾರ ವೃತ್ತಿ ಮಾಡುತ್ತಾರೆ. ಮೊದಲು ಈ ಜನ ರಾಜ್ಯ ದರ್ಬಾರದಲ್ಲಿ ಮರ್ಯಾದೆಯ ಹುದ್ದೆಯನ್ನು ಅಲಂಕರಿಸಿದ್ದರು. ಮಹಾರಾಷ್ಟ್ರದ ಪೇಶ್ವಾ ಬಾಜೀರಾಯರು ಒಬ್ಬ ದೈವಜ್ಞ ಬ್ರಾಹ್ಮಣನಿಗೆ ತಮ್ಮ ರಾಜ್ಯದಲ್ಲಿ ಧಾರ್ಮಿಕ ಕಾರ್ಯ ನಡೆಸಿಕೊಂಡು ಹೋಗಲು ನೇಮಕ ಮಾಡಿದ್ದರು. ಕೆಲ ಜನ ಜ್ಯೋತಿಷ್ಯ ವಿದ್ಯೆಯನ್ನು ಕಲಿತು ಬದುಕು ಸಾಗಿಸುತ್ತಿದ್ದು ಇದೊಂದು ಪುರೋಹಿತರಿಗೆ ಆದಾಯದ ದಾರಿಯಾಗಿದೆ.

**ರಾಜಾಪುರ ಸಾರಸ್ವತ ಬ್ರಾಹ್ಮಣ (ಆರ್.ಎಸ್.ಬಿ.)**

ಮೂಲತಃ ಸರಸ್ವತಿ ನದೀ ತೀರದಲ್ಲಿ ವಾಸವಾಗಿದ್ದವರು ಸಾರಸ್ವತರು.

ಸರಸ್ವತೀ ನದಿ ಹಿಮಾಲಯದಲ್ಲಿ ಹುಟ್ಟಿ ಸೌರಾಷ್ಟ್ರದಲ್ಲಿ ಸಮುದ್ರ ಸೇರಿದ ಕಾಲಾಂತರದಲ್ಲಿ ಭೂಗರ್ಭದಲ್ಲಾದ ಬದಲಾವಣೆಯಿಂದ ತನ್ನ ಅಸ್ತಿತ್ವವನ್ನು ಕಳಕೊಂಡಿತು. ಈ ಕಾರಣದಿಂದ ಜನರು ಜೀವನ ನಡೆಸಲು ದೇಶದ ವಿವಿಧ ಕಡೆಗೆ ವಲಸೆ ಹೋದರು. ಇಂತಹ ಒಂದು ಪಂಗಡ ಬಿಹಾರದಲ್ಲಿರುವ 'ಗೌಡ್' ದೇಶದಲ್ಲಿ ನೆಲೆ ನಿಂತಿತು. ಮುಂದಕ್ಕೆ ಇವರು 'ಗೌಡ ಸಾರಸ್ವತ'ರೆಂದು ಕೆರಯಲ್ಪಟ್ಟರು.

ಅವರಲ್ಲಿ ಒಂದು ಪಂಗಡ ದಕ್ಷಿಣಕ್ಕೆ ವಲಸೆ ಹೋಗುತ್ತಾ, ತೀರದಲ್ಲಿರುವ ಗೋಮಾಂತಕಕ್ಕೆ ಬಂದು ನೆಲೆಸಿದರು. ಇವರು ಗೋಮಾಂತದಲ್ಲಿರುವ ಲೋಡಳ, ಬಾಂದಿವೆಡೆ, ಭೋರಿ, ಮಡ್ಕೆ, ಬಾಂಡೋಳ ಮುಂತಾದ ಸ್ಥಳಗಳಲ್ಲಿ ವಾಸಿಸ ತೊಡಗಿದರು. ಗೋಮಾಂತದಲ್ಲಿಯೇ ತಮ್ಮ ಕುಲದೇವರ ದೇವಸ್ಥಾನಗಳನ್ನು ಸ್ಥಾಪಿಸಿದರು.

16ನೇ ಶತಮಾನದಲ್ಲಿ ಪೋರ್ಚುಗೀಸರ ಆಕ್ರಮಣದ ಕಾಲದಲ್ಲಿ ನಡೆದ ಧರ್ಮಾಂಧ ಹಿಂಸೆಯನ್ನು ತಾಳಲಾರದೆ ಗೋವೆಯ ಉತ್ತರಕ್ಕೂ, ದಕ್ಷಿಣಕ್ಕೂ ವಲಸೆ ಹೋದರು. ಗೋಮಾಂತಕದ ಉತ್ತರದಲ್ಲಿರುವ ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆಯ ರಾಜಾಪುರ ತಾಲೂಕು ಭಾಲಾವಳಿಯಲ್ಲಿ ನೆಲೆನಿಂತರು. ಭಾಲಾವಳಿಯಲ್ಲಿ ಇವರ ರಾಮನಾಥ, ಲಕ್ಷ್ಮೀಮಾಧವ, ಜಾರಬದೇವಿ ಮುಂತಾದ ದೇವಸ್ಥಾನಗಳಿದ್ದು, ಮುಂದೆ ರಾಯಗಡ, ದಿಸ್ತಾಕ, ಶೆನೆತೆಗಳಲ್ಲೂ ದೇವಸ್ಥಾನಗಳನ್ನು ಕಟ್ಟಿದರು. ರಾಜಾಪುರದಲ್ಲಿ ಗಜಾನನ, ನವದುರ್ಗಾ ದೇವಾಲಯವಿದೆ. ರಾಜಾಪುರದಲ್ಲಿ ವಾಸವಾಗಿದ್ದವರನ್ನು "ರಾಜಾಪುರ ಸಾರಸ್ವತ"ರೆಂದೂ, ಭಾಲಾವಳಿಯಲ್ಲಿ ವಾಸವಾಗಿದ್ದವರನ್ನು "ಭಾಲಾವಳ ಗೌಡ ಸಾರಸ್ವತ"ರೆಂದು ಕರೆಯಲ್ಪಟ್ಟರು. ಬ್ರಿಟಿಷ್ ಗೆಜೆಟಿಯರ್ ಪ್ರಕಾರ ಇವರು ಕೊಂಕಣಿ ಭಾಷಿಕರಿದ್ದು, ಪೋರ್ಚುಗೀಸರ ಅಮಾನುಷ ದಬ್ಬಾಳಿಕೆಗೆ ಮತ್ತು 17ನೇ ಶತಮಾನದಲ್ಲಿ ಮುಸಲ್ಮಾನರ ಬಲತ್ಕಾರದ ಮತಾಂತರಕ್ಕೆ ಅಂಜಿ ಕರ್ನಾಟಕ, ಕೇರಳದ ಕರಾವಳಿ ಪ್ರದೇಶಕ್ಕೆ ವಲಸೆ ಬಂದು ನೆಲೆ ನಿಂತರು. ಉಡುಪಿ, ಕಾರ್ಕಳ, ಪುತ್ತೂರು, ಸುಳ್ಯ, ಬಂಟ್ವಾಳ, ಕಾಸರಗೋಡು, ಕೊಡಗು ಮುಂತಾದ ಕಡೆಗಳಲ್ಲಿ ಹಂಚಿಹೋದರು. ಪ್ರಾರಂಭದಲ್ಲಿ ಶ್ರೀಮಂತ ಭೂಮಾಲಿಕರ, ದೇವಾಲಯಗಳ, ಮಠಗಳ ಆಶ್ರಯ ಪಡೆದು, ಕೃಷಿಯನ್ನು ಪ್ರಧಾನ ಕಸುಬನ್ನಾಗಿಸಿಕೊಂಡರು.

ಇವರು ದೇವೀ ಆರಾಧಕರಾಗಿದ್ದು, ಸ್ಮಾರ್ತ ಸಂಪ್ರದಾಯದ ಸಸ್ಯಾಹಾರಿಗಳು ಮೂಲತಃ ಶ್ರೀ ಸಂಸ್ಥಾನ ಗೌಡ ಪಾದಾಚಾರ್ಯ ಶ್ರೀಕೈವಲ್ಯಮಠದ ಶಿಷ್ಯವರ್ಗದವರಾಗಿದ್ದು, ವಿವಿಧ ಕಾರಣಗಳಿಂದ ಮಠಸಂಪರ್ಕ ಕಳೆದುಕೊಂಡಿದ್ದರು. ಆ ಸಮಯದಲ್ಲಿ ಸ್ಮಾರ್ತ ಸಂಪ್ರದಾಯದ ಶೃಂಗೇರಿಮಠದ ಅನುಯಾಯಿಗಳಾಗಿದ್ದರು. 1968ರಲ್ಲಿ ಶ್ರೀಕೈವಲ್ಯಮಠಕ್ಕೆ ಪುನರ್ ಸೇರ್ಪಡೆಗೊಂಡರು. ಕಾರ್ಕಳದ ಹಿರ್ಗಾನ, ಬಂಟ್ವಾಳದ ಮೋಂತಿಮಾರು, ಕಾಸರಗೋಡು ಕಾಟುಕುಕ್ಕೆಯ ಮೊಗೇರು, ಉಡುಪಿಯ ಬಂಟಕಲ್ಲು, ಮಣಿಪಾಲದ ನರಸಿಂಗೆಗಳಲ್ಲಿ ಇವರ ದೇವಸ್ಥಾನಗಳಿವೆ. ಈ ಭಾಗಗಳಿಂದ ಉದ್ಯೋಗ ನಿಮಿತ್ತ ದೇಶದ ವಿವಿಧ ಭಾಗಗಳಲ್ಲಿ ಪಸರಿಸಿದ ಈ ಸಮಾಜದವರು ಬೆಂಗಳೂರು, ಬೆಳಗಾವಿ, ಶಿವಮೊಗ್ಗ, ಮೈಸೂರು, ಮುಂಬಯಿ, ಗುಜರಾತ್ ಭಾಗಗಳಲ್ಲಿ ಅಧಿಕ ಸಂಖ್ಯೆಯಲ್ಲಿದ್ದಾರೆ.

**ಕ್ರೈಸ್ತ ಕ್ಯಾಥೋಲಿಕ್**

ಪೋರ್ಚುಗೀಸರ ಆಡಳಿತದಲ್ಲಾದ ದಬ್ಬಾಳಿಕೆಗೆ ಅಂಜಿ ಗೋವಾದ ಕೆಲ ಕ್ರೈಸ್ತಸಮುದಾಯದವರು ದಕ್ಷಿಣ ಕರಾವಳಿಯತ್ತ
ವಲಸೆ ಬಂದರು. ಆಗ ಈ ಭಾಗದಲ್ಲಿ ಜನವಸತಿ ವಿರಳವಾಗಿದ್ದು ಅಲ್ಲಿಯ ಆಳುತ್ತಿದ್ದ ರಾಜರೊಡನೆ ಇವರು ರಾಜಿಮಾಡಿಕೊಂಡಿದ್ದರಿಂದ ರಾಜಾಶ್ರಯವನ್ನು ಪಡೆದು ಇಲ್ಲಿ ಉಳಿದರು. ರಾಜರು ನೀಡಿದ ಅರಣ್ಯ ಪ್ರದೇಶವನ್ನು ಸಮತಟ್ಟು ಮಾಡಿ ಮನೆ ಕಟ್ಟಿ ವಾಸಿಸಲು ಅನುಕೂಲ ಮಾಡಿಕೊಂಡು ಕೆರೆ, ಬಾವಿಗಳ ನಿರ್ಮಾಣ ಮಾಡಿ ಹೊಲಗದ್ದೆಗಳನ್ನು ನಿರ್ಮಿಸಿ ಭೂಮಿಯಲ್ಲಿ ಕೃಷಿಸಾಗುವಳಿಗಾಗಿ ಭತ್ತ ಬೆಳೆದು ಅಕ್ಕಿಯನ್ನಾಗಿ ಮಾಡಿಕೊಂಡರು. ಇವರು 3 ಬಗೆಯ ಭತ್ತವನ್ನು ಹಚ್ಚುತ್ತಾರೆ. ಯೆಣೆಲ್, ಸುಗ್ಗಿ, ಕೊಳ್ಳೆಲ್.

ಕಷ್ಟದಾಯಕ ಬದುಕಿನಲ್ಲೂ ಇವರು ಆನಂದದಿಂದ ವಾಸಿಸುತ್ತಿದ್ದರು. ಇವರ ಸಂತೋಷದ ಬದುಕು ಟಿಪ್ಪು ಸುಲ್ತಾನನ ಕಾಲದವರೆಗೆ ಉಳಿಯಿತು. ಕಾರಣ ಬ್ರಿಟಿಷರಿಗೂ ಟಿಪ್ಪುಸುಲ್ತಾನನಿಗೂ ಕಾಳಗವಾದಾಗ ಈ ಸಮುದಾಯವು ಟಿಪ್ಪುವಿಗೆ ಸಹಕಾರ ನೀಡಲಿಲ್ಲ ಎಂಬ ಕಾರಣಕ್ಕಾಗಿ ಸಿಟ್ಟಿನಿಂದ ಅವರನ್ನು ಬಂದಿಮಾಡಿ ಶ್ರೀರಂಗಪಟ್ಟಣದಲ್ಲಿ ಒಯ್ದು ಇಡುವುದರ ಜೊತೆಗೆ ಇಸ್ಲಾಂ ಧರ್ಮಕ್ಕೂ ಕೆಲವರನ್ನು ಮತಾಂತರ ಮಾಡಲಾಯಿತು. 15 ವರ್ಷದ ನಂತರ ಮತ್ತೆ ಬ್ರಿಟಿಷರಿಗೂ ಟಿಪ್ಪುವಿಗೂ ಯುದ್ಧವಾದಾಗ ಈ ಸಮುದಾಯದವರು ಟಿಪ್ಪುವಿಗೂ ಸಹಕಾರ ನೀಡಿರುವುದರಿಂದ ಅವರಿಗೆ ಬಂಧನದಿಂದ ಮುಕ್ತ ಮಾಡಲಾಯಿತು. ಇವರು ಮರಳಿ ತಮ್ಮ ಮೂಲಸ್ಥಳಕ್ಕೆ ಬಂದು ಹೊಲ, ಗದ್ದೆ, ಮಾಡಿಕೊಂಡರು. ಈ ರೀತಿ ಕ್ಯಾಥೋಲಿಕ ಸಮುದಾಯದವರು ಬಹಳಷ್ಟು ಧಾರ್ಮಿಕ, ಆರ್ಥಿಕ, ಮಾನಸಿಕವಾಗಿ ಹಿಂಸಿಸಲ್ಪಟ್ಟಿದ್ದಾರೆ.

ಊರು ಕೆಲಸ :

ಕೊಂಕ್ಣಿ ಕ್ರೈಸ್ತ ಜನರು ತೆನ್ಕಾ(ದಕ್ಷಿಣ) ಹಾಗೂ ಬಡ್ಗಾ(ಉತ್ತರ) ಅಂದರೆ ದಕ್ಷಿಣ ಕನ್ನಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ ಹೆಚ್ಚಾಗಿ ವಾಸಿಸುತ್ತಾರೆ. ಅದಲ್ಲದೆ

ಕರ್ನಾಟಕದ ಬೆಂಗಳೂರು, ಮೈಸೂರು, ಧಾರವಾಡ, ಬೆಳಗಾವಿ, ಶಿವಮೊಗ್ಗಾ ಇತ್ಯಾದಿ ಸ್ಥಳಗಳಲ್ಲಿ ಹರಡಿದ್ದಾರೆ. ಕೆಲಸದ ನಿಮಿತ್ತ ಮುಂಬಯಿ, ಗಲ್ಫ್, ಯುರೋಪ್ ಹಾಗೂ ಅಮೇರಿಕಾದಲ್ಲೂ ವಾಸಿಸುತ್ತಿದ್ದಾರೆ.

ಶಿಕ್ಷಣದ ದೃಷ್ಟಿಯಿಂದ ಕೊಂಕಣಿ ಕ್ರೈಸ್ತ ಜನಾಂಗದವರು ಬಹಳ ಹಿಂದಿನಿಂದಲೂ ಸುಶಿಕ್ಷಿತರು. ದೇಶವು ಅಭಿವೃದ್ಧಿಯತ್ತ ಹೆಜ್ಜೆ ಇಡುವ ಮೊದಲೇ ಕೊಂಕಣಿ ಕ್ರೈಸ್ತ ಸಮುದಾಯದವರು ಹೊರ ದೇಶಗಳಿಗೆ ಉಚ್ಚಮಟ್ಟದಲ್ಲಿ ದುಡಿದು ತಮ್ಮ ಹೆಸರು, ಸಿರಿವಂತಿಕೆಗಳಿಸಿ ಹೆಚ್ಚಾನ ಹೆಚ್ಚು ಜನರು ಶಾಂತಿ ಸಮೃದ್ಧಿಯಿಂದ ಬದುಕುತ್ತಿದ್ದಾರೆ.

**ಚಾರೋಡಿ ಕ್ರೈಸ್ತರು**

ಚಾರೋಡಿ, 'ಚಾರ್‍ವಿ' ಎಂತಲೂ ಇವರನ್ನು ಕರೆ-ಯುತ್ತಾರೆ. ಇವರು ಮೂಲತಃ ಕ್ಷತ್ರಿಯರು. ಒಳಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಇವರ ಭಾಷೆಗೂ, ಪೇಟೆ ಭಾಷೆಗೂ ಸ್ವಲ್ಪ ವ್ಯತ್ಯಾಸವಿದೆ. ಇವರು ಹೆಚ್ಚಾಗಿ ಕಾರವಾರ, ಹೊನ್ನಾವರ, ಕುಂದಾಪುರ, ಉಡುಪಿಯ ಕೆಲವು ಪ್ರದೇಶಗಳಲ್ಲಿ ಕಾಣಸಿಗುತ್ತಾರೆ. ಇತರ ಕ್ರೈಸ್ತರಿಗೂ, ಇವರಿಗೂ ಸಂಪ್ರದಾಯ ರೀತಿಗಳಲ್ಲಿ ಏನೇನೂ ವ್ಯತ್ಯಾಸಗಳಿಲ್ಲ.

**ಸಿರಿಯನ್ ಕ್ರೈಸ್ತರು**

ಸಿರಿಯನ್ ಕ್ರೈಸ್ತರು ಅಂದರೆ ಸಿರಿಯಾ ದೇಶದ ಸಂಪ್ರದಾಯಗಳನ್ನು ಪಾಲಿಸುವ ಕ್ರೈಸ್ತರ ಒಂದು ಸಮುದಾಯ. ಉಡುಪಿಯ ಕಲ್ಯಾಣಪುರದಲ್ಲಿ ಹೆಚ್ಚಾಗಿದ್ದಾರೆ. 19ನೇ ಶತಮಾನದಲ್ಲಿ ಮಿಲಾಗ್ರಿಸ್ ಚರ್ಚಿನ ಆಡಳಿತ ವಿರುದ್ಧ ಬಂಡೆದ್ದು ಪಕ್ಕದ ಬ್ರಹ್ಮಾವರದಲ್ಲಿ ಸಿರಿಯನ್ ಚರ್ಚ್ ಸ್ಥಾಪಿಸಿದರು. ಇವರನ್ನು ಸಿರಿಯನ್ ಒರ್ಥೋಡೊಕ್ಸ್(ಸಾಂಪ್ರದಾಯಿಕ) ಕ್ರೈಸ್ತರೆನ್ನುತ್ತಾರೆ.

ಇವರು ಕೊಂಕಣಿಗರಾದರೂ ಧಾರ್ಮಿಕ ನಿಯಮಗಳನ್ನು ಮಲಬಾರಿ(ಮಲೆಯಾಳಿ)ರೀತಿಯಲ್ಲಿ ಆಚರಣೆ ಮಾಡುತ್ತಾರೆ. ಕ್ಯಾಥೋಲಿಕರಿಗೂ ಇವರಿಗೂ ಧಾರ್ಮಿಕ ಆಚರಣೆಗಳಲ್ಲಿ ಮಾತ್ರ ಕೆಲವು ವ್ಯಾತ್ಯಾಸಗಳಿವೆ ಹೊರತು ಸಾಮಾಜಿಕ, ಸಾಂಸ್ಕೃತಿಕ ರೀತಿನೀತಿಗಳು ಸಾಧಾರಣ ಒಂದೇತರನಾಗಿದೆ.

**ಕುಡುಬಿ ಯಾ ಕುಣಬಿ**

ಇವರು ವಿವಿಧ ರೀತಿನೀತಿಯಲ್ಲಿ ನೋಡಲು ಸಿಗುತ್ತಾರೆ. ಮಂಗಳೂರು ಭಾಗದಲ್ಲಿರುವವರಿಗೆ ಕುಡುಬಿ ಎನ್ನುತ್ತಾರೆ, ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ, ಕಾರವಾರ, ಯಲ್ಲಾಪುರ, ಶಿವಮೊಗ್ಗಕ್ಕೆ ಹೋದರೆ ಅವರಿಗೆ ಕುಣ್ಬಿ, ಕುಣುಬಿ ಎಂಬ ಹೆಸರಿನಿಂದ ಕರೆಯುತ್ತಾರೆ.

ಧಾರ್ಮಿಕ ದೃಷ್ಟಿಯಿಂದ ನೋಡಿದಾಗ ಇವರು ಮರ, ಗಿಡ, ಕಲ್ಲು, ಇಂತಹ ವಸ್ತುಗಳನ್ನು ಪೂಜಿಸುತ್ತಾರೆ, ಇವರ ಅಂಗರಚನೆ, ಉಡುಗೆತೊಡುಗೆ, ಭಾಷೆ, ಬದುಕುವ ರೀತಿ ನೋಡಿದಾಗ; ಆಚಾರ-ವಿಚಾರಗಳನ್ನು ಅವರ ಪ್ರಭಾವಗಳನ್ನು ಅವರ ಸ್ವಭಾವಗಳನ್ನು ಜನಪದ ಕಲೆ ಹಾಗೂ ಸಂಸ್ಕೃತಿಯನ್ನು ಗಮನಿಸಿದಾಗ ಇವರು ಆದಿವಾಸಿ ಯಾದಿಯಲ್ಲಿ ಸೇರ್ಪಡೆಯಾಗಲು ನಿಸ್ಸಂದೇಹವಿಲ್ಲ.

**ದೇವರು ಹಾಗೂ ಧರ್ಮ :**

ಇವರ ಕುಲದೇವರು ಮಲ್ಲಿಕಾರ್ಜುನ ದೇವಸ್ಥಾನವು ಗೋವಾದ ಕಾಣಕೋಣದಲ್ಲಿದೆ. ಕುಣ ಜನಸಮುದಾಯದ ಪೂಜಾರಿಯಾದ ಶ್ರೀ ಮಿರಾ ಎಂಬವರು ಈ ದೇವಸ್ಥಾನದ ಪೂಜಾರಿಯಾಗಿದ್ದಾರೆ.

**ವಸತಿ :**

ಇವರು ಕಾರವಾರದ ಹೋಟೆಗಾಳ, ಪಾ ಬೀಮಕೋಲ್, ಮಾಂಯಗೇಣಿ, ಬರ್‍ಗೆ, ಕುಮಾರಕಾಂ ಭೈರಾ ಲಾಂಡಾ ಕೋಟೆ, ಬಾಳ್ನಿ, ಬಾರಗದ್ದೆ, ಯಲ್ಲಾಪುರ ಖಾನಾಪು, ದಾಂಡೇಲಿ, ಜೋಯಿಡಾ, ಹಾಗೂ ಶಿವಮೊಗ್ಗ ಮಂಗಳೂರು, ಎಡಪದವು, ರಾಣಿಪುರ, ಕೊಂಪದವು ಕಾರ್ಕಳದ ಪುತ್ತಿಗೆಪದವು, ಬ್ರಹ್ಮಾವರದಲ್ಲಿ ವಸತಿಮಾ ಇದ್ದಾರೆ.

**ಕುಟುಂಬದ ಕೆಲಸಗಳು :**

ಇವರು ಕೃಷಿ ವ್ಯವಸಾಯವನ್ನೂ ಕೆಲವರು ಕೂ ಮಾಡುತ್ತಾರೆ. ಕೃಷಿ, ಕಾಡು ಇವರ ಜೀವನಕ್ಕೆ ಆಸರೆ.

**ಖಾರ್ವಿ**

'ಖಾರ್ವಿ' ಎಂದರೆ ಮೀನು ಹಿಡಿಯುವ ಜನಾಂಗ. ಈ ಜನ ಕರ್ನಾಟಕದ ಕರಾವಳಿ ಭಾಗದಲ್ಲಿ ವಿಸ್ತರಿಸಿ ಹೋದಂತೆ 2 ಪಂಗಡಗಳಿವೆ. ಕೊಂಕಣ ಖಾರ್ವಿ ಹಾಗೂ ಕನ್ನಡ ಖಾರ್ವಿ ಇವರಲ್ಲಿ ಇನ್ನೊಂದು ಪಂಗಡವಿದೆ. "ಖಾಂಡೇ ಖಾರ್ವಿ" ಖಾಂಡೇ ಖಾರ್ವಿಯವರು ಹೆಚ್ಚಾಗಿ ಗಿಡಮರದ ಕೆಲಸ ಮಾಡುತ್ತಾರೆ.

ಕರ್ನಾಟಕದಲ್ಲಿ ಈ ಜನ ದ.ಕ. ಜಿಲ್ಲೆಯಲ್ಲಿ ಮಂಗಳೂರಿನ ಬೆಂಗರೆ; ಉಡುಪಿಯ ಮಲ್ಪೆ, ಪಡು-ಕೆರೆ, ಕೊಡಿಬೆಂಗರೆ, ಕೋಡಿಕನ್ಯಾನ, ಕುಂದಾಪುರದ-ಕಸಬಾಕೋಡಿ, ಬಸ್ರೂರ, ಗಂಗೊಳ್ಳಿ, ಉತ್ತರ ಕನ್ನಡ ಜಿಲ್ಲೆಯ ಭಟ್ಕಳ, ಮಾವಿನಕುರ್ವೆ, ಹೊನ್ನಾವರ, ಕಾಸರ್‌ಕೋಡ, ಗೆರಸೊಪ್ಪ, ಜಳವಳ್ಳಿ, ಹಳದೀಪುರ, ಕುಮಟೆಯ ತದಡಿ, ಗಂಗಾವಳಿ; ಅಂಕೋಲೆಯ ಬೆಳಂಬಾರ, ಮಂಜುಗುಣಿ, ಬೇಲೆಕೇರಿ, ಅವರ್ಸಾ, ಕಾರವಾರದ ಕಾಜುಬಾಗ; ಸರ್ವೋದಯನಗರ, ಮಾಜಾಳಿ, ದೇವಬಾಗ, ಶಿವಮೊಗ್ಗದ ಸೊರಬ, ಸಾಗರ, ಸಿದ್ದಾಪುರ, ಇತ್ಯಾದಿ ಸ್ಥಳಗಳಲ್ಲಿ ವಾಸವಾಗಿದ್ದಾರೆ.

**ಜನನದ ರೀತಿ ನೀತಿ :**

ಜನ್ಮದಿಂದ 12ನೇ ದಿನದವರೆಗೆ ಎಲ್ಲಾ ರೀತಿನೀತಿಗಳು ಹಿಂದೂ ಪದ್ಧತಿಯಂತಿದೆ, ಮಗುವಿನ ನಾಮಕರಣದ ದಿನ ಬ್ರಹ್ಮದೇವನು ಬಂದು ಹಣೆಬರಹ ಬರೆಯುವನೆಂದು ತಿಳಿದು ತೊಟ್ಟಿಲಲ್ಲಿ ಹಾಕುವಾಗ ಒಂದು ಪುಸ್ತಕ ಹಾಗೂ ಪೆನ್ನು ಇಡುತ್ತಾರೆ.

ಖಾರ್ವಿ ಜನರ ಸ್ವಭಾವ ಹಾಗೂ ಗುಣಗಳು :

ಖಾರ್ವಿ ಜನರ ಪ್ರಮುಖ ಗುಣವೆಂದರೆ ಅವರಲ್ಲಿ ಏಕತೆ. ಹೆಚ್ಚಾಗಿ ಇವರ ಮನೆಗಳು ಸಮುದ್ರ ತೀರದಲ್ಲಿರುತ್ತವೆ. ಇವರು ಸಾಹಸಿಗಳು, ಸ್ವಭಾವದಲ್ಲಿ ಮುಗ್ಧರು, ದೇವರಲ್ಲಿ ಅಪಾರ ಶೃದ್ಧೆ. ಇತರರಿಗೆ ಉಪಕಾರ ಮಾಡುವ ಸ್ವಭಾವ ಇವರದು.

**ಊಟ ಹಾಗೂ ಹವ್ಯಾಸ :**

ಈ ಜನಾಂಗದ ಊಟದಲ್ಲಿ ವಿಶಿಷ್ಟತೆಯಿದೆ. ಇವರ ಊಟವೆಂದರೆ ಅನ್ನ ಹಾಗೂ ಮೀನುಸಾರು, ಬೆಳಗ್ಗೆ ಮೀನು ಹಿಡಿಯಲು ಹೋಗುವಾಗ ರಾತ್ರಿಯ ಅನ್ನ ಉಂಡು ಹೋಗುತ್ತಾರೆ. ಮಧ್ಯಾಹ್ನ ಅಕ್ಕಿ ಗಂಜಿ ಉಣ್ಣುತ್ತಾರೆ. ರಾತ್ರಿ ಊಟ ಅನ್ನ ಹಾಗೂ ಮೀನುಸಾರು, ತರಕಾರಿ ಊಟ ಅಪರೂಪವಾಗಿದೆ. ಸೆರೆ, ಎಲೆ-ಅಡಿಕೆ, ಬೀಡಿ ಸೇದುವ ಜನರು ಹೆಚ್ಚಾಗಿದ್ದಾರೆ.ಆದರೂ ಇಂದು ಸುಧಾರಿಸುತ್ತಿದ್ದಾರೆ.

**ಇವರ ಕುಟುಂಬ ವ್ಯವಸ್ಥೆ :**

ಇವರು ಹೆಚ್ಚಾಗಿ ಅವಿಭಕ್ತ(ದೊಡ್ಡ ಕುಟುಂಬದಲ್ಲಿ) ವಾಸಿಸಲು ಇಷ್ಟಪಡುತ್ತಾರೆ. ಕಾರಣ ಗಂಡಸರು ಹೆಚ್ಚಾಗಿ ಮನೆಯಲ್ಲಿ ಉಳಿಯುವುದು ವಿರಳವಾದ್ದರಿಂದ ಅವಿಭಕ್ತ ಕುಟುಂಬವು ಸ್ತ್ರೀಯರ ಧೈರ್ಯದಿಂದ ಸಲೀಸಾಗಿ ಸಾಗಲ್ಪಡುತ್ತದೆ. ಇತ್ತಿತ್ತಲಾಗಿ ಲಗ್ನವಾದ ಜೋಡಿಗಳು ಬೇರೆಯಾಗಿ ವಾಸಿಸುತ್ತಾರೆ. ಆದರೆ ಹೋಳಿ ಹಾಗೂ ಮಾರಿ ಹಬ್ಬದಲ್ಲಿ ಅವರೆಲ್ಲಿದ್ದರೂ ಊರಿಗೆ(ಮನೆಗೆ) ಬಂದು ಸೇರುತ್ತಾರೆ. ಇವರ ಕುಟುಂಬದಲ್ಲಿ ಹಿರಿಯರಿಗೆ ಅತ್ಯಂತ ಗೌರವದ ಸ್ಥಾನವಿದೆ. 'ಪಟೇಲ' ಇವರ ಸಮುದಾಯದ ಪ್ರಮುಖ ವ್ಯಕ್ತಿಯಾಗಿದ್ದಾನೆ. ಅವನು ಹಸಿರು ನಿಶಾನೆ ತೋರಿಸಿದ ನಂತರವೇ ಯಾವುದೇ ಕಾರ್ಯಕ್ರಮ ಪ್ರಾರಂಭವಾಗುತ್ತದೆ.

ಜನರು ವಾಸಮಾಡುವಲ್ಲಿ ಬೇರೆ ಬೇರೆ ವಾಡೆಗಳಿರುತ್ತದೆ. ಒಂದು ವಾಡೆಗೆ ಒಬ್ಬ ಪಟೇಲನಿರುತ್ತಾನೆ. ಪ್ರತಿಯೊಂದು ವಾಡೆಯಲ್ಲಿ ಒಂದು ವರ್ಗವಾಗಿ, ಆ ವರ್ಗದಲ್ಲಿ ಸಾಮಾಜಿಕ ಸ್ಥಿತಿಗಾಗಿ ಪಂಚಾಯತಿಯನ್ನು ಮಾಡಿ ಯಾವುದೇ ಸಮಸ್ಯೆ ಬಂದಾಗ ಪಂಚರು ಪಂಚಾಯತಿಯಲ್ಲಿ ತೀರ್ಮಾನಿಸಿ ದಂಡ ವಿಧಿಸುತ್ತಾರೆ. ಕೆಲವೊಂದು ಪ್ರಸಂಗದಲ್ಲಿ ಅಪರಾಧಿಯನ್ನು ಜಾತಿಯಿಂದ ಹೊರಗೂ ಹಾಕುತ್ತಾರೆ.

**ಸಿದ್ಧಿ**

ಕರ್ನಾಟಕದಲ್ಲಿರುವ 'ಸಿದ್ಧಿ' ಜನಾಂಗದವರು ಭಾರತಕ್ಕೆ ಯಾವಾಗ? ಎಲ್ಲಿಂದ? ಯಾವ ಉದ್ದೇಶಕ್ಕಾಗಿ ಬಂದರೆಂಬುದು
ನಿಖರವಾದ ಮಾಹಿತಿ ಇಲ್ಲ. ಆದರೆ ಇವರನ್ನು ಬ್ರಿಟಿಷರು ತಮ್ಮ ಪ್ರಾಣಿಗಳ ಶಿಕಾರಿ ಹವ್ಯಾಸಕ್ಕಾಗಿ ಸಹಾಯಕರನ್ನಾಗಿ ಆ ವೃತ್ತಿಯಲ್ಲಿ ಪ್ರವೀಣರಾದ ಆಫ್ರೀಕಾದ ಕಪ್ಪು ಜನರನ್ನು ತಮ್ಮ ಜೊತೆಗೆ ಕರೆತಂದರೆಉ. ಅದರಲ್ಲೂ ಉತ್ತರ ಕನ್ನಡ ಜಿಲ್ಲೆಯ ದಟ್ಟ ಅರಣ್ಯ ಪ್ರದೇಶವಾದ ಹಳಿಯಾಳ, ಯಲ್ಲಾಪುರ, ಮುಂಡಗೋಡ ತಾಲೂಕಾ ಪ್ರದೇಶದ ಅರಣ್ಯಾಭಾಗಗಳಲ್ಲಿ ಇಂದು ಕಂಡು ಬರುತ್ತಿರುವ ಈ ಜನರು ಇದೇ ಉದ್ದೇಶಕ್ಕಾಗಿ ಬಂದರೆಂಬುದು ಊಹಿಸಬಹುದು.

ಈ ಜನರು ಇಲ್ಲಿ ಬಂದ ನಂತರ ದೊಡ್ಡ ಜಮೀನ್ದಾರರಲ್ಲಿ ಹೊಲಗೆಲಸಕ್ಕಾಗಿ ಉಳಿದರು. ಆಗ ಹಿಂದೂ ಮಾಲೀಕರಲ್ಲಿ ಇದ್ದವರು ಹಿಂದುಗಳಾದರು. ಮುಸ್ಲಿಮ್ ಮಾಲೀಕರಲ್ಲಿದ್ದವರು ಮುಸ್ಲಿಮರಾದರು. ಹಾಗೂ ಕ್ರೈಸ್ತದಲ್ಲಿದ್ದವರು ಕ್ರೈಸ್ತ ಧರ್ಮ ಸ್ವೀಕರಿಸಿದರು. ಆದ್ದ-ರಿಂದ ಈ ಸಿದ್ದಿಜನಾಂಗದಲ್ಲಿ ಮೂರು ಧರ್ಮದವರಿದ್ದಾರೆ. ಇವರಿಗೆ ಸಿದ್ದಿ ಎಂದು ಕರೆಯುವ ಕಾರಣವೆಂದರೆ ಇವರು ಎಲ್ಲ ಕೆಲಸಕ್ಕೆ "ಸಿದ್ದ"ರಿರುವುದರಿಂದ ಬಹುಷ 'ಸಿದ್ದಿ' ಎಂದು ಕರೆದಿರಬಹುದೆಂದು ಪ್ರತೀಕವಾಗಿದೆ. ಅಥವಾ 15ನೇ ಶತಮಾನದಲ್ಲಿ ಆಫ್ರೀಕಾದ "ಸಿಧಾಮೊ" ಎಂಬ ಊರಿನಿಂದ ಇವರನ್ನು ಬ್ರಿಟಿಷರು ತಂದಿರುವದರಿಂದಲೂ ಸಿದ್ದಿ ಎಂಬ ಹೆಸರು ಬಂದಿರಬಹುದು ಅಂದಾಜು, 20,000 ಸಿದ್ದಿ ಜನಾಂಗದವರು ಕರ್ನಾಟಕದಲ್ಲಿದ್ದಾರೆ. ಹೀಗಾಗಿ ಇವರು ಮರಾಠಿ, ಕೊಂಕಣಿ, ಕನ್ನಡ, ಹಿಂದಿ ಮಾತನಾಡುತ್ತಾರೆ. ಉ. ಕ. ಜಿಲ್ಲೆಯ ಪಕ್ಕದ ಗೋವಾರಾಜ್ಯಕ್ಕೆ ಹೋಗಿಬರುವುದರಿಂದಲು ಇವರು ಕೊಂಕಣಿ ಹಿಂದಿ ಸಹ ಮಾತನಾಡುತ್ತಾರೆ.

**ಕ್ರೈಸ್ತ ಸಿದ್ಧಿ**

ಸುಮಾರು 10,000ಸಿದ್ದಿ ಜನಾಂಗದವರು ಕ್ರೈಸ್ತ ಧರ್ಮವನ್ನು ಪಾಲಿಸುತ್ತಾರೆ. ಇವರು ಯಲ್ಲಾಪುರ, ಮುಂಡಗೋಡ, ಹಳಿಯಾಳ, ದಾಂಡೇಲಿ, ಧಾರವಾಡ, ಶಿರ್ಶಿಯಲ್ಲಿ ಕಾಣಲು ಸಿಗುತ್ತಾರೆ. ಕನ್ನಡ-ಕೊಂಕಣಿ-ಹಿಂದಿ-ಮರಾಠಿ ಮಾತನಾಡುವ ಇವರು ಉಡುಪಿ ಹಾಗೂ ಮಂಗಳೂರಿಗೆ ಬಂದು ತುಳು ಭಾಷೆಯನ್ನು ಮಾತನಾಡಲು ಕಲಿತಿದ್ದಾರೆ. ಆದರೆ ಇವರಿಗೆ ಕೊಂಕಣಿ ಭಾಷೆ ಮಾತನಾಡುದೆಂದರೆ ಬಲು ಪ್ರೀತಿ.

ಇವರಲ್ಲಿ ಬಹಳ ವಿಶಿಷ್ಟ ಜಾನಪದಗಳಿವೆ, ಅದರಲ್ಲಿ ಮುಖ್ಯವಾಗಿ ಗುಮಟೆವಾದನ 'ದಮಾಟು ಕುಣಿತ' ಮುಖ್ಯವಾಗಿವೆ. ದಮಾಟುವೆಂದರೆ "ಡೊಳ್ಳುಕುಣಿತದ" ಪ್ರತಿರೂಪವಾಗಿದೆ.

**ದಮಾಮಿ :**

ನೃತ್ಯ ಮಾಡುವಾಗ ವಿಶಿಷ್ಟ ಬಾರಿಸುತ್ತ ಹಾಡಿನೊಂದಿಗೆ ಕುಣಿಯುತ್ತಾರೆ. ಗಂಡಸರು-ಹೆಂಗಸರು ಕೂಡಿ ಕುಣಿದರೆ ಗಂಡಸರಷ್ಟೇ ಪ್ರತ್ಯೇಕವಾಗಿ ಕುಣಿಯುತ್ತಾರೆ. ಮದುವೆ ಸಮಾರಂಭದಲ್ಲಿ, ಮಗು ಜನಿಸಿದ ಸಂದರ್ಭದಲ್ಲಿ ಪ್ರಮುಖವಾಗಿ ದಮಾಮಿ ಜಾನಪದ ರೂಪದರ್ಶನವಿರುತ್ತದೆ. ಇವರ ಇತರ ಸಂಪ್ರದಾಯಗಳು ಉಳಿದ ಕ್ಯಾಥೋಲಿಕ್ ಕ್ರೈಸ್ತರಂತಿದೆ.

**ಸಿಗ್ಮೋ :**

ಇದು ಹೋಳಿಹಬ್ಬದಲ್ಲಿ ಕುಣಿಯುವ ಸುಗ್ಗಿಕುಣಿತವಾಗಿದೆ. ಗುಮಟಾವಾದನದೊಂದಿಗೆ ಸುಗ್ಗಿತಂಡವು ಹೋಳಿಹಬ್ಬದ 8 ದಿನ ಮೊದಲು ಪಂಗಡ ಕಟ್ಟಿ ಊರಿಂದ ಊರಿಗೆ ತಿರುಗುತ್ತ, ಪ್ರತಿ ಮನೆಯಲ್ಲಿ ಸುಮಾರು 2-3 ಹೋಳಿ ಹಾಡು ಹಾಡಿ ಕುಣಿಯುತ್ತಾರೆ. ಆ ಮನೆ ಯಜಮಾನ ಅವರ ಕಾಲು ತೊಳೆದು ಆರತಿ ಮಾಡಿ ಕುಣಿತದ ನಂತರ ಅವರಿಗೆ ದವಸ ಧಾನ್ಯದ ಕಾಣಿಕೆ ನೀಡಿ ಗೌರವಪೂರ್ವಕವಾಗಿ ಬೀಳ್ಕೊಡುತ್ತಾರೆ. ಗಂಡಸರು ಹೆಂಗಸರೂ ಸೇರಿಸಿ ಈ ಪಂಗಡ ಒಮ್ಮೆ ಮನೆ ಬಿಟ್ಟು ಪೂರ್ತಿ 8 ದಿನದ ತಿರುಗಾಟದ ನಂತರವೇ ನಿಶ್ಚಿತ ಸ್ಥಳ ಹಾಗೂ ಸಮಯಕ್ಕೆ ಬಂದು ತಲುಪುತ್ತಾರೆ.

**ಘುಗಡಿ ನೃತ್ಯ :**

ಘುಗಡಿ ಅಂದರೆ ಕೊಡ ಎಂಬರ್ಥ. ಗಣೇಶ ಹಬ್ಬ, ಕ್ರೈಸ್ತಹಬ್ಬ ಹರಿದಿನಗಳಲ್ಲಿ ಘುಡಿ ನೃತ್ಯ(ಕೊಡಪಾನದೊಂದಿಗೆ) ಗಂಡಸರು ಹೆಂಗಸರು ಸೇರಿ ಮಾಡುತ್ತಾರೆ.

**ಜಾಕಾಯ ನೃತ್ಯ :**

ಇದನ್ನು ಬರಿ ಹೆಂಗಸರೇ ನೃತ್ಯ ಮಾಡುವ ಒಂದು ವಿಶಿಷ್ಟ ನೃತ್ಯವಾಗಿದೆ. ಈ ನೃತ್ಯದಲ್ಲಿ ದಮಾಮಿ(ಢೋಲ) ಬಾರಿಸುತ್ತ ಅದರ
ನಾದಕ್ಕೆ ತಕ್ಕಂತೆ ಕುಣಿಯುತ್ತಾರೆ.

**ಮಾಂಡ :**

ಈ ನೃತ್ಯವನ್ನು ಹಿಂದೂ ಸಾಂಪ್ರದಾಯಿಕವಾಗಿ ಹಬ್ಬದ ಸಮಯದಲ್ಲಿ ಮಾಡುತ್ತಾರೆ. ಆದರೆ ಮುಸ್ಲಿಂ, ಕ್ರೈಸ್ತ, ಸಮುದಾಯದವರೂ ಇದಕ್ಕೆ ಜೊತೆಗೂಡಿ ಸಂಗೀತವಾದನ ದಮಾಮಿ, ಗುಮಟ ಬಾರಿಸುತ್ತ ಸಹಕಾರ ನೀಡುತ್ತಾರೆ.

**ಮುಸ್ಲಿಂ ಸಿದ್ಧಿ**

ಮುಸ್ಲಿಂ ಸಿದ್ಧಿಗಳು ಉತ್ತರ ಕನ್ನಡ ಜಿಲ್ಲೆಯ ಹಳಿಯಾಳ ತಾಲೂಕಿನ ಗ್ರಾಮಗಳಾದ ತತ್ವನಾಗಿ, ವಸ್ಲೂರ, ಗೊಲೆಹಳ್ಳಿ, ತೆಗ್ನಳ್ಳಿ,
ಜನಗಾ, ಜತ್ಕಾ, ಅಡಕೆಸೂರ, ಪಾಂಡ್ರುವಾಳ, ಬಸವಳ್ಳಿ, ತಟ್ಟಿಗೆರೆ, ಸಾಂಬ್ರಾಣಿ, ಗುಂಡೊಳ, ಭಾಗವತಿ, ಬೊಮ್ಮನಳ್ಳಿ ಹಾಗೂ ಯಲ್ಲಾಪುರ ತಾಲೂಕಿನ ಕಿರ್‍ವತ್ತಿ, ಮಂಚೀಕೇರಿ, ಶಿರಸಿ, ಹುಬ್ಬಳ್ಳಿ, ಮುಂಡಗೋಡದಲ್ಲೂ ನೆಲೆಸಿದ್ದಾರೆ.

ಇವರು ಹೆಚ್ಚಾಗಿ ಕೊಂಕಣಿ ಹಾಗೂ ಮರಾಠಿ ಮಿಶ್ರಿತ ಭಾಷೆ ಮಾತನಾಡುತ್ತಾರೆ. ಉರ್ದು ಭಾಷೆಯನ್ನೂ ಮಾತನಾಡುತ್ತಾರೆ. ಜಲ್ಮ ಖತ್ಮಾ(ಸುನ್ನತ), ಮದುವೆ, ಹಬ್ಬಗಳನ್ನು ಮುಸ್ಲಿಂ ಜನಾಂಗದವರಂತೆ ಆಚರಣೆ ಮಾಡುತ್ತಾರೆ.

ಲಗೋರಿ ಆಟ ರಿವಾಯತ(ಸವಾಲ-ಜವಾಬ ಕಾವ್ಯದೊಂದಿಗೆ ಹಾಡುವ ಎರಡು ಜನರ ಯಾ ಪಂಗಡದ ಮದ್ಯದಲ್ಲಿ ಜರುಗುವ ಸ್ಪರ್ಧಾ ಆಟ) ಹೆಜ್ಜೆ ಕುಣಿತವನ್ನು ಢಫ್ ಬಾರಿಸುತ್ತಾ ಮೊಹರಮ್ ತಿಂಗಳ 10ನೇ ದಿನ ಧಾರ್ಮಿಕ ಹಾಡನ್ನು ಹಾಡುತ್ತಾ ಕುಣಿಯುತ್ತಾರೆ.

ದಸರಾ ಹಬ್ಬದಲ್ಲಿ ಹಿಂದೂ ಸಿದ್ಧಿಗಳ ಜೊತೆ ಮುಸ್ಲಿ ಸಿದ್ಧಿಗಳು ಹೋಗಿ ಕೋಲಾಟ ಆಡುತ್ತಾರೆ. ಮರಣ ರೀತಿನೀತಿಯನ್ನು ಮುಸ್ಲಿಂ ಜನಾಂಗದವರಂತೆ ಇವ ಆಚರಣೆ ಮಾಡುತ್ತಾರೆ.

**ಹಿಂದೂ ಸಿದ್ಧಿ**

ಹಿಂದೂ ಸಿದ್ಧಿಗಳಲ್ಲಿ ಕೆಲವರು ತೋಟ, ಪಟ್ಟಿ, ಹೋ ಗದೆ ಹೊಂದಿದವರಿದ್ದಾರೆ. ಬೇಸಾಯ ಮಾಡಿಕೊಂಡ ಉಳಿದವರಿದ್ದಾರೆ. ಬೇರೆಯವರ ಹೊಲದಲ್ಲಿ ಕೆಲಸ ಮಾಡು ಕೂಲಿಗಳೂ ಇದ್ದಾರೆ. ಇಂದು ಸಿದ್ಧಿಗಳ ಮಕ್ಕಳು ಶಾಲೆಯನ ಕಲಿಯುತ್ತಾರೆ.

ಇವರ ಆರ್ಥಿಕ ಪರಿಸ್ಥಿತಿ ಅಷ್ಟೇನ ಸುಧಾರಣೆಯಾಗಲಿಲ್ಲ. ಪ್ರತಿದಿನ ದುಡಿದು ತಿನ್ನುವುದೆ ಅವರ ಬದುಕಾಗಿದೆ. ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ-ಮುಂಡಗೋಡ ಹಳಿಯಾಳ ತಾಲೂಕಿನ ವಿವಿಧ ಗ್ರಾಮದಲ್ಲಿ ಇವರು ನೆಲೆಸಿದ್ದಾರೆ.

**ಲೋಕವೇದ : (ಜಾನಪದ)**

ಇವರು ಗುಮಟಾವಾದನ, ಘುಗಡಿ ನೃತ್ಯ ಡಮಟ ನೃತ್ಯ ಮಾಡುತ್ತಾರೆ. ದೊಡ್ಡಾಟದ ಕೊಂಕಣಿ ರೂಪಕವನ್ನು ಗೀತ-ಗಾಯನದೊಂದಿಗೆ ಮಾಡುತ್ತಾರೆ. ಇವರ ಉಳಿದೆಲ್ಲ ಬದುಕಿನ ಸಂಪ್ರದಾಯ ರೀತಿನೀತಿಗಳು ಹಿಂದೂ ಕೊಂಕಣಿಗರ ಪದ್ಧತಿಯಂತಿದೆ.

**ನವಾಯ್ತ್ (ನವಾಯತ)**

'ನವಾಯತ' ಇವರು ಮೂಲತಃ ಅರಬೀಸಮುದ್ರದ ಮೂಲಕ ಭಾರತಕ್ಕೆ ಅರಬ ದೇಶದಿಂದ ಬಂದವರಾಗಿದ್ದಾರೆ.

ಸುಮಾರು 1000 ವರ್ಷದ ಹಿಂದೆ 'ಯೆಮೆನ್' ಎಂಬ ಗಲ್ಫ್‌ನಲ್ಲಿ ಹಬ್ಬಾಜ ಬಿನ ಯುಸುಫ್ ಎಂಬ ಕ್ರೂರ ರಾಜನಿದ್ದನು. ಅವನು ಅಲ್ಲಿಯ ಅರಬೀಗಳಿಗೆ ಬಹಳ ತೊಂದರೆ ಕೊಡುತ್ತಿದ್ದನು. ಅವನ ಹಿಂಸೆಯನ್ನು ತಡೆಯಲಾರದೆ ಬಹಳಷ್ಟು ಜನರು ಜಗದ ಬೇರೆಬೇರೆ ಮೂಲೆಗಳಿಗೆ ವಲಸೆಹೋದರು. ಹಾಗೆ ಒಂದು ಪಂಗಡದವರು ಸಮುದ್ರದ ಮೂಲಕ ಭಾರತಕ್ಕೆ ಬಂದು ಕರ್ನಾಟಕದ ಹೊನ್ನಾವರ, ಕಾರವಾರ,ಭಟ್ಕಳದಲ್ಲಿ ಬಂದು ನೆಲೆಸಿದರು. ವಿಶೇಷವಾಗಿ ಮಹಾರಾಷ್ಟ್ರದಿಂದ ಕೇರಳದವರೆಗೂ ಬಂದರು. ಹೀಗೆ ಭಾರತಕ್ಕೆ ನವಾಯತಿಗಳ ಆಗಮನವಾಯಿತು.

ಇತಿಹಾಸದಂತೆ ಇವರು 'ಯೆಮನ'ನಲ್ಲಿ ವಾಸಿಸುವ ಒಂದು ಪಂಗಡಕ್ಕೆ 'ನೋಯ್ತು' ಎಂದು ಕರೆಯುತ್ತಾರೆ. ಅದೇ ಮುಂದೆ ಭಾರತದಲ್ಲಿ ನವಾಯ್ತು ಎಂದು ಆಗಿರಬಹುದಾಗಿದೆ. ಇನ್ನೊಂದು ಪ್ರತೀಕದಂತೆ ಭಾರತಕ್ಕೆ ಬಂದಾಗ ಅವರಿಗೆ ಭಾರತದವರ 'ನಾ' ಎಂದರೆ ಹೊಸದಾಗಿ "ಆಯ್ತಾ" ಎಂದರೆ ಹೊಸದಾಗಿ ಬಂದವರು ಈ ಶಬ್ದದಿಂದಲೂ ಅವರು "ನೊವಾಯ್ತು" ಎಂದಾಗಿರಬಹುದು.

ಇಂದು ಭಟ್ಕಳದ ಮುಶ್ಮಾಸ್ಟ್ರೀಟ್ ಎಂಬ ಒಂದು

ಣಿಯು ಚಾರಿತ್ರಿಕ ಹಿನ್ನೆಲೆಯುಳ್ಳದ್ದಾಗಿದೆ. ಶರಾವತಿ ನದಿಗೆ ಬಂದು ಮೊದಲಿಗೆ ಭಟ್ಕಳಕ್ಕೆ ಬಂದು ಇಳಿದ ಕುರುಹು ಇಂದಿಗೂ ಅಲ್ಲಿದೆ. ಅವರು ಬಂದು ಮೊದಲು ನಮಾಜ್ ಮಾಡಿದ ಸ್ಥಳದಲ್ಲಿ(ಪವಿತ್ರ ಕಲ್ಲು) ಈಗಲೂ ಉಂಟು. ಆದರೆ ಇಂದು ಬಹಳ ಸುಧಾರಣೆಯಾಗಿದೆ. ದೊಡ್ಡದಾದ ಗೌಸಿಯಾ ಮಸೀದಿಯು ಭಟ್ಕಳ ಶಹರದ ಮೊದಲ ಪುರಾತನ ಮಸೀದಿಯಾಗಿದೆ. ಅದರಂತೆ ನವಾಯತಿಗಳು ಹೊನ್ನಾವರದಲ್ಲಿ "ಹೊಸ" ಸ್ಥಳದಲ್ಲೂ ನೆಲೆಸಿದ್ದಾರೆ.

**ನವಾಯ್ತಿಗಳ ಮೇಲೆ ಜೈನರ ಪ್ರಭಾವ :**

ನವಾಯ್ತಿಗಳು ಭಟ್ಕಳಕ್ಕೆ ಬಂದಿಳಿದಾಗ ಆ ಪಟ್ಟಣವು ಜೈನರ ಪ್ರಮುಖ ಕೇಂದ್ರವಾಗಿತ್ತು. ಮುಂದೆ ನವಾಯುತ ಹಾಗೂ ಜೈನರು ಒಂದುಗೂಡಿ ಬದುಕು ಪ್ರಾರಂಭಿಸಿದರು. ಕ್ರಮೇಣ ಎರಡೂ ಸಮುದಾಯಗಳಲ್ಲಿ ಮದುವೆ ಸಂಬಂಧಗಳು ಏರ್ಪಟ್ಟು ಒಂದು ವಿಶಿಷ್ಟ "ನವಾಯ್ತಿ" ಸಮಾಜದ ಹಾಗೂ ಸಂಸ್ಕೃತಿಯ ಉಗಮವಾಯಿತು.

ಅರಬೀ ಜನಾಂಗದ ನವಾಯ್ತಿಗಳಿಗೆ ಭಟ್ಕಳದಲ್ಲಿ ಇರಲು ಕೊಂಕಣಿ ಭಾಷೆ ಕಲಿಯಲೇಬೇಕಾದ ಪ್ರಸಂಗ ಬಂದಿದ್ದರಿಂದ ತಮ್ಮ ಮೂಲಸಂಸ್ಕೃತಿ ಹಾಗೂ ಭಾಷೆಯನ್ನು ಬಿಡದೇ ತಾವು ಹೊಸದಾಗಿ ಕಲಿಯುತ್ತಿದ್ದ ಕೊಂಕಣಿ ಭಾಷೆಯಲ್ಲಿ ಅರ್ಬಿ, ಪರ್ಶಿಯನ್ ಸೇರಿಸಿದ್ದರಿಂದ ನವಾಯ್ತಿ ಭಾಷೆಯು ವಿಶಿಷ್ಟ ಕೊಂಕಣಿ ಭಾಷೆಯಾಗಿ ಹೊರಹೊಮ್ಮಿದೆ.

ನವಾಯುತ ಸಂಸ್ಕೃತಿ ಮೇಲೆ ಜೈನರ ಪ್ರಭಾವವಿದ್ದುದರಿಂದ ಇವರದು ಮೂಲಜೈನರು ಸೂರ್ಯಾಸ್ತದ ಮೊದಲೇ ಊಟಮಾಡುವ ವಾಡಿಕೆ. (ಕಾರಣ ಅಹಿಂಸಾವಾದಿಗಳಾದ ಜೈನರು ಯಾವುದೇ ಪ್ರಾಣಿಪಕ್ಷಿಗಳನ್ನು ಕೊಲ್ಲಲಾರರು ಅಂತೆಯೇ ಸೂಕ್ಷ್ಮ ಕ್ರಿಮಿಗಳು ದೀಪಹಚ್ಚಿದ ನಂತರ ಒಳಗಡೆ ಬರುವುದರಿಂದ ಅವು ಆಹಾರದ ಮೂಲಕ ಹೊಟ್ಟೆಗೆ ಸೇವನೆಯಾಗುವ ಸಂದರ್ಭ ಬರುವುದರಿಂದ) ಅದನ್ನು ನವಾಯತಿಗಳು ಪಾಲಿಸುತ್ತಾ ಬಂದಿದ್ದಾರೆ.

ನವಾಯ್ತಿಗಳು ಇಸ್ಲಾಮಿಕ್ ಕುರುಹಿನ ವಸ್ತ್ರಗಳನ್ನೇ ಧರಿಸುತ್ತಾರೆ. ನವಾಯ್ತಿ ಗಂಡಸರು ಲುಂಗಿ, ಶರ್ಟ, ಟೊಪ್ಪಿಗೆ ಧರಿಸಿದರೆ ಹೆಂಗಸರು ಮದುವೆಯ ಮೊದಲು ಸೀರೆ ಉಡುವುದಿಲ್ಲ. ಮದುವೆಯ ಮೊದಲು ಚೂಡಿದಾರ, ಸಾಲ್ವರ ಕಮೀಜ, ಒಡ್ನಿ, ದುಪ್ಪಟ್ಟಾ ಹಾಗೂ ತಲೆಬಾಯಿ ಮುಚ್ಚಿ ಬರಿಕಣ್ಣು ಮಾತ್ರ ಕಾಣುವಂತೆ ಕರವಸ್ತ್ರ ಕಟ್ಟಿಕೊಳ್ಳುತ್ತಾರೆ. ಹಾಗೂ ಬುರ್ಖಾ ಧರಿಸುತ್ತಾರೆ.

ಕರ್ನಾಟಕ ವಿವಿಧ ಭಾಗಗಳಾದ ಮಂಗಳೂರು, ಭಟ್ಕಳ, ಮುರುಡೇಶ್ವರ, ಬೈಂದೂರು, ಕಾರವಾರ, ಸದಾಶಿವಗಡ ಅಲ್ಲದೇ ಕೇರಳದ ಕಿರಿಮಂಜೇಶ್ವರ ಹಾಗೆ ಮುಂಬೈಯಲ್ಲಿ ಸಹ ನೆಲೆಸಿದ್ದಾರೆ. ಇವರು ಭೋಜನಪ್ರಿಯರಾಗಿದ್ದು ಸುಮಾರು 150 ಬಗೆಯ ವಿವಿಧ ಪಕ್ವಾನ್ನಗಳನ್ನು ಮಾಡುತ್ತಾರೆ. ಅದರಲ್ಲಿ ಹೆಚ್ಚಾಗಿ ಗರಮ್‌ಮಸಾಲೆಗಳನ್ನು ಬಳಸುತ್ತಾರೆ.

"ಶಿನಾನಿ"(ಅತೀಖಾರ ಲೇಪನದ ಅನ್ನದ ಉಂಡೆ) "ಪುಟ್ಟು" 'ಅಪ್ಪೋ' ದೋಸೆ ಸುತ್ತಿಯಾರ(ಅತೀಖಾರ ನಾರಿನಲ್ಲಿ ಅನ್ನದ ಉಂಡೆಗಳು) "ಹಳ್ದಪಾನ" (ಅರಿಶಿಣ ಎಲೆಯಲ್ಲಿಯ ಅಕ್ಕಿ ರೊಟ್ಟಿ) ಇತ್ಯಾದಿ. ಅವರ ಮದುವೆಗಳು ಅವರವರ ಜನಾಂಗದಲ್ಲಿ ಆಗುತ್ತದೆ. ಮರಣದ ರೀತಿನೀತಿ ಇಸ್ಲಾಂ ಧರ್ಮದಂತೆ ನಡೆಯುತ್ತದೆ.

**ದಾಲ್ದಿ**

'ದಾಲ್ದಿ' ಅಥವಾ 'ದಾಲ್ಜಿ' ಈ ಹೆಸರು ಅರಾಬಿಕ್ ಭಾಷೆಯಿಂದ ಬರುತ್ತದೆ. ಅರಬಿ ಭಾಷೆಯಲ್ಲಿ "ದಾರಿ" ಎಂದರೆ ಕ್ಯಾಪ್ಟನ್ (ಹಡಗು ನಡೆಸುವವ). ದಾಲ್ದಿ ಜನ ಸಮುದ್ರದಲ್ಲಿ ಮೀನು ಹಿಡಿಯುವ ಕೆಲಸದಲ್ಲಿ ಧೀರರಾಗಿ ಉಳಿದರೆ ನವಾಯಿತ ಜನರು ಸಮುದ್ರದ ಮುಖಾಂತರ ದೂರದವರೆಗೆ ವ್ಯಾಪಾರ ಮಾಡಲು ಹೋಗುವ ಧೀರಜರು. ಎರಡೂ ಜನಾಂಗದವರು ಸಮುದ್ರದ ಮುಖಾಂತರ ಮೊದಲು ಭಾರತಕ್ಕೆ ಬಂದವರಾಗಿದ್ದಾರೆ. (ಸುಮಾರು 88 ವರ್ಷದ ಹಿಂದೆ)

ಈ ಜನಾಂಗದವರು ತಮ್ಮ ಬಗ್ಗೆ ಉಲ್ಲೇಖ ಮಾಡುವಾಗ "ನಾಖುದಾ ಬಿರಾದಾರ್" ಎಂದು ಕರೆ-ಯುತ್ತಾರೆ. ಕಾರಣ ಮೊದಲು ಇರಾನಿನಲ್ಲಿ ಅರಬಿಯನ್ ಹಡಗು ನಡೆಸುವ ಕ್ಯಾಪ್ಟನ್‌ಗೆ "ನಾಖುದಾ" ಎಂದು ಕರೆ-ಯುತ್ತಿದ್ದರು. "ನಾವ" ಎಂದರೆ ಹಡಗು "ಖುದಾ" ಎಂದರೆ ಮಾಲಿಕ 'ನಾಖುದಾ' ಎಂದರೆ ನಾವೆಯ ಮಾಲಿಕ, ಹಡಗಿನ ಕ್ಯಾಪ್ಟನನು ಆದ್ದರಿಂದ ಇವರ ಸಮುದ್ರದ ಸಂಬಂಧ ಎತ್ತಿ ತೋರಿಸುತ್ತದೆ. ಜಮಾಯತ್ ನವಾಯತ ಹಾಗೂ ದಾಲ್ದಿ ಈ ಮೂರೂ ಸಮಾಜದ ಜನರು ಸಮುದ್ರಮಾರ್ಗವಾಗಿ ಭಾರತಕ್ಕೆ ಬಂದವರಾಗಿದ್ದಾರೆ. ಇವರ ಭಾಷೆ ಅರಬ್ಬೀ ಮಿಶ್ರಿತ ಕೊಂಕಣಿಯಾಗಿದೆ.

**ದಾಲ್ದಿ ಜನರ ವಸತಿ :**

ಭಾರತದಲ್ಲಿ ಗೋವಾ, ಮಹಾರಾಷ್ಟ್ರದ ರತ್ನಗಿರಿ ಹಾಗೂ ಕರ್ನಾಟಕದಲ್ಲಿ ಗಂಗೊಳ್ಳಿ ಶಿರೂರು, ಭಟ್ಕಳ(ತೆಂಗಿನಗುಂಡಿ) ಮುರ್ಡೇಶ್ವರ ಮಂಕಿ, ಹೊನ್ನಾವರ, ಕುಮಟಾ, ಕಾಗಲ, ಅಂಕೋಲಾ, ಕಾರವಾರ(ಸದಾಶಿವಗಡ) ಇತ್ಯಾದಿ.

**ಇಸ್ಲಾಮಿಕ್ ರೀತಿನೀತಿ :**

ಮದುವೆ ಸಮಾರಂಭಕ್ಕೆ 'ವಲೀಮಾ' ಎನ್ನುತ್ತಾರೆ. ಹಬ್ಬ ಹುಣ್ಣಿಮೆಯಲ್ಲಿ ರಾತ್ರಿ ಮನರಂಜನೆ ಮಾಡುವ ಕಾರ್ಯಕ್ಕೆ 'ರಾತಿಬ' ಎನ್ನುತ್ತಾರೆ.

ಗರ್ಭಿಣಿ ಸ್ತ್ರೀಯರಿಗೆ 7ನೇ ತಿಂಗಳಿಗೆ ಸೀರೆ ಉಡಿಸುವ ಕಾರ್ಯಕ್ಕೆ 'ಫೂಲ್ ಪಿನಾನಾ' ಎನ್ನುತ್ತಾರೆ. ಅಂದರೆ ಹೂವು ಮೂಡಿಸುವ ಕಾರ್ಯ ಎನ್ನುತ್ತಾರೆ.

ಮುಸ್ಲಿಂ ಸಮಾಜದ ಪ್ರಕಾರ 'ಈದ್-ಉಲ್-ಫಿತ್ರ್' ಹಾಗೂ 'ಈದ್-ಉಲ್-ಷಾ ಅಝೂ' ಎಂಬ ಎರಡು

ಪ್ರಮುಖ ಹಬ್ಬಗಳ ಆಚರಣೆ ಮಾಡುತ್ತಾರೆ. ನವಾಯಿತ ಸಮುದಾಯದವರಂತೆ ಇವರ ಮರಣದ ರಿತಿನೀತಿ ಒಂದೇ ಆಗಿದೆ.

**ಮೇಸ್ತ**

'ಮೇಸ್ತ' ಅಂದರೆ ಮರದ ಕೆಲಸಮಾಡುವ ಬಡಗಿ. ಕೊಂಕಣಿ ಭಾಷಿಕ ಸಮುದಾಯದವರು. ಇವರು ಮೂಲತಃ ಗೋವಾದವರು. ಇವರ ಪೂರ್ವಜರಿಗೆ ಆಚಾರಿ, ಚಾರಿ, ಈ ರೀತಿ ಕರೆಯುತ್ತಿದ್ದರು. ಮೇಸ್ತಾ ಎಂದರೆ ಮೇಸ್ತ್ರೀ (FOREMAN). ಇವರು 450 ವರ್ಷದ ಹಿಂದೆ ಗೋವಾದಲ್ಲಿ ಪೋರ್ಚುಗೀಸರ ದಬ್ಬಾಳಿಕೆಯಿಂದ ಕರ್ನಟಕದ ಕರಾವಳಿ ಭಾಗಕ್ಕೆ ಬಂದರು.

**ಇವರ ವೃತ್ತಿ** :

ಇವರ ಉದ್ಯೋಗವೆಂದರೆ ದೋಣಿ ಕಟ್ಟುವುದು. ಹೆಚ್ಚಾಗಿ ಕರ್ನಾಟಕದ ಕುಂದಾಪುರ, ಗಂಗೊಳ್ಳಿ, ಉದ್ಯಾವರ, ಶಿರೂರು, ಗುಜ್ಜಾಡಿ, ಹೊನ್ನಾವರ, ಭಟ್ಕಳ, ಕಾರವಾರದಲ್ಲಿ ನೆಲೆಸಿದ್ದಾರೆ. ಇವರಲ್ಲಿ ಕೆಲವರು ಕೃಷಿ ಬದುಕನ್ನು ಮಾಡುತ್ತಿದ್ದಾರೆ. ಬರಬರುತ್ತಾ ಇವರು ಮೂಲ ಕಸುಬಾದ ದೋಣಿ ಕಟ್ಟುವುದನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ವಿಶ್ವಕರ್ಮದ 5 ವಿವಿಧ ಭಾಗಗಳಾದ ಬಂಗಾರದ ಲೋಹದ-ಮರದ-ಹಿತ್ತಾಳೆಯ ಇದರಲ್ಲಿ ಯಾವುದೇ ಕೆಲಸ ಮಾಡಬಹುದೆಂಬ ಚಿಂತೆ ಇವರಲ್ಲಿದೆ. ಇವರು ಸಂಘಟನೆಯ ದೃಷ್ಟಿಯಿಂದಲೂ ದೂರ ದೂರ ಸಿಂಪಡಿಸಿದ್ದಾರೆ.

**ಹಬ್ಬಗಳು** :

ಇವರ ದೇವರು ಈಶ್ವರ ಹಾಗೂ ಮಹಾಗೌರಿ. ಈಶ್ವರನಿಗೆ ಅವರು "ಮೈಲಾರದ ದೇವರೆಂದು" ಕರೆ-ಯುತ್ತಾರೆ. ಗೋವಾದಲ್ಲಿರುವ 'ಶೈವಲ್ಯಮಠ' ಇವರ ಮೂಲದೇವರಾಗಿದೆ. ಶಿವರಾತ್ರಿ, ನವರಾತ್ರಿ, ಚೌತಿ, ಇವು ಪ್ರಮುಖ ಹಬ್ಬಗಳಾಗಿ ಅದರ ಜೊತೆಗೆ ಚಂದ್ರಮಾನ ಯುಗಾದಿಯನ್ನೂ ಆಚರಣೆ ಮಾಡುತ್ತಾರೆ.

**ಇವರ ಕುಲದೇವರುಗಳು** :

ರವಳನಾಥ, ಮಹಾಮ್ಮಾಯಿ, ರಾಮನಾಥ, ಶಾಂತೇರಿ, ಕಾಮಾಕ್ಷಿ, ಮಂಗೇಶ, ಕಾಳಿಕಾಂಬಾ, ಗಣಪತಿ ಇತ್ಯಾದಿ

ಉಳಿದ ಹುಟ್ಟು, ಮದುವೆ, ಮುಂಜಿವೆ, ತೊಟ್ಟಿಲುಕಾರ್ಯ ಹಾಗೂ ಮರಣದ ವಿಧಿಗಳು ಉಳಿದ ಕೊಂಕಣಿ ಭಾಷಿಕ ಹಿಂದೂ ಸಮಾಜದಂತಿರುತ್ತದೆ.

**ಆಚಾರಿ**

ಮೂಲತಃ ಗೋವಾದಲ್ಲಿ ವಸತಿ ಹೊಂದಿದ ಆಚಾರಿ ಸಮುದಾಯದ ಜನರು ಪೋರ್ಚುಗೀಸರ ಆಡಳಿತ ಕಾಲದ ಹಿಂಸಾತ್ಮಕ ದಬ್ಬಾಳಿಕೆಗೆ ಅಂಜಿ ಬಹಳಷ್ಟು ಕೊಂಕಣಿ ಭಾಷಿಕ ಸಮುದಾಯದವರು ತಮ್ಮ ಜೀವ ಹಾಗೂ ಧರ್ಮರಕ್ಷಣೆಗಾ ಕೆಲವರು ಮಹಾರಾಷ್ಟ್ರದ ಸಮುದ್ರ ತೀರದ ಭಾಗಕ್ಕೂ ಕೆಲವರು ಕರ್ನಾಟಕ ಹಾಗೂ ಕೇರಳ ರಾಜ್ಯಗಳ ಭಾಗಕ್ಕೂ ತಮ್ಮ ಕುಲದೇವರು ಹಾಗೂ ಆರಾಧ್ಯದೇವರೊಂದಿಗೆ ವಲಸ ಹೋಗಿ ವಾಸಿಸತೊಡಗಿದರು. ಹೀಗೆ ಕರ್ನಾಟಕ ಭಾಗಕ್ಕೂ ಬಂದು ನೆಲೆಸಿದ ಈ ಜನರು ಕನ್ನಡ ಸ್ಥಳದಲ್ಲಿ ನೆಲೆಸಿ ತಮ್ಮ ಮಾತೃಭಾಷೆಯಾದ ಕೊಂಕಣಿಯನ್ನು ಮರೆಯದೇ ಅದನ್ನು ಜೀವಂತವಾಗಿಟ್ಟರು. ಆಚಾರಿ ಸಮುದಾಯದ 4 ಕುಲದೇವರು ಸಪ್ತಕೋಟೇಶ್ವರ. ಇವರ ಮೂಲದೇವರು ಗೋವಾದ ನಾರ್ವೆ ಎಂಬ ಸ್ಥಳದಲ್ಲಿದೆ. ಹಿಂದೆ ಹಾಳು ಬಿದ್ದ ಗುಡಿಗುಂಡಾರವನ್ನು ಸಾಮ್ರಾಟ ಶಿವಾಜಿ ಮಹಾರಾಜರು ಮರಳಿ ಜೀರ್ಣೋದ್ಧಾರ ಮಾಡಿದರು.

**ವಿಶೇಷತೆ** : ಈ ಜನರ ಭಾಷೆಯಲ್ಲಿ ಗೋವಾ ಕೊಂಕಣಿ ಮಿಶ್ರಿತವಾಗಿರುತ್ತದೆ. ಇದುವೇ ಆಚಾರಿ ಸಮುದಾಯ ಗೋವಾ ಮೂಲದವರೆಂದು ಅರಿಯಲು ಸಾಕ್ಷವಾಗಿದೆ. ಇವರು ಹೆಚ್ಚಾಗಿ ತಮ್ಮ ಸಂಬಂಧವನ್ನು ಗೋವಾ ಆಚಾರಿ ಸಮುದಾಯದವರೊಂದಿಗೆ ಇಡುತ್ತಾರೆ. ತಾವು ವಿಶ್ವಕರ್ಮ ಜನರೆಂದೂ ಆ ವಿಷಯದಲ್ಲಿ ಹೆಚ್ಚು ಅಭಿಮಾನ ಪಡುತ್ತಾರೆ. ಪುರಾಣದಲ್ಲಿ ವಿಶ್ವಕರ್ಮನಿಗೆ 5ಜನ ಮಕ್ಕಳು. ಮನು, ಮಯ, ಶಿಲ್ಪಿ, ತೊಸ್ರಾ ಮತ್ತು ದೈವಜ್ಞ. ಈ 5ರಲ್ಲಿ ಶಿಲ್ಪಿಯಾಗಿ ಇರುವವರೇ ಈ ಆಚಾರಿ ಜನಾಂಗ. ಬೇರೆ ಜಾತಿಯವರಿಗಿಂತಲೂ ತಾವೂ ಕೂಡಾ ಶ್ರೇಷ್ಠ ಹಾಗೂ ಬ್ರಾಹ್ಮಣ ವರ್ಗಕ್ಕೆ ಸೇರಿದವರೆಂಬುದು ಇವರ ವಾದ. ಆದ್ದರಿಂದಲೇ 'ಇವರಿಗೆ ವಿಶ್ವಕರ್ಮ ಪಾಂಚಾಲಿ ಬ್ರಾಹ್ಮಣ' ಎಂಬ ಹೆಸರಿನಿಂದ ಕರೆಯುತ್ತಾರೆ. ಆಚಾರಿ ಸಮುದಾಯದವರು ಎಲ್ಲಾ ಕಾರ್ಯ ವಿಧಾನಕ್ಕೂ ಮಾವಿನ ಎಲೆಯನ್ನು ಹೆಚ್ಚಾಗಿ ವಿಶೇಷ ರೀತಿಯಿಂದ ಬಳಸುವುದಾಗಿ ಹ್ಯೂಯನತ್ಸಾಂಗನು(ಚೀನಾದ ರಾಯಭಾರಿ) ತನ್ನ ಭಾರತ ಭೇಟಿಯ ಸಂದರ್ಭದಲ್ಲಿ ಬರೆದ ಕೃತಿಯಲ್ಲಿ ಉಲ್ಲೇಖಿಸಿದ್ದಾನೆ.

**ಕೆಲಸ ವೃತ್ತಿ** :

ಹೆಚ್ಚಾಗಿ ಇವರು ನೋಡಲು ಎತ್ತರವಾಗಿ ಘಟ್ಟಿಮುಟ್ಟಾಗಿರುತ್ತಾರೆ. ಇವರು ಸಾಧಾರಣ ಗೋಧಿ ಮೈಬಣ್ಣದವರಾಗಿದ್ದು, ಆ ಮೈಕಟ್ಟು ಕಠಿಣ ಪರಿಶ್ರಮದ ಕೆಲಸಕ್ಕಾಗಿ ಹೇಳಿ ಮಾಡಿಸಿದಂತಿದೆ. ಇವರು ಬಡಗಿ ಕೆಲಸವನ್ನು ಮಾಡುತ್ತಾರೆ. ಆದರೆ ಇತ್ತೀಚೆಗೆ ಮೂಲಕೆಲಸವನ್ನು ಮಾಡುವ ಜನರ ಸಂಖ್ಯೆ ಕಡಿಮೆಯಾಗುತ್ತಾ ಸಾಗಿದೆ. ಇವರು ಬಾಗಿಲು, ಕಿಟಕಿ, ಕೆತ್ತನೆ, ಮೂರ್ತಿ, ಮಂಟಪ, ಮಂಚ ಹೀಗೆ ಯಾವುದೇ ಮರದ ಕೆಲಸಗಳನ್ನು ಮಾಡುತ್ತಾರೆ. ಇದಲ್ಲದೆ ಲೋಹದ(ಕಬ್ಬಿಣದ) ಕೆಲಸವನ್ನೂ ಮಾಡುತ್ತಾರೆ. ಆದರೆ ಇಂದಿನ ಜಾಗತೀಕರಣ ಆಚಾರಿ ಸಮುದಾಯದ ವೃತ್ತಿಗೆ ಅಡೆತಡೆಯಾದ ಪ್ಲಾಸ್ಟಿಕ್ ಹಾಗೂ ಇತರೆ ಲೋಹದ ವಸ್ತುಗಳು ಬಂದಿದ್ದರಿಂದ ಮರಗಳ ಬೆಲೆ ವಿಪರೀತ

ದ್ದರಿಂದ ಇವರ ಕೆಲಸ ಕಡಿಮೆಯಾಗಿ ಮೊದಲಿನಂತೆ ಡಿಕೆ ಇಲ್ಲದಂತಾಗಿದ್ದರಿಂದ ಈ ವೃತ್ತಿ ಕೈಗೊಳ್ಳುವವರು ಡಿಮೆಯಾಗಿದ್ದಾರೆ.

**ಾಮಾಜಿಕ ಪ್ರಗತಿ :**

ಈ ಜನರು ಊರುಗಳಲ್ಲಿ 40-50 ಕುಟುಂಬಗಳು ಂದೇಕಡೆ ಇದ್ದು 'ಆಚಾರಿ ವಾಡೊ' ಹೆಸರಲ್ಲಿ ವಾಸಿಸುತ್ತಾರೆ ಾಗೂ ಶಾಂತಿಯ ಜೀವನ ನಡೆಸುತ್ತಾರೆ.

**ಂಡಾರಿ**

**ರ್ನಾಟಕದಲ್ಲಿ ಭಂಡಾರಿಗಳು :**

ಕರ್ನಾಟಕದ ಉತ್ತರಕನ್ನಡ ಜಿಲ್ಲೆಯ ಕಾರವಾರದ ಾಜಾಳ, ಘೋಟ್ನಭಾಗ, ಮುಡಗೇರಿ, ಹೊಸಾಳ, ೇವಭಾಗ, ಸದಾಶಿವಗಡ, ಅಂಕೋಲಾ, ಮುಂಡಗೋಡ, ುಲ್ಲಾಪುರ, ದಾಂಡೇಲಿ ಹಾಗೂ ಹೊನ್ನಾವರ ಾಲೂಕುಗಳಲ್ಲಿ ಇವರು ಹೆಚ್ಚಾಗಿ ವಾಸವಾಗಿದ್ದಾರೆ.

**ಇವರ ಮೂಲವೃತ್ತಿ :**

ಇವರು ಮಾಡಲಾರದ ಕೆಲಸಗಳಿಲ್ಲ. ನಾವಿಕರಾಗಿ ಹಡಗುಗಳಲ್ಲಿ ಉಸುಕು, ಕಟ್ಟಿಗೆ, ಭತ್ತ ಸಾಗಿಸುವುದು. ತೆಂಗು, ತಾಳೆಮರದಿಂದ 'ಸೂರ್'(ನೀರಾ), ಇಳಸುವುದು. ಕೆಲವರು ಹೊಲಗದ್ದೆ ಮಾಡುತ್ತಾರೆ. ಧೈರ್ಯವಂತರಾದ ಇವರು ಸೇನೆ, ಪೋಲಿಸ್ ಇಲಾಖೆಯಲ್ಲಿ ಸೇವೆ ಸಲ್ಲಿಕೆ, ಕೆಲವರು ತೆಂಗಿನ ನಾರಿನಿಂದ ಹಗ್ಗ ಇತ್ಯಾದಿಗಳನ್ನು ಹೆಣೆಯುವುದು. ಮನೆಯ ಸಾರಿಗಾಗಿ ಮೀನು ಹಿಡಿಯುವುದು. ದನಕರುಗಳನ್ನು ಸಾಕಿ ಹೈನುಗಾರಿಕೆ ಮಾಡುವುದು ಇತ್ಯಾದಿ.

**ಗೋಮಾಂತರ ಸಮುದಾಯ**

ಹೆಚ್ಚಿನ ಕೊಂಕಣಿ ಭಾಷಿಕರೆಲ್ಲರೂ ಗೋವಾದಲ್ಲಿ ಪೋರ್ಚುಗೀಸರ ದಬ್ಬಾಳಿಕೆಯಿಂದ ಬೇಸತ್ತು ಕರ್ನಾಟಕ ಹಾಗೂ ಮಹಾರಾಷ್ಟ್ರಕ್ಕೆ ವಲಸೆ ಹೋದಂತೆ, ಗೋಮಾಂತಕ ಸಮುದಾಯದವರೂ ಅವರ ಜೊತೆಗೂಡಿದ್ದರು. ಗೋಮಾಂತಕ ಸಮುದಾಯದಲ್ಲಿ 4 ಚಿಕ್ಕ ಸಮುದಾಯಗಳು ಒಂದುಗೂಡಿವೆ. ಬಾಂದಿ, ದೇವಳಿ, ಕಲಾವಂತ, ಗುರವಎಂಬ ಹೆಸರಿನ ಇವರೆಲ್ಲರೂ ದೇವಸ್ಥಾನಗಳಿಗೆ ಸಂಬಂಧಪಟ್ಟ ವಿವಿಧ ಉಪಕಸಬುಗಳನ್ನು ಹೊಂದಿದವರು.

'ಬಾಂದಿ' ಸಮುದಾಯದವರು ದೇವಸ್ಥಾನದಲ್ಲಿ ಹಾಗೂ ಬ್ರಾಹ್ಮಣರ ಮನೆಯಲ್ಲಿ ಬ್ರಾಹ್ಮಣರಿಗೆ ಪೂಜೆಪುರಸ್ಕಾರಕ್ಕಾಗಿ ಸಹಾಯಕರಾಗಿ ಕೆಲಸ ಮಾಡುವುದರಿಂದ ಇವರಿಗೆ ಬ್ರಾಹ್ಮಣರ ಕುಟುಂಬದ ನಿಕಟ ಸಂಪರ್ಕವಿದ್ದುದರಿಂದ ಇವರು ಬ್ರಾಹ್ಮಣರ ಆಹಾರ, ರೀತಿ, ನೀತಿ, ವ್ಯವಹಾರ ಜ್ಞಾನ, ಉಡುಗೆ, ತೊಡುಗೆ, ಆಧ್ಯಾತ್ಮಿಕ ಚಿಂತನೆ ಹೊಂದಿದವರಾಗಿದ್ದರಿಂದಲೂ ಅವರ ಮಕ್ಕಳ ಜೊತೆಗೆ ಇವರ ಮಕ್ಕಳು ಬೆರತು ಆಟವಾಡುವುದರಿಂದಲೂ ಅವರ ಸಂಸ್ಕಾರವನ್ನು ಹೊಂದಿ ಬ್ರಾಹ್ಮಣರ ಮಕ್ಕಳಂತೆ ಅಭ್ಯಾಸದಲ್ಲಿ ತೀಕ್ಷ್ಣಬುದ್ಧಿ ಹೊಂದಿ ವಿದ್ಯಾಭ್ಯಾಸ ಮಾಡಿ ಮುಂದೆ ಬಂದು, ವಿವಿಧ ದೊಡ್ಡ ದೊಡ್ಡ ಹುದ್ದೆಗಳನ್ನು ಅಲಂಕರಿಸಿದರು.

ಇವರಂತೆ 'ದೇವಳಿ' ಸಮುದಾಯದವರು "ದೇವ" ಎಂದರೆ (ದೇವರು) ದೇವರಸೇವೆ ಮಾಡುವವರು. ಇವರಿಗೆ ದೇವಸ್ಥಾನದ ದೇವರ ಪೂಜಾಪುರಸ್ಕಾರದ ಪಾತ್ರೆ, ದೀವಿಗೆ ಇತ್ಯಾದಿಗಳನ್ನು ಸ್ವಚ್ಛಮಾಡುವುದು, ದೇವಸ್ಥಾನದ ಶುದ್ಧೀಕರಣ ಮಾಡುವುದು ಇತ್ಯಾದಿ ಮುಖ್ಯ ಕೆಲಸಗಳಿವೆ.

'ಕಲಾವಂತ' ಎಂದರೆ ಸಂಗೀತ, ನೃತ್ಯಕಲೆ ಬಲ್ಲವರು. ಇವರು ದೇವಸ್ಥಾನದ ಜಾತ್ರೆ, ಪಲ್ಲಕ್ಕಿ, ಉತ್ಸವಗಳಲ್ಲಿ ಭಾಗವಹಿಸುವ ಕಾರ್ಯದವರಾಗಿದ್ದಾರೆ. ಜೊತೆಗೆ ಪಲ್ಲಕ್ಕಿ ಯಾ ತೇರು ಜಾತ್ರೋತ್ಸವದಲ್ಲಿ ಶೃಂಗಾರಗೊಂಡ ದೇವರಿಗೆ ಜನರ ಕೆಟ್ಟದೃಷ್ಟಿ ತಾಗಬಾರದೆಂದು ಅದನ್ನು ತಪ್ಪಿಸಲು ಶೃಂಗಾರಗೊಂಡ
ನರ್ತಕಿ ತನ್ನ ತಲೆಯ ಮೇಲೆ ದೀಪಗಳಿಂದ ತಯಾರಿಸಿದ ಬಿದಿರಿನ ತಟ್ಟಿಯನ್ನು ಹೊತ್ತುಕೊಂಡು ಜೊತೆಗೆ ಧೋಲ್ ಹಾಗೂ ಕೊಂಬುಕಹಳೆಯೊಂದಿಗೆ ವಾದ್ಯ ತಂಡದವರ ಜೊತೆ ಹೆಜ್ಜೆ ಹಾಕುತ್ತಾ, ಕುಣಿಯುತ್ತಾ ಬರುವಾಗಿನ ದೃಶ್ಯವನ್ನು "ಕಲಾವಂತ ನಾತ್ತಾ" ಕಲಾವಂತ ಕುಣಿಯುತ್ತಾರೆ ಎಂದರೆ "ದೇವದಾಸಿಯ ನರ್ತನ" ಎಂದು ಕರೆಯುತ್ತಾರೆ. ಹೀಗೆ ಈ ರೀತಿ ವಿವಿಧ ಸಮುದಾಯದವರು ದೇವರ ಸೇವೆ ಮಾಡುವುದರಿಂದ ಇವರಿಗೆ ದೇವಸ್ಥಾನ ವತಿಯಿಂದ ಭೂಮಿಯನ್ನು ದಾನವಾಗಿ ನೀಡುತ್ತಿದ್ದರು.

ಈ ಸಮುದಾಯದವರು ಸುಂದರ ಆರೋಗ್ಯವಂತ ವ್ಯಕ್ತಿತ್ವ ಹೊಂದಿದವರಾಗಿದ್ದು, ಉತ್ತಮ ಕಂಠದವರಾಗಿದ್ದು, ಭಜನೆ, ಕಿರ್ತನೆ, ಸಂಗೀತ ವಾದ್ಯಗಳ ನುಡಿಸುವಿಕೆ, ಜಾನಪದಕಲಾ ಪ್ರಕಾರಗಳನ್ನು ಹೊಂದಿದವರಾಗಿದ್ದಾರೆ. ಗುರವ ಎಂದರೆ ಗುರವ ಸಮುದಾಯದವರು ದೇವಸ್ಥಾನದ ಯಾ ಭಟ್ಟರ ದನಕರುಗಳನ್ನು ಸಾಕಿ - ಸಲುಹಿ ಸೇವೆ ಮಾಡುವವರು.

ಆದ್ದರಿಂದಲೇ ಈ ಸಮುದಾಯದವರು ಕಲಾಕ್ಷೇತ್ರದಲ್ಲಿ ರಾಜ್ಯ - ರಾಷ್ಟ್ರ ಅಂತರಾಷ್ಟ್ರೀಯ ಮಟ್ಟದ ಹೆಸರನ್ನು ಮಾಡಿದ್ದಾರೆ. ಸುಪ್ರಸಿದ್ಧ ಚಲನ ಚಿತ್ರನಟಿಯರಾದ ಜಯಶ್ರೀ ಗಡಕರ, ಸ್ನೇಹಲತಾ ಗಡಕರ, ಉಷಾ ನಾಯ್ಕ, ಪ್ರಸಿದ್ಧ ಗಾಯಕ, ಹಾಸ್ಯಪಟು ಸುದೇಶ ಭೊಸಲೆ ಮುಂತಾದವರು ಈ ಜನಾಂಗದವರು.

ಇವರ ಬದುಕಿನ ವಿವಿಧ ರೀತಿನೀತಿಗಳು ಉಳಿದ ಕೊಂಕಣಿ ಭಾಷಿಕರಂತೆ ಆಗಿವೆ. ಯಾವುದೇ ಪಂಗಡದ ಜೊತೆಗೆ (ಈ ನಾಲ್ಕು ಪಂಗಡಗಳಲ್ಲಿ)ಗಂಡು-ಹೆಣ್ಣಿನ ಸಂಬಂಧ ಗಟ್ಟಿಗೊಂಡರೆ ಮದುವೆಯನ್ನು ಮಾಡುತ್ತಾರೆ.

**ಚಿತ್ರಾಪುರ ಸಾರಸ್ವತ್ ಬ್ರಾಹ್ಮಣ ಮೂಲ :**

ಇವರು ಕಾಶ್ಮೀರದ ಭಾಗದಿಂದ ಗೋವಾಕ್ಕೆ ಬಂದು ನೆಲೆಸಿದವರಾಗಿದ್ದು ಇವರು ಕಾಶ್ಮೀರದ ಮೂಲದವರಂತೆ ಪ್ರಾರ್ಥಿಸುವ ಶ್ಲೋಕಗಳಲ್ಲಿ 'ಸಮಸ್ತ ಶಾರದಾದೇವಿ ಕಾಶ್ಮೀರ ಪುರವಾಸಿ' ಒಳಗೊಂಡಿದೆ.

ಇವರು ಗೋಕರ್ಣದ ಮಹಾಬಲೇಶ್ವರನಲ್ಲಿ ಪ್ರಾರ್ಥನೆ ಮಾಡುತ್ತಿದ್ದಾಗ 7ನೇ ದಿನ ಒಬ್ಬ ಮುದುಕನಿಗೆ ಅವರ ಗುರುಗಳ ದರ್ಶನವಾಯಿತು. 2ನೇಯ ದಿನ ಅವರು ಕೋ-ಟಿತೀರ್ಥಕ್ಕೆ ಹೋಗಿ ಅಲ್ಲಿ ಪ್ರಾರ್ಥನೆ ಮಾಡತೊಡಗಿದರು. ಅಲ್ಲಿ ಸ್ವಪ್ನದಲ್ಲಿ ಬಂದು ಗುರು ಅವರ ಮೂಲದೇವರ ದರ್ಶನಕ್ಕೆ ಕರೆದುಕೊಂಡು ಹೋದನು. ಅವರ ಮಠ ಉತ್ತರಕನ್ನಡ ಶಿರಾಳಿಯಲ್ಲಿದೆ. ಅದಕ್ಕೆ ಇವರಿಗೆ ಶಿರಾಳಿ ಚಿತ್ರಾಪುರ ಮಠದವರೆನ್ನುತ್ತಾರೆ. ಇವರ ಕುಲದೇವರು ಗೋವಾದ ಮಂಗೇಶಿ, ಶಾಂತಾದುರ್ಗಾ, ನಾಗೇಶಿ, ಮಹಾಲಕ್ಷ್ಮೀ ಇತ್ಯಾದಿ. ಇವರ ಪಂಗಡದಲ್ಲಿ ಒಂದೊಂದು ಕುಲದೇವರಿದ್ದಾರೆ.

**ಪಡ್ತಿ**

ಕೊಂಕಣಿ ಭಾಷಿಕ ವಿವಿಧ ಚಿಕ್ಕದೊಡ್ಡ ಸಮುದಾಯಗಳಲ್ಲಿ ಪಡ್ತಿ ಸಮುದಾಯವು ಒಂದಾಗಿದೆ. ಇವರು ಹೆಚ್ಚಾಗಿ ಉತ್ತರ ಕನ್ನಡ ಜಿಲ್ಲೆಯಲ್ಲಿ
ಮಾತ್ರ ನೋಡಲು ಸಿಗುತ್ತಾರೆ. ಮರಾಠಾ ರಾಜನಾದ ಶ್ರೀ ಶಿವಾಜಿ ಮಹಾರಾಜರ ಸೈನ್ಯದಲ್ಲಿದ್ದ ಈ ಜನರು ಆನೆಯ ಮೇಲೆ ಕುಳಿತು ಯುದ್ಧ ಮಾಡುತ್ತಿದ್ದರು. ಸೈನ್ಯದಲ್ಲಿದ್ದ "ಪದಾತಿ" ಎಂಬ ಹೆಸರೇ ಈ ಸಮುದಾಯದ ಹೆಸರು 'ಪಡ್ತಿ' ಎಂದಾಗಿದೆ.

ಈ ಜನರು ಕುಮಟಾ ತಾಲೂಕಿನಲ್ಲಿ 'ಪಡಿ-ಭೂಮಿ' ಅಂದರೆ ಹಾಳು ಬಿದ್ದ ಭೂಮಿ. ಕಾರವಾರದಲ್ಲಿ "ಗಜನಿ" ಭೂಮಿ ಎಂದರೆ ಉಪ್ಪಿನ ಅಂಶವಿದ್ದ ಭೂಮಿ. ಈ ಸ್ಥಳದಲ್ಲಿ ಉಪ್ಪನ್ನು ತಯಾರಿಸುತ್ತಿದ್ದರು. ಆದ್ದರಿಂದ ಪಡ್ತಿ ಎಂದಾಗಿದೆ ಎಂದು ಪ್ರತೀಕವಿದೆ. ಗೆಜೆಟಿಯರನಲ್ಲಿ ಇವರಿಗೆ "ಕೆನರಿಜ್ ಪಡ್ತಿ" ಎಂದು ದಾಖಲೆ ಮಾಡಿದ್ದಾರೆ.

ಪಡ್ತಿ ಜನಾಂಗದ ವಸತಿ :

ಕಾರವಾರದ ಕಿನ್ನರ ಶಿರವಾಡ, ಅಮದಳ್ಳಿ, ಅರಗಾ, ಚೆಂಡಿಯಾ, ಮಾಜಾಳಿ, ಮುಡಗೇರಿ, ಅಸ್ನೋಟಿ, ಹಣಕೋಣ, ಹಳಗಾ, ದೇವಳಮಕ್ಕಿ, ಕಡವಾಡ, ಕಠೀಣ-ಕೋಣ, ನಂದನಗದ್ದಾ, ಬಾಡ, ಹಾಗೂ ಶಿರ್ಶಿ, ಅಂಕೋಲಾ, ಕುಮಟಾದಲ್ಲಿ, ನೆಲೆಸಿದ್ದಾರೆ.

ವೃತ್ತಿ :

ಇವರು ಮೊದಲು ಕೃಷಿಯನ್ನು ಮಾಡುತ್ತಿದ್ದರು. ನಂತರ 'ಉಳುವವನೆ ಹೊಲದೊಡೆಯ' ಎಂಬ ಕಾನೂನಿ[ನ]
ಅಡಿ ಕೆಲಜನ ಮಾಲಿಕರಾದರು. ಜೊತೆಗೆ ತಮ[್ಮ] ಕುಟುಂಬದವರಿಗಾಗಿ ಮಾತ್ರ ಮೀನನ್ನು ಹಿಡಿಯುತ್ತಾರೆ. ಇವರು ಹೆಚ್ಚಾಗಿ ನದಿತೀರದಲ್ಲಿ ವಾಸಿಸುತ್ತಾರೆ. ಇವ[ರ] ಆರ್ಥಿಕ ಮಟ್ಟವೂ ಸಾಧಾರಣವಾಗಿದೆ. ಕೆಲಜನ ಸೈನ್ಯ ಪೋಲಿಸ ಇಲಾಖೆ ಹಾಗೂ ಸರ್ಕಾರಿ ನೌಕರಿಯಲ್ಲಿ ಸೇ[ವೆ] ಸಲ್ಲಿಸುತ್ತಿದ್ದಾರೆ.

ಇವರ ವಿಶೇಷ ಹಬ್ಬವೆಂದರೆ ಹೋಳಿ ಹಬ್ಬವಾಗಿದೆ. ಇವರ ಕುಲದೇವರು ಹೆಚ್ಚಾಗಿ ಗೋವಾದಲ್ಲಿವೆ. ಉಳಿದ ರೀತಿನೀತಿಗಳು ಉಳಿದ ಕೊಂಕಣಿ ಭಾಷಿ[ಕ] ಸಂಪ್ರದಾಯದಂತಿವೆ.

**ಮಡ್ವಳ್ (ಮಡಿವಾಳ)**

ಮಡಿವಾಳ ಯಾ ಧೋಬಿ ಇವರ ಮೂಲ ಕಸುಬು ಬಟ್ಟೆ ಒಗೆಯುವುದು, ಇವರು ಹೆಚ್ಚಾಗಿ ಉತ್ತರ ಕನ್ನಡ ಜಿಲ್ಲೆಯ ಭಟ್ಕಳ, ಕುಮಟಾ, ಅಂಕೋಲಾ, ಕಾರವಾರದ ಹಲವು ಭಾಗಗಳಲ್ಲಿ ವಾಸವಾಗಿದ್ದಾರೆ.

ಮಡಿವಾಳ ಸಮುದಾಯದ ಗಂಡಸರು ಪಂಜಿಯನ್ನು ತೊಡುತ್ತಾರೆ. ಅದು ತೆಳುವಾದ ಬಟ್ಟೆಯದಾಗಿದ್ದು ಅವರು ಮಾಡುವ, ಬಟ್ಟೆ ಒಗೆಯುವ ಹಾಗೂ ಇಸ್ತ್ರೀ ಮಾಡುವ ಕೆಲಸಕ್ಕೆ ಆ ಪಂಜಿ ಆರೋಗ್ಯಕ್ಕೆ ಸಹಕಾರಿಯಾಗುವುದು. ಹಾಗೂ ಸೊಂಟಕ್ಕೆ ಒಂದು ವಸ್ತ್ರವನ್ನು ಸುತ್ತಿಕೊಂಡಿರುತ್ತಾ-ರೆ. ಮಡಿವಾಳ ಸಮುದಾಯದ ಸ್ತ್ರೀಯರು ಜಿ.ಎಸ್.ಬಿ ಮಹಿಳೆಯರಂತೆ ವೇಷಭೂಷ ತೊಡುತ್ತಾರೆ. ಇವರ ಜನನ, ಉಪನಯನ, ಮುಂಜಿ, ಮದುವೆ, ಸೀಮಂತಪೂಜೆ ಹಾಗೂ ಮರಣದ ರೀತಿನೀತಿ, ಬದುಕು ಜಿ.ಎಸ್.ಬಿ. ಸಮಾಜದವರಂತೆ ಆಚರಣೆಯಲ್ಲಿದೆ.

**ಕೋಮಾರಪಂಥ**

ಕೋಮಾರಪಂಥ ಜನರಿಗೆ ಇನ್ನೊಂದು ಹೆಸರು 'ಕೋಮಾರ್ ಪೈಕ್'. ಈ ಜನರು ಹೆಚ್ಚಿನ ಸಂಖ್ಯೆಯಲ್ಲಿ ಕಾರವಾರದಲ್ಲಿ ನೆಲೆಸಿದ್ದಾರೆ. ಇವರದೇ ಆದ ಒಂದು ವಿಶಿಷ್ಟ ಇತಿಹಾಸವಿದೆ. ಈ ಜನರು ಮೊದಲು ಮರಾಠಾ, ಮೊಘಲ್ ಹಾಗೂ ಇತರ ಸಾಮ್ರಾಟರಾಜರ ಕಾಲದಲ್ಲಿ ಶಿಪಾಯಿಗಳಾಗಿ ಕೆಲಸ ಮಾಡುತ್ತಿದ್ದರು. ಇವರು ಮೂಲತಃ ಲಿಂಗಾಯುತರಾಗಿದ್ದರು. ಇವರಿಗೆ ಕೊಂಕಣಿ ಭಾಷೆ ಮಾತನಾಡಲು ಬರುತ್ತಿರಲಿಲ್ಲ. ಇವರು ಘಟ್ಟದ ಮೇಲೆ ವಸತಿ ಮಾಡಿಕೊಂಡಿದ್ದರು. ಆದರೆ ಮುಸ್ಲಿಮರ ಆಡಳಿತದ ಅವಧಿಯಲ್ಲಿ ಇವರ ಮೇಲೆ ಆದ ಹಿಂಸಾತ್ಮಕ ದಾಳಿಯಿಂದಾಗಿ ಇವರು ಕರ್ನಾಟಕದ ಕಾರವಾರಕ್ಕೆ ಬಂದು ನೆಲೆಸಿ, ಕೃಷಿಬದುಕು ಹಾಗೂ ಉಳಿದ ವ್ಯವಹಾರ ಮಾಡಿಕೊಂಡು

...ಳಿದರು.

ಇವರು ಕಲಾದನಿಯು ಕೋಮವಾರಸ್ವಾಮಿ ...ಂಗಡದವರೆಂದು ಹೇಳುತ್ತಾರೆ. ಆದರೆ ಇವರು ಅದಕ್ಕೆ ...ಪ್ಪಲಾರರು. ತಮ್ಮ ಹೆಸರಿನ ಮುಂದೆ ಮೆಹತ್ತಿ(ಮೆತ್ರಿ) ...ಂದು ಹೇಳುತ್ತಾರೆ. ಇವರು ಹೆಚ್ಚಾಗಿ ಕೊಂಕಣಿ ಮಿಶ್ರಿತ ...ನ್ನಡ ಮಾತನಾಡುತ್ತಾರೆ. ಇವರಿಗೆ "ಪಾಯಿಕ" ಎಂದು ...ರೆಯುತ್ತಾರೆ. "ಪಾಯಿಕ" ಎಂದರೆ ಸೈನ್ಯದ ಮುಖ್ಯಸ್ಥ ಯಾ ...ಾಳೇಗಾರ ಎಂಬ ಅರ್ಥ. ಇವರು ಕುದುರೆ ಸವಾರಿ ...ಾಡಿಕೊಂಡು ಬಂದೂಕುಧಾರಿಯಾಗಿ ಸ್ವತಂತ್ರವಾಗಿ ...ದುಕುತ್ತಿದ್ದರು. ಮೊಗಲ್, ಮರಾಠಾ ಹಾಗೂ ಇತರ ...ಾಜರ ಕಾಲದಲ್ಲ ಅವರ ಕೈಕೆಳಗೆ ಶಿಪಾಯಿಯಾಗಿ ಕೆಲಸ ...ರ್ವಹಿಸುತ್ತಿದ್ದರು. ಬ್ರಿಟಿಷ್ ಆಡಳಿತ ಸಮಯದಲ್ಲಿ ಬ್ರಿಟಿಷರ ...ರುದ್ಧ ದಂಗೆ ಮಾಡಲು ಸುರು ಮಾಡಿದರು. 16-17ನೇ ...ತಮಾನದಲ್ಲಿ ಈ ಜನರು ಕಾರ್‍ವಾಟ-ಬೆಳೂರು, ಗುಡ್ಡೆಹಳ್ಳಿ, ...ೂರ್ಮಗಡ ಹಾಗೂ ಇತರ ಪ್ರದೇಶಗಳಿಗೆ ಬಂದು ನೆಲೆಸಿದರು. ...ಈಗ ಕರ್ನಾಟಕದ ವಿವಿಧ ಭಾಗದಲ್ಲಿ ನೆಲೆಸಿದ್ದಾರೆ.

**ಸಾಂಸ್ಕೃತಿಕ :**

ಈ ಜನರು ಪಂಚಮುಹಾಲ(ಋಷಿ)ಕೂಟದ ಸಂಪ್ರದಾಯದವರು. ಹಿಂದೆ ಈ ಜನರು ಬೇರೆ ಜಾತಿಯವರ ಜೊತೆಗೆ ಹೊಂದಾಣಿಕೆಯಾಗುತ್ತಿರಲಿಲ್ಲ. ಇವರಲ್ಲಿ ತಮ್ಮದೇ ಆದ ಪಂಚಾಯತಿ, ಕಳಸ ಹಾಗೂ ಬುದ್ವಂತ ಹೀಗೆ ಇವರು ಯಾವುದೇ ನಿರ್ಣಯ ತೆಗೆದುಕೊಳ್ಳುವುದಾದರೆ ಜಾತಿಯ ಆಧಾರದ ಮೇಲೆ ಹಿರಿಯರು - ಪಂಚರು ನಿರ್ಣಯ ನೀಡುತ್ತಾರೆ.

## ಗೌಳಿ

ಕೊಂಕಣಿ ಸಮಾಜದಲ್ಲಿ ವಿವಿಧ ಕೊಂಕಣಿ ಸಮುದಾಯಗಳಾಗಿವೆ. ಆದ್ದರಿಂದಲೇ ಸಾಂಸ್ಕೃತಿಕವಾಗಿ ಕೊಂಕಣಿ ಸಮಾಜ ವಿಭಿನ್ನವಾಗಿದೆ. ಇದರಲ್ಲಿ ಕೊಂಕಣಿಗರ ಗೌಳಿ ಸಮಾಜವು ಒಂದಾಗಿದೆ. ಗೌಳಿ ಎಂದರೆ ದನಕರುಗಳನ್ನು ಸಾಕಿ, ಹಾಲು ಉತ್ಪಾದನೆ ಮಾಡಿ ಬದುಕನ್ನು ನಿಭಾಯಿಸುವವರು.

ಸುಮಾರು 60-80 ವರ್ಷಗಳ ಹಿಂದೆ ಮಹಾರಾಷ್ಟ್ರದ ಕೊಲ್ಲಾಪುರದಿಂದ ಈ ಜನಾಂಗದವರು ಕರ್ನಾಟಕಕ್ಕೆ ಬಂದವರಾಗಿದ್ದಾರೆ. ಬೆಳಗಿನ 5 ಘಂಟೆಗೆ ಎದ್ದ ನಂತರ ಇವರ ದಿನದ ಕೆಲಸ ಪ್ರಾರಂಭವಾಗುತ್ತದೆ. ದನಕರುಗಳ ಶೆಗಣಿ ಬಳಿದು, ಹಾಲುಕರೆದು, ಅದನ್ನು ಮಾರುವುದು. ಬೆಳಗಿನ ತಿಂಡಿ ಎಂದರೆ ಅಕ್ಕಿಗಂಜಿ. ಹಾಲನ್ನು ಮಾರಿ ಬಂದನಂತರ ಗಂಡಹೆಂಡತಿ ಇಬ್ಬರೂ ದನಕರುಗಳನ್ನು ತೆಗೆದುಕೊಂಡು ಅಡವಿಗೆ ಮೇಯಿಸಲು ಕರೆದುಕೊಂಡು ಹೋಗುತ್ತಾರೆ. ಮನೆಯಲ್ಲಿ ಹಿರಿಯರು ಮಾತ್ರ ಇರುತ್ತಾರೆ. ಇವರು ಅಡವಿಗೆ ಹೋಗುವಾಗ ಹೆಗಲ ಮೇಲೆ ಒಂದು ಶಾಲು, ಕೈಯಲ್ಲಿ ಕತ್ತಿ, ಒಂದು ಕೋಲು ಇರುತ್ತದೆ. ಅಡವಿಯಿಂದ ಬಂದ ನಂತರ ದನಕರುಗಳಿಗೆ ಮೇವು ಹಾಕಿ ಕುಡಿಯಲು ನೀರು ನೀಡಿ ತಾವು ಸ್ನಾನ ಮಾಡಿಕೊಳ್ಳುತ್ತಾರೆ. ಇವರ ಆಹಾರವೆಂದರೆ ತರಕಾರಿ, ಮೀನು, ಮಾಂಸ ರಾತ್ರಿ ಊಟಮಾಡಿ ಬೇಗ ಮಲಗಿ ಬೇಗನೇ ಏಳುವ ಅಭ್ಯಾಸ ಇವರದು.

**ಮಕ್ಕಳು :**

ಈಗ ಇವರ ಮಕ್ಕಳು ಹೆಚ್ಚಾಗಿ ಶಾಲೆಗೆ ಹೋಗುತ್ತಾರೆ. ಚಿಕ್ಕವರಿದ್ದಾಗಿನಿಂದಲೇ ದನಕರುಗಳ ಸೇವೆ, ಹಾಲು ಕರೆಯುವ ಅಭ್ಯಾಸವನ್ನು ಮಾಡಿಕೊಳ್ಳುತ್ತಾರೆ.

**ಆರ್ಥಿಕ ಪರಿಸ್ಥಿತಿ :**

ದನಕರು ಸಾಕಿ ಹಾಲಿನ ವ್ಯವಹಾರ ಮಾಡುವ ಗೌಳಿಗಳೂ ಇದ್ದಾರೆ. ಹಾಗೂ ಕೂಲಿಕೆಲಸ ಮಾಡಿ ಬದುಕು ಮಾಡುವವರೂ ಇದ್ದಾರೆ. ಇವರ ಆರ್ಥಿಕ ಪರಿಸ್ಥಿತಿ ಅಷ್ಟಕ್ಕಷ್ಟೇ.

## ಕೆಲ್ಶಿ ನಾಪಿತ

ಕೊಂಕಣಿ ಭಾಷೆಯಲ್ಲಿ 'ಕೇಸ್' ಎಂದರೆ ಕೂದಲು. ಸಂಸ್ಕೃತ ಭಾಷೆಯಲ್ಲಿ ಕೂದಲಿಗೆ ಕೇಶ ಎನ್ನುತ್ತಾರೆ. ಆದ್ದರಿಂದಲೇ ಕೂದಲು ಕರ್ತನ ಕೆಲಸ ಮಾಡುವವರಿಗೆ 'ಕೆಲ್ಶಿ' ಎಂಬ ಹೆಸರು ರೂಢಿಯಿಂದ ಬಂದಿರಬಹುದಾಗಿದೆ. ನಾಪಿತ ಎಂದರೆ ಬ್ರಹ್ಮದೇವನ ಹೊಕ್ಕುಳದಿಂದ ಜನಿಸಿದವರೆಂಬ ಅರ್ಥ. ಬ್ರಹ್ಮನ ಮುಂಜಿ ಉಪನಯನದ ಸಂದರ್ಭದಲ್ಲಿ ಶಾಸ್ತ್ರ ರೀತಿಯಿಂದ ಕೂದಲು ಕತ್ತರಿಸಲು ಒಬ್ಬ ನಾಪಿತನ ಅವಶ್ಯಕತೆ ಬಂತು. ಆಗ ಬ್ರಹ್ಮನು ತನ್ನ ಹೊಕ್ಕುಳದಿಂದ ಒಬ್ಬ ಮನುಷ್ಯನನ್ನು ನಿರ್ಮಿಸಿ ತಲೆಕೂದಲು ಕತ್ತರಿಸುವ ಜವಾಬ್ದಾರಿ ಆತನಿಗೆ ನೀಡಿದ್ದರಿಂದ ಅವರ ಸಂತತಿ ಉತ್ಪನ್ನವಾಯಿತೆಂದು ಪ್ರತೀಕ.

**ಕರ್ನಾಟಕದಲ್ಲಿ ಈ ಜನ :**

ಪೋರ್ಚುಗೀಸರ ದಬ್ಬಾಳಿಕೆಯಿಂದ ಅವರು ಕರ್ನಾಟಕಕ್ಕೆ ಬಂದರು, ಅವರ ಕುಲದೇವರು ಸಾಂತೇರಿ-ಕಾಮಾಕ್ಷಿ, ಕಾವೇರಿ-ಕಾಮಾಕ್ಷಿ ಶಿವನಾದ ಸಿದ್ದಮಂಡಲ, ಮಹಾಲಸಾ-ನಾರಾಯಣಿ ಇವೆಲ್ಲಾ ಗೋವಾದಲ್ಲವೆ.

**ನಾಪಿತ ಹಾಗೂ ಅವರ ಕಸುಬು :**

ಚಿಕ್ಕವರಿದ್ದಾಗಿನಿಂದಲೆ ಕೇಶಕರ್ತನ ಕಾರ್ಯವನ್ನು ಕಲಿತಿರುತ್ತಾರೆ. ಹಿಂದಿನ ಕಾಲದ ನಾಪಿತರ ಕೆಲಸದ ಸಾಮಾಗ್ರಿಗಳು ಮರಾತನ ಶೈಲಿಯದಾಗಿದ್ದವು. 'ಕೂಪ್' ಎಂಬ ಸಾಧನದಿಂದ ಚಾಕುವನ್ನು ಪ್ರತಿನಿತ್ಯ ಅದನ್ನು ಚರ್ಮದ ಮೇಲೆ ತಿಕ್ಕುವುದು ಅಥವಾ ಕಲ್ಲಿನ ಮೇಲೆ ತಿಕ್ಕಿ ಬ್ಲೇಡಿನಷ್ಟು ಮೊನಚು ಮಾಡಿ ಕೂದಲು-ದಾಡಿ ಕತ್ತರಿಸುತ್ತಿದ್ದರು. ಅಂದು ಕೇವಲ ನೀರು ಅಥವಾ ಸೋಪು ಹಚ್ಚುತ್ತಿದ್ದರೆ ಇಂದು ಆಧುನಿಕ ಸಲಕರಣೆಗಳು ಬಂದಿವೆ. ಹಿಂದಿನ ಕಾಲದಲ್ಲಿ ಬೆಳಗಿನಿಂದ ಮಧ್ಯಾಹ್ನದವರೆಗೆ ಮಾತ್ರ

ಕೇಶಕರ್ತನ ಕೆಲಸವಾಗುತ್ತಿತ್ತು. ಮಧ್ಯಾಹ್ನದ ಊಟದ ನಂತರ ಯಾರೂ ಕೇಶ ಕರ್ತನಕ್ಕಾಗಿ ಬರುತ್ತಿರಲಿಲ್ಲ. ಕಾರಣ ಹಿಂದೂಗಳು ಮಧ್ಯಾಹ್ನದ ಸ್ನಾನದ ನಂತರ ಮತ್ತೆ ಕೇಶಕರ್ತನಕ್ಕಾಗಿ ಹೋಗುತ್ತಿರಲಿಲ್ಲ.

ಅಂದಿನ ದಿನಗಳಲ್ಲಿ ಇವರ ಆರ್ಥಿಕ ಪರಿಸ್ಥಿತಿ ಸರಿಯಾಗಿರಲಿಲ್ಲ ಆದ್ದರಿಂದ ಮಕ್ಕಳ ಶಿಕ್ಷಣವೂ ಸರಿಯಾಗದೇ ಅದೇ ಕಸಬಿನಲ್ಲಿ, ಅದೇ ಊರಲ್ಲಿ ಉಳಿದರು. ಆದರೆ ಇಂದು ಅವರ ಮಕ್ಕಳು ಶಾಲೆ, ಕಾಲೇಜು ಕಲಿತು ಹೊಸ ಹೊಸ ಚಾಕರಿ ವ್ಯವಸಾಯ ಮಾಡಿಕೊಂಡಿದ್ದಾರೆ. ಇವರು ತಮ್ಮ ಸಾಮಾಗ್ರಿಗಳನ್ನು ಪೂಜಿಸುತ್ತಾರೆ.

**ನಾಪಿತರ ಬದುಕಿನ ನಿರೀಕ್ಷೆ :**

ಈ ಜನಾಂಗವು ಸರಕಾರದಿಂದ ಬಹಳ ಅಪೇಕ್ಷೆಗಳನ್ನು ಬಯಸುತ್ತಿದೆ. ಬಡತನ, ಚಿಕ್ಕಚಿಕ್ಕ ಗೂಡಂಗಡಿಯಿಂದಲೇ ಕುಟುಂಬದ ಉದರಪೋಷಣೆ. ಇಂದಿನ ಆಧುನಿಕ ತಂತ್ರಜ್ಞಾನ ಯುಗದಲ್ಲಿ ಈ ಸಮುದಾಯದವರಲ್ಲದೆ ಬೇರೆ ಸಮುದಾಯದ ಸ್ಥಿತಿವಂತರೂ ದೊಡ್ಡ ದೊಡ್ಡ ಸುಧಾರಿತ ಅಂಗಡಿ ಸ್ಥಾಪಿಸಿದ್ದರಿಂದ, ಹೆಚ್ಚು ಆರ್ಥಿಕ ಸುಧಾರಣೆಯಿಂದಾಗಿ, ಜನ ಅಲ್ಲಿಗೆ ಹೋಗುವಂತಾಗಿ ಇವರ ವೃತ್ತಿಗೆ ಪೆಟ್ಟು ಬಿದ್ದಿದೆ. ಆದ್ದರಿಂದಲೇ ಇವರ ವೃತ್ತಿಗೆ ಸರ್ಕಾರದಿಂದ ಆರ್ಥಿಕ ಧನಸಹಾಯ ದೊ-ರೆತು ಅಂಗಡಿಗಾಗಿ ಮೂಲಸಾಮಾಗ್ರಿಗಳು ದೊರೆತರೆ, ತಾವು ಇತರರಂತೆ ಬದುಕಬಹುದು. ತಮ್ಮ ಮಕ್ಕಳು ವೃತ್ತಿಯನ್ನು ಅನುಸರಿಸಿಕೊಂಡು ಹೋಗಬಹುದಾಗಿ ಅವರ ಅಪೇಕ್ಷೆಯಾಗಿದೆ.

**ಗಾಬಿತ**

ಹೆಚ್ಚಾನು ಹೆಚ್ಚು ಕೊಂಕಣಿ ಭಾಷಿಕ ಸಮುದಾಯಗಳು ತಮ್ಮ ಮೂಲಸ್ಥಾನ ಗೋವಾ ಎಂದು ಹೇಳಿಕೊಳ್ಳುತ್ತಿರುವಾಗ ಗಾಬಿತ ಜನಾಂಗದವರು ತಮ್ಮ ಮೂಲಸ್ಥಾನ ಮಹಾರಾಷ್ಟ್ರದ ಸಿಂಧೂದುರ್ಗಾ ಜಿಲ್ಲೆಯ ರಾಜಪುರ ತಾಲೂಕಿನವರೆಂದರೂ ಇವರ ಕುಲದೇವರು ಅಲ್ಲಿರುವ(ಶಿವ) ಗಿರೇಶ್ವರ ಎಂದು ಹೇಳುತ್ತಾರೆ. ಅಂತೆಯೇ ಇವರ ಕೊಂಕಣಿ ಮರಾಠಿ ಮಿಶ್ರಿತ 'ಮಾಲ್ವಾಣಿ' ಭಾಷೆಗೆ ಸಮೀಪವಾಗಿದೆ.

ಇವರ ಮೂಲ ಕಸುಬು ಮೀನುಗಾರಿಕೆ ಇವರು ಕರ್ನಾಟಕಕ್ಕೆ ವಲಸೆ ಬಂದಿದ್ದು ಹೆಚ್ಚಾನು ಹೆಚ್ಚು ಉತ್ತರ ಕನ್ನಡ ಜಿಲ್ಲೆಯ ಕಾರವಾರದ ಮಾಜಾಳಿ, ಗೋಟ್ನಿಭಾಗ, ಕೋಡಿಭಾಗ, ಅಳ್ವೇವಾಡಿ, ಸುಂಕೇರಿ, ಅಂಕೋಲಾದ ಶೇಡಗುಳಿ, ಕೇಣಿ, ಕುಮಟೆಯ ಅಳಿವೆದಂಡೆ ಅವರ್ಸಾದ ಹಾರವಾಡ, ಹೊನ್ನಾವರದ ಅಳಂಕೆ, ಉಪ್ಪೋಣಿ ಇತ್ಯಾದಿ ಸ್ಥಳದಲ್ಲಿ ಇವರು ನೇಲೆಸಿದ್ದಾರೆ.

ಇವರು ಹೆಚ್ಚಾನು ಹೆಚ್ಚು ನದಿ ದಂಡೆಗಳಲ್ಲಿ ಬಲೆ ಬಿಸಿ ಮೀನು ಹಿಡಿಯುವವರು. ಹಾಗೂ ಚಿಕ್ಕ ದೋಣಿಯಲ್ಲಿ ಹೋಗಿಯು ಮೀನನ್ನು ಹಿಡಿಯುತ್ತಾರೆ.

ಇವರ ಇತರ ಜನನ, ಮರಣ, ಹಬ್ಬ, ಜಾತ್ರೆ, ಉತ್ಸವ, ಮದುವೆ, ಮನರಂಜನೆ, ಕಾರ್ಯಕಲಾಪಗಳು ಉಳಿದ ಹಿಂದೂ ಕೊಂಕಣಿಗರ ಸಂಪ್ರದಾಯದಂತಿದೆ.

**ಚಪ್ಪೆಕಾರ್ ಸಾರಸ್ವತ**

ಸಾರಸ್ವತ ಕೊಂಕಣಿ ಸಮುದಾಯವು ಮೊದಲ ಸರಸ್ವತಿ ನದಿಯ ದಡದಲ್ಲಿ ವಾಸಿಸುತ್ತಿದ್ದರು. ಕರ್ನಾಟಕ್ಕ ಬರುವ ಮೊದಲು ಅವರು ಗೋವಾದಲ್ಲಿ ವಾಸ್ತವ್ಯ ಹೂಡಿದರು. ಇವರಲ್ಲಿ ಚಿತ್ರಾಪುರ ಸಾರಸ್ವತ, ರಾಜಪುರ ಸಾರಸ್ವತ, ಗೌಡ ಸಾರಸ್ವತ, ದೈವಜ್ಞ ಸೋನಗಾರ, ಚಪ್ಪೆಕಾರ ಸಾರಸ್ವತ ಇತ್ಯಾದಿ ಇವು ಸಾರಸ್ವತ ಸಮಾಜದ ವಿವಿಧ ಶಾಖೆಗಳಾಗಿವೆ. ಚಪ್ಪೆಕಾರ್ ಸಾರಸ್ವತರು ಬ್ರಾಹ್ಮಣ ಸಾರಸ್ವತ ಸಮಾಜದ ಒಂದು ಭಾಗವಾಗಿದೆ. ಇವರ ಲಕ್ಷಣಗಳು ಸಾಧಾರಣವಾಗಿ ಗೌಡ ಸಾರಸ್ವತ ಚಿತ್ರಾಪುರ ಸಮಾಜಕ್ಕೆ ತಾಳೆ ಆಗುತ್ತದೆ. ಇವರಲ್ಲಿರುವ ಒಂದು ಅಂಶವೆಂದರೆ ಅವರ ಮೂಲ ಸ್ಥಳ ಚಪ್ಪೆಕಾರ್ ಹಾಗೂ ಮೂಲ ಕಸುಬು ತಿನಿಸುಗಳ ತಯಾರಿಕೆ ಇವರ ಮೂಲ ಊರು 'ಚಪ್ಪೆ' ಆದ್ದರಿಂದಲೇ ಇವರಿಗೆ ಚಪ್ಪೆಕಾರ್ ಎಂದು ಕರೆಯುತ್ತಾರೆ. ಆದ್ದರಿಂದ ಪಾರಂಪರಿಕವಾಗಿ ಅವರ ಸಮುದಾಯದ ಹೆಸರೇ ಇದಾಗಿದೆ.

ಚಪ್ಪೆಕಾರ್ ಸಮುದಾಯದ ಮೂಲ ಕಸುಬು ಹೋಟೆಲ್‌ವಹಿವಾಟು, ತಿಂಡಿ ತಯಾರು ಮಾಡುವ ಉಧ್ಯಮವಾಗಿದೆ. ಅವರ ತಿನಿಸುಗಳಲ್ಲಿ ಚುರುಮುರಿ, ಸುಕ್ರುಂಡೆ, ಚಕ್ಕುಲಿ, ಉಂಡೋ, ಕರಚಿಕಾಯಿ ಇತ್ಯಾದಿ ಇದಲ್ಲದೆ ಬಡಿಗತನದ ಕೆಲಸವನ್ನು ಮಾಡುತ್ತಾರೆ.

ರೀತಿ-ನೀತಿ : ಸಾರಸ್ವತ ಸಮಾಜದಲ್ಲಿ ಹೆಚ್ಚಾಗಿ ರೀತಿ-ನೀತಿಗಳು ಒಂದೇ ಸಮಾನಾಗಿವೆ.

**ಚಿತ್‌ಪಾವನ ಬ್ರಾಹ್ಮಣ**

**ಪುರಾಣದ ಕಥೆ :**

ಬ್ರಾಹ್ಮಣ ಸಮಾಜದಲ್ಲಿ ಬಹಳಷ್ಟು ಉಪಸಮುದಾಯಗಳು ಇವೆ. ಅದರಲ್ಲಿ ಕೊಂಕಣಿ ಚಿತ್ಪಾವನ್ ಬ್ರಾಹ್ಮಣ ಒಂದಾಗಿದೆ. ಈ ಸಮುದಾಯದ ಉದ್ಭವಕ್ಕೆ ಒಂದು ಕಥೆ ಇದೆ. ಹಿಂದೂ ಜನರು ಪಾಲಿಸುವಂತೆ ಪರಶುರಾಮ ದೇವರು ವಿಷ್ಣುವಿನ ಅವತಾರ ಅವನ ತಂದೆ ಪರಶುರಾಮನಿಗೆ ಕರೆದು ಅವನ ತಾಯಿಯನ್ನು ಕೊಲ್ಲಲು ಆದೇಶಿಸಿದನು. ಅವನ ಆದೇಶವನ್ನು ಪರಶುರಾಮ ಪಾಲಿಸಿದನು. ನಂತರ ಉಳಿದ ಕೆಲವರನ್ನು ಸಂಹಾರ ಮಾಡಲು ಆದೇಶಿಸಿದನು. ಅದನ್ನು ಸಹ ಮಾಡಿದನು. ಇದರಿಂದ ಎಲ್ಲಾ ಬ್ರಾಹ್ಮಣ ಸಮಾಜದವರು ಅವನಿಗೆ ವಿರೋಧವಾದರು. ಆಗ ಅವರ ಅಂತಿಮಕ್ರಿಯೆ ಮಾಡಲು ಯಾರು ಮುಂದೆ ಬರಲಿಲ್ಲ ಆಗ ಬೇರೆ ಉಪಾಯವಿಲ್ಲದೆ ಸಮುದ್ರದಿಂದ ಕೆಲ ಜೀವಿಗಳನ್ನು ಹೊರ ತೆಗೆದು ಅವರಿಂದ ಅಂತಿಮಕ್ರಿಯೆ ವ್ಯವಸ್ಥೆ ಮಾಡಿಕೊಂಡನು ಮುಂದೆ ಆ ಜನಗಳಲ್ಲಿ ಅಲ್ಲಿಯೇ ವಾಸಿಸಲು ಅವಕಾಶ ಮಾಡಿಕೊಟ್ಟನು. ಇವರನ್ನು ಚಿತ್‌ಪಾವನ ಬ್ರಾಹ್ಮಣರೆಂದು ಕರೆಯುತ್ತಾರೆ. ಚಿತ್‌ಪಾವನ ಬ್ರಾಹ್ಮಣ ಶಬ್ಧದ ಅರ್ಥ - ಚಿತ್+ಪಾವನ =

ುನ ಶುದ್ಧ ಇರುವ ಈ ಜನರು ಹೆಚ್ಚಾಗಿ ಮಹಾರಾಷ್ಟ್ರದ ತ್ನಗಿರಿಯ ಕೊಳಸರೆ ಪೋರ್ಟ(ಬಂದರ)ದವರೆಂದು ತೀಕವಿದೆ. ಇವರು ಮೀನು ತಿನ್ನಲಾರದ್ದರಿಂದ ಹೊಲ-ದ್ದೆ ಮಾಡಿಕೊಂಡು ಉಳಿದರು. ಅಲ್ಲಿಂದ ಈಗ ಭಾರತದ ವಿಧ ಭಾಗಗಳಿಗೆ ತಲುಪಿದ್ದಾರೆ.

**ಗುಡಿಗಾರ**

ದೇವಸ್ಥಾನದ ದೇವರ ಮೂರ್ತಿಗಳು, ಬಾಗಿಲುಗಳ ಮೇಲೆ ಸುಂದರ ನಕ್ಷೆಗಳನ್ನು ಕೆತ್ತುವ ಕಲೆಯಿಂದಲೇ ಇವರಿಗೆ 'ಗುಡಿಗಾರ' ಎಂದು ನಾಮಕರಣವಾಗಿದೆ. ಮರದಲ್ಲಿ ವಿವಿಧ ಅಲಂಕಾರಿಕಾಹೂವು, ಪಕ್ಷಿ, ಪ್ರಾಣಿ ಮುಂತಾದವುಗಳ ಸೂಕ್ಷ್ಮ ಕೆತ್ತನೆ ಕೆಲಸಕ್ಕೆ ಇವರು ಸುಪ್ರಸಿದ್ಧರಾಗಿದ್ದಾರೆ.

ಗುಡಿಗಾರರ ಲೆಕ್ಕದಂತೆ 'ವಿಶ್ವಕರ್ಮ' ಎಂಬ ಋಷಿ ಅವರ ಗುರುಗಳು ವಿಶ್ವಕರ್ಮ ಗುರು ಬಲು ಜಾಣನಿದ್ದನು. ಅವನು ಹಲವಾರು ದೇವಸ್ಥಾನಗಳ ಕೆತ್ತನೆ ಕೆಲಸ ಮಾಡಿರುವುದಾಗಿ ಇವರ ಅನಿಸಿಕೆ ಅವರ ವಿಚಾರದಂತೆ ವಿಶ್ವಕರ್ಮನ ಕುಲದೇವರು ಇವರಾಗಿದ್ದಾರೆ. ಹಲವರ ವಿಚಾರದಂತೆ ಕರ್ನಾಟಕದಲ್ಲಿರುವ ಗುಡಿಗಾರರು ಮೂಲವಾಗಿ ಗೋವಾದಿಂದ ಬಂದವರು ಆದರೆ ಕೆಲವರ ವಿಚಾರದಂತೆ ಇವರೆಲ್ಲಾ ಕರ್ನಾಟಕದವರೇ ಆಗಿದ್ದಾರೆ.

**ಕಸುಬು :**

ಮೊದಲಿನಿಂದಲೂ ಇವರ ಮುಖ್ಯ ಕಸುಬು ಎಂದರೆ ದೇವಸ್ಥಾನದ ಎಲ್ಲಾ ಬಗೆಯ ಶೃಂಗಾರ ಮಾಡುವುದು, ಕೆತ್ತನೆ ಕೆಲಸ. ಇಂದಿಗೂ ಸಹ ಅದನ್ನೆ ಮಾಡುತ್ತಾ ಬಂದಿದ್ದಾರೆ. ಇಂದು ಗುಡಿಗಾರರು ಶಿವಲಿಂಗಮೂರ್ತಿ, ಮದುವೆ ಬಾಶಿಂಗ, ರಥ, ತೇರು, ಪಲ್ಲಕ್ಕಿ, ಮುಂತಾದವನ್ನು ಕಲಾತ್ಮಕವಾಗಿಯೂ ಕೆತ್ತನೆ ಕೆಲಸ ಮಾಡಿಕೊಂಡಿದ್ದಾರೆ. ಇವರ ಮೂಲ ಕಸಬಿಗೆ ಬೇಕಾಗುವ ವಸ್ತುಗಳು ಎಂದರೆ ಗಂಧದ ಮರ, ಬೀಟೆ, ಸಾಗುವನಿ, ಬೆಂಡು, ಸುಣ್ಣದ ಕಲ್ಲು ಇತ್ಯಾದಿ. ಕೇವಲ ಮರವಲ್ಲದೇ ಕಲ್ಲಿನ ಮೇಲೆ ಸಹಿತ ಕೆತ್ತನೆ ಕೆಲಸ ಮಾಡುತ್ತಾರೆ. ಆದ್ದರಿಂದಲೇ ಆಚಾರಿಗಳಿಗೂ ಗುಡಿಗಾರರಿಗೂ
ಇರುವ ವ್ಯತ್ಯಾಸ ಇದೊಂದೆ. ಗುಡಿಗಾರರು ಸೂಕ್ಷ್ಮ ಕೆತ್ತನೆ ಕೆಲಸ ಮಾಡುವವರು.

ಇಂದು ಗಂಧದ ವ್ಯವಸಾಯ ಬಹಳ ತುಟಿ-ಯಾಗಿದೆ. 15 ವರ್ಷದ ಮೊದಲು ನೀಡುತ್ತಿದ್ದ ರೂಪಾಯಿ 66ಕ್ಕೆ ಇಂದು ಸಾವಿರ ರೂಪಾಯಿ ಬೆಲೆಯಾಗಿದೆ.

**ಮ್ಹಾರ್ – ಅಂಬೇಡ್ಕರ್‌ರಾಯ್ಟ್**

**ಮ್ಹಾರ್ (ಕೊಂಕಣಿ ದಲಿತರು)**

ಕರ್ನಾಟಕದಲ್ಲಿ ಕೊಂಕಣಿ ಮಾತನಾಡುವ ಈ ಸಮುದಾಯಕ್ಕೆ 'ಮ್ಹಾರ್' ಎಂದು ಕೆಲವರು "ಅಂಬೇಡ್ಕರ್‌ರಾಯ್ಟ್" ಎಂದು ಕರೆಯುತ್ತಾರೆ. "ಮ್ಹಾರ್" ಎಂಬ ಶಬ್ಧವು "ಮಹಾರ್" ಎಂದು ಕರೆಯುವ ಮಹಾರಾಷ್ಟ್ರದ ಸಮುದಾಯವಾಗಿದೆ. ದಲಿತ ಸಮುದಾಯದವರು ಅಂಬೇಡ್ಕರ್‌ರವರ ವಿಚಾರಧಾರೆಯ ಮಹಾರಾಷ್ಟ್ರದಿಂದ ಕರ್ನಾಟಕಕ್ಕೆ ವಲಸೆ ಬಂದವರಾಗಿದ್ದಾರೆ ಎಂದು ಪ್ರತೀತಿಯಿದೆ. ಕೊಂಕಣಿ ಭಾಷಿಕರ ಈ ಸಮುದಾಯದವರು ಕಾರವಾರ, ದಾಂಡೇಲಿ, ಅಂಕೋಲಾ, ಅವರ್ಸಾ, ಕುಮಟಾ, ಹೊನ್ನಾವರ, ಶಿರ್ಶಿ, ಯಲ್ಲಾಪುರ ಹಾಗೂ ಜೋಯಿಡಾ ತಾಲೂಕಿನಲ್ಲಿ ನೋಡಲು ಸಿಗುತ್ತಾರೆ.

**ವೃತ್ತಿ :**

ಈ ಸಮುದಾಯದ ಜನರು ಬಿದಿರಿನಿಂದ ಬುಟ್ಟಿ, ಕೇರಲು ಉಪಯೋಗಿಸುವ ಮರ, ಚಾಪೆ, ಬಿಸಣಿಕೆ, ಹೂವಿನಬುಟ್ಟಿ, ಹೆಣೆದು ವಿವಿಧ ಜಾತ್ರೆ ಉತ್ಸವಗಳಲ್ಲಿ ಮಾರುತ್ತಾರೆ. ಆದರೆ ಇಂದು ಅವರಿಗೆ ಆ ಕಚ್ಚಾ ವಸ್ತುಗಳು ಮೊದಲಿನಂತೆ ಸರಳವಾಗಿ ಸಿಗುತ್ತಿಲ್ಲ.

ಇತ್ತೀಚೆಗೆ ಈ ಜನಾಂಗ ತಮ್ಮ ಮೂಲವೃತ್ತಿಗಿಂತಲೂ ಸರ್ಕಾರದ ವಿವಿಧ ಉದ್ಯೋಗಗಳಲ್ಲಿ ಸೇವೆ ಸಲ್ಲಿಸುತ್ತಿದ್ದು ಇವರ ಆರ್ಥಿಕ ಬದುಕು ಸ್ವಲ್ಪ ಸುಧಾರಿಸುತ್ತಾ ಬಂದಿದೆ. ಇವರ ಉಳಿದ ಸಂಪ್ರದಾಯಗಳು ಕೊಂಕಣಿ ಭಾಷಿಕ ಹಿಂದೂಗಳ ಪದ್ಧತಿಯನ್ನು ಅವಲಂಬಿಸಿದೆ.

**ಕೊಂಕಣ ಮರಾಠಾ**

ಕೊಂಕಣ ಮರಾಠಾ ಜನಾಂಗದವರು ಮೂಲತಃ ಮಹಾರಾಷ್ಟ್ರ ಹಾಗೂ ಗೋವಾದಿಂದ ಕರ್ನಾಟಕಕ್ಕೆ ಬಂದವರಾಗಿದ್ದಾರೆ.ಗೋವಾದಿಂದ ಬಂದವರೆಲ್ಲರು ಪೋರ್ಚುಗೀಸರ ದಬ್ಬಾಳಿಕೆಗೆ ಒಳಗಾಗಿ ಇತರರಂತೆ ವಲಸೆ ಬಂದವರಾಗಿದ್ದಾರೆ. ಇವರ ಮೂಲ ಕಸುಬು ಕೃಷಿಯಾಗಿದೆ. ಹೆಚ್ಚಾಗಿ ಭಾರತೀಯ ಸೈನ್ಯದಲ್ಲಿ ಇವರು ಸೇವೆ ಸಲ್ಲಿಸುತ್ತಿದ್ದಾರೆ.

ಭಾರತದ ಸೇನೆಯಲ್ಲಿ 'ಮರಾಠಾ ಲೈವ ಇನ್ಫೆಂಟ್ರಿ' ಎಂಬ ತುಕಡಿ ಇದ್ದು ಎರಡನೇ ಮಹಾಯುದ್ಧದಲ್ಲಿ ತಮ್ಮನ್ನು ತೊಡಗಿಸಿಕೊಂಡ ಈ ಮರಾಠಾ ಬಟಾಲಿಯನ್‌ನಲ್ಲಿ ಜೋಗಿ, ಸುಬೇದಾರ್ ಎಂದು ಸೆಕೆಂಡ್ ಲೆಫ್ಟಿನೆಂಟ್ ಆಗಿ ಭಾಗವಹಿಸಿದರು. ಇವರಿಗೆ ಇಂಗ್ಲೆಂಡ್‌ರಾಣಿ ವಿಕ್ಟೋ-ರಿಯಾ ಪದಕ ಪ್ರಧಾನವಾಗಿದ್ದು ಹೆಮ್ಮೆಯ ವಿಷಯವಾಗಿದೆ. ಇಂದಿಗೂ ಈ ಜನ ಸೈನ್ಯ, ಪೋಲಿಸ್ ಹಾಗೂ ಸರ್ಕಾರಿ ಉದ್ಯೋಗದಲ್ಲಿ ಹೆಚ್ಚಾಗಿ ದುಡಿಯುತ್ತಿದ್ದಾರೆ. ರಾಮಾ ರಾಘೋಬಾ ರಾಣೆ ಎಂಬವವರಿಗೆ "ಪರಮವೀರ ಚಕ್ರ" ಲಭಿಸಿದೆ.

ಕಾರವಾರದಲ್ಲಿ ವಿವಿಧ ಶಿಕ್ಷಣ ಸಂಸ್ಥೆಗಳನ್ನು ಕೊಂಕಣ ಮರಾಠಾ ಜನಾಂಗದವರು ನಡೆಸುತ್ತಾರೆ. ಇವರ ವಸತಿ ಹೆಚ್ಚಾಗಿ ಯಲ್ಲಾಪುರ, ಕಾರವಾರ, ಅಂಕೋಲಾ, ಗೋವಾದ ಕಾಣಕೋಣ ಕೆಪೆಂ ಹಾಗೂ ಮಾಪಾಸಾದಲ್ಲಿವೆ.

**ಇವರ ಅಡ್ಡ ಹೆಸರುಗಳು :**

ಕದಮ, ಗಾವಂಕಾರ, ರಾಣೆ, ಪವಾರ, ನಾಯ್ಕ, ಸಾಳುಂಕೆ, ದೇಸಾಯಿ, ಸಾವಕಾರ, ಸೈಲ್ ಇವು ಹೆಚ್ಚಾಗಿ

ಬಳಕೆಯಲ್ಲಿವೆ.

**ಜಮಾಯತಿ**

ಜಮಾಯತಿ ಎಂಬ ಶಬ್ದ ಅರಬ್ ಪರ್ಷಿಯನ್ ಹಾಗೂ ಉರ್ದು ಭಾಷೆಯ "ಜಮಾತ" ಎಂಬ ಶಬ್ದದಿಂದ ಬಂದಿದೆ. ಜಮಾತ ಎಂದರೆ ಪಂಗಡ. ಇವರು ಒಂದು ಪಂಗಡವಾಗಿ ವಾಸಿಸುತ್ತಾರೆ.

**ಇವರ ಹಿನ್ನೆಲೆ**

ಇವರು ನೂರಾರು ವರ್ಷಗಳ ಹಿಂದೆ ಅರಬ್ ದೇಶದಿಂದ ಸಮುದ್ರದ ಮಾರ್ಗವಾಗಿ ಬಂದರು "ನಾಕುಂದ ಮಹಮ್ಮದ್ ಹಸನ್" ಎಂಬವನ ನೇತೃತ್ವದಲ್ಲಿ ಈ ತಂಡ ಹೊನ್ನಾವರ ಹಾಗೂ ಗಂಗೋಳ್ಳಿಗೆ ಬಂದು ವ್ಯಾಪಾರ ಪ್ರಾರಂಭಿಸಿದರು.

ಗಂಗೋಳ್ಳಿಯಲ್ಲಿ ನೆಲೆಸಿದ ಇವರು ಕೊಚ್ಚಿಯ ಹುಡುಗಿಯ ಜೊತೆಗೆ ಮದುವೆಯಾಗಿ ಹೊಸ ಪಂಗಡವನ್ನು ಪ್ರಾರಂಭಿಸಿದರು. ಈ ಹೊಸದಾಗಿ ಉದ್ಭವಿಸಿದ ಕೊಂಕಣಿ ಭಾಷಿಕ ಪಂಗಡಕ್ಕೆ ಜಮಾಯತಿ ಎಂದು ಕರೆಯುತ್ತಾರೆ. ಇವರನ್ನು "ನಾಕುಂದ", "ಶಹಂದಿ" ಎಂದು ಕರೆಯುತ್ತಾರೆ. 15ನೇ ಶತಮಾನದಲ್ಲಿ ಭಾರತಕ್ಕೆ ಭೇಟಿ ನೀಡಿದ ಇಬ್ನ ಬಟೂಟನ ಲಿಖಿತ ಗ್ರಂಥದಲ್ಲಿ ಇದರ ಉಲ್ಲೇಖವಿದೆ. ನಾ ಎಂದರೆ ನಾವೆ, ಖುದಾ ಎಂದರೆ ಮಾಲಿಕ ನಾಖುದಾ ಎಂದರೆ ನಾವೆ ನಡೆಸುವವನು.

ಕರ್ನಾಟಕದಲ್ಲಿ ಇವರು ಉತ್ತರ ಕನ್ನಡ ಜಿಲ್ಲೆಗಳ ಗಂಗೋಳ್ಳಿ, ಶಿರೂರ, ಹಾಗೂ ಕಾಸರಗೋಡಿನ ಕಿರಿಮಂಜೇಶ್ವರದಲ್ಲಿ ನೆಲೆಸಿದ್ದಾರೆ. ನವಾಯತಿ, ದಾಲ್ದಿ, ಹಾಗೂ ಈ ಜನಾಂಗದ ಭಾಷೆಯಲ್ಲಿ ಕೊಂಕಣಿಯಲ್ಲಿ ಉರ್ದು ಹಾಗೂ ಪರ್ಷಿಯನ್ ಭಾಷೆಯ ಮಿಶ್ರಣವಿದೆ. ಉಳಿದ ರೀತಿ-ನೀತಿಯ ನವಾಯತಿ ದಾಲ್ದಿ ಸಮುದಾಯದವರಂತೆ ಇವೆ.

**ಗಾವಡೆ**

ಈ ಜನಾಂಗದವರು ಉಳಿದ ಕೊಂಕಣಿ ಭಾಷಿಕರಂತೆ ಪೋರ್ಚುಗೀಸರ ದಬ್ಬಾಳಿಕೆಯಿಂದ ಗೋವಾ ಬಿಟ್ಟು ಜಂಗಲ್ ಮಾರ್ಗವಾಗಿ ಉತ್ತರಕನ್ನಡ ಜಿಲ್ಲೆಯ(ಸುಪಾ ತಾಲೂಕು) ಇಂದಿನ ಜೋಯಡಾ ತಾಲೂಕಿನಲ್ಲಿ ಬಂದು ನೆಲೆಸಿದ್ದವರಾಗಿದ್ದಾರೆ.

ಇವರು ವೃತ್ತಿಯಿಂದ ಅರಣ್ಯದಲ್ಲಿ ಕೆಲಸ ಮಾಡುವವರು, ಕಟ್ಟಿಗೆ ಕಡಿಯುವುದು, ಹೊಲ, ಮನೆಗೆಲಸ, ಜೇನು ಸಾಗಾಣಿಕೆ ಇತ್ಯಾದಿ. ಇವರು ಸಾಕುಪ್ರಾಣಿಗಳ ಮಾಂಸವನ್ನು ತಿನ್ನುವುದಿಲ್ಲ. ಆದರೆ ಕಾಡಿನಲ್ಲಿ ಭೇಟೆ-ಯಾಡಿದ ಮಾಂಸ ತಿನ್ನುತ್ತಾರೆ. ಮೀನು ಸೇವಿಸುತ್ತಾರೆ. ಮದುವೆಗಳು ಗಂಡಿನ ಮನೆಯಲ್ಲಿ ನಡೆಯುತ್ತದೆ. ಇವರ ಕುಲದೇವರುಗಳು ಗೋವಾದಲ್ಲಿವೆ. ಇವರ ಅಡ್ಡ ಹೆಸರುಗಳು ಗಾವಡೆ, ಮಿರಾಶಿ, ಯುಳಿತು, ಈ ರೀತಿ ಇರುತ್ತದೆ. ಉಳಿದ ಸಂಪ್ರದಾಯಗಳು ಹಿಂದೂ ಪದ್ಧತಿಯಂತಿದ್ದರು ಮರಣ ಹೊಂದಿದ್ದರೆ ಮಣ್ಣು ಮಾಡುವ ವಾಡಿಕೆ ಇವರದ್ದಾಗಿದೆ.

**ಚಾಂಬಾರ (ಚರ್ಮದ ಕೆಲಸಗಾರರು)**

ಕೊಂಕಣಿಯಲ್ಲಿ 'ಚಾಂಬಡಿ' ಎಂದರೆ ಚರ್ಮ, 'ಚಾಂಬಾರ' ಎಂದರೆ ಚರ್ಮದ ಕೆಲಸ ಮಾಡುವರೆಂಬ ಅರ್ಥ. ಕಾರವಾರದಲ್ಲಿ ನೆಲೆಸಿರುವ ಈ ಜನ ಕೊಂಕಣಿ ಮಾತನಾಡುತ್ತಿದ್ದು ಚಿಕ್ಕ ಚಿಕ್ಕ ಅಂಗಡಿಗಳನ್ನಿಟ್ಟು ಚರ್ಮದ ಸಾಮಗ್ರಿ ಮಾಡುವ ಹಾಗೂ ರಿಪೇರಿ ಕೆಲಸ ಮಾಡುತ್ತಾರೆ. ಉದಾ- ಚಪ್ಪಲಿ, ಬೂಟು, ಬೆಲ್ಟ, ಬ್ಯಾಗ, ಎರ್‌ಬ್ಯಾಗ್ ಇತ್ಯಾದಿಗಳು. ಇವರ ಅಡ್ಡ ಹೆಸರುಗಳು ಗಡಕರ್, ನಾರ್ವೇಕರ ಈ ರೀತಿ ಇರುತ್ತದೆ. ಇಂದಿನ ಆಧುನಿಕ ಪ್ಲಾಸ್ಟಿಕ್ ಯುಗದಲ್ಲಿ ಇವರ ಕೆಲಸಕ್ಕೆ ಸಂಚಕಾರ ಬಂದಿರುವುದರಿಂದ ಇವರ ವೃತ್ತಿಗೆ ಪೆಟ್ಟು ಬಿದ್ದಿದೆ. ಆದರೂ ಇವರು ಚಿಕ್ಕ ಪ್ರಮಾಣದಲ್ಲಿ ವೃತ್ತಿಯನ್ನು ಇತರೇ ಬೇರೆ ವೃತ್ತಿಗಳನ್ನು ಮಾಡಿ ತಮ್ಮ ಬದುಕನ್ನು ಸಾಗಿಸುತ್ತಿದ್ದಾರೆ ಸುಧಾರಿತ ಇಂದಿನ ಸಮಾಜದಲ್ಲಿ ಇತರೇ ಕೊಂಕಣಿ ಭಾಷಿಕರ ಒಡನಾಟದಿಂದ ಇರುವ ಇವರ ಮಕ್ಕಳು ಸುರಕ್ಷಿತರಾಗಿ ಸರ್ಕಾರಿ ನೌಕರಿ ಮಾಡುತ್ತಿದ್ದಾರೆ.

ಇವರ ಉಳಿದ ಬದುಕಿನಲ್ಲಿ ಸಂಸ್ಕಾರ, ರೀತಿ-ನೀತಿಗಳು ಜನನ-ಮರಣ, ಮದುವೆ ಇತ್ಯಾದಿಗಳು ಉಳಿದ ಕೊಂಕಣಿ ಭಾಷಿಕರಂತೆ ಇವೆ.

**ಗೋಸಾವಿ**

ಗೋಸಾವಿ ಎಂದರೆ ಇವರು ಮೂಲತಃ 'ನಾಥಪಂಥ'ದವರು. ಉತ್ತರ ಕರ್ನಾಟಕದಲ್ಲಿ ಸುಡಗಾಡಸಿದ್ದರೆಂದು ಕರೆಯುವ ಅದೇ ರೀತಿಯ ಕೊಂಕಣಿ ಭಾಷಿಕ ಸಮುದಾಯದವರು. ಈ ಗೋಸಾವಿಯವರು ಊರಿನ ಸಮಸ್ತ ಕ್ಷೇತ್ರದ ರಕ್ಷಣೆ ಮಾಡುವ ಈಶ್ವರ ದೇವರ ಆರಾಧಕರು(ಪೂಜಾರಿಗಳು). ಇವರ ವೇಷಭೂಷದೊಂದಿಗೆ ಕೈಯಲ್ಲಿ ತ್ರಿಶೂಲ ಹಾಗೂ ಶಂಖ ವಾದ್ಯದೊಂದಿಗೆ ಮನೆಮನೆಗೆ

ಹೋಗಿ ಭಿಕ್ಷಾಟನೆ ಮಾಡಿ ತಮ್ಮ ಉದರ ಪೋಷಣೆ ಮಾಡುವರು. ಉಳಿದಿದ್ದನ್ನು ಇತರರಿಗೆ ನೀಡುವರು.

ಆ ಕ್ಷೇತ್ರದಲ್ಲಿರುವ ಉಳಿದ ದೇವಸ್ಥಾನಗಳಿಗೂ ಇವರಿಗೆ ಸಂಬಂಧ ಹಾಗೂ ಸಂಪರ್ಕವಿರುತ್ತದೆ. ಕೊಂಕಣಿ ಭಾಷಿಕರಾದ ಇವರು ಉಳಿದ ಬದುಕಿನ ರೀತಿ-ನೀತಿ ಒಂದೇ ಸಮನಾಗಿ ಪಾಲಿಸುತ್ತಿದ್ದರೂ, ಇವರು ಸತ್ತಾಗ ಇವರಿಗೆ ಮಣ್ಣು ಮಾಡುತ್ತಾರೆ. ಈ ಸಮುದಾಯದವರು ಭಜನೆ ಸಂಗೀತ ಪ್ರೀಯರಾಗಿದ್ದಾರೆ. ಹಾಗೂ ಸ್ಥಳೀಯ ಕೊಂಕಣಿಗರ ಜಾನಪದ ಕಲೆಗಳನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡಿದ್ದಾರೆ.

**ಶೇರುಗಾರ (ರಾಮ ಕ್ಷತ್ರಿಯ)**

ಇವರು ಮೂಲತಃ ಗೋವಾದಿಂದ ಪೋರ್ಚುಗೀಜರ ದಬ್ಬಾಳಿಕೆಯಿಂದ ಕರ್ನಾಟಕಕ್ಕೆ ತಮ್ಮ ದೇವರೊಂದಿಗೆ ಬಂದವರಾಗಿದ್ದಾರೆ. ಇವರಿಗೆ 'ಶೇರುಗಾರ' ಯಾ

ರಾಮಕ್ಷತ್ರಿಯ' ಎಂದು ಕರೆಯುತ್ತಾರೆ. (ಕಾರಣ ಇವರ ಕುಲದೇವರು ರಾಮಕ್ಷತ್ರೀಯ) ಇವರು ಸೈನ್ಯದಲ್ಲೂ ಸೇವೆ ಸಲ್ಲಿಸುತ್ತಿದ್ದರು. ಕರ್ನಾಟಕದ ಮೈಸೂರು, ಬೆಂಗಳೂರು, ಧಾರವಾಡ ಹಾಗೂ ಉ.ಕ. ಜಿಲ್ಲೆಯಲ್ಲಿ ಹೆಚ್ಚಾಗಿ ನೆಲೆಸಿದ್ದರು.

**ದೇವರು-ಧರ್ಮ :**

ಕಾಣಕೋಣದ ಮಲ್ಲಿಕಾರ್ಜುನ, ಬೇತಾಳ, ಕಾಲಭೈರವ, ಪೊಂಡ-ರಾಮನಾಥ, ಮಾಜಾಳ ಇವರೆಲ್ಲ ಕುಲದೇವರಿದ್ದಾರೆ. ನೆಲೆಸಿದ ಗ್ರಾಮದೇವರನ್ನು ವಿಶೇಷವಾಗಿ ಪೂಜಿಸುತ್ತಿದ್ದಾರೆ.

ಗೋವಾ(ಕಾಣಕೋಣದ) ಮಲ್ಲಿಕಾರ್ಜುನ ಕುಲದೇವರಿರುವದರಿಂದ ಪ್ರತಿ ವರ್ಷ ತೀರ್ಥಯಾತ್ರೆಗಾಗಿಯೂ ಹಾಗೂ ಮದುವೆಯಾದಾಗ ದೇವರಲ್ಲಿ ಹರಕೆಗಾಗಿ ಹೋಗುತ್ತಾರೆ.

ಮಂಗಳೂರಿನಲ್ಲಿ ನೆಲೆಸಿರುವ ಶೇರುಗಾರರು ಹೆಚ್ಚಾಗಿ ಕನ್ನಡ ಮಿಶ್ರಿತ ಕೊಂಕಣಿ ಮಾತನಾಡುತ್ತಾರೆ.

**ಕುಡಾಲ ದೇಶಸ್ಥ ಬ್ರಹ್ಮಾಣ**

ಹಿಂದೂ ಧರ್ಮದ ಕುಡಾಲಕರ ಬ್ರಾಹ್ಮಣರಿಗೆ ಕುಡಾಲ ದೇಶಕಾರ ಆದ್ಯ ಗೌಡ ಬ್ರಹ್ಮಾಣ ಎಂಬ ಹೆಸರಿನಿಂದ ಕರೆಯುತ್ತಾರೆ. ಕೊಂಕಣ ಪ್ರಾಂತದ ಮಹಾರಾಷ್ಟ್ರ, ಗೋವಾ, ಕರ್ನಾಟಕ, ಕೇರಳದಲ್ಲಿ ಹಾಗೆ ವಿದೇಶದಲ್ಲಿಯೂ ಇವರು ನೆಲೆಸಿದ್ದಾರೆ. ತೆಂಡೂಲ್ಕರ್, ಶಿರೋಡ್ಕರ, ಪಾಟೀಲ, ಠಾಕೂರ, ಸಾವಂತ, ಪಾಟಕರ, ಪ್ರಭು, ಶೆಣ್ವೆ, ನಾಯಕ, ಶಾನಭಾಗ, ವಾಲಾವಳಕರ ಹೀಗೆ ಹಲವಾರು ಅಡ್ಡ ಹೆಸರುಗಳು ಇವರಿಗಿವೆ. ಕರ್ನಾಟಕದ ದ.ಕನ್ನಡದ ಪುತ್ತೂರು, ಬಂಟ್ವಾಳ, ಪರ್ಕಾಳ, ಮಣಿಪಾಲ ಹಾಗೂ ಬೆಂಗಳೂರು ಇಲ್ಲಿ ಇವರು ವಾಸವಾಗಿದ್ದಾರೆ. ಶಂಕರಾಚಾರ್ಯರ ಅದ್ವೈತ ತತ್ವಜ್ಞಾನದ ಆಚರಣೆಯನ್ನು ಇವರು ಮಾಡುತ್ತಾರೆ. ಇವರು ಮಾಹಾರಾಷ್ಟ್ರದ ಕುಡಾಳದಿಂದ 15 ಕಿ.ಮೀ. ಅಂತರದ ದಾಬೋ ಗ್ರಾಮದವರಾಗಿದ್ದಾರೆ. ವಿಶ್ವಾನಂದ ಸ್ವಾಮಿಜಿಯವರಿಂದ ದಿಕ್ಷೆ ಪಡೆದ ಶ್ರೀಮದ್ ಪೂರ್ಣಾನಂದ ಸ್ವಾಮಿಜಿ ಮೊದಲಿನ ಮಠಾಧೀಶರು ಸಾಧಗಿ ಸ್ವಾಮಿಜಿ ಪ್ರದ್ಯುಮ್ನಾನಂದ ಸ್ವಾಮಿಜಿ ಇದ್ದಾರೆ. ಮರಾಠಿ ಮೂಲವಾಣಿ ಹಾಗೂ ಮಹಾರಾಷ್ಟ್ರೀಯನ್ ಕೊಂಕಣಿ ಇವರು ಮಾತನಾಡುತ್ತಾರೆ.

ಇವರ ವಸತಿ ಸಿಂಧದುರ್ಗ ಜಿಲ್ಲೆ ಇದ್ದು ಹೆಚ್ಚಾಗಿ ಮಾಲವಾಣಿ ಭಾಷೆಯನ್ನು ವಾಪರಿಸುತ್ತಾರೆ. ದೇವನಾಗರಿಯಲ್ಲಿ ಬರೆಯುತ್ತಾರೆ. ಇವರ ಕುಲದೇವರು ಕುಡಾಳ ಸಮೀಪದ ವಯ್ತುಲೇಶ್ವರ, ಉಮಾಮಹೇಶ್ವರ, ಗೌತಮೇಶ್ವರ, ಚಾಮುಂಡೇಶ್ವರಿ ಇತ್ಯಾದಿ ದೇವರಾಗಿದ್ದಾರೆ.

ಅಡಿಗೆಂಯಲ್ಲಿ ವಿಶೇಷವಾಗಿ ಇವರು ಸೋಲಕಡಿ(ಕೊಕಂ) ಯಾನೆ ಭಿರಂಡಾಕಡಿ ಪುರ್ನಪೋಳಿ (ಹೋಳಿಗೆ) ಇವರ ಇಷ್ಟ ಆಹಾರವಾಗಿದೆ. ಗೋಡಂಬಿ, ತೆಂಗಿನಕಾಯಿ, ಕಲ್ಲಂಗಡಿ, ಅನಾನಸ್ ಹೀಗೆ ಫಲಗಳ ವ್ಯಾಪಾರ ಮಾಡುತ್ತಾರೆ. ಇವರು ಜಿ. ಎಸ್. ಬಿ. ಸಮುದಾಯದವರಂತೆ ಆಹಾರಪದ್ಧತಿ ಇದೆ. ಸ್ತ್ರೀಯರು ಕಚ್ಚೆಹಾಕಿ ಸೀರೆ ಉಡುವ ಪದ್ಧತಿ ಇದೆ.

**ಭಾಲಾವಲೀಕಾರ್ ಸಾರಸ್ವತ ಬ್ರಾಹ್ಮಣ ಸಮಾಜ**

ಮಹಾರಾಷ್ಟ್ರ ಪ್ರಾಂತ್ಯದ ರತ್ನಗಿರಿ ಜಿಲ್ಲೆಯ ರಾಜಾಪುರ ತಾಲೂಕಿನ ಭಾಲಾವಲಿ ಒಂದು ಸುಂದರ ಊರು. ಭಾಲಾವಲಿ ಗ್ರಾಮದ ನಡುವಿನಲ್ಲಿ ಭಾಲಾವಲಿ ಹೊಳೆ ಹರಿಯುತ್ತದೆ. ಇಕ್ಕೆಲಗಳಲ್ಲಿ ಸುಂದರ ತೆಂಗು ತೆಂಗಿನ ತೋಟ, ಭತ್ತದ ಗದ್ದೆಗಳು. ಒಂದು ಬದಿಯಲ್ಲಿ ಅನಾದಿ ಲಕ್ಷ್ಮೀ ಮಾಧವ ದೇವಸ್ಥಾನ, ಖಾಂಬೇಶ್ವರ ದೇವಸ್ಥಾನ, ಜಾಖಾದೇವಿ ದೇವಸ್ಥಾನಗಳಿವೆ. ಇನ್ನೊಂದು ಬದಿಯಲ್ಲಿ ನವದುರ್ಗಾ ದೇವಸ್ಥಾನ ರವಳನಾಥ-ದತ್ತಾತ್ರೇಯ ಮಂದಿರ, ಗಜಾನನ ಮಂದಿರ, ಭಗವತೀ ದೇವಸ್ಥಾನಗಳಿವೆ. ರಾಜಾಪುರ ತಾಲೂಕಿನ ಭಾಲಾವಲಿ, ಆಡಿವರೆ, ದೇವೀಹಸೋಳ್, ಕೋತಾಪುರ, ಧಾರ್ತಳೆ, ಲಾಂಜಾ ತಾಲೂಕಿನ ಹರ್ಚೆ, ಸಾಟೌಳ, ರತ್ನಗಿರಿ ತಾಲೂಕಿನ ಡೋರ್ಲೆ, ಖಾನಾವಳ ಮೊದಲಾದ ಊರುಗಳಲ್ಲಿ ನೆಲೆಸಿದ ಸಾರಸ್ವತ ಬ್ರಾಹ್ಮಣರಿಗೆ ಭಾಲಾವಲಿಯೇ ಒಂದುಗೂಡುವ ಕೇಂದ್ರವಾಗಿದೆ. ಈ ಪುಟ್ಟ ಊರಿನಲ್ಲಿ ಸಮಾಜದ್ದೇ ಆದ ಐದು ದೇವಸ್ಥಾನಗಳಿವೆ. ಆದ್ದರಿಂದ ಈ ಸಮಾಜ ಭಾಲಾವಲೀಕಾರ್ ಸಾರಸ್ವತ ಬ್ರಾಹ್ಮಣರೆಂದು ಮಹಾರಾಷ್ಟ್ರದಲ್ಲಿ ಗುರುತಿಸಲ್ಪಟ್ಟಿದೆ. ಇವರು ಹೆಚ್ಚಾಗಿ ದ.ಕ. ಜಿಲ್ಲೆ ಕೊಡಗು, ಕಾಸರಗೋಡು, ಭಾಗದಲ್ಲಿ ನೆಲೆಸಿದ್ದಾರೆ.

♦♦♦♦



# 29. ಕೊಂಕಣಿ ಸರಸ್ವತಿ ಪುತ್ರ ಸೈಲ್

■ ಡಾ. ವಸಂತ ಬಾಂದೇಕರ-ಕಾರವಾ

ಭಾರತದಲ್ಲಿ ನೀಡುವ ಉಚ್ಛವಾದ ಸಾಹಿತ್ಯಿಕ ಪುರಸ್ಕಾರವೆಂದರೆ ಜ್ಞಾನಪೀಠ ಪ್ರಶಸ್ತಿಯಾಗಿದೆ. ಅದ-ಕ್ಕೆ ಸಮೀಪವಿರುವ ಇನ್ನೊಂದು ಪ್ರಶಸ್ತಿ ಎಂದರೆ ಸರಸ್ವತಿ ಸನ್ಮಾನ(ಪುರಸ್ಕಾರ) ಈ ಪ್ರಶಸ್ತಿಯು ಪ್ರತಿವರ್ಷ ಭಾರತದ ಸಂವಿಧಾನದ 8ನೇಯ ಪರಿಚ್ಛೇಧದಲ್ಲಿ ರಾಷ್ಟ್ರೀಯ ಮಾನ್ಯತೆ ಪಡೆದ 22 ಭಾಷೆಗಳಲ್ಲಿ ಬರೆದ ಎಲ್ಲ ಸಾಹಿತಿಗಳ ಕೃತಿಗಳನ್ನು ಆಯ್ದು ಅದರಲ್ಲಿ ಉತ್ತಮವಾದ ಒಂದು ಕೃತಿಗೆ ನೀಡಲಾಗುತ್ತದೆ. ಈ ಪ್ರಶಸ್ತಿಯನ್ನು 1991 ರಿಂದ ಕೆ.ಕೆ. ಬಿರ್ಲಾ ಗ್ರೂಪ್‌ನವರ ಪ್ರಾಯೋಜಕರಾಗಿ ನೀಡುತ್ತಿದ್ದರು. ಪುರಸ್ಕೃತರಿಗೆ ರೂ 15 ಲಕ್ಷ ನಗದು ಹಾಗೂ ಮಾನ ಸನ್ಮಾನ ಪಾತ್ರದೊಂದಿಗೆ ಹೊಸದಿಲ್ಲಿಯಲ್ಲಿ ಪ್ರಶಸ್ತಿ ಪ್ರಧಾನ ಮಾಡಲಾಗುತ್ತದೆ. ಪ್ರಥಮ ಪ್ರಶಸ್ತಿಯನ್ನು ಭಾರತದ ಖ್ಯಾತ ಕವಿ ದಿ. ಹರಿವಂಶ ರಾವ್ ಬಚ್ಚನ್‌ರವರು ಸ್ವೀಕರಿಸಿದ್ದಾರೆ.

ಈ ಪ್ರಶಸ್ತಿಯು 2016ರಲ್ಲಿ ಕೊಂಕಣಿ ಸಾಹಿತ್ಯಕ್ಕಾಗಿ ಕವಿ-ಕಾದಂಬರಿ-ಕಥೆ-ನಾಟಕ ರಚನಾಕಾರರಾದ ಕಾರವಾರ(ಮಾಜಾಳ) ಮೂಲದ ಗೋವಾದಲ್ಲಿ ನೆಲೆಸಿರುವ 78 ವಯಸಿನ ಶ್ರೀ ಮಹಾಬಳೇಶ್ವರ ಸೈಲ್‌ರವರಿಗೆ ಪ್ರಾಪ್ತವಾಗಿರುವುದು ನಮಗೆಲ್ಲ ಕೊಂಕಣಿಗರಿಗೆ ಅಭಿಮಾನದ ಸಂಗತಿಯಾಗಿದೆ. ಸಾಹಿತಿ ಮಹಾಬಳೇಶ್ವರ ಸೈಲರವರ ಜನ್ಮವು ಕಾರವಾರ ತಾಲೂಕಿನ ಮಾಜಾಳಿ ಗ್ರಾಮದಲ್ಲಾಗಿತ್ತು. ಆಗ ಆ ಭಾಗವು ಮುಂಬೈ ಪ್ರಾಂತದಲ್ಲಿದ್ದುದರಿಂದ ಮರಾಠಿ ಶಿಕ್ಷಣ-ಭಾಷೆ-ಸಾಹಿತ್ಯದ ಕಡೆಗೆ ಹೆಚ್ಚಿನ ಜನರ ಒಲವಿತ್ತು. ಅದರಂತೆ ಈ ಭಾಗವು ಗೋವಾ ಗಡಿಯಿಂದ ಬರಿ 2 ಕಿ.ಮೀ. ಅಂತರದಲ್ಲಿದ್ದುದರಿಂದ ಕೊಂಕಣಿ ಸಾಂಸ್ಕೃತಿಕ ವಾತಾವರಣವಾಗಿತ್ತು. ಕೊಂಕಣ ಮರಾಠಾ ಸಮುದಾಯದಲ್ಲಿ ಜನಿಸಿದ ಶ್ರೀ ಮಹಾಬಳೇಶ್ವರ ಸೈಲ್‌ರವರ ಪ್ರಾಥಮಿಕ ಶಿಕ್ಷಣವು ಕನ್ನಡದಲ್ಲಾದರೆ, ಪ್ರಾಥಮಿಕ ಸಾಹಿತ್ಯ ಬರವಣಿಗೆ ಪ್ರಾರಂಭಿಸಿದ್ದು ಮರಾಠಿಯಲ್ಲಿ ಹಲವಾರು ಮರಾಠಿ ನಾಟಕಗಳನ್ನು ಇವರು ರಚಿಸಿದರು. ಅವು ಯಶಸ್ವಿಯಾದವು ಆದರೆ ಮುಂದೆ ಇವರಿಗೆ ತಾನು ಕೊಂಕಣಿ ಮಾತೃಭಾಷಿಕನಾಗಿರುವುದರಿಂದ ಕೊಂಕಣಿ ಸಾಹಿತ್ಯ ಕೃಷಿ ಮಾಡಲು ಸಾಕ್ಷಾತ್ಕರವಾಗಿ ಚಿಕ್ಕ ಚಿಕ್ಕ ಕಥೆಗಳನ್ನು ದೀಪಾವಳ ಅಂಕಗಳಲ್ಲಿ ಬರೆಯಲು ಪ್ರಾರಂಭಿಸಿದರು. ಮುಂದೆ ಇವರ ಬರವಣಿಗೆಯು 5 ಕಥಾ ಸಂಗ್ರಹಗಳು ಪ್ರಕಟವಾದವು -1. ಪಲತಡೆಚೆತಾರು 2. ತರಂಗ 3. ಬೊಯನಟ ಫೈಟಿಂಗ 4. ನಿರ್ಮೊಣ ಅಶ್ವಥಾ ಮಾ 5. ದೋಸ ಮೂಳ ಇವರ ಕೊಂಕಣಿ ಕೃತಿಗಳು ವಾಚಕರನ್ನು ಆಕರ್ಷಿಸಿದವು ಇವರು ಬರೆದ ಪಲತಡಚೊ ಮನಿಸ ಕಾದಂಬರಿಯು ಕೊಂಕಣಿ ಸಿನೇಮಾ ಆಗಿ ಟೊರಂಟೊ ಫಿಲ್ಮ ಫೆಸ್ತಿವಲದಲ್ಲಿ ಸರ್ವೋತ್ತಮ ಚಿತ್ರವೆಂದು ಆಯ್ಕೆಯಾಯಿತು.

ಇವರು ಬರೆದ ತರಂಗ ಕಥಾ ಸಂಗ್ರಹಕ್ಕೆ 1993ರ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ಲಭಿಸಿದೆ. ಇವರು ಬರೆ ಇನ್ನೊಂದು ಉತ್ಕೃಷ್ಟ ಕಾದಂಬರಿ ಎಂದರೆ ಕಾಳಗಂಗಾ ಇದರ ಕಾರವಾರದ ಕಾಳನದಿ ತೀರದ ವಾಸ್ತವಿಕ ಬದುಕನ್ನೇ ಬಿಂಬಿಸಿದ್ದಾ ಶ್ರೀ ಮಹಾಬಳೇಶ್ವರ ಸೈಲ್‌ರವರು ಖುದ್ದಾಗಿ ಭಾರತೀಯ ಸೈನ್ಯದ ಸೇವೆ ಸಲ್ಲಿಸಿದವರಾಗಿದ್ದು ಹಲವಾರು ಕೃತಿಗಳಲ್ಲಿ ಅವರು ದೇಶಭ ಪ್ರೇರಣೆಯನ್ನು ವಾಚಕರಿಗೆ ನೀಡಿದ್ದಾರೆ.

ಇವರ ಯುವ ಸಂವ್ಹಾರ ಎಂಬ ಕಾದಂಬರಿಯ ಪ್ರಮು ವಿಷಯವೆಂದರೆ 450 ವರ್ಷದ ಹಿಂದೆ ಪೋರ್ಚುಗೀಸರ ಗೋವಾರಾಜ್ಯ ಆಳುವ ಸಂದರ್ಭದಲ್ಲಿ ರಾಜಕಾರಣ ದೃಷ್ಟಿಯಿಂದ ಧರ್ಮ ಬದಲಾಯಿಸುವ ದೃಷ್ಟಿಯಿಂದ ಮಾನಸಿ ಚಿತ್ರಹಿಂಸೆ ನೀಡಿದ ಸಾಕ್ಷಾತ ದೃಶ್ಯವನ್ನು ಕಥಾ ವಸ್ತುವಾ ಬಿಂಬಿಸಿದ್ದಾರೆ. ಇವರ ಸರಸ್ವತಿ ಸನ್ಮಾನಿತ ಕಾದಂಬ ಹಾವಟನ ಇದರ ಪ್ರಮುಖ ವಿಷಯವೆಂದರೆ ಅವರ ಊರಿನ ಪ್ರಥಮ ಕುಟುಂಬದ ಮನೆತನದ ಕಥೆ ಅದರಲ್ಲಿದೆ. ಒಂದು ಮನೆತನದ ಹಿನ್ನೆಲೆ ನಂತರ ಅದರ ಅವನತಿ-ಪತನ ಎಲ್ಲವನ್ನು ವಿಸ್ತಾರವಾಗಿ ವಿವರಿಸಿದ್ದಾರೆ.

ಇವರಿಗೆ ದೊರೆತ ಪ್ರಮುಖ ಪುರಸ್ಕಾರಗಳೆಂದರೆ

1993 – ತರಂಗ – ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾ

ಡಾ. ಟಿ. ಎಂ. ಎ. ಪೈ ಪೌಂಡೇಶನ ಪುರಸ್ಕಾರ

1997 – ಕಾಳಗಂಗಾ – ಗೋವಾ ಕಲಾ ಅಕಾಡೆಮಿ ಪುರಸ್ಕಾರ

1989, 1993 – ಗೋವಾ ಕಲಾ ಅಕಾಡೆಮಿ ಪುರಸ್ಕಾರ

2006 –ಗೋವಾ ರಾಜ್ಯ ಸಂಸ್ಕೃತಿ ಪುರಸ್ಕಾರ

2007 – ಕಥಾ ಆವಾರ್ಡ

2007 – ಗೋವಾ ಸಾಹಿತ್ಯಿಕ ಪುರಸ್ಕಾರ

2010 – ವಿಮಲಾ ಪೈ ವಿಶ್ವಕೊಂಕಣಿ ಪುರಸ್ಕಾರ

ಮುಖ್ಯವಾಗಿ ಇವರ ಎಲ್ಲ ಕೃತಿಗಳಲ್ಲಿ ಮಾನವೀಯ ಮೌಲ್ಯಗಳು, ಮೂಢನಂಬಿಕೆ, ಸಮಾಜದಲ್ಲಿ ಮಹಿಳೆಯರ ಸ್ಥಾನಮಾನ, ಗ್ರಾಮೀಣ ಭಾಗದ ಬದುಕಿನ ವಾಸ್ತವಿಕತೆ ಹೀಗೆ ವಿವಿಧ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಒಬ್ಬ ನಿವೃತ್ತ ಭಾರತದ ಸೇನಾನಿ ಬದುಕಿನುದ್ದಕ್ಕೂ ರಾಷ್ಟ್ರಪ್ರೇಮ ಸಾರುವ ಶಿಸ್ತುಬದ್ಧ ಜೀವನದೊಂದಿಗೆ ಬಂದುಕು ಹಿಡಿದು ಕೈಯಲ್ಲಿ ಅಂದು ಭಾರತದ ರಕ್ಷಣೆಗೆ ನಿಂತರೆ ಇಂದು ಲೇಖನಿ ಹಿಡಿದು ಸಮಾಜದಲ್ಲಿ ಜಾಗೃತಿ ಮಾಡುತ್ತಿದ್ದಾರೆ. ಇಂಥ ಕೊಂಕಣಿ ಭಾಷಿಕ ಸಾಹಿತಿಗೆ ಸರಸ್ವತಿ ಸನ್ಮಾನ ಲಭಿಸಿರುವುದು ಜೊತೆಗೆ ಇವರ ಇನ್ನೊಂದು ಕೃತಿಯು ಸಿನೇಮಾ ಆಗಿ ಅಂತರಾಷ್ಟ್ರೀಯ ಪುರಸ್ಕಾರ ಲಭಿಸಿರುವುದು ನಮಗೆಲ್ಲ ಕೊಂಕಣಿಗರಿಗೆ ಹೆಮ್ಮೆಯ ವಿಷಯವಾಗಿದೆ. ಅವರಿಂದ ಇನ್ನು ಹೆಚ್ಚಿನ ಕೃತಿಗಳು ಬರಲಿ ಹಾಗೂ ಮುಂದೆ ಭವಿಷ್ಯದಲ್ಲಿ ಜ್ಞಾನಪೀಠ ಪ್ರಶಸ್ತಿ ಲಭಿಸಲೆಂದು ಅವರ ಅಭಿಮಾನಿಗಳ ಅನಿಸಿಕೆಯಾಗಿದೆ.

♦♦♦♦



# ೩೦. ಕೊಂಕಣಿಗರ ಗೃಹಪ್ರವೇಶದ ರೀತಿ-ನೀತಿ

■ ಡಾ. ಅರವಿಂದ ಶ್ಯಾನಭಾಗ, ಬಾಳೇರಿ

ಸಂಸ್ಕೃತಿ ಎಂದರೆ 'ವ್ಯಕ್ತಿಯನ್ನು ಕತ್ತಲೆಯಿಂದ ಬೆಳಕಿಗೆ, ಅಜ್ಞಾನದಿಂದ ಜ್ಞಾನದ ಕಡೆಗೆ ಕೊಂಡೊಯ್ಯುವ ಸಾಧನ' ಎಂದು ಕನ್ನಡದ ಪ್ರಸಿದ್ಧ ಕವಿ ಡಿ.ವಿ. ಗುಂಡಪ್ಪರವರು ಉಲ್ಲೇಖಿಸಿದ್ದಾರೆ. ಕಲ್ಚರ್ ಎನ್ನುವ ಶಬ್ದ ಇಂಗ್ಲೀಶ್ ಭಾಷೆಯ ಪದವಾಗಿದ್ದರೂ ಅದರ ಮೂಲ ಲ್ಯಾಟಿನ್ ಭಾಷೆಯ 'ಕಲ್ಟಸ್' ಎಂದು ತಿಳಿದುಬರುತ್ತದೆ. ಕಲ್ಟಸ್ ಎಂದರೆ ಗೌರವಿಸು, ನಿಷ್ಠೆಯಿಂದ ಇರು, ಗಮನದಲ್ಲಿಡು ಎನ್ನುವ ಅರ್ಥವಿದೆ. ಸಂಸ್ಕೃತ ಭಾಷೆಯಲ್ಲಿ ಸಂಸ್ಕೃತಿ ಎನ್ನುವ ಪದದ ಬಳಕೆಯಿದೆ. 'ಸಮ್ಯಕ್ ಕೃತಿ' ಎಂದು ಅದರ ರೂಪನಿಷ್ಪತ್ತಿ. 'ಸಮ್ಯಕ್' ಎಂದರೆ ಸರಿಯಾದ, ಸಮರ್ಪಕ ಎನ್ನುವ ಅರ್ಥವಿದೆ. 'ಸಮ್ಯಕ್ ಕೃತಿ' ಎನ್ನುವಲ್ಲಿ ಸರಿಯಾಗಿ ಸಂಪ್ರದಾಯಬದ್ಧವಾಗಿ ಮಾಡುವ ಕೆಲಸವೆಂದು ವ್ಯಾಖ್ಯಾನಿಸಬಹುದು. ಹೀಗೆ ತಲೆತಲಾಂತರಗಳಿಂದ ನಡೆದುಬಂದಿರುವ ಆಚಾರ-ವಿಚಾರ, ರೀತಿ-ನೀತಿಯನ್ನು ದಾಖಲಿಸುವದು ಈ ಲೇಖನದ ಉದ್ದೇಶ. ಇಲ್ಲಿ ಕೊಂಕಣಿಗರ ವಿವಿಧ ಸಂಗಡಗಳ ನಡುವೆ ಆಚರಿಸುವ ಗೃಹಪ್ರವೇಶದ ರೀತಿ-ನೀತಿಗಳನ್ನು ತೌಲನಿಕವಾಗಿ ಚರ್ಚಿಸಿದೆ.

ಗೌಡ ಸಾರಸ್ವತ ಬ್ರಾಹ್ಮಣ

ಗೃಹಪ್ರವೇಶಕ್ಕೆ ಕೊಂಕಣಿಯಲ್ಲಿ 'ಘರವೊಕ್ಕಲ್' ಎನ್ನುವ ಪದವನ್ನು ಬಳಸುತ್ತಾರೆ. ಗೃಹಪ್ರವೇಶದ ಮುನ್ನಾದಿನ ಗಣಪತಿ ಹೋಮ, ವಾಸ್ತುಹೋಮ, ರಾಕ್ಷೋಘ್ನ ಹೋಮ ಮತ್ತು ನವಗ್ರಹ ಹೋಮ ಮಾಡುತ್ತಾರೆ. ಕುಂಬಳಕಾಯಿ ಬಲಿಯಾಗಿ ನೀಡುತ್ತಾರೆ. ಗೃಹಪ್ರವೇಶದ ದಿನ ಬೆಳಗ್ಗೆ ಪುಣ್ಯಾಹವಾಚನ, ಗೋಪೂಜಾ, ಲಕ್ಷ್ಮೀನಾರಾಯಣ ಸಹಿತ ತುಲಸಿ ಪ್ರತಿಷ್ಠೆ ಮಾಡಿ ಶುಭ ಮುಹೂರ್ತದಲ್ಲಿ ಹೊಸ ಮನೆಗೆ ಪ್ರವೇಶಿಸುತ್ತಾರೆ. ದ್ವಾರದಲ್ಲಿ ಸ್ವಸ್ತಿಕ್ ಹಾಕಿ, ಎಲೆ-ಅಡಿಕೆಯನ್ನಿಟ್ಟು ಬಾಗಿಲಿಗೆ ಬಿಳಿ ಬಟ್ಟೆಯನ್ನಿಟ್ಟು ದ್ವಾರಪಾಲಕ ಪೂಜೆಯನ್ನು ಮಾಡಿ ಮನೆಯ ಯಜಮಾನ ಪಾತ್ರೆಯಲ್ಲಿ ಬಂಗಾರವನ್ನು ಹಿಡಿದು, ಯಜಮಾನಿ ಕಲಶಪಾತ್ರೆಯಲ್ಲಿ ಅರಿಶಿಣ-ಕುಂಕುಮ ಹಿಡಿದು ಮಂಗಳಾಷ್ಟಕ ಸಹಿತ ಮನೆಯನ್ನು ಪ್ರವೇಶಿಸುತ್ತಾರೆ. ನಂತರ ಮನೆಯಲ್ಲಿ ದೀಪವನ್ನು ಹಚ್ಚಿ, ಹಂಡೆಯಲ್ಲಿ ನೀರು ತುಂಬಿಸುತ್ತಾರೆ. ಅಡುಗೆ ಕೋಣೆಯಲ್ಲಿ ಹಾಲನ್ನು ಉಕ್ಕಿಸಿ ಅನ್ನವನ್ನು ತಯಾರಿಸಿ ಶ್ರೀ ಲಕ್ಷ್ಮೀನಾರಾಯಣ ದೇವರಿಗೆ ನೈವೇದ್ಯ ಮಾಡಿ ನಂತರ ಎಲ್ಲರಿಗೂ ಪ್ರಸಾದವೆಂದು ಊಟದ ಎಲೆಯಲ್ಲಿ ಬಡಿಸುತ್ತಾರೆ.

ಯಜಮಾನ ಬ್ರಾಹ್ಮಣರಿಗೆ ತಾಂಬೂಲ ಸಹಿತ ದಕ್ಷಿಣೆಯನ್ನು ನೀಡುತ್ತಾರೆ. ಬ್ರಾಹ್ಮಣರು ಆಶೀರ್ವಚನವನ್ನು ದಯಪಾಲಿಸುತ್ತಾರೆ. ಯಜಮಾನನಿಗೆ ಇಷ್ಟಮಿತ್ರ-ಬಂಧು, ಬಾಂಧವರು ಉಡುಗೊರೆಗಳನ್ನು ನೀಡುತ್ತಾರೆ. ಅನುಕೂಲಸ್ಥರು ಸತ್ಯನಾರಾಯಣ ಪೂಜಾ, ಗಣಹೋಮ ಇತ್ಯಾದಿ ಆಚರಣೆಗಳನ್ನು ಮಾಡಿ ಊರಿನ ಜನರಿಗೆ ಅನ್ನ ಸಂತರ್ಪಣೆಯನ್ನು ನೆರವೇರಿಸುತ್ತಾರೆ.

ರಾಜಾಪುರ ಸಾರಸ್ವತ ಬ್ರಾಹ್ಮಣ

ಪ್ರವೇಶದ ಮುನ್ನಾದಿನ ಮನೆಕಟ್ಟುವ ಕೆಲಸ ಮಾಡಿದ ಆಚಾರಿ ಮತ್ತು ಮೇಸ್ತ್ರಿಗಳಿಗೆ ಶಾಲು. ಲುಂಗಿ ಮುಂತಾದ ವಸ್ತ್ರವನ್ನು ಕೊಡುತ್ತಾರೆ. ಮನೆಯ ನಾಲ್ಕು ಬದಿಗೆ ದಾರವನ್ನು ಕಟ್ಟಿ ದಿಗ್ಬಂಧನ ಮಾಡುತ್ತಾರೆ. ಪ್ರವೇಶದ ದಿನ ಆಕಳನ್ನು ಮನೆಗೆ ನುಗ್ಗಿಸಿ ಹಾಲನ್ನು ಉಕ್ಕಿಸುತ್ತಾರೆ. ಅಗ್ನಿಕಾರ್ಯ, ತೊಟ್ಟಿಲು ಮನೆಯೊಳಗೆ ಒಯ್ಯುವದು, ಸಾಂಪ್ರದಾಯಿಕ ವಸ್ತು ತಂದಿಟ್ಟು ದೇವರ ಕೋಣೆಯಲ್ಲಿ ಪೂಜೆಯನ್ನು ಮಾಡುತ್ತಾರೆ. ಪುರೋಹಿತರನ್ನು ಕರೆಯಿಸಿ ಈ ಎಲ್ಲ ವಿಧಿವಿಧಾನಗಳನ್ನು ಮಾಡಿಸುತ್ತಾರೆ. ಮಧ್ಯಾಹ್ನ ಎಲ್ಲರಿಗೂ ಅನ್ನ ಸಂತರ್ಪಣೆಯನ್ನು ಮಾಡಿಸುತ್ತಾರೆ.

ದೈವಜ್ಞ

ಜಿ.ಎಸ್.ಬಿ. ಪದ್ಧತಿ ಪ್ರಕಾರ ಮೊದಲ ದಿನ ರಾತ್ರಿ ಅಷ್ಟಬಂಧ, ದಿಗ್ಬಂಧನ, ವಾಸ್ತುಪೂಜಾ. ವಾಸ್ತುಪುರುಷ ಪೂಜಾ, ಬಲಿಕಾರ್ಯವನ್ನು ನಡೆಸುತ್ತಾರೆ. ಎರಡನೇ ದಿನ ಮನೆಯೊಳಗೆ ಪ್ರವೇಶಿಸುವಾಗ ಮಸಾಲೆ ಅರೆಯುವ ಕಲ್ಲು, ತೊಟ್ಟಿಲು, ಕುಡುಗೋಲು ಮತ್ತು ಹಳೆಯ ಸಾಂಪ್ರದಾಯಿಕ ಉಪಕರಣಗಳನ್ನು ಮನೆಯ ಒಬ್ಬೊಬ್ಬ ಸದಸ್ಯ ಕೈಯಲ್ಲಿ ಹಿಡಿದು ಒಳಗೆ ಒಯ್ಯುತ್ತಾರೆ. ಆಕಳನ್ನು ಮನೆಯೊಳಗೆ ಕರೆದೊಯ್ಯುತ್ತಾರೆ. ಆಕಳು ಸೆಗಣಿ ಹಾಕಿದರೆ ಅಥವಾ ಮೂತ್ರ ವಿಸರ್ಜಿಸಿದರೆ ಒಳ್ಳೆಯದು ಎನ್ನುವ ನಂಬಿಕೆಯಿದೆ.

ವಾಸ್ತುಕಂಬಕ್ಕೆ ಮತ್ತು ದ್ವಾರಕ್ಕೆ ಪಂಚರತ್ನ ಹಾಕಿ ಪೂಜೆ ಮಾಡುತ್ತಾರೆ. ಮನೆಯ ಅಡಿಪಾಯಕ್ಕೆ ಪಂಚಲೋಹ, ಪಂಚರತ್ನವನ್ನು ಹಾಕುತ್ತಾರೆ. ಪಂಚರತ್ನ ಸಹಿತ ವಾಸ್ತುಕಂಬವು ದೇವರ ಕೋಣೆಯಲ್ಲಿರುತ್ತದೆ. ಇದರ ಗಾತ್ರ ಅಜಮಾಸು 14 ಇಂಚ್ ಉದ್ದ, 2 ಸೆ.ಮಿ. ಅಗಲವಿದ್ದು ಖೈರೆ ಕಟ್ಟಿಗೆಯಿಂದ ಮಾಡಿಸಿ ಇಡುವದು ಪರಂಪರಾಗತವಾಗಿ ಬಂದ ಪದ್ಧತಿಯಾಗಿದೆ. ಮನೆ ಕಟ್ಟಿದ ಗೌಡಿಗೆ ಶಕ್ತ್ಯಾನುಸಾರ ಬಂಗಾರದ ಉಂಗುರ ಅಥವಾ ಇನ್ಯಾವುದಾದರೂ ವಸ್ತುವನ್ನು ಕಾಣಿಕೆಯಾಗಿ ಕೊಡುತ್ತಾರೆ. ಹಾಗೆಯೇ ಒಂದು ಅಥವಾ ಐದು ಬ್ರಾಹ್ಮಣ-ಸುವಾಸಿನಿ ಅಥವಾ ಕುಮಾರಿಕಾ ಪೂಜೆ ಮಾಡಿ ಅವರಿಗೆ ಬಟ್ಟೆ ಮತ್ತಿತರೆ ವಸ್ತುವನ್ನು ದಾನ ಕೊಟ್ಟು ಸಮಾರಾಧನ ಮಾಡುತ್ತಾರೆ.

ವೈಶ್ಯವಾಣಿ

ವಾಣಿ, ವೈಶ್ಯವಾಣಿ ಸಮಾಜದ ಜನರು ಗೃಹಪ್ರವೇಶದ ಮುನ್ನಾದಿನ ಸಂಜೆ ವೇಳೆ ರಾಕ್ಷೋಘ್ನ ಹೋಮ ಮತ್ತು ವಾಸ್ತುಹೋಮ ಮಾಡಿಸುತ್ತಾರೆ. ಎರಡನೇ ದಿನ ಬೆಳಗ್ಗೆ ಗಣಹೋಮ ಅಥವಾ ಸತ್ಯನಾರಾಯಣ ಪೂಜೆ ಇರುತ್ತದೆ. ಮನೆಯನ್ನು ಪ್ರವೇಶಿಸುವಾಗ ಅಕ್ಕಿಯ ತೊಟ್ಟಿಲು, ಆಕಳು ಮತ್ತು ಕರುವನ್ನು ಕರೆದುಕೊಂಡು

ಹೋಗುತ್ತಾರೆ. ಬ್ರಾಹ್ಮಣರು, ಪುರೋಹಿತರು ಮತ್ತು ಎಲ್ಲ ಅತಿಥಿಗಳಿಗೆ ಅನ್ನ ಸಂತರ್ಪಣೆ ಮಾಡಿಸುತ್ತಾರೆ.

ಭಂಡಾರಿ

ಗೃಹಪ್ರವೇಶದ ಮೊದಲ ದಿನ ರಾತ್ರಿ ಮನೆಯನ್ನು ಸ್ವಚ್ಛ ಮಾಡಿ, ಮಾವಿನೆಲೆಯ ತೋರಣ ಹಾಕಿ ಮನೆಯನ್ನು ಅಲಂಕರಿಸುತ್ತಾರೆ. ಮನೆಯಲ್ಲಿ ಯಾವುದೇ ದುಷ್ಟ ಶಕ್ತಿ ಬರಬಾರದೆಂದು ಕುಂಬಳದ ಬಲಿ ಕೊಡುತ್ತಾರೆ.

ಗೃಹಪ್ರವೇಶದ ಬೆಳಗ್ಗೆ ಮನೆಯ ಮುಂದೆ ರಂಗೋಲಿ ಹಾಕಿ ಮನೆಯನ್ನು ಶೃಂಗರಿಸುತ್ತಾರೆ. ವಿಘ್ನ ದೂರವಾಗಲೆಂದು ವಿಘ್ನವಿನಾಶಕ ವಿನಾಯಕನ ಸ್ಮರಣೆಯೊಂದಿಗೆ ಕಲಶ ಸ್ಥಾಪನ ಮಾಡುತ್ತಾರೆ. ಮನೆಯೊಳಗೆ ಒಲೆ ಹಾಕಿ ಹಾಲನ್ನು ಉಕ್ಕಿಸುತ್ತಾರೆ. ಮನೆಯ ಸರ್ವತೋಮುಖ ಅಭಿವೃದ್ಧಿಗೆ ವಾಸ್ತುಶಾಂತಿ, ವಾಸ್ತುಹೋಮವನ್ನು ಯಜಮಾನ ಮತ್ತು ಯಜಮಾನಿ ಜೊತೆಗೆ ಕುಳಿತು ನಡೆಸುತ್ತಾರೆ. ಮನೆಬಳಕೆಗೆ ನಿತ್ಯ ಬೇಕಾಗುವ ವಸ್ತುಗಳನ್ನು ಮನೆಯೊಳಗೆ ತೆಗೆದುಕೊಂಡು ಹೋಗುತ್ತಾರೆ. ನೆಂಟರಿಷ್ಟರಿಗೆ ಉಡುಗೊರೆ ಕೊಡುತ್ತಾರೆ. ಹೆಂಗಸರಿಗೆ ಅರಿಶಿಣ-ಕುಂಕುಮ ಕೊಟ್ಟು ಬಂದವರಿಗೆಲ್ಲ ಊಟದ ವ್ಯವಸ್ಥೆ ಮಾಡುತ್ತಾರೆ.

ಕುಡ್ಮಿ

ಹಿಂದಿನ ಸಂಪ್ರದಾಯ :

ಆಕಳ ಸೆಗಣಿಯಿಂದ ಮನೆಯನ್ನು ಸಾರಿಸಿ ಸ್ವಚ್ಛ ಮಾಡುತ್ತಾರೆ. ದೇವರ ಕೋಣೆಯಿಂದ ತೆಂಗಿನಕಾಯಿಯನ್ನು ತಂದು ಮನೆಯೊಳಗೆ ಹೂವನ್ನು ಹಾಕಿ ಅಲಂಕರಿಸುತ್ತಾರೆ. ಅದರ ನಂತರ ಆಕಳು ಮತ್ತು ಕರುವನ್ನು ಒಯ್ದು ಪೂಜಿಸಿ ಹೊರಗೆ ಬಿಡುತ್ತಿದ್ದರು. ಇತರ ವಸ್ತುಗಳನ್ನು ತರುತ್ತಾರೆ. ಒಲೆಯ ಮೇಲೆ ಹಾಲನ್ನು ಉಕ್ಕಿಸಿ ಬಂಧು ಬಾಂಧವರಿಗೆ ಕೊಡುತ್ತಿದ್ದರು.

ಈಗಿನ ಸಂಪ್ರದಾಯ :

ಕರಾಡ ಬ್ರಾಹ್ಮಣರು ಆಚರಿಸುವ ವಿಧಾನವನ್ನು ಅನುಸರಿಸುತ್ತಾರೆ. ಕುಡ್ಮಿ ಜನಾಂಗದ ಕುಲ ಪುರೋಹಿತರು ಕರಾಡ ಬ್ರಾಹ್ಮಣರ ಕುಲಪುರೋಹಿತರನ್ನು ಕರೆದು ಗೃಹಪ್ರವೇಶ ಮಾಡಿಸುತ್ತಾರೆ. ಹಾಲನ್ನು ಬಿಸಿ ಮಾಡಿದ ಬಳಿಕ ಘೂಲಿ ಸಂಪ್ರದಾಯ ನಡೆಸುತ್ತಾರೆ. ಘೂಲಿ ಎಂದರೆ ಮನೆಯೊಳಗೆ ಹೋಮ ಹಾಕುವ ಸಂಪ್ರದಾಯ. ಬ್ರಾಹ್ಮಣರಿಗೆ ಹೂ-ಹಣ್ಣು ಅರ್ಪಿಸುತ್ತಾರೆ. ಕುಡ್ಮಿ ಜನಾಂಗದವರಲ್ಲಿ ಎಲ್ಲ ಬಗೆಯ ಮನೆಮದ್ದಿನ ಪದಾರ್ಥಗಳನ್ನು ಸುಡುವ ಸಂಪ್ರದಾಯವಿದೆ. ಘೂಲಿ ಸಂಪ್ರದಾಯವನ್ನು ಗೋವಾ ಕುಣಬಿಯರು ಇಂದಿಗೂ ಆಚರಿಸುತ್ತಾರೆ.

ಕೋಮಾರಪಂಥ

ಪುರೋಹಿತರನ್ನು ಕರೆದು ಮನೆಯ ಮುಂದೆ ಹೋಮವನ್ನು ಹಾಕುತ್ತಾರೆ. ಗಣಹೋಮವಾದ ಬಳಿಕ ಶಾಸ್ತ್ರೋಕ್ತ ವಿಧಿವಿಧಾನದಿಂದ ಒಂದು ವಾಸ್ತುಕಂಬವನ್ನು ಇಡುತ್ತಾರೆ. ಹಾಗೆಯೇ ಸತ್ಯನಾರಾಯಣ ಪೂಜೆಯನ್ನು ಮಾಡುವರು. ಮನೆಯಲ್ಲಿ ಧೂಪ-ದೀಪ ಹಚ್ಚಿ ಹಾಲನ್ನು ಉಕ್ಕಿಸುವರು. ಕೆಲವರು ಮನೆಯೊಳಗೆ ಆಕಳನ್ನು ತಂದು ಬಂದವರಿಗೆಲ್ಲ ಪ್ರಸಾದದ ವ್ಯವಸ್ಥೆ ಮಾಡುತ್ತಾರೆ

ಕುಮಾರಿ, ಕುಮಾರ, ಸುವಾಸಿನಿ, ರೌದ್ರ ಎಂದು ಊಟ ಮಾಡಿಸಿ ಉಡಿ ತುಂಬುತ್ತಾರೆ. ಕೋಮಾರಪಂಥ ಪಂಗಡದವರ ಶಾಸ್ತ್ರವಾಗಿದೆ. ಹಿರಿಯರು ಮತ್ತು ಕೆಲವರು ಉಪವಾಸವಿರುತ್ತಾ[illegible]

ಆಚಾರಿ

ಮನೆಯ ವಾಸ್ತು ಪ್ರಕಾರ ಈಶಾನ್ಯ ದಿಕ್ಕಿ[illegible] ಆರಾಧ್ಯದೇವರನ್ನು ಸ್ಥಾಪಿಸುತ್ತಾರೆ. ಯಾವ ಕಾರಣಕ್ಕೂ ದಕ್ಷಿ[illegible]ಕ್ಕೆ ಮುಖ ಮಾಡಿ ಮನೆ ಕಟ್ಟುವದಿಲ್ಲ. ಉಳಿದ ಹಾಲು ಉಕ್ಕಿಸು[illegible] ಮತ್ತು ಪೂಜೆಯನ್ನು ಮಾಡುವ ಮೂಲಕ ಮನೆಯೊಳಗೆ ಪ್ರವೇ[illegible] ಮಾಡುತ್ತಾರೆ.

ಗಾಬಿತ್

ಪಂಚಧಾನ್ಯದ ಜೊತೆಗೆ ಮನೆಯ ಮೂಲೆಗೆ ಕಲ್ಲನ[illegible] ಹಾಕುತ್ತಾರೆ. ಅದರ ಬಳಿಕ ಕಲ್ಲಿನ ಮುಂದೆ ಕುಳಿತು ಪೂ[illegible] ಮಾಡುತ್ತಾರೆ. ಕೆಲವು ಕಡೆ ಉಪಾಹಾರ ಮತ್ತು ಊಟವೂ ಇರುತ್ತ[illegible] ಗೃಹಪ್ರವೇಶದ ಮೊದಲ ದಿನ ರಾತ್ರಿ ಹೋಮ ಹಾಕಿ ಮನೆ[illegible] ಸುತ್ತಲೂ ಕುಂಬಳಕಾಯಿ ಕತ್ತರಿಸಿ ಅದರ ಮೇಲೆ ಅನ್ನವನ[illegible] ಹಾಕಿ ಬಲಿ ನೀಡುತ್ತಾರೆ. ಅದರ ನಂತರ ಕುಂಬಳ ಮತ್ತು ಅನ್ನ[illegible] ಮೇಲೆ ಕುಂಕುಮದ ನೀರನ್ನು ಚಿಮುಕಿಸುತ್ತಾರೆ. ಕಟ್ಟಿಗೆಯ ಚೀ[illegible] ಚೂರುಗಳನ್ನು ಅದರ ಮೇಲೆ ಚುಚ್ಚಿ ಅದಕ್ಕೆ ಬೆಂಕಿ ಹಚ್ಚುತ್ತಾರೆ.

ಎರಡನೇ ದಿನ ಬೆಳಗ್ಗೆ ಗೃಹಪ್ರವೇಶಕ್ಕೆ ಭಟ್ಟರು ಮನೆ[illegible] ಯಜಮಾನನ ಜೊತೆ ಕುಳಿತು ಪೂಜೆ ಮಾಡುತ್ತಾರೆ. ಭಟ್ಟರು ಮನೆ[illegible] ಒಳಗೆ ಪ್ರವೇಶಿಸುವಂತೆ ಸೂಚಿಸಿದಾಗ ಯಜಮಾನ, ಯಜಮಾ[illegible] ಮತ್ತು ಬಾಂಧವರು ಬಾಗಿಲನ್ನು ತೆರೆದು ಒಳಪ್ರವೇಶಿಸುತ್ತಾರೆ. ಊಟದ ಬಳಿಕ ಗೃಹಪ್ರವೇಶ ಮುಗಿಯುತ್ತದೆ.

ಚಾರೋಡಿ ಮೇಸ್ತ

ಮನೆ ಕಟ್ಟುವಾಗ ಮನೆಯ ಹಿರಿಯರು ವಾಸ್ತು ನೋಡುತ್ತಾರೆ. ನಂತರ ಮನೆಗೆ ಪಂಚಾಂಗ(ವಾರ, ತಿಥಿ, ಯೋಗ ಕರಣ, ನಕ್ಷತ್ರ) ಹಾಕುತ್ತಾರೆ. ಪ್ರಧಾನ ಬಾಗಿಲನ್ನು ಇಡುವಾಗ ಬಾಗಿ[illegible] ಪೂಜೆ ಮಾಡುತ್ತಾರೆ.

ಗೃಹ ಪ್ರವೇಶದ ಮುನ್ನಾದಿನ ರಾತ್ರಿ ಬ್ರಾಹ್ಮಣರು ಪ್ರಧಾನದ್ವಾರದ ಎದುರು ಮನೆಯ ಯಜಮಾನ ಮತ್ತು ಯಜಮಾನಿಯನ್ನು ಕುಳ್ಳಿಸಿ ರಾಕ್ಷೋಘ್ನ ಹೋಮ, ವಾಸ್ತುಹೋಮ ಉಚ್ಚಾಟನೆ ಹೋಮ ಮಾಡಿಸುತ್ತಾರೆ. ಮನೆ ಕಟ್ಟಿದ ಮೇಸ್ತ್ರಿಗೆ ಉಡುಗಿರೆ ಕೊಟ್ಟ ನಂತರವೇ ಮೇಸ್ತ್ರಿ ಮನೆಯನ್ನು ಯಜಮಾನನಿಗೆ ಹಸ್ತಾಂತರಿಸುತ್ತಾನೆ.

ಮನೆಗೆ ಮಾವಿನ ತೋರಣ ಹಾಕುತ್ತಾರೆ. ಒಣಗಿದ ದರ್ಭೆಯೊಂದಿಗೆ ಅರಿಶಿಣ ಹಚ್ಚಿದ ದಾರವನ್ನು ಮನೆಯ ಸುತ್ತ ಕಟ್ಟುತ್ತಾರೆ. ಶೇಡಿ ಅಥವಾ ಅರಿಶಿಣವನ್ನು ಕೈಗೆ ಹಚ್ಚಿಕೊಂಡು ಯಜಮಾನ ಮನೆಯ ಮೇಲೆ ಗೋಡೆಗೆ ಐದು ಬೆರಳುಗಳು ಕಾಣುವ ಮುದ್ರೆಯಂತೆ ಅಚ್ಚು ಹಾಕುತ್ತಾನೆ. ಮನೆಯ ಸುತ್ತ ಬಾಳೆಎಲೆಯ ಮೇಲೆ ಕೆಂಪು ಹೂ, ಕುಂಕುಮದ ನೀರು ಹಾಕಿ ಅದರ ಮೇಲೆ ದೊಂದಿಯನ್ನು ಬೆಳಗುತ್ತಾರೆ. ತೆಂಗಿನ ಕಾಯಿ ಒಡೆದು ಬಲಿ ಕೊಡುವ ಜಾಗದಲ್ಲಿ ಇಡುತ್ತಾರೆ. ಮನೆಯ ಸುತ್ತ ಪ್ರದಕ್ಷಿಣೆ ಹಾಕಿ ಬಲಿಯ ಸಾಮಗ್ರಿಗಳೊಂದಿಗೆ ಬೆತ್ತದ ಬುಟ್ಟಿಯಲ್ಲಿ ಒಂದು ಕೋಳಿಯನ್ನು ದೊಂದಿಯ ಸಹಿತ ನದಿತಟಕ್ಕೆ ಕೊಂಡೊಯ್ದು ಕೋಳಿಬಲಿ ಕೊಡುತ್ತಾರೆ. ನಂತರ ಸ್ನಾನ ಮಾಡಿ ಹೊಸ ಬಟ್ಟೆಯನ್ನು ಧರಿಸುತ್ತಾರೆ. ಮನೆಯಲ್ಲಿ ಬಲಿಶಾಸ್ತ್ರ ಮಾಡಿದ ಜಾಗವನ್ನು

ಸ್ವಗೊಳಿಸಿ ರಾತ್ರಿ ಊಟ ಮಾಡುತ್ತಾರೆ. ಕೆಲವರು ಬಲಿ ನೀಡಿದ ಕೋಳಿಯನ್ನು ಅಡುಗೆಗೆ ಬಳಸಿ ಉಣ್ಣುತ್ತಾರೆ.

ಎರಡನೇ ದಿನ ಬೆಳಿಗ್ಗೆ ಯಜಮಾನ ಮತ್ತು ಯಜಮಾನಿಯರನ್ನು ಮನೆಯ ಮುಂದೆ ಕುಳ್ಳಿಸಿ ಆಕಳು ಮತ್ತು ಕರುವನ್ನು ಅಲಂಕರಿಸಿ ಪ್ರಧಾನ ಬಾಗಿಲಿನಿಂದ ಮನೆಯೊಳಗೆ ಪ್ರವೇಶ ಮಾಡಿಸುತ್ತಾರೆ. ಆಕಳು ಸೆಗಣಿ ಹಾಕುವದು ಶುಭಲಕ್ಷಣವೆಂದು ಇವರು ನಂಬುತ್ತಾರೆ. ಮನೆಯೊಳಗೆ ಪ್ರವೇಶಿಸುವಾಗ ಮನೆಯ ಸದಸ್ಯರು ಕುಲದೇವತೆ ಮತ್ತು ಗಣಪತಿಯನ್ನು ಒಯ್ದು ಒಳಗಿಡುತ್ತಾರೆ. ಅಲಂಕಾರ ಮಾಡಿದ ತೊಟ್ಟಿಲು, ಅಕ್ಕಿ, ಹಾಲು, ಮಡಿಕೆ, ಕೊಡ, ಹಣದ ಡಬ್ಬ ಮತ್ತು ಮನೆಬಳಕೆಯ ವಸ್ತುಗಳನ್ನು ಕೊಂಡೊಯ್ಯುತ್ತಾರೆ. ಹೊಸ ಪಾತ್ರೆಯಲ್ಲಿ ಹಾಲನ್ನು ಉಕ್ಕಿಸುತ್ತಾರೆ. ಸಿಹಿ ಹಂಚಿ ಸಂಭ್ರಮಿಸುತ್ತಾರೆ. ಕೆಲವರು ಸತ್ಯನಾರಾಯಣ ಪೂಜೆ, ಗಣಹೋಮ, ದೇವತಾಕಾರ್ಯ ಮತ್ತು ಸಂತರ್ಪಣೆಯನ್ನು ಮಾಡಿಸುತ್ತಾರೆ. ಬಂಧುಗಳು ಮನೆಯ ಯಜಮಾನನಿಗೆ ಉಡುಗೊರೆಯನ್ನು ಕೊಡುತ್ತಾರೆ. ಅನುಕೂಲಸ್ಥರು ಅಂದು ರಾತ್ರಿ ಮನೆಯ ಅಂಗಳದಲ್ಲಿ ಯಕ್ಷಗಾನ ಪ್ರದರ್ಶನವನ್ನೂ ಏರ್ಪಾಟು ಮಾಡುತ್ತಾರೆ.

ಗೋಮಾಂತಕ ಬಾಂದಿ

ಬಾಂದಿ, ಗುರವ, ದೇವಳಿ ಮತ್ತು ಕಲಾವಂತ ಸಮಾಜದ ಗೃಹಪ್ರವೇಶದ ರೀತಿ-ನೀತಿ ಈ ರೀತಿಯಾಗಿದೆ. ಮನೆ ಕಟ್ಟುವ ಮುನ್ನ ಭಟ್ಟರು ಬಂದು ಸ್ಥಳಶುದ್ಧಿ ಮಾಡಿಸಿ ಪೂಜೆ ಮುಗಿಸುತ್ತಾರೆ. ತಳಪಾಯ ಹಾಕುವಾಗ ವಾಸ್ತುಪುರುಷನ ಪೂಜೆ ಮಾಡಿ 'ವಾಸುಧಾನ' ಎನ್ನುವ ಪಂಚಧಾತುಗಳನ್ನು ಅಡಿಯಲ್ಲಿ ಹಾಕುತ್ತಾರೆ. ಮನೆಯ ಈಶಾನ್ಯ ಮೂಲೆಯಲ್ಲಿ ದೇವರ ಕೋಣೆಯನ್ನು ನಿರ್ಮಿಸಿ ಅಲ್ಲಿ ಕಟ್ಟಿಗೆಯ ವಾಸ್ತುಕಂಬವನ್ನು ಇಡುತ್ತಾರೆ. ಇದಕ್ಕೆ 'ಘರಾಂಬೊ' ಎಂದು ಕೊಂಕಣಿಯಲ್ಲಿ ಹೆಸರಿದೆ.

ಮನೆಯನ್ನು ಪ್ರವೇಶಿಸುವ ಮೊದಲ ದಿನ ಭಟ್ಟರಿಂದ ಶುದ್ಧಹೋಮ ಮಾಡಿಸುತ್ತಾರೆ. ರಾತ್ರಿಯೇ ಮನೆಯಲ್ಲಿ ಆಕಳನ್ನು ಕಟ್ಟಿಡುತ್ತಾರೆ. ಎರಡನೇ ದಿನ ವಾಸ್ತುಶಾಂತಿ ಮುಗಿಸಿ ಹೊಸಮನೆಯ ಒಲೆಯಲ್ಲಿ ಸಿಹಿಪದಾರ್ಥವನ್ನು ಅಡುಗೆಯಾಗಿ ತಯಾರಿಸುತ್ತಾರೆ. ಮನೆಯೊಳಗೆ ಗೆರಸಿ, ಬುಟ್ಟಿ, ಚೂಳಿ, ಉಪ್ಪು, ಮೆಣಸು, ಹುಳಿ ಮತ್ತಿತರೆ ಅಗತ್ಯ ವಸ್ತುಗಳನ್ನು ಕೊಂಡು ತಂದು ಇಡುತ್ತಾರೆ.

ಬಾವಿ, ಕೊಟ್ಟಿಗೆ, ತುಳಸಿಯನ್ನು ಭಟ್ಟರಿಂದ ಶುದ್ಧಿ ಮಾಡಿಸುತ್ತಾರೆ. ಆ ದಿನ ಮನೆ ಕಟ್ಟಿದ ಗೌಂಡಿ, ಸುತಾರ ಇವರಿಗೆ ಕಾಣಿಕೆ ಕಟ್ಟು ಗೌರವಿಸುತ್ತಾರೆ.

ಕೊಂಕಣ ಮರಾಠಾ

ಉತ್ತರಕನ್ನಡದ ಹಣಕೋಣ ಊರಿನಲ್ಲಿರುವ ಸಾತೇರಿಯನ್ನು ಕುಲದೇವಿಯೆಂದು ಪೂಜಿಸುವವರಲ್ಲಿ ಕೊಂಕಣ ಮರಾಠಾ ಪಂಗಡದವರೂ ಇದ್ದಾರೆ. ಇವರು ಕೋಮಾರಪಂಥ ಜನರು ಆಚರಿಸುವಂತೆ ಮೊದಲ ದಿನ ರಾಕ್ಷೋಘ್ನ ಹೋಮ ಮತ್ತು ಬಲಿ ನೀಡುವ ಪದ್ಧತಿಯನ್ನು ಇಟ್ಟುಕೊಂಡಿರುತ್ತಾರೆ. ಗೃಹಪ್ರವೇಶದ ದಿನ ಆಕಳನ್ನು ಮನೆಯೊಳಗೆ ತರುತ್ತಾರೆ. ನಂತರ ಸತ್ಯನಾರಾಯಣ ಕಥೆ, ಪೂಜೆ ಮಾಡಿ ಎಲ್ಲರಿಗೂ ಪ್ರಸಾದವಾಗಿ ಭೋಜನವನ್ನು ಮಾಡಿಸುತ್ತಾರೆ.

ಸಿದ್ಧಿ

ಕೊಂಕಣಿ ಭಾಷಿಕ ಸಿದ್ಧಿ ಜನಾಂಗವು ಪರಿಶಿಷ್ಟ ಪಂಗಡದ ಸ್ಥಾನವನ್ನು ಪಡೆದಿದೆ. ಇವರು ಹೈವಿಕ ಬ್ರಾಹ್ಮಣರ ತೋಟ ಮತ್ತು ಗದ್ದೆಗಳಲ್ಲಿ ಕೆಲಸ ಮಾಡಿಕೊಂಡು ಇದ್ದಿದ್ದರಿಂದ ಇವರ ಗೃಹಪ್ರವೇಶದ ಪದ್ಧತಿಯು ಹೈವಿಕರ ಆಚರಣೆಯನ್ನೇ ಹೋಲುತ್ತದೆ. ಹಿಂದೂ, ಮುಸ್ಲಿಂ ಮತ್ತು ಕ್ರಿಶ್ಚಿಯನ್ ಧರ್ಮದ ಪಾಲನೆ ಮಾಡುವ ಸಿದ್ಧಿಗಳು ತಾವು ಕೆಲಸ ಮಾಡುವ ಒಡೆಯನ ಧರ್ಮಕ್ಕೆ ಸಂಬಂಧಿಸಿದ ಆಚಾರ-ವಿಚಾರ, ಸಂಪ್ರದಾಯಗಳನ್ನೇ ಆಚರಿಸುವದನ್ನೇ ರೂಢಿಸಿಕೊಂಡಿದ್ದಾರೆ.

ಕಾರವಾರ ಮತ್ತು ಅಂಕೋಲಾದ ಹೈವಿಕರು ಹಿಂದೂ ಸಿದ್ಧಿಗಳನ್ನು ಘಟ್ಟದ ಮೇಲಿನ ಯಲ್ಲಾಪುರ, ಹಳಿಯಾಳ, ದಾಂಡೇಲಿ, ಕಲಘಟಗಿಯಂಥ ಪ್ರದೇಶಗಳಿಗೆ ಕೃಷಿ ಕೆಲಸಕ್ಕೆ ಕರೆದುಕೊಂಡು ಹೋದದ್ದರಿಂದ ಅವರು ಹೈವಿಕ ಪದ್ಧತಿಯನ್ನೇ ಮುಂದುವರಿಸಿಕೊಂಡು ಹೋದರು. ಅಂಥ ಹಿಂದೂ ಸಿದ್ಧಿಗಳ ಮನೆಗೆ ಹೈವಿಕ ಭಟ್ಟರು ಹೋಗಿ ಗೃಹಪ್ರವೇಶದ ಶಾಸ್ತ್ರ ಮಾಡಿಸುತ್ತಾರೆ. ಮೊದಲ ದಿನ ರಾಕ್ಷೋಘ್ನ ಹೋಮ, ವಾಸ್ತುಹೋಮ, ಬಲಿ ಇರುತ್ತದೆ. ಗೃಹಪ್ರವೇಶದ ದಿನ ಬೆಳಿಗ್ಗೆ ಆಕಳನ್ನು ಮನೆಯೊಳಗೆ ತಂದು ಹಾಲನ್ನು ಉಕ್ಕಿಸುತ್ತಾರೆ. ಸತ್ಯನಾರಾಯಣ ಪೂಜೆ ಮಾಡಿಸಿ ಎಲ್ಲರಿಗೂ ಪ್ರಸಾದವನ್ನು ವಿತರಿಸುತ್ತಾರೆ.

ಮುಸ್ಲಿಂ ಸಿದ್ಧಿಗಳು ಆ ಪರಿಸರದಲ್ಲಿರುವ ಮಸೀದೆಯ ಖಾಜಿಯನ್ನು ಮತ್ತು ಸಮಾಜದ ಹಿರಿಯರನ್ನು ಮನೆಗೆ ಕರೆದು ನಮಾಜ್ ಮಾಡಿ ಪ್ರಾರ್ಥಿಸುತ್ತಾರೆ. ಹಾಗೆಯೇ ಕ್ರಿಶ್ಚಿಯನ್ ಸಿದ್ಧಿಗಳು ಆ ವಠಾರದ ಫಾದರರನ್ನು ಕರೆಯಿಸಿ ಅವರ ಕೈಯಿಂದ ಪವಿತ್ರ ಜಲ ಪಡೆದು ಪ್ರಾರ್ಥನೆ ಮಾಡುತ್ತಾರೆ.

ಮಹಾರ್

ಕೊಂಕಣಿ ಭಾಷಿಕ ದಲಿತರೆಂದು ಇವರನ್ನು ಕರೆಯುತ್ತಾರೆ. ಪರಿಶಿಷ್ಟ ಜಾತಿಯ ಸ್ಥಾನಮಾನವಿರುವ ಹುಲಸ್ವಾರ, ಜೋಗಳೇಕರ, ರೇವಣಕರ, ಪಾಲೇಕರ, ಪಾವುಸ್ಕರ, ಚಮಗಾರ ಇತ್ಯಾದಿ ಜನರು ಅಂಬೇಡ್ಕರಾಯ್ತ ಎಂದು ಗುರುತಿಸಲ್ಪಡುತ್ತಾರೆ. ಇವರಿಗೆ ನಿರ್ದಿಷ್ಟಪಡಿಸಿದ ಪದ್ಧತಿಯಿಲ್ಲ. ಕನ್ನಡ ಭಾಷಿಕ, ಹೈವಿಕ ಭಟ್ಟರು ಅವರ ಮನೆಗೆ ಹೋಗಿ ಗೃಹಪ್ರವೇಶದ ವಿಧಾನವನ್ನು ನಡೆಸಿಕೊಡುತ್ತಾರೆ. ಕೊಂಕಣಿ ಭಟ್ಟರು ಶುದ್ಧಾಚಾರ ಮುಂತಾದ ವಿಷಯಗಳ ಬಗ್ಗೆ ಆಲೋಚಿಸುವದರಿಂದ ಮಹಾರ್ ಸಮಾಜದವರ ಮನೆಗೆ ಹೋಗಿ ಪೂಜೆ ಮಾಡುವದು ಕಡಿಮೆ. ಹೈವಿಕ ಭಟ್ಟರು ಮೊದಲ ದಿನ ರಾತ್ರಿ ರಾಕ್ಷೋಘ್ನ, ವಾಸ್ತು ಹೋಮ, ಅಷ್ಟ ದಿಕ್ಕು ನೋಡಿ ಕುಂಬಳ ಬಲಿ ಕೊಡುವ ಕಾರ್ಯವನ್ನು ನಡೆಸುತ್ತಾರೆ.

ಗೃಹಪ್ರವೇಶದ ದಿನ ಬೆಳಿಗ್ಗೆ ಮನೆಯೊಳಗೆ ಆಕಳನ್ನು ಪ್ರವೇಶ ಮಾಡಿಸಿ ಹಾಲನ್ನು ಉಕ್ಕಿಸುತ್ತಾರೆ. ಕೈಗೆ ಅರಿಶಿಣ ಅಥವಾ ಕುಂಕುಮವನ್ನು ಹಚ್ಚಿಕೊಂಡು ಗೋಡೆಯ ಮೇಲೆ ಕೈಮುದ್ರೆಯನ್ನು ಚಿಹ್ನಿಸುತ್ತಾರೆ. ಮನೆಯೆದುರು ರಂಗೋಲಿಯನ್ನು ಚಿತ್ರಿಸಿ ಹೂವಿನಿಂದ ಅಲಂಕಾರ ಮಾಡಿ ಸತ್ಯನಾರಾಯಣ ವ್ರತ ಅಥವಾ ಗಣಹೋಮವನ್ನು ಹಾಕಿಸುತ್ತಾರೆ. ಯಜಮಾನನಿಗೆ ಗ್ರಹಚಾರ ದೋಷಗಳೇನಾದರೂ ಇದ್ದಲ್ಲಿ ಶಾಂತಿಹೋಮ ಮಾಡಿಸುತ್ತಾರೆ. ಆಪ್ತೇಷ್ಟರಿಗೆ ಊಟವನ್ನು ಹಾಕಿಸುತ್ತಾರೆ. ಗೃಹಪ್ರವೇಶ ಮಾಡಿದ

ಭಟ್ಟರಿಗೆ ದಕ್ಷಿಣೆಯನ್ನು ನೀಡುತ್ತಾರೆ.

ಕ್ಯಾಥೊಲಿಕ್

ಹೊಸ ಮನೆಯಲ್ಲಿ ಸಂತೋಷ, ಸಂಭ್ರಮದಿಂದ ಇರಲು ಕ್ಯಾಥೊಲಿಕ್ ಸಮುದಾಯದವರು ತಮ್ಮ ನೆರೆಹೊರೆಯವರನ್ನು, ಬಂಧುಗಳನ್ನು ಕಾರ್ಯಕ್ರಮಕ್ಕೆ ಆಹ್ವಾನಿಸುತ್ತಾರೆ. ಮನೆಯ ಜನಕ್ಕೆ ಆಶೀರ್ವಾದ ಸಿಗಬೇಕೆಂದು ಚರ್ಚಿನ ಫ್ರೀಸ್ಟರನ್ನು ಕರೆಯುತ್ತಾರೆ. ಫ್ರೀಸ್ಟರವರು ಆಶೀರ್ವದಿಸಲು ಮಹಾದ್ವಾರದ ಬಳಿ ನಿಲ್ಲುತ್ತಾರೆ. ಮನೆಯ ಎಲ್ಲ ಬಾಗಿಲುಗಳನ್ನು ಮುಚ್ಚಲಾಗುತ್ತದೆ. ಮನೆಯ ಹಿರಿಯರು ರಿಬ್ಬನ್ ಕತ್ತರಿಸಿದ ಬಳಿಕ ಎಲ್ಲರೂ ಮನೆಯ ಒಳಗೆ ಪ್ರವೇಶಿಸುತ್ತಾರೆ. ಫಾದರ್‌ರವರು ಒಳಗೆ ಹೋಗಿ ಪ್ರೇಯರ್ ಮಾಡಿ ಎಲ್ಲ ಕೋಣೆಗಳಲ್ಲಿ ಹೋಲಿ ವಾಟರ್ ಹಾಕುವ ಮೂಲಕ ಆಶೀರ್ವದಿಸುತ್ತಾರೆ.

ಮೊದಲ ಸಲ ಒಳಗೆ ಹೋಗುವಾಗ ಅಕ್ಕಿ, ಹಣ್ಣು, ತೆಂಗಿನಕಾಯಿ ಒಯ್ಯುತ್ತಾರೆ. ಸಾಂಪ್ರದಾಯಿಕ್ ಮತ್ತು ಹಳೆಯ ವಸ್ತುಗಳನ್ನು ಮನೆಯ ಒಳಗೆ ಕೊಂಡೊಯ್ಯುತ್ತಾರೆ. ಬಳಿಕ ಹಾಲನ್ನು ಉಕ್ಕಿಸುತ್ತಾರೆ. ಬಂದವರೆಲ್ಲರೂ ಮನೆಯ ಸದಸ್ಯರಿಗೆ ಶುಭಾಶಯ ಕೋರುತ್ತಾರೆ. ಬಂದವರೆಲ್ಲರಿಗೂ ಊಟದ ವ್ಯವಸ್ಥೆ ಮಾಡಿ ಸಂತೋಷವನ್ನು ಹಂಚಿಕೊಳ್ಳುತ್ತಾರೆ. ಊಟವು ಶಾಕಾಹಾರಿ, ಮಾಂಸಾಹಾರಿ ಎರಡೂ ಪ್ರಕಾರದಲ್ಲಿರುತ್ತದೆ. ಮಾಂಸಾಹಾರದಲ್ಲಿ ಚಿಕನ್, ಮಟಣ್, ಮೀನು ಮತ್ತು ಪೋರ್ಕ್‌ನ್ನು ಬಳಸುತ್ತಾರೆ.

ಮನೆ ಕಟ್ಟಿದ ಕೆಲಸ ಮಾಡಿದ ಗೌಡಿ, ಆಚಾರಿಯವರಿಗೆ ಉಡುಗೊರೆ ಕೊಡುತ್ತಾರೆ. ಕೊಂಕಣೇತರ ಕ್ಯಾಥೊಲಿಕ್‌ರು ಕ್ರೀಡೆ, ಬಾಯ್ಲಾ ನಾಚ್ ಮುಂತಾದ ಸಾಂಸ್ಕೃತಿಕ್ ಕಾರ್ಯಕ್ರಮವನ್ನು ಆಯೋಜಿಸುತ್ತಾರೆ.

ದಾಲ್ದಿ

ಗೃಹಪ್ರವೇಶಕ್ಕೆ ಇವರು 'ಘರಗ್ನಿ' ಎನ್ನುತ್ತಾರೆ. ಇದರ ಅರ್ಥ: ಮನೆಯೊಳಗೆ ಹೋಗುವದು. ಊರಿಗೊಂದು ಜಾಮಿಯಾ ಮಸೀದಿ ಇರುತ್ತದೆ. ಆ ಮಸೀದಿಗೆ ಒಬ್ಬ ಖಾಜಿ ಇರುತ್ತಾರೆ. ಗೃಹಪ್ರವೇಶಕ್ಕೆ 'ಖಾಜಿ'ಯವರನ್ನು ಕರೆಯುತ್ತಾರೆ. ಅವರು ಬಂದ ಬಳಿಕ ಎಲ್ಲರೂ ಸೇರಿ 'ದುವಾ'(ಪ್ರಾರ್ಥನೆ) ಮಾಡುತ್ತಾರೆ. ಇದೆಲ್ಲವೂ 15 ನಿಮಿಷದಲ್ಲಿ ಮುಗಿಯುತ್ತದೆ. ಆ ದಿನ ಬೆಳಗ್ಗೆ ನಾಷ್ಟಾ, ಮಧ್ಯಾಹ್ನ ಊಟ(ಮೀನು; ಚಿಕನ್, ಮಟಣ್, ಬೀಫ್) ಇರುತ್ತದೆ. ದಾಲ್ದಿಗಳು ಮೊದಲು ಗೃಹಪ್ರವೇಶವನ್ನು ರಾತ್ರಿ ಮಾಡುತ್ತಿದ್ದರು. ಈಗ ದಿನದ ವೇಳೆಯಲ್ಲಿ ನಡೆಯುತ್ತದೆ. ಅನುಕೂಲವಿದ್ದವರು ಮನೆಯಲ್ಲಿ ರಾತ್ರಿ ಸಾಂಸ್ಕೃತಿಕ ಕಾರ್ಯಕ್ರಮವನ್ನು ಆಯೋಜಿಸುತ್ತಾರೆ. ಎಲ್ಲರೂ ನೆಲದ ಮೇಲೆ ಕುಳಿತು ನಾಕುದಾ ದಫ್ ಬಾರಿಸುತ್ತಾರೆ. ದಫ್ ಹಾಡುಗಳನ್ನು ಹಾಡುತ್ತಾರೆ. ನವಾಯ್ತಿ ಮತ್ತು ಜಮಾಯ್ತಿ ಸಮುದಾಯದವರ ಗೃಹಪ್ರವೇಶದ ರೀತಿ-ನೀತಿ ಇದೇ ತೆರನಾಗಿರುತ್ತದೆ. ಆದರೆ ರಾತ್ರಿ ಸಾಂಸ್ಕೃತಿಕ ಕಾರ್ಯಕ್ರಮಗಳು ಇರುವದಿಲ್ಲ.

ಜಮಾಯತಿ

ಮನೆಯ ಹೆಂಗಸರು(ಅಮ್ಮ, ಅಜ್ಜಿ) ಅವಶ್ಯವಿರುವ ವಸ್ತುಗಳನ್ನು ಮನೆಯ ಒಳಗೆ ಕೊಂಡೊಯ್ಯುತ್ತಾರೆ. ಒಬ್ಬರು ಮಹಿಳೆ ಟೋರ್ಚ ಅಥವಾ ಮಶಾಲ್, ಇನ್ನೋರ್ವ ಮಹಿಳೆ ಪವಿತ್ರ ಕುರಾನ್ ತೆಗೆದುಕೊಂಡು ಮನೆಯೊಳಗೆ ಪ್ರವೇ[illegible] ಸಾಂಕೇತಿಕವಾಗಿ ಕತ್ತಲೆಯನ್ನು ದೂರ ಮಾಡುತ್ತಾರೆ. ಮನೆ[illegible] ಒಳಗಿನಿಂದ ಆಝಾನ್(ಪ್ರಾರ್ಥನೆ) ಗೆ ಸೂಚಿಸಲಾಗುತ್ತದೆ. ಎಲ್ಲ[illegible] ಸೇರಿ ಪ್ರಾರ್ಥನೆ ಮಾಡಿದ ಬಳಿಕ ಹೊಸಮನೆಯಲ್ಲಿ ಹಾಲನ್ನು [illegible] ಮಾಡುತ್ತಾರೆ. ಕೆಲವು ಸಂದರ್ಭಗಳಲ್ಲಿ 'ದಾವಾತ್'(ಬಿರಿಯಾ[illegible] ಊಟ) ಅಥವಾ ಪಲಾವ್ ಊಟ ಮಾಡುತ್ತಾರೆ. ಕೆಲವರು [illegible] ಮತ್ತು ಉಪಹಾರವನ್ನು ಮಾಡಿಸುತ್ತಾರೆ.

ಕೊಂಕಣೇತರ ಮಾತೃಭಾಷಿಕ ಕೊಂಕಣಿ ಭಾಷಿಕರು

ಕಾರವಾರ ಮತ್ತು ಉತ್ತರಕನ್ನಡ ಜಿಲ್ಲೆಯ ಆಸುಪಾ[illegible] ಊರಿನಲ್ಲಿರುವ ಕೊಂಕಣೇತರ ಮಾತೃಭಾಷಿಕರು ಕೊಂಕಣಿಯನ[illegible] ಮಾತನಾಡುತ್ತಾರೆ. ಇದಕ್ಕೆ ಕಾರಣವೆಂದರೆ ಅವರು ವಾಸ್ತವ್ಯ ಮಾಡು[illegible] ಪ್ರದೇಶದಲ್ಲಿರುವ ಕೊಂಕಣಿ ಮಾತೃಭಾಷಿಕರ ಪ್ರಭಾವ. ಗಂಗೆಪು[illegible] ಅಂಬಿಗ, ನಾಯ್ಕ, ಪಟಗಾರ, ಗುನಗಾ, ಪೂಜಾರ ಇತ್ಯಾ[illegible] ಅಡ್ಡಹೆಸರಿರುವ ಕೊಂಕಣೇತರರು ಊರಿನ ಪುರೋಹಿತರನ[illegible] ಕರೆದು ವೈದಿಕ ಪದ್ಧತಿಯ ಪ್ರಕಾರ ಮೊದಲ ದಿನದ ರಾತ್ರಿ ಹೋವ[illegible] ವಾಸ್ತುಪೂಜೆ ಮಾಡಿ ಕುಂಬಳಕಾಯಿಯ ಬಲಿಯನ್ನು ಕೊಡುತ್ತಾ[illegible] ಗೃಹಪ್ರವೇಶದ ದಿನ ಸತ್ಯನಾರಾಯಣ ಅಥವಾ ದೇವಿಯ ವಿಶೇ[illegible] ಪೂಜೆ ಮಾಡಿಸಿ ಅನ್ನಸಂತರ್ಪಣೆಯನ್ನು ನೆರವೇರಿಸುತ್ತಾರೆ. ಮ[illegible] ಕಟ್ಟಿದ ಆಚಾರಿ ಮತ್ತು ಮೇಸ್ತ್ರಿಗೆ ಯೋಗ್ಯತಾನುಸಾರ ದಾನ ಅಥವ[illegible] ಉಡುಗೊರೆಯನ್ನು ಕೊಟ್ಟು ಗೌರವಿಸುತ್ತಾರೆ.

◆◆◆◆

# 31. ಪರಮವೀರ ಚಕ್ರ ಪ್ರಾಪ್ತಿಯ ಕಾರವಾರದ ಮೇಜರ ರಾಮಾ ರಾಘೋಬಾ ರಾಣೆ

■ ಡಾ. ವಸಂತ ಬಾಂದೇಕರ-ಕಾರವಾರ

ಭಾರತೀಯ ರಕ್ಷಣಾ ಖಾತೆಯಲ್ಲಿ ನೀಡುವ ಅತ್ಯುತ್ತಮ ಪ್ರಶಸ್ತಿಯೇ ಪರಮವೀರ ಚಕ್ರ. ಅದು ಇವರೆಗೆ 21 ಜನರಿಗೆ ಪ್ರಾಪ್ತವಾಗಿದೆ. ಮೂರನೇಯ ಪರಮವೀರ ಚಕ್ರ ಲಭಿಸಿದ್ದು ಕಾರವಾರದ ಶ್ರೀ ರಾಮಾ ರಾಘೋಬಾ ರಾಣೆಯವರಿಗೆ ಎಂದು ಹೇಳಲು ಹೆಮ್ಮೆ ಅನಿಸುತ್ತದೆ.

ಮೇಜರ ರಾಮಾ ರಾಘೋಬಾ ರಾಣೆ ಯವರು ದಿನಾಂಕ 26-6-1918ರಲ್ಲಿ ಕೊಂಕಣ ಮರಾಠಾ ಸಮುದಾಯದ ಕುಟುಂಬದಲ್ಲಿ ಉ.ಕ. ಜಿಲ್ಲೆ ಕಾರವಾರ ತಾಲೂಕಿನ ಚೆಂಡಿಯಾ ಗ್ರಾಮದಲ್ಲಿ ಜನಿಸಿದರು. ಇವರು ಪ್ರಾಥಮಿಕ, ಮಾಧ್ಯಮಿಕ, ಕಾಲೇಜು ಶಿಕ್ಷಣದ ನಂತರ 1940ರಲ್ಲಿ ತಮ್ಮ 22ನೇ ವಯಸ್ಸಿನಲ್ಲಿ ಬ್ರಿಟೀಷ್ ಇಂಡಿಯನ್ ಆರ್ಮಿಯಲ್ಲಿ ಜವಾನ(ಸೋಲ್ಜರ್)ರಾಗಿ ಸೇರ್ಪಡೆಯಾದರು.

ಇವರು ಪೂನಾದ ಮಿಲಿಟರಿ ಶಾಲೆಯಲ್ಲಿ ತರಬೇತಿ ಪಡೆದರು. ಅತೀ ಮುತ್ಸದ್ದಿಯಾದ ಇವರು ಕಠಿಣ ಸವಾಲುಗಳನ್ನು ಸ್ವೀಕರಿಸಿ ಅದರಲ್ಲಿ ಯಶಸ್ವಿಯಾಗುತ್ತಿದ್ದರು. ಎರಡನೇ ಮಹಾಯುದ್ಧದ ಅನುಭವದ ನಂತರ ಭಾರತಕ್ಕೆ ಸ್ವಾತಂತ್ರ ದೊರೆತ ನಂತರ ಭಾರತ-ಪಾಕಿಸ್ತಾನದ ಯುದ್ಧ ಪ್ರಾರಂಭವಾದಾಗ 8-4-1948 ರಂದು ಭಾರತದ ಸೈನ್ಯವು ಶ್ರೀನಗರ ಮೂಲಕ ಸಾಗುತ್ತಿರುವಾಗ ಪಾಕಿಸ್ತಾನದ ಸೈನಿಕರು ಆಕ್ರಮಿಸಿದ ಸ್ಥಳದಲ್ಲಿ ಸ್ಫೋಟಕ ವಸ್ತುಗಳನ್ನು ರಸ್ತೆಯಲ್ಲಿ ಹರಡಿ ಇಟ್ಟಿದ್ದರು. ಆ ಸ್ಥಳದಲ್ಲಿ ಯಾವುದೇ ವಾಹನ ಟ್ಯಾಂಕರ ಬಂದರೆ ಅದು ಸ್ಫೋಟಗೊಳ್ಳುತ್ತಿತ್ತು. ಜೊತೆಗೆ ಸಾವಿರಾರು ಪಾಕಿಸ್ತಾನಿ ಸೈನಿಕರು ತಮ್ಮ ಭಾಗದಲ್ಲಿ ನಿಂತು ಆ ದಾರಿಯಿಂದ ಭಾರತೀಯ ಸೈನ್ಯ ಮುಂದೆ ಬಂದರೆ ಗುಂಡು ಹಾರಿಸಲು ಸಜ್ಜಾಗಿದ್ದರು. ಹೀಗಾಗಿ ಎಲ್ಲರೂ ಸಮಸ್ಯೆಯಲ್ಲಿದ್ದಾಗ ಶ್ರೀ ರಾಮಾ ರಾಘೋಬಾ ರಾಣೆಯವರು ತಮ್ಮ ಚಾಣಕ್ಯ ನೀತಿಯಿಂದ ಟ್ಯಾಂಕರ ಬುಡದಲ್ಲಿ ಮಂಡೆಯೂರಿ ಮಣಕಾಲಿನಿಂದ ತೇವಳುತ್ತ ಒಂದೊಂದೇ ನೆಲದಲ್ಲಿ ಹರಡಿದ ಸ್ಪೋಟಕ ವಸ್ತುಗಳನ್ನು ಡಿ-ಫ್ಯೂಸ ಮಾಡುತ್ತ ಮುಂದೆ ಸಾಗಿದ್ದರು. ಪಾಕಿಸ್ತಾನಿಗಳ ಗುಂಡಿಗೆ ಅಂಜದೆ ಸತತ 3 ದಿನ 72 ಘಂಟೆ ಸಾಗಿದ್ದರು. ಇವರ ಹಿಂದೆ ಭಾರತದ ಎಲ್ಲ ಸೈನ್ಯ ತುಕಡಿಗಳು ಹಿಂಬಾಲಿಸುತ್ತಿದ್ದವು. ಈ ರಣನೀತಿಯಿಂದ ಮುಂದೆ ಸಾಗಿ ಪಾಕಿಸ್ತಾನಿ ಸೈನಿಕರನ್ನು ಕೊಂದು ಯುದ್ಧ ಗೆದ್ದರು. ಈ ಯೋಜನೆ ಮಾಡದೇ ಭಾರತೀಯ ಸೈನ್ಯ ಮುಂದೆ ಸಾಗುವುದೇ ಅಸಾಧ್ಯವಾಗಿತ್ತು. ಈ ಯಶಸ್ವಿ ಸಾಹಸಮಯ ಕೃತಿಯಿಂದಾಗಿಇವರಿಗೆ ಪರಮವೀರ ಚಕ್ರ ನೀಡಿ ಗೌರವಿಸಿತು. ಇವರು ಸೆಕೆಂಡ ಲೆಫ್ಟಿನೆಂಟ್ ಹಾಗೂ ಮೇಜರ್ ಹೀಗೆ ವಿವಿಧ ಪದನ್ನೋತಿ ಪಡೆದರು. 1971ರವರೆಗೆ ಸಿವಿಲಿಯನ್ ಸ್ಟಾಫ್ ಆಫ ದಿ ಇಂಡಿಯನ್ ಆರ್ಮಿ ಸದಸ್ಯರಾಗಿ ಸೇವೆ ಸಲ್ಲಿಸಿದರು.

ಮೂರು ಹೆಣ್ಣು ಮಕ್ಕಳನ್ನು ಹೊಂದಿದ ಇವರು ತಮ್ಮ 76ನೇ ವಯಸ್ಸಿನಲ್ಲಿ ದಿ. 11-7-1994 ರಂದು ಮೃತರಾದರು.

ಇವರ ಸವಿನೆನಪಿಗಾಗಿ ಕಾರವಾರದ ವಾರಶಿಫ್ ಮ್ಯೂಜಿಯಂದಲ್ಲಿ ಪುಥ್ಥಳಿಯನ್ನು ಅನಾವರಣ ಮಾಡಿದ್ದು ವಿವಿಧ ಭಾಗದ ಪ್ರವಾಸಿಗರು ಅದನ್ನು ವಿಕ್ಷಿಸುತ್ತಿದ್ದಾರೆ. ಇಂಥ ಸಾಹಸಿ ಮೇಜರ್ ರಾಮಾ ರಾಘೋಬಾ ರಾಣೆಯವರು ನಮ್ಮ ಕೊಂಕಣಿ ಭಾಷಿಕರೆಂದು ಹೇಳಲು ಅಭಿಮಾನವೆನಿಸುತ್ತದೆ.

♦♦♦♦

# 32. ಮರಾಠಿ ಚಿತ್ರರಂಗದ ಮಹಾ ಅಭಿನೇತ್ರಿ ಕಾರವಾರದ ಶ್ರೀಮತಿ ಜಯಶ್ರೀ ಗಡಕರ



■ ಡಾ. ವಸಂತ ಬಾಂದೇಕರ-ಕಾರವಾ

ಮರಾಠಿ ಚಿತ್ರರಂಗದಲ್ಲಿ 50 ವರ್ಷ ಆಳಿದ ಅಭಿನಯ ಸಾಮ್ರಾಜ್ಞಿ, ಸುವರ್ಣನಾಯಕಿ, 6 ರಾಷ್ಟ್ರೀಯ ಹಾಗೂ ರಾಷ್ಟ್ರಪತಿ ಪ್ರಧಾನಮಂತ್ರಿಗಳ ಪುರಸ್ಕಾರ, ಮಹಾರಾಷ್ಟ್ರ ರಾಜ್ಯ ಸರಕಾರದ ಅನೇಕ ಪುರಸ್ಕಾರಗಳನ್ನು ಸ್ವೀಕರಿಸಿದ ದಿವಂಗತ ಜಯಶ್ರೀ ಗಡಕರ ಕಾರವಾರದವರಾಗಿದ್ದರೆಂಬುದು ಹೆಮ್ಮೆಯ ಸಂಗತಿ.

ಕಾರವಾರ ಸದಾಶಿವಗಡದ ಕಣಸಗಿರಿ ಗ್ರಾಮದಲ್ಲಿ ಕೊಂಕಣಿ ಭಾಷಿಕ ಗೋಮಾಂತಕ (ದೇವಳಿ) ಸಮುದಾಯದ ಮಧ್ಯಮ ಕುಟುಂಬದಲ್ಲಿ ದಿ. 21-03-1940ರಲ್ಲಿ ಜಯಶ್ರೀ ಗಡಕರರವರ ಜನ್ಮವಾಯಿತು. ಐದು ವರ್ಷದ ನಂತರ ಉದರ ಪೋಷಣೆಗಾಗಿ ಇವರ ಕುಟುಂಬ ಜನ್ಮಭೂಮಿ ಕಾರವಾರದಿಂದ ಕರ್ಮಭೂಮಿ ಮುಂಬೈ ಆರಿಸಿಕೊಂಡು ಪ್ರಯಾಣ ಬೆಳೆಸಿತು. ಖೇತವಾಡಿಯ ಮುನಿಸಿಪಲ್ ಶಾಲೆಯಲ್ಲಿ ಪ್ರಾಥಮಿಕ ಶಿಕ್ಷಣ ಹಾಗೂ ಗಿರಗಾಂವ ರಾಮಮೋಹನ ಮಾಧ್ಯಮಿಕ ಶಾಲೆಯಲ್ಲಿ ಶಿಕ್ಷಣ ಪಡೆಯುತ್ತಿದ್ದಾಗಲೇ ನೃತ್ಯ ಸಂಗೀತದ ಒಲವು ಮೂಡಿ ಮಾಸ್ಟರ್ ನವರಂಗ ಇವರಲ್ಲಿ ಗಾಯನ-ಸಂಗೀತವನ್ನು 10 ವರ್ಷ ಕಲಿತರೆ ನೃತ್ಯಗುರು ಕಮಲಾಬಾಯಿ ಮಾರ್ಝುಗಾಂವಕರರವರಲ್ಲಿ 4 ವರ್ಷ ಶಾಸ್ತ್ರೀಯ ನೃತ್ಯ ಕಲಿತರು. 1955ರಲ್ಲಿ ವ್ಹಿ. ಶಾಂತಾರಾಮರವರ ಝುನಕ ಝುನಕ ಪಾಯಲ ಬಾಜೆ ಹಿಂದಿ ಚಿತ್ರರಂಗದ ಸಮೂಹನೃತ್ಯದಲ್ಲಿ ಪ್ರಥಮ ಅವಕಾಶ ದೊರೆಯಿತು. ಅದರಲ್ಲಿ ಇವಳ ನೃತ್ಯ ಎಲ್ಲರನ್ನು ಆಕರ್ಷಿಸಿತು. ಅದೇ ವರ್ಷ ಕಲಾ ಬದುಕಿಗೆ ಒಂದು ಹೊಸ ತಿರುವು ಬಂದಿತು. ಅಂದಿನ ರಷಿಯಾದ ಇಬ್ಬರು ಮಹಾನ್ ರಾಜಕಾರಣಿಗಳಾದ ಕ್ರುಶ್ಚೆವ ಹಾಗೂ ಬುಲ್ಗಾನಿನ್ ಭಾರತಕ್ಕೆ ಅತಿಥಿಯಾಗಿ ಆಗಮಿಸಿದ್ದರು. ಅವರ ಸ್ವಾಗತ-ಕ್ಕೆ ಪುಣಾದಲ್ಲಿ ಸಾರ್ವಜನಿಕ ಸಾಂಸ್ಕೃತಿಕ ಕಾರ್ಯಕ್ರಮ ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದ ಸಂಗೀತ ಸಂಯೋಜಕರು ಸಂಗೀತಕಾರ ವಸಂತ ದೇಸಾಯಿ ಇದ್ದರು. ಈ ಸಮೂಹ ನೃತ್ಯದ ಮುಖ್ಯ ನೃತ್ಯಗಾರ್ತಿ ಜಯಶ್ರೀ ಗಡಕರ ಆಗಿದ್ದಳು. ವ್ಹಿ ಶಾಂತಾರಾಮರವರ ಅಮರ ಭೂಪಾಲಿ ಚಿತ್ರದ ಲಟಪಟ ಲಟಪಟ ತರು ಚಾಲಣ ಈ ಲಾವಣಿ ನೃತ್ಯದ ನೃತ್ಯ ನಿರ್ದೇಶಕರು ಮುನ್ನಾ ಮಾಸ್ಟರರಾಗಿದ್ದರು. ಅವಳ ಆ ನೃತ್ಯದ ನೆರೆದ ಪ್ರೇಕ್ಷಕರೂ, ಬಂದಂಥ ಅತಿಥಿಗಳಿಂದಲೂ, ಸ್ವತಃಸಂಗೀತ ನಿರ್ದೇಶಕರಿಗಿಂತಲೂ ಚಪ್ಪಾಳೆಗಳ ಸುರಿಮಳೆಯಿಂದ ಸಭಾಗೃಹ ತುಂಬಿತು. ಈ ನೃತ್ಯವನ್ನು ವೀಕ್ಷಿಸಿದ ಅಂದಿನ ಹಲವಾರು ಮರಾ ಹಿಂದಿ ಚಿತ್ರರಂಗದ ನಿರ್ಮಾಪಕರು, ನಿರ್ದೇಶಕರು ಆಕರ್ಷಿತರಾದರು. ಹಾಗೂ ಒಂದು ಚಲನಚಿತ್ರದ ತಂ ಇವರ ಮನೆ ಬಾಗಿಲಿಗೆ ಬಂದು ಮುಟ್ಟಿತು. ಮರಾ ನಿರ್ದೇಶಕ ಶ್ರೀ ದಿನಕರರಾವ್ ಪಾಟೀಲರು "ದಿಸತ ತಸ ನಸತ" ಎಂಬ ತಮ್ಮ ಚಿತ್ರಕ್ಕಾಗಿ ಎರಡು ಲಾವಣಿ ನೃತ್ಯಕ್ಕಾಗಿ ಜಯಶ್ರೀ ಗಡಕರರವರನ್ನು ಆಯ್ಕೆ ಮಾಡಿದರು.

ದಿ. 9-03-1956 ರಂದು ಈ ಚಿತ್ರ ಯಶಸ್ವಿಯಾಗಿ ಇವಳ ನೃತ್ಯ ಯಶಸ್ವಿಯಾಗಿದ್ದರಿಂದ ಮುಂದೆ "ಗಾಟಪಡಲಿ ಟಕಾಟಕ" ಚಿತ್ರದ ನಾಯಕಿ-ಯಾಗಿ ಆಯ್ಕೆಯಾದಳು ಹಾಗೂ ಅದೂ ಸಹಿತ ಯಶಸ್ವಿಯಾಯಿತು. ಮುಂದೆ ಒಂದರ ಹಿಂದೆ ಒಂದರಂತೆ ಸಾಲುಸಾಲಾಗಿ ಜಯಶ್ರೀಯವರ ಚಿತ್ರಗಳು ಬರತೊಡಗಿದವು ಹಾಗೂ ಯಶಸ್ವಿಯಾಗ ತೊಡಗಿದವು. ನೋಡು ನೋಡುತ್ತಿದ್ದಂತೆ ಅತೀ ಬೇಡಿ-ಕೆಯ ನಟಿಯಾಗಿ ಮರಾಠಿ ಚಿತ್ರರಂಗದ ಸಾಮ್ರಾಜ್ಞಿಯಾಗಿ ನಿರಂತರ 50 ವರ್ಷ ಮರಾಠಿ ಚಿತ್ರರಂಗದ ಯಶಸ್ವಿ ನಾಯಕಿಯಾಗಿ 2007 ರವರೆಗೆ 101 ಮರಾಠಿ ಚಿತ್ರಗಳಲ್ಲಿ ಅಭಿನಯಿಸಿದರು. ಅಭಿನಯ ಶಾರದೆಯಾದ ಇವಳು ವಿವಿಧ ಚಿತ್ರಗಳಲ್ಲಿ ವಿವಿಧ ಪಾತ್ರಗಳಲ್ಲಿ ಮಿಂಚಿದ್ದಾಳೆ. ಒಂದರಲ್ಲಿ ಕೆರಳಿದ ಸಿಂಹಿಣಿಯಾದರೆ, ಇನ್ನೊಂದರಲ್ಲಿ ಮೃದು ಜಿಂಕೆಯಾಗಿ ಗಂಡನ ಪ್ರೀತಿಯ ಯಾಮಿನಿಯಾದರೆ, ಅಪಮಾನಿತ ಮಾನಿನಿಯಾದಳು, ಮರ್ಯಾದಸ್ತ ತಂದೆಯ ತೇಜಸ್ವಿನಿ ಮಗಳಾದರೆ, ಕೆಣಕಿದರೆ ಕೈಯಲ್ಲಿ ಹಂಟರ್ ಹಿಡಿದ ದಾಮಿನಿಯಾದಳು. ಜಯಶ್ರೀ ಗಡಕರ ಮರಾಠಿಚಿತ್ರರಂಗವಲ್ಲದೇ, ಹಿಂದಿ ಹಾಗೂ ಗುಜರಾತಿ ಚಿತ್ರಗಳಲ್ಲಿ ಸುಮಾರು 102ರಲ್ಲಿ ಅಭಿನಯಿಸಿದ್ದಾರೆ. 1960ರಲ್ಲಿ ಮೆಟ್ರಿಕ್ ಮುಗಿಸಿದರು.

ಆದರೆ ಸತತ ಚಿತ್ರದ ನಾಯಕಿ ಪಾತ್ರ ದೊರೆ-ಯುತ್ತಿದ್ದುದರಿಂದ ಕಾಲೇಜ್ ಕಟ್ಟೆ ಏರುವ ಅವರ ಕನಸು ಕನಸಾಗಿಯೇ ಉಳಿಯಿತು.

ಜಯಶ್ರೀ ಗಡಕರ ಚಿತ್ರರಂಗದಲ್ಲಿ ಅಷ್ಟು ಎತ್ತರಕ್ಕೆ ಬೆಳೆದರೂ ಸಹಿತ ಚಿತ್ರರಂಗದ ಗ್ಲಾಮರ್, ಫ್ಯಾಶನ್, ಥಳಕು-ಬೆಳಕಿನಿಂದ ನಿಜ ಜೀವನದಲ್ಲಿ ದೂರವಿದ್ದರು. ಸೀದಾ-ಸಾದಾ ತಲೆಯ ಮೇಲೆ ಸೆರಗು ಹೊತ್ತುಕೊಂಡೆ ಓಡಾಡುತ್ತಿದ್ದರು. ಇನ್ನೂ ವಿಶೇಷವೆಂದರೆ ಹೆಚ್ಚಾಗಿ ಧಾರ್ಮಿಕ ಚಿತ್ರಗಳಲ್ಲಿ

ಾತ್ರವಹಿಸಿ ಯಶಸ್ವಿಯಾಗಿದ್ದರು. ಉದಾಹರಣೆಗೆ ಾರಧಾಮ, ಕಾಲಿಮಾತಾ, ರಾಮಲೀಲಾ, ಜಯಭವಾನಿ, ತಿಸಾವಿತ್ರಿ, ಮಹಾಸತಿ ಅನಸೂಯಾ, ಗೋಪಾಲಕೃಷ್ಣ ೀರಭಜರಂಗ, ಹರಹರಗಂಗೆ, ಬಲರಾಮಶ್ರೀಕೃಷ್ಣ, ಮಾತಾ ುಹಾಕಾಳಿ, ರಾಮಭಕ್ತ ಹನುಮಾನ, ಗಾಯಿತ್ರಿ ಮಹಿಮಾ, ಕ್ತಧ್ರುವ, ಶಿವಶಕ್ತಿ, ಶ್ರವಣಕುಮಾರ, ಲವಕುಶ ಇತ್ಯಾದಿ ಂಥ ಆಧ್ಯಾತ್ಮಿಕ, ಧಾರ್ಮಿಕ ಚಿತ್ರದಲ್ಲಿ ದೇವತೆ ಪಾತ್ರಗಳನ್ನು ಮಾಡಿದ್ದಳು. ಇವಳ ಇಂಥ ಪಾತ್ರಗಳನ್ನು ನೋಡಿದ ್ರೇಕ್ಷಕರವೃಂದ ಇವರನ್ನು ದೇವತಾಸ್ಥಾನದಲ್ಲಿ ಕಾಣುತ್ತಿತ್ತು.

ಜಯಶ್ರೀಯವರು ಹಿಂದಿನ ಚಿತ್ರರಂಗದ ಖ್ಯಾತನಾಮ ಾಯಕರಾದ ಅಶೋಕಕುಮಾರ, ರಾಜಕುಮಾರ, ಬಲರಾಜ ಹಾನಿ, ರಂಜನ, ಅಜಿತ, ಪ್ರದೀಪಕುಮಾರ, ಮಹಿಪಾಲ, ಶಿಕಪೂರ, ಅಭಿ ಭಟ್ಟಾಚಾರ್ಯ, ರಾಜೇಶ ಖನ್ನಾ, ನಾರಾಸಿಂಹ ಮುಂತಾದವರು.

ಜಯಶ್ರೀರವರು ಕೋಟ್ಯಾಂತರ ಜನರ ನಾಯಕಿಯಾಗಿ ಯಾವುದೇ ಗಾಸಿಪ್‌ಗಳಿಗೆ ಒಳಗಾಗದೇ ಜನಪ್ರಿಯತೆಯನ್ನು ಗಳಿಸಿದ್ದರು.

ಜಯಶ್ರೀ ಗಡಕರ ಎಷ್ಟು ಪ್ರಸಿದ್ಧ ನಾಯಕಿಯಾಗಿದ್ದ-ರೆಂದರೆ ಅವರನ್ನು ಕಣ್ಣುಮುಂದೆ ನಿಲ್ಲಿಸಿ ನಿರ್ದೇಶಕರು ಚಿತ್ರಕಥೆ ಬರೆದು ಚಿತ್ರ ನಿರ್ಮಿಸತೊಡಗಿದರು. ಅವು ಯಶಸ್ವಿಯಾಗತೊಡಗಿದವು. ಹೀಗೆ ಯಶಸ್ವಿ ಚಿತ್ರಗಳನ್ನು ನೀಡುವ ಸಂದರ್ಭದಲ್ಲೇ ತಾನೊಬ್ಬ ಸ್ತ್ರೀ ಇದ್ದು, ತನಗೂ ಒಂದು ಮನೆ, ಪ್ರೀತಿಸುವ ಪತಿ, ಮುದ್ದಾದ ಮಕ್ಕಳು ಬೇಕೆಂಬ ಇಚ್ಛೆ ಪ್ರಾರಭವಾಗಿ ಅದರಂತೆ ಸುಂದರ ರಾಜಕುಮಾರನಂಥ ವೃತ್ತಿಯಲ್ಲಿ ಚಲನಚಿತ್ರ ನಟ-ನಿರ್ಮಾಪಕ, ನಿರ್ದೇಶಕ ಶ್ರೀ ಬಾಳ ಧುರಿಯವರು ಅವಳ ಬಾಳ ಸಂಗಾತಿಯಾದರು. ಅವರ ಬದುಕಿನಲ್ಲಿ ಮುದ್ದಾದ ಮಗುವು ಜನಿಸಿತು. ಅದಕ್ಕೆ ಆನಂದ ಎಂಬ ನಾಮಕರಣ ಮಾಡಿದರು. ಆನಂದನು ದೊಡ್ಡವನಾದ ಮೇಲೆ 12-10-2007ರಲ್ಲಿ ಅವನ ಮದುವೆ ಡಾ. ನೀಲಮ್ ಜೊತೆಗೆ ಮಾಡಲಾಯಿತು.

ಜಯಶ್ರೀ ಗಡಕರ ಅವರಿಗೆ ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿ-ಮಾನಿನಿ ಹಾಗೂ ವೈಜಯಂತಿ ಚಿತ್ರದ ನಟನೆಗೆ ರಾಷ್ಟ್ರಪತಿ ಪ್ರಶಸ್ತಿ, ರಾಷ್ಟ್ರಪತಿಗಳ ಪ್ರಶಸ್ತಿ-ಸವಾಲ ಮಾಝಾ ಐಕಾ ಚಿತ್ರಕ್ಕಾಗಿ, ಪ್ರಧಾನಮಂತ್ರಿ ಇಂದಿರಾಗಾಂಧಿಯವರಿಂದ ಸಾಧಿಮಾಣಸ ಚಿತ್ರಕ್ಕಾಗಿ, ರಾಷ್ಟ್ರಪತಿ ಪುರಸ್ಕಾರ-ಯುಗೆ ಯುಗೆ ಮಿವಾಟ ಪಾಹತೆ ಚಿತ್ರಕ್ಕಾಗಿ, ರಾಷ್ಟ್ರಪತಿ ಪುರಸ್ಕಾರ ಪವನ ಕಾಟಾಚಾ ಧೊಂಡಿ ಚಿತ್ರಕ್ಕಾಗಿ, ಮಹಾರಾಷ್ಟ್ರ ರಾಜ್ಯ ಚಿತ್ರಪಟ ಮಹೋತ್ಸವ ಪುರಸ್ಕಾರ ಸರ್ವೋತ್ಕೃಷ್ಟ ನಾಯಕಿ ಸೇರಿದಂತೆ ಹಲವಾರು ಪ್ರಶಸ್ತಿ-ಪುರಸ್ಕಾರಗಳು ಲಭಿಸಿವೆ.

**ಜಯಶ್ರೀಯವರ ಮನೋಗತ :**

"ಅವಳ ಅನಿಸಿಕೆಯಂತೆ ಕಲೆಯೇ ಕಲಾವಿದನ ಜೀವನವಿರುತ್ತದೆ. ಸಕ್ಕರೆ ಹಾಗೂ ಅದರ ರುಚಿ ಬೇರ್ಪಡಿಸಲು ಹೇಗೆ ಅಸಾಧ್ಯವೋ ಅದರಂತೆ ಕಲೆ ಹಾಗೂ ಜೀವನವನ್ನು ಬೇರ್ಪಡಿಸಲು ಆಗದು. ಆ ಸಮಯದ ಚಿತ್ರಗಳಲ್ಲಿ ಸಿನೇಮಾ ಮಾಧ್ಯಮದಿಂದ ಸಾಮಾಜಿಕ ರಕ್ಷಣೆ-ಯಾಗುತ್ತಿತ್ತು. ಚಿತ್ರರಂಗದ 50 ವರ್ಷ ಸಿನೇಮಾ ಪ್ರವಾಸದ ಜೊತೆಗೆ 65 ವರ್ಷದ ಜೀವನ ಪ್ರವಾಸದ ಸಮಯದಲ್ಲಿ ಮನಸ್ಸಿಗೆ ತೃಪ್ತಿಯಿದೆ, ಸಮಾಧಾನವಿದೆ, ಜೀವನ ಸಾರ್ಥಕವೆನಿಸಿದೆ. ಕಲಾಜೀವನ ಯಶಸ್ವಿಯಾಗಿ ಸಂಸ್ಕಾರವೂ ಸುಖಮಯವಾಗಿದೆ. ಇಂದು ನಿಮ್ಮ ಕೈಯಲ್ಲಿರುವ ನಕ್ಷತ್ರಲೇಣ ಪುಸ್ತಕವು ನನ್ನ 50 ವರ್ಷ ಚಲನಚಿತ್ರ ಪ್ರವಾಸದ ಎಲ್ಲ ಮೈಲುಗಲ್ಲುಗಳ ನೆನಪು ಚಿತ್ರಸಹಿತ ನೀಡಲಿದೆ. ಈ ಪುಸ್ತಕ ಹೊರತರಲು ನನ್ನ ಪತಿ ಶ್ರೀ ಬಾಳ ಧುರಿ ನೇತೃತ್ವದ ಸಮಿತಿ ಬಹಳ ಶ್ರಮವಹಿಸಿದೆ. ಈ ಪುಸ್ತಕ ನನ್ನ ಕಲಾರಸಿಕರವರೆಗೆ ತಲುಪಲೆಂದೇ ನನ್ನ ಅಭಿಲಾಷೆ. ಇದಕ್ಕೆ ಸಹಕಾರ ನೀಡಿದ ಎಲ್ಲರಿಗೂ ನಾನು ಚಿರಋಣಿ ಹಾಗೂ ಇದೇ ರೀತಿಯ ತಮ್ಮೆಲ್ಲರ ಪ್ರೇಮ ಜೀವನದುದ್ದಕ್ಕೂ ಲಭಿಸಲೆಂದು ನನ್ನ ಮನೋಕಾಮನೆಯಾಗಿದೆ" ಎಂದು ಈ ಲೇಖನ ಬರೆದದ್ದು 2008ರಲ್ಲಿ. ಆದರೆ ವಿಧಿಲಿಖಿತದಂತೆ ಜಯಶ್ರೀ ಗಡಕರ 29-08-2008ರಂದು ಈ ಲೋಕವನ್ನು ತ್ಯಜಿಸಿದರು. ಅವರ ಪುಸ್ತಕ ಬಿಡುಗಡೆ ಅವರ ಮರಣದ ನಂತರ ದಿ. 08-03-2009 ರಂದು ಆಯಿತು.

ಜಯಶ್ರೀ ಗಡಕರರವರ ಜೀವನದ ಮೇಲೆ ಆಧಾರಿತ ಗೌರವಗ್ರಂಥ "ಜಯಶ್ರೀ ಗಡಕರ ನಕ್ಷತ್ರಲೇಣ " ಗೋಲ್ಡನ್ ಎರಾ ಆಫ್ ಜಯಶ್ರೀ ಗಡಕರ ಎಂಬ 300 ಪುಟದ ಪುಸ್ತಕವನ್ನು ಜಯಶ್ರೀ ಗಡಕರ ಪ್ರತಿಷ್ಠಾನದವರು ಹೊರತರಲು ಆಯೋಜಿಸಿದಾಗ ಶುಭಸಂದೇಶಗಳನ್ನು ಕಳುಹಿಸಿದವರೆಲ್ಲರೂ ಅವರ ಅಭಿಮಾನಿಗಳಾಗಿದ್ದರು. ಅಂದಿನ ಭಾರತದ ರಾಷ್ಟ್ರಪತಿ ಶ್ರೀಮತಿ ಪ್ರತಿಭಾ ಪಾಟೀಲ, ಶಿವಸೇನಾ ಪ್ರಮುಖರಾದ ಬಾಳಸಾಹೇಬ ಠಾಕರೆ, ಕೇಂದ್ರಿಯ ಕೃಷಿಮಂತ್ರಿ ಶರದ ಪವಾರ, ಕೇಂದ್ರಿಯ ಉರ್ಜಾಮಂತ್ರ ಸುಶೀಲಕುಮಾರ ಶಿಂಧೆ, ಮನೋಹರ ಜೋಶಿ, ಮಹಾರಾಷ್ಟ್ರದ ಮುಖ್ಯಮಂತ್ರಿ ಅಶೋಕ ಚೌಹಾಣ, ಉಪಮುಖ್ಯಮಂತ್ರಿ ಛಗನ ಬುಝಬಳ, ರೋಜಗಾರಮಂತ್ರಿ ಹರ್ಷವರ್ಧನ ಪಾಟೀಲ, ರಾಷ್ಟ್ರೀಯ ಮಹಾಸಚಿವ ಬಿ.ಜೆ.ಪಿ. ಗೋಪಿನಾಥ ಮುಂಡೆ, ಉಪಮುಖ್ಯಮಂತ್ರಿ ಆರ್. ಆರ್. ಪಾಟೀಲ ಮುಂತಾದವರು.

ಇಂಥ ಬಹುಮುಖ ಪ್ರತಿಭೆಯ ಕಾರವಾರದ ಮಣ್ಣಿನಲ್ಲಿ ಹುಟ್ಟಿದ ಜಯಶ್ರೀ ಗಡಕರರವರು ಮುಂಬೈದಲ್ಲಿ ನೆಲೆಸಿ ನಿರಂತರವಾಗಿ 50 ವರ್ಷ ಮರಾಠಿ-ಹಿಂದಿ-ಗುಜರಾತಿ- ಚಿತ್ರರಂಗದಲ್ಲಿ ಯಶಸ್ವಿ ನಾಯಕಿಯಾಗಿ ಹಲವಾರು ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿ, ಮಹಾರಾಷ್ಟ್ರ ರಾಜ್ಯ ಮರಾಠಿ ಚಿತ್ರಪ್ರಶಸ್ತಿ, ಜೊತೆಗೆ ಹಲವಾರು ರಾಜ್ಯದ ವಿವಿಧ ಸಂಘಟನೆಗಳ ಪ್ರಶಸ್ತಿ ಪಡೆದು ಅದರಲ್ಲೂ ವಿಶೇಷವಾಗಿ ಸುಮಾರು 30-40 ಧಾರ್ಮಿಕ

ಚಿತ್ರಗಳಲ್ಲಿ ದೇವತೆಯಾಗಿ ಕೊಟ್ಯಾಂತರ ಚಿತ್ರಪ್ರೇಮಿಗಳ ಆರಾಧ್ಯ ದೇವಿಯಾಗಿ ಇಂದಿಗೂ ಎಲ್ಲರ ಮನಸ್ಸಿನಲ್ಲಿ ಬೇರೂರಿದ್ದಾರೆ. ಇಂದು ಅವರು ಈ ಲೋಕತ್ಯಜಿಸಿ ಹತ್ತು ವರ್ಷಗಳು ಗತಿಸಿವೆ. ಆದರೆ ಅವರು ಅಜರಾಮರಾಗಿ ಉಳಿದಿದ್ದಾರೆ. ಇಂಥ ವ್ಯಕ್ತಿಯನ್ನು ಪಡೆದ ನಾವು ಕಾರವಾರಿಗರು ಧನ್ಯರು. ಇದು ನಮ್ಮೆಲ್ಲರಿಗೂ ಹೆಮ್ಮೆಯ ವಿಷಯವಾಗಿದೆ. ಇಂಥ ಮಹಾನ್ ವ್ಯಕ್ತಿ ಜನಿಸಿದ ಪವಿತ್ರವಾದ ಜನ್ಮಸ್ಥಳವನ್ನು ನಾವೆಲ್ಲ ಅಭಿಮಾನಿಗಳು ಸಮಾಜ ಬಾಂಧವರು ಮಹಾನ್ ದಾನಿಗಳು ಸೇರಿ ಅವರ ಹೆಸರಿನ ರಾಷ್ಟ್ರೀಯ ಸ್ಮಾರಕ ಭವನ ನಿರ್ಮಿಸಬಹುದಲ್ಲವೇ? ಇದರಿಂದ ಕರ್ನಾಟಕ-ಮಹಾರಾಷ್ಟ್ರ-ಗೋವಾ ರಾಜ್ಯದ ಹಾಗೂ ದೇಶ-ವಿದೇಶದ ಅವರ ಅಭಿಮಾನಿಗಳು ಅವರ ದರ್ಶನ ಪಡೆಯಬಹುದು. ಅದರಿಂದ ಕಾರವಾರದ ಪ್ರವಾಸೋಧ್ಯಮಕ್ಕೆ ಇನ್ನೂ ಹೆಚ್ಚಿನ ಮಹತ್ವ ಬರಬಹುದೆಂಬ ನನ್ನ ಅಭಿಪ್ರಾಯವಿದೆ. ಅವರ ಆತ್ಮಕ್ಕೆ ಶಾಂತಿ ದೊರೆಯಲೆಂದು ಎಲ್ಲರ ಪರವಾಗಿ ಭಗವಂತನಲ್ಲಿ ಹಾರೈಕೆ.

♦♦♦♦

# 33. ಸಂಗೀತ ಸಾಮ್ರಾಜ್ಞಿ ಲತಾ ಮಂಗೇಶಕರ

ಮಧ್ಯಪ್ರದೇಶದ ಇಂದೋರದಲ್ಲಿ ದಿ. 28-9-1929ರಂದು ಲತಾ ಮಂಗೇಶಕರರ ಜನ್ಮವಾಯಿತು.

ತಂದೆ ಪಂ. ದೀನಾನಾಥ ಮಂಗೇಶಕರ(ಹರ್ಡಿಕರ) ಲತಾ ಮಂಗೇಶಕರಗೆ ಆಶಾ-ಮೀನಾ-ಉಷಾ 3 ಸಹೋದರಿಯರು. ಹೃದಯಾನಾಥ ಒಬ್ಬ ಸಹೋದರ ಹೀಗೆ ಐದು ಜನರ ಕುಟುಂಬವಾಗಿತ್ತು.

ತನ್ನ 5ನೇ ವಯಸ್ಸಿನಿಂದಲೇ ತಂದೆಯಿಂದ ಸಂಗೀತ ಕಲಿಯುಲು ಪ್ರಾರಂಭಿಸಿದಳು. ಇವರ 13ನೇ ವಯಸ್ಸಿಗೆ ತಂದೆ 1942ರಲ್ಲಿ ತೀರಿಕೊಂಡರು. ಲತಾಮಂಗೇಶಕರ 1942ರಲ್ಲಿ ಪ್ರಥಮ ಮರಾಠಿ ಚಿತ್ರಕ್ಕೆ ಹಾಡಿದರೆ, 1943ರಲ್ಲಿ ಹಿಂದಿ ಚಿತ್ರಕ್ಕೆ ಹಾಡಿದರು. 1945ರಲ್ಲಿ ಮುಂಬೈಗೆ ಬಂದರು. ಬಡಿಮಾ ಎಂಬ ಚಿತ್ರಕ್ಕೆ ಲತಾ ಹಾಗೂ ಆಶಾ ಇಬ್ಬರೂ ಪಾತ್ರ ನಿರ್ವಹಿಸಿದರು. 1948ರಲ್ಲಿ ಮಜದೂರ ಚಿತ್ರದಲ್ಲಿ ಹಾಡಿದರೆ, ಮಹಲ ಎಂಬ ಮದುಬಾಲಾಳ ಚಿತ್ರದಲ್ಲಿ ಇವಳು ಹಾಡಿದ ಆಯೆಗಾ ಆನೇವಾಲ ಹಾಡು ಬಹಳ ಪ್ರಸಿದ್ಧಿಯಾಗಿ ಎಲ್ಲ ಸಂಗೀತ ನಿರ್ದೇಶಕರು ಇವಳ ಮನೆಬಾಗಿಲಿಗೆ ಬರುವಂತಾಯಿತು. ಹಲವಾರು ಫಿಲ್ಮಫೇರ್ ಪ್ರಶಸ್ತಿ ರಾಷ್ಟ್ರೀಯ ಪ್ರಶಸ್ತಿ ಲೈಫ್ ಅಚಿವ್‌ಮೆಂಟ್ ಅವಾರ್ಡ್ ದೊರೆತಿವೆ. ರಾಷ್ಟ್ರೀಯ ಅಂತರಾಷ್ಟ್ರೀಯ 36 ಭಾಷೆಗಳಲ್ಲಿ ಇವರು ಹಾಡು ಹಾಡಿದ್ದಾರೆ. ಇತ್ತಿಚಿಗೆ 91 ನೇ ಹುಟ್ಟುಹಬ್ಬ ಆಚರಿಸಿಕೊಂಡ ಇವರು ಕೊಂಕಣಿ ಭಾಷಿಕ ಗೋಮಾಂತಕ ಸಮಾಜದವರು.

---

# 34. ಪಾರ್ಶ್ವ ಗಾಯಕಿ ಆಶಾ ಭೋಸಲೆ

ಗಾಯಕಿ - ಲತಾ ಮಂಗೇಶಕರ ಸಹೋದರಿಯಾದ ಆಶಾ 8-9-1933ರಲ್ಲಿ ಜನಿಸಿದಳು. ಇವಳು ಅಕ್ಕ ಲತಾಳ ಜೋತೆಗೆ ಚಿತ್ರರಂಗದಲ್ಲಿ ಪೈಪೋಟಿ ಇದ್ದರೂ ತನ್ನ ವಿಶಿಷ್ಟ ಗಾಯನ ಶೈಲಿಯಿಂದ ತನ್ನದೇ ಛಾಪು ಮೂಡಿಸಿ ಸಾವಿರಾರು ಚಿತ್ರಗೀತೆಗಳನ್ನು ಹಾಡಿ ಹಲವಾರು ಪ್ರಶಸ್ತಿ ಪಡೆದುಕೊಂಡಳು. ಅಂತರಾಷ್ಟ್ರೀಯ ಖ್ಯಾತಿಯ ಕಲಾವಿದೆಯಾದ ಇವಳ ಮೊದಲ ಪತಿ ಗಣಪತ ರಾವ್ ಭೋಸಲೆ ನಂತರ ರಾಹುಲದೇವ ಬರ್ಮನ ಪತ್ನಿಯಾಗಿ ಉಳಿದಳು. ಹಾಗೂ ತನ್ನ ಸಂಗೀತದ ಬದುಕನ್ನು ನಿರಂತರವಾಗಿ ಸಾಗಿಸಿಕೊಂಡು ಬಂದಳು.

---

# 35. ವಿಶ್ವಖ್ಯಾತಿ ಕ್ರಿಕೇಟರ ಸಚಿನ ತೆಂಡೂಲಕರ್

ಮಹಾರಾಷ್ಟ್ರದ ಪ್ರಸಿದ್ಧ ಮರಾಠಿ ಸಾಹಿತಿ ರಮೇಶ ತೆಂಡುಲಕರ ಪುತ್ರನಾಗಿ ಸಚಿನ ತೆಂಡುಲಕರ 24-4-1973ರಲ್ಲಿ ದಾದರನಲ್ಲಿ (ಮುಂಬೈ) ಜನಿಸಿದರು. ಚಿಕ್ಕ ವಯಸ್ಸಿನಿಂದಲೇ ಕ್ರಿಕೇಟ್ ಅಭಿರುಚಿ ಹೊಂದಿದ ಇವರು ಭಾರತ ಕ್ರಿಕೇಟ್ ತಂಡದ ಸದಸ್ಯನಾಗಿ ಕ್ರಿಕೇಟ್ ಇತಿಹಾಸದಲ್ಲೆ ಹಲವಾರು ದಾಖಲೆಗಳನ್ನು ಮಾಡಿ ಇಂದು ವಿಶ್ವವಿಖ್ಯಾತರಾಗಿದ್ದಾರೆ. ಹಲವಾರು ರಾಷ್ಟ್ರೀಯ ಅಂತರಾಷ್ಟ್ರೀಯ ಪುರಸ್ಕಾರ ಪಡೆದ ಇವರಿಗೆ ಭಾರತ ರತ್ನ ಗೌರವವು ದೊರಕಿದೆ. ಇವರು ಕೊಂಕಣಿ ಭಾಷಿಕ ಆರ್. ಎಸ್. ಬಿ. ಸಮಾಜದವರಾಗಿದ್ದಾರೆ.



ಸಂಗ್ರಹ: ಡಾ. ವಸಂತ ಬಾಂದೇಕರ-ಕಾರವಾರ

# 36. ಆಸ್ಕರ ಪ್ರಶಸ್ತಿ ವಿಜೇತ ಅಮೀತ ಬಾಡಕರ



ಜಾಗತಿಕವಾಗಿ ಚಿತ್ರರಂಗದ ಅತ್ಯುನ್ನತ ಹಿರಿಮೆಗೊಳಗಾಗುವ ಆಸ್ಕರ ಪ್ರಶಸ್ತಿಗೆ ಕಾರವಾರದ ಅಮೀತ ಗಣಪತಿ ಬಾಡ್ಕರ ಭಾಜಕರಾಗಿರುವುದು ಕೊಂಕಣಿಗರಿಗೆ ಹೆಮ್ಮೆಯ ವಿಷಯವಾಗಿದೆ. ಹಾಲಿವುಡ್‌ನಲ್ಲಿ ನಿರ್ಮಾಣಗೊಂಡ ಅನಿಮೆಟೆಡ್ ಚಿತ್ರ ಟಾಯಸ್ಟೋರಿ 4 ಚಿತ್ರದ ಬೆಸ್ಟ ಫೀಚ್ಚರ್ ಫಿಲ್ಮ ಪ್ರಶಸ್ತಿ ಪಡೆದಿದ್ದು ಇದರಲ್ಲಿ ಅಮೀತ ಬಾಡಕರ ಸ್ಪೇಷಲ್ ಇಫೆಕ್ಟ್ ಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದರು

92ನೇ ಅಕಾಡೆಮಿ ಪ್ರಶಸ್ತಿ(ಆಸ್ಕರ ಪ್ರಶಸ್ತಿ) ಪ್ರಧಾನ ಸಮಾರಂಭ ಫೆಬ್ರುವರಿ 9-2020ರಂದು ಲಾಸ ಎಂಜಿಲ್ಸ್‌ನಲ್ಲಿ ಜರುಗಿದ್ದು ಇವರಿಗೆ ಪ್ರಶಸ್ತಿ ಲಭಿಸಿದೆ. ಈ ಮೊದಲು 2012ರಲ್ಲಿ "ಬ್ರಿವ್ಹ" ಹಾಗೂ 2015ರಲ್ಲಿ ಇನಸೈಡ ಜಾಟ ಚಿತ್ರಕ್ಕೂ ಆಸ್ಕರ ಪ್ರಶಸ್ತಿ ಲಭಿಸಿತ್ತು. ಇವರು ಕೊಂಕಣಿ ಭಾಷಿಕ ಗೋಮಾಂತರ ಸಮಾಜದವರಾಗಿದ್ದಾರೆ.

# 37. ಅಂತರಾಷ್ಟ್ರೀಯ ಖ್ಯಾತಿಯ ಚೆಸ್‌ದಲ್ಲಿ ಚಿನ್ನ ಪಡೆದ ನಿತೀಶ ಸಂಜಯ ಬೆಳೂರಕರ



ಮೂಲ ಕಾರವಾರದವರಾದ ಗೋವಾದಲ್ಲಿ ನೆಲೆಸಿರುವ ಆರ್ಕಿ-ಟೆಕ್ಟ ನಿವೃತ್ತ ಪ್ರೋಫೆಸರ ಸಂ-ಜಯ ಬೆಳೂರಕರರವರ ಪುತ್ರನಾದ ನಿತೀಶ ಬೆಳೂರಕರ ತನ್ನ 10ನೇ ವಂಯಸ್ಸಿನಲ್ಲೆ ಗೋವಾದ ಬಾಲಕ್ರಿಡಾಪಟುವಾಗಿ ಅಖಿಲಭಾರತ ಮಟ್ಟದ FIDE ರೇಟಿಂಗ ಪಂದ್ಯಾವಳಿಯಲ್ಲಿ ಗೆದ್ದನು. 2016ರಲ್ಲಿ ಭಾರತದ 16 ವರ್ಷದೊಳಗಿನ ತಂಡದ ಪರವಾಗಿ ಭಾಗವಹಿಸಿದನು. ಗೋವಾ ರಾಜ್ಯದ ಟಾಪ ರ್‍ಯಾಂಕಿಂಗ್ ಚೆಸ್ ಪಂದ್ಯಾಟಗಾರನಾಗಿ ಹೆಸರು ಮಾಡಿದ್ದಾನೆ. 2018ರಲ್ಲಿ ರಾಷ್ಟ್ರೀಯ ಜ್ಯೂನಿಯರ್ ಚಾಂಪಿಯನ್‌ಶಿಪ್‌ದಲ್ಲಿ ಕಂಚಿನಪದಕ ವಿಜೇತನಾಗಿದ್ದರಿಂದ ಏಸಿಯಾ ಜುನಿಯರ್ ಹಾಗೂ ವಿಶ್ವ ಜುನಿಯರ್ 2019ಕ್ಕೆ ಆಯ್ಕೆಯಾಗಿ ಅಭುಧಾಬಿಯಲ್ಲಿ ಆಯ ಎಮ್ ನಾರ್ಮ ಪ್ರಾಪ್ತಿ ಮಾಡಿಕೊಂಡನು. ಅದರಂತೆ 2020 ಫೆಬ್ರುವರಿಯಲ್ಲಿಯೂ ಪ್ರಾಪ್ತಮಾಡಿಕೊಂಡ ಅಕ್ಟೋಬರ 2020ರಲ್ಲಿ ಶ್ರೀ ಮನೋಹರ ಪರಿಕರ ಅಂತರಾಷ್ಟ್ರೀಯ ಆನ್ಲೈನ್ ಚೆಸ್ ಪಂದ್ಯಾವಳಿಯಲ್ಲಿ ಬಂಗಾರದ ಪದಕದೊಂದಿಗೆ ಚಾಂಪಿಯನ್ ಕಿರೀಟ ಪ್ರಾಪ್ತವಾಗಿದೆ.

**ಬಂಗಾರದ ಪದಕದ ಪಟ್ಟಿ –**

1. ವಿಶ್ವಶಾಲಾ ಚೆಸ್‌ಚಾಂಪಿಯನ್ – ಟರ್ಕಿಯಲ್ಲಿ
2. 21ನೇ ಅಭುಧಾಬಿ ಅಂತರಾಷ್ಟ್ರೀಯ ಚೆಸ್ ಪಂದ್ಯಾವಳಿ
3. ಅಂತರಾಷ್ಟ್ರೀಯ FIDE ರೇಟಿಂಗ್ ಪಂದ್ಯಾವಳಿ ಕೊಲಂಬೊ ಶ್ರೀಲಂಕಾ
4. 64 ಸ್ವಯಂ ಅಂತರಾಷ್ಟ್ರೀಯ ಚೆಸ್ ಕಾಂಪಿಟೇಶನ್ ಕ್ಯಾಂಡೆ – ಶ್ರೀಲಂಕಾ

**ಬೆಳ್ಳಿ ಪದಕಗಳು –**

1. ಕಾಮನವೆಲ್ತ್ ಚೆಸ್ ಗ್ಲಾಸಗೊಂವ ಸ್ಕಾಟಲೆಂಡ್
2. ಏಶಿಯನ್ ಚೇಸ್ ಚಾಂಪಿಯನ್‌ಶಿಪ್ ವಿಯೆಟ್ನಾಂ
3. ಕಾಮನವೆಲ್ತ್ ಚೆಸ್ ಚಾಂಪಿಯನ್ ಜೊಹನ್ಸಬರ್ಗ ಸೌಥ ಆಫ್ರಿಕಾ
4. 13ನೇ ದುಬೈ ಜ್ಯುನಿಯರ್ ಅಂತರಾಷ್ಟ್ರೀಯ ಚೆಸ್ ಪಂದ್ಯಾವಳಿ ದುಬೈ

**ಕಂಚಿನ ಪದಕಗಳು –**

1. ಏಸಿಯಾ ಚಾಂಪಿಯನ್‌ಶಿಪ್–ಇಂಡೋನೆಶಿಯಾ
2. ಕಾಮನವೆಲ್ತ್ ಚೆಸ್
3. ಹೈಲೆಂಡ್ ಓಪನ ಬ್ಲಿಚ್ ಚೇಸ್ ಜಾಂ. ಸ್ಲೋವಾಕಿಯಾ
4. ಗೋವಾ ಬೆಸ್ಟ ಆಪಕಮಿಂಗ್ ಸ್ಪೋರ್ಟ ಜಿನೋ ಆವಾಡ
5. ಗೋವಾ ಸಿನಿಯರ್ ಸ್ಟೆಟ್ ಚೆಸ್ ಚಾಂಪಿಯನ್ 201

ಸತತ 3 ವರ್ಷ 2015–16–17 ಹೀಗೆ ಸತತವಾಗಿ ಕಳೆದ 10ವರ್ಷದಿಂದ ಅಂತರಾಷ್ಟ್ರೀಯ ಮಟ್ಟದಲ್ಲಿ ಸಾಧನೆ ಮಾಡುತ್ತಿರುವ ನಿತೀಶ ಸದಾನಂದ ಬೆಳೂರಕರ ಕೊಂಕಣಿ ಭಾಷಿಕ ಕೊಮಾರಪಂತ ಸಮುದಾಯದವರೆಂದು ಹೇಳಿಕೊಳ್ಳಲು ಅಭಿಮಾನವೆನಿಸುತ್ತದೆ.

ಸಂಗ್ರಹ: ಡಾ. ವಸಂತ ಬಾಂದೇಕರ–ಕಾರವಾ

# 38. ಕಾರವಾರದ ಪ್ರಥಮ ಸ್ವಾತಂತ್ರ ಹೋರಾಟಗಾರ ಕಡಲ ತೀರದ ಕನ್ನಡದ ಗಂಡುಗಲಿ "ಕ್ರಾಂತಿವೀರ ಚಕಮಕ ಜಂಗ್" ಬಹದ್ದೂರ ಹೆಂಜಾ ನಾಯ್ಕ

ಅರ್ಗೆ ಹರೀಶ ನಾಯ್ಕ

ಯಾವದೇ ಕುಟುಂಬದ ಉನ್ನತಿಯು ಆ ಕುಟುಂಬದ ಪೂರ್ವಜರ ತ್ಯಾಗ ಬಲಿದಾನದ, ಶಿಸ್ತು ಪ್ರಮಾಣಿಕತೆಯನ್ನು

ಅವಲಂಬಿಸಿದೆ. ಅಂತೆಯೇ ಒಂದು ಸಮಾಜದ ಬೆಳವಣಿಗೆ ಸಾರ್ವಜನಿಕವಾಗಿ ಮಾನ್ಯತೆ ಮತ್ತು ಮಾರ್ಯಾದೆ ಆ ಸಮಾಜದ ಪೂರ್ವಿಕರ ಹಿನ್ನಲೆಯನ್ನು ಅವಲಂಬಿಸಿದೆ. ಚರಿತ್ರೆಯಲ್ಲಿ ಕೋಮಾರಪಂತ ಸಮಾಜದ ಹಿರಿಯವರ ಹೆಸರು ಎಲ್ಲಿಯೂ ಕಾಣಲು ಸಾಧ್ಯವಿಲ್ಲ. ಹಾಗೆಂದು ಕೋಮಾರಪಂತರು ಸ್ವಾತಂತ್ರ್ಯದ ಹೋರಾಟದಲ್ಲಿ ಅವರಿಗೆ ಸ್ವಾತಂತ್ರ್ಯದ ಕಾಳಜಿ ಇರಲಿಲ್ಲವೇ? ಎಂಬ ಪ್ರಶ್ನೆ ನಮ್ಮ ಮುಂದೆ ನಿಲ್ಲುತ್ತದೆ. ಕೋಮಾರಪಂತರು "ಮನೆಗೆ ಮಾರಿ ಪರರಿಗೆ ಉಪಕಾರಿ", ಎಂಬುವುದನ್ನು ಒಪ್ಪಿಕೊಳ್ಳಲೇ ಬೇಕು. ಹಾಗಾಗಿಯೇ ಸ್ವಾತಂತ್ರ್ಯ ಚಳುವಳಿಯಲ್ಲಿ ಅವರ ಹೆಸರನ್ನು ಬಳಸಲು ಒಪ್ಪಲಿಲ್ಲವೆಂದೆ ಕಾಣುತ್ತದೆ.



ಕೋಮಾರಪಂತರು ಕಲೆ, ಸಾಹಿತ್ಯ, ಕ್ರೀಡೆಯಲ್ಲಿ ಹೆಸರು ಮಾಡಿದ್ದಾರೆ. ಕಬಡ್ಡಿ ಪಂದ್ಯದಲ್ಲಿ ಕೋಮಾರಪಂತ ಸಮಾಜದ ಹೆಣ್ಣುಮಕ್ಕಳು ರಾಷ್ಟ್ರದಲ್ಲಿ ಹೆಸರು ಮಾಡಿದ್ದಾರೆ. ಕಲೆ, ಸಾಹಿತ್ಯದಲ್ಲೂ ಅವರ ಹೆಸರು ನಾಡಿನಾದ್ಯಂತ ಕಂಡುಬರುತ್ತದೆ. ಸರಕಾರಿ ಹುದ್ದೆಯನ್ನು ಅಲಂಕರಿಸಿದವರಿದ್ದಾರೆ. ಡಾಕ್ಟರ್, ಇಂಜಿನೀಯರರಾಗಿ ದೇಶ-ವಿದೇಶದಲ್ಲಿ ಮಿಂಚಿದ್ದಾರೆ, ಅಲ್ಲದೇ ನ್ಯಾಯಮಂಡಿಸುತ್ತಿದ್ದಾರೆ.

ಭಾರದದಲ್ಲಿ ಬ್ರೀಟಿಷರ ವಿರುದ್ಧ ಕರನಿರಾಕರಣೆಯ ಚಳುವಳಿ ನಡೆಸಿದವರು ಯಾರೆಂದು ಕೇಳಿದಾಗ ಥಟ್ಟನೆಬರುವ ಉತ್ತರ, ಮಹಾತ್ಮ ಗಾಂಧಿಯೆಂದು. 17ನೇ ಶತಮಾನದ ಕೊನೆಯ ದಶಕದಲ್ಲಿ ಮತ್ತು ಹದಿನೆಂಟನೇ ಶತಮಾನದ ಮೊದಲ ದಶಕದಲ್ಲಿ ಕಡಲ ತೀರದ ಗಂಡುಗಲಿ ಕೋಮಾರಪಂತ ಸಮಾಜದ ಹುಲಿ ಹೆಂಜಾ ನಾಯ್ಕ ಕರನಿರಾಕರಣೆಯ ಯುದ್ಧವನ್ನೇ ಸಾರಿರುವುದು, ಈಗ ಚರಿತ್ರೆಯಲ್ಲಿ ಮಾಯವಾಗಿದೆ. ಹೆಂಜಾನಾಯ್ಕರು ಬ್ರಿಟೀಷರ ವಿರುದ್ಧ ಅಷ್ಟೇ ಅಲ್ಲ ಬದಲಾಗಿ ಹೈದರಲಿ-ಟಿಪ್ಪುಸುಲ್ತಾನ ಮತ್ತು ಮರಾಠರ ವಿರುದ್ಧವೂ ಕರನಿರಾಕರಣೆಯ ರಣಕಹಳೆ ಊದಿರುವುದು ಚರಿತ್ರೆಯಲ್ಲಿ ದಾಖಲಿಸುವಂತೆ ಮಾಡಲು ಸಮಾಜದಿಂದ ಸಾಧ್ಯವಾಗಲಿಲ್ಲ ಅಥವಾ ಅವರ ಸೇವೆತನ್ನು ಅಷ್ಟಾಗಿ ಪರಿಗಣಿಸಿರಲಿಕ್ಕಿಲ್ಲ. ಒಬ್ಬ ಪ್ರಾಮಾಣಿಕ ದೇಶಪ್ರೇಮಿ ಸ್ವಾತಂತ್ರ್ಯ ಹೋರಾಟಗಾರನು ಬ್ರಿಟೀಷ್ ಆಳರಸರಿಂದ ಹತ್ಯೆಯಾದದ್ದನ್ನು ನೆನೆಯುವಲ್ಲಿ ಇಡೀ ಸಮಾಜ ಸಾಥಕೊಡಲಿಲ್ಲವೆಂಬುದು ಖೇದಕರ ಸಿಂಧೂರ ಲಕ್ಷ್ಮಣ, ಸಂಗೊಳ್ಳಿ ರಾಯಣ್ಣ ಇವರಿಗೆ ರಾಜಾಶ್ರಯವಿತ್ತು. ಆದರೆ ಹೆಂಜಾ ನಾಯ್ಕರಿಗೆ ಇಂಥ ರಾಜಾಶ್ರಯ ಇರಲಿಲ್ಲ. ಸೊಂದೆಯ ಅರಸರ ಅಡಿಯಲ್ಲಿ ಕೆಲಸಮಾಡಿದರೂ ಅವರಿಗೆ ಬೇಕಾದ ಯುದ್ಧ ಸಾಮಗ್ರಿ, ಕುದುರೆಗಳನ್ನು ಸೈನ್ಯವನ್ನು ತಾನೇ ಸಂಪಾದಿಸಿ ಸ್ವತಃ ದೇಶಸೇವೆಗೆ ಧುಮುಕಿದ ಏಕೈಕ ಸ್ವಾತಂತ್ರ್ಯದ ಹೆಂಜಾ ನಾಯ್ಕ ಎಂಬುದು ಚರಿತ್ರೆ ಬಲ್ಲವರು ಊಹಿಸಬಹುದು.

ಹೆಂಜಾ ನಾಯ್ಕ ಕಾರವಾರದ ಕೋಡಿಬಾಗದಲ್ಲಿರುವ ಮೈತ್ರಿ ಮನೆತನದಲ್ಲಿ ಹುಟ್ಟಿದವರೆಂದು ತಿಳಿಲಲಾಗಿದೆ. ಕಾರವಾರಕ್ಕೆ

ವರ್ಗವಾಗಿ ಬಂದ ಜಿಲ್ಲಾಧಿಕಾರಿಗಳು ಮತ್ತು ಪೋಲೀಸ್ ವರಿಷ್ಠಾಧಿಕಾರಿಗಳು ಮೊದಲು ಅಬ್ಯಾಸ ಮಾಡುವುದು ಕೋಮಾರಪಂತ ಸಮಾಜದ ಚಟುವಟಿಕೆ ಎಂಬುದು ಅನೇಕರಿಗೆ ತಿಳಿಯದ ವಿಷಯವಾಗಿದೆ. ಹೆಂಜಾ ನಾಯ್ಕ ಅಪ್ರತಿಮ ಹೋರಾಟಗಾರ ಗೆರಿಲ್ಲಾ ಯುದ್ಧದಲ್ಲಿ ನಿಸ್ಸಿಮರು. ಬಹುಷಃ ಭಾರತದಲ್ಲಿ ಗೆರಿಲ್ಲಾಯುದ್ಧ ಪದ್ಧತಿ ಹೆಂಜಾ ನಾಯ್ಕರಿಂದಲೇ ಪ್ರಾರಂಭವಾಗಿರಬೇಕು. ಸ್ವಾತಂತ್ರ್ಯ ಹೋರಾಟದಲ್ಲಿ ಗೆರಿಲ್ಲಾಯುದ್ಧಗಳಾಗಲೀ, ಧಂಗೆಗಳಾಗಲೀ

ಎಲ್ಲೂ ಕಂಡುಬಂದಿರುವುದು ನನ್ನ ಸ್ಮೃತಿಪಟಲದಲ್ಲಿ ಇಲ್ಲ. ಇತ್ತೀಚೆಗಿನ ದಿನಗಳಲ್ಲಿ ನಾವು ಅಮೆರಿಕಾದ ಸೈನ್ಯದ ವಿರುದ್ಧ ಗೆರಿಲ್ಲಾಯುದ್ಧ ಮಾಡಿದ ದಾಖಲೆಗಳವೆ. ಮೈಸೂರಿನ ಹೈದರಲಿ, ಕಾರವಾರ

ಪ್ರವೇಶ ಮಾಡಿದಾಗ ತೋಡುರಿನ ಘಟ್ಟದ ಮೂಲಕ ಕಾರವಾರಕ್ಕೆ ಬರಲು ಯತ್ನಿಸುತ್ತಾನೆ. ಮತ್ತು ತಾನು ಕ್ರಮಿಸಿದ ಘಟ್ಟಕ್ಕೆ ಹೈದರಘಟ್ಟವೆಂದು ಹೆಸರಿಸುತ್ತಾನೆ. ಹೆಂಜಾ ನಾಯ್ಕ ಇದನ್ನು ಗಮನಿಸಿ, ಘಟ್ಟದ ಮೇಲಿನ ಹಸಿರು ತಪ್ಪಲಲ್ಲಿ ಅಡಗಿ ಹೈದರನ ಸೈನ್ಯದ ಮೇಲೆ ದಾಳನೆಡೆಸಿ, ಸೈನಿಕರನ್ನು ಕೊಂದು ಅವರು ಸವಾರಿ ಮಾಡುವ ಕುದುರೆಯನ್ನು ಅವರ ಆಯುಧವನ್ನು ಸಂಪಾದಿಸುತ್ತಾನೆ. ಬ್ರಿಟೀಷರ ವಿರುದ್ಧ ಮತ್ತು ಟಿಪ್ಪುಸುಲ್ತಾನನ ವಿರುದ್ಧ ಸಮರ ಹೂಡುತ್ತಾನೆ. ಇವು ಕರ್ನಾಟಕದ ಚರಿತ್ರೆಯಲ್ಲಿ ದಾಖಲಾಗದೇ ಇರುವದು, ಕೋಮಾರಪಂತರಿಗೆ ವಿಶಾದನೀಯವಾಗಿದೆ. ಬ್ರಿಟೀಷರೊಡನೆ ರಾಜಿಯಾಗಿ ತಾನು ಮಾಡಿದ ಮಾರಕ ಮಾಡಲು ಪ್ರಯತ್ನಿಸಿದ ಬಾಲ್ಯದ ಗೆಳೆಯ ಗಿಡ್ಡಾ ಗಣೋಜಿ ನಾಯ್ಕರವನ್ನು ಬೆಳೂರಿನ ಅಡವಿಯಲ್ಲಿ ಕೊಲೆಗೈದಿರುವುದು ಅವನ ರಾಷ್ಟ್ರಪ್ರೇಮಕ್ಕೆ ಸಾಕ್ಷಿಯಾಗಿದೆ. ಭಾರತದಲ್ಲಿ ಸ್ವಾತಂತ್ರ ಚಳುವಳ 1857 ರಿಂದ ಪ್ರಾರಂಭವಾಯಿತೆಂದು ಇತಿಹಾ ದಾಖಲಿಸಿಲ್ಲ. ಹೆಂಜಾ ನಾಯ್ಕ ಬ್ರಿಟೀಷರ ವಿರುದ್ಧ ಮ ದೇಶದ್ರೋಹಿಗಳನ್ನು ಹಿಮ್ಮೆಟ್ಟಿಸಲು ಹೋರಾಡಿ ಜಾಣ್ಮೆಗೆ "ಚಕ-ಮಕ ಜಂಗ್ ಬಹಾದ್ದೂರು" ಬಿರುದ ಪಡೆದಿರುವುದು ಅಸಾಮಾನ್ಯವಾಗಿದೆ. ಸಿಂದೂ ಲಕ್ಷ್ಮಣ, ಸಂಗೊಳ್ಳಿ ರಾಯಣ್ಣನಿಗೆ ದೇಶದ್ರೋಹಿಗ ಪಿತೂರಿಯಿಂದ ಬ್ರಿಟೀಷರಿಗೆ ಹಿಡಯಲು ಸಾಧ್ಯವಾಗಲಿಲ್ಲ ಹೆಂಜಾನಾಯ್ಕ ಕಾಳನದಿಯನ್ನು ಈಜಿ ಸದಾಶಿವಗಡ ಹೋಗುವಾಗ ಬ್ರಿಟೀಷರ ಗುಂಡಿಗೆ ಬಲಿಯಾದನು ದೇಶಕ್ಕಾಗಿ ತನ್ನ ಜೀವವನ್ನೇ ಬಲಿಕೊಟ್ಟು ಅಮರನಾದ ಹೆಂಜಾನಾಯ್ಕರ ದೇಶಪ್ರೇಮವನ್ನು ಪ್ರಸ್ತುತಪಡಿಸು ಕೆಲಸ ಆಗಬೇಕಾಗಿದೆ. ಅವರ ಸಮಾಧಿಯ ಬ ವರ್ಷಕ್ಕೊಮ್ಮೆ ದೀಪಬೆಳಗಿಸಿದರೆ ಸಾಲದು. ಅವರು ಮಾಡಿದ ಕೆಲಸಗಳು ಅವರ ದೇಶಪ್ರೇಮ ನಾಡಿನ

ಜನತೆಗೆ ತಿಳಿಯುವಂತೆ ಆಗಬೇಕು. ಈ ದಿಸೆಯಲ್ಲಿ ನಾವೆಲ್ಲರೂ ಪ್ರಯತ್ನಿಸೋಣ.

♦♦♦♦

# ೩೯. ವರ್ಲ್ಡ್ ಆರ್ಕಿಟೆಕ್ಚರ್ ಕಮ್ಯುನಿಟಿ ಅವಾರ್ಡ್ ಶ್ರೇಯಾ ವೆರ್ಣೇಕರ್ ಮುಡಿಗೆ

ಸಂಗ್ರಹ: ಡಾ. ವಸಂತ ಬಾಂದೇಕರ–ಕಾರವಾರ ಕೃಪೆ: ಕರಾವಳ ಮುಂಜಾವು ದಿನಪತ್ರಿಕೆ, ಕಾರವಾರ



ಇಲ್ಲಿನ ಪ್ರಸಿದ್ಧ ಆರ್ಕಿಟೆಕ್ಟ್ ದಂಪತಿಗಳಾದ ಂಚನಾ ವೆರ್ಣೇಕರ್ ಹಾಗೂ ಸೋಮನಾಥ ರ್ಣೇಕರ್ ಅವರ ಸೊಸೆ ಶ್ರೇಯಾ ರಾಯ್ ರ್ಣೇಕರ್ ಅವರು ಆರ್ಕಿಟೆಕ್ಟ್ ಕ್ಷೇತ್ರದಲ್ಲಿ ಗಮನಾರ್ಹ ಾಧನೆ ಮಾಡಿದ್ದು, ಆರ್ಕಿಟೆಕ್ಚರ್ ಕ್ಷೇತ್ರದ ಪ್ರತಿಷ್ಠಿತ ಂತಾರಾಷ್ಟ್ರೀಯ ವರ್ಲ್ಡ್ ಆರ್ಕಿಟೆಕ್ಚರ್ ಕಮ್ಯುನಿಟಿ ವಾರ್ಡ್ ಪಡೆದುಕೊಳ್ಳುವ ಮೂಲಕ ಸಂಭ್ರಮಕ್ಕೆ ಾರಣರಾಗಿದ್ದಾರೆ.

ಬೆಂಗಳೂರಿನಲ್ಲಿರುವ ಪ್ರತಿಷ್ಠಿತ ಇಂಡಿಯನ್ ನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಐಐಎಂ)ನಲ್ಲಿನ ಹಳೆಯ ಮೂರು ಮಹಡಿಗಳ ್ಯಂತ ವಿಶಾಲವಾದ ಗ್ರಂಥಾಲಯವನ್ನು ದ್ಯಾರ್ಥಿಗಳನ್ನು ಆಕರ್ಷಿಸುವಂತೆ ಅತ್ಯಾಕರ್ಷವಾಗಿ ಹಾಗೂ ಆಧುನಿಕವಾಗಿ ನವೀಕರಿಸುವ ಕಟ್ಟಡ ವಿನ್ಯಾಸ ೂಪಿಸಿರುವ ಶ್ರೇಯಾ ರಾಯ್ ಈ ತಮ್ಮ ಆರ್ಕಿಟೆಕ್ಟ್ ಶಿಲ್ಪಕ್ಕಾಗಿ ದಕ್ಷಿಣ ಭಾರತ ಮಟ್ಟದ ಸ್ಪರ್ಧೆಯಲ್ಲಿ ಪ್ರಶಸ್ತಿ ಳಿಸಿ, ರಾಷ್ಟ್ರೀಯ ಮಟ್ಟದ ಸ್ಪರ್ಧೆಯಲ್ಲೂ ವಿಜೇತಳಾಗಿ, ಈಗ ಪ್ರತಿಷ್ಠಿತ ಅಂತಾರಾಷ್ಟ್ರೀಯ ವರ್ಲ್ಡ್ ಆರ್ಕಿಟೆಕ್ಚರ್ ಕಮ್ಯುನಿಟಿ ಅವಾರ್ಡ್ ಪಡೆದುಕೊಳ್ಳುವ ಮೂಲಕ ಕಾರವಾರಕ್ಕೆ ಹೆಮ್ಮೆಯ ಜೊತೆಗೆ ಸಂಭ್ರಮ ಮೂಡಿಸಿದ್ದಾರೆ.

ಶ್ರೇಯಾಳ ಸಾಧನೆಯ ವಿವರ:

ಬೆಂಗಳೂರಿನಲ್ಲಿರುವ ಪ್ರತಿಷ್ಠಿತ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್(ಐಐಎಂ)ನಲ್ಲಿ ವಿಶಾಲವಾದ ಗ್ರಂಥಾಲಯ ನಿರ್ಮಾಣ ವಾಗಿತ್ತು. ಮೂರು ಮಹಡಿಗಳ, 51 ಸಾವಿರ ಚ.ಅಡಿಗಳಷ್ಟು ವಿಸ್ತಾರವಾದ ಈ ಗ್ರಂಥಾಲಯದಲ್ಲಿ ಅಧ್ಯಯನ ಯೋಗ್ಯ ಲಕ್ಷಾಂತರ ಪುಸ್ತಕಗಳಿದ್ದರೂ, ವಿದ್ಯಾರ್ಥಿಗಳು ಈ ಗ್ರಂಥಾಲಯಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಬರುತ್ತಿರಲಿಲ್ಲ. ಗ್ರಂಥಾಲಯ ಸಾಂಪ್ರದಾಯಿಕ ಮಾದರಿ ಯಲ್ಲಿದ್ದು, ಇಲ್ಲಿ ಇತರ ಗ್ರಂಥಾಲಯಗಳಂತೆಯೇ ಆಸನ ವ್ಯವಸ್ಥೆ ಇತ್ತು. ಹೀಗಾಗಿ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿ ಗಳನ್ನು ಗ್ರಂಥಾಲಯದತ್ತ ಸೆಳೆಯಲು ಅನುಕೂಲವಾಗುವಂತೆ ಈ ಗ್ರಂಥಾಲಯವನ್ನು ನವೀಕರಣ ಮಾಡಲು ಆರ್ಕಿಟೆಕ್ಟ ರ್‌ಗಳ ಸಮುದಾಯಕ್ಕೆ ಐಐಎಂನವರು ಆಹ್ವಾನ ನೀಡಿದ್ದರು. ದೇಶದ ಪ್ರಸಿದ್ಧ ಹಲವು ಆರ್ಕಿಟೆಕ್ಟ್‌ಗಳ ಭಾಗವಹಿಸುವಿಕೆ ನಡುವೆ ಕಾರವಾರದ ಶ್ರೇಯಾ ರಾಯ್ ಪ್ರಾಜೆಕ್ಟ್ ಆರ್ಕಿಟೆಕ್ಟ್ ಆಗಿರುವ ವಿಶ್ವನಾಥ ಅಸೋಸಿಯೇಟ್ಸ್ ಆಯ್ಕೆ ಆಗಿತ್ತು. ಶ್ರೇಯಾ ಅವರು ದೇಶದ ದಿಗ್ಗಜ ಆರ್ಕಿಟೆಕ್ಟ್ ಆಗಿರುವ ಬಿ.ವಿ. ದೋಷಿ ಅವರು ನಿರ್ಮಿಸಿದ್ದ ಈ ಕಟ್ಟಡದ ವಿನ್ಯಾಸದಲ್ಲಿ ಸ್ವಲ್ಪವೂ ಬದಲಾವಣೆ ಮಾಡದೇ ಅದನ್ನು ಹಾಗೆಯೇ ಉಳಿಸಿಕೊಂಡು ಆಧುನಿಕ ಸ್ಪರ್ಶ ನೀಡುವ ಮೂಲಕ ಅತ್ಯಾಕರ್ಷವಾಗಿ ಈ ಗ್ರಂಥಾ ಲಯಕ್ಕೆ ನಾವೀನ್ಯತೆಯ ರೂಪ ನೀಡಿದ್ದರು. ಇದಕ್ಕಾಗಿ 5.4 ಕೋಟಿ ರು. ವೆಚ್ಚ ತಗುಲಿದ್ದು, ಸತತ ಮೂರು ವರ್ಷಗಳೇ ಹಿಡಿದಿದ್ದವು. ಈ ಗ್ರಂಥಾಲಯ ಸಂಪೂರ್ಣ ನವೀ ಕರಣಗೊಂಡಾಗ ಐಐಎಂ ಕಟ್ಟಡವನ್ನು ನಿರ್ಮಿಸಿದ್ದ ದಿಗ್ಗಜ ಆರ್ಕಿಟೆಕ್ಟ್ ಬಿ.ವಿ. ದೋಷಿ ಅವರೇ ಈ ಗ್ರಂಥಾಲಯವನ್ನು 2019 ರ ನವೆಂಬರ್‌ನಲ್ಲಿ ಉದ್ಘಾಟಿಸಿದ್ದರು.

ಈ ಆರ್ಕಿಟೆಕ್ಚರ್ ಪ್ರಾಜೆಕ್ಟ್ ಎಷ್ಟೊಂದು ಅದ್ಭುತವಾಗಿದೆ

"ದೇಶದ ದಿಗ್ಗಜ ಆರ್ಕಿಟೆಕ್ಟ್ ಆಗಿರುವ ಬಿ. ವಿ. ದೋಷಿ ಅವರು ನಿರ್ಮಿಸಿದ ಐಐಎಂ ಕಟ್ಟಡ ವನ್ನು ಹಾಗೆಯೇ ಉಳಿಸಿಕೊಂಡು ಗ್ರಂಥಾಲಯ ವನ್ನು ವಿದ್ಯಾರ್ಥಿಗಳ ಅಗತ್ಯಕ್ಕೆ ತಕ್ಕಂತೆ ನವೀಕರಿಸುವುದು ದೊಡ್ಡ ಸವಾಲಾಗಿತ್ತು. ಇದಕ್ಕಾಗಿ ವಿದ್ಯಾರ್ಥಿಗಳೊಂದಿಗೆ ಸಂವಾದ ನಡೆಸಿ, ಅವರ ಬೇಡಿಕೆ, ಅಗತ್ಯಗಳನ್ನು ಅರ್ಥ ಮಾಡಿಕೊಂಡು, ವಿದೇಶದ ಗ್ರಂಥಾಲಯ ಗಳನ್ನೂ ಅಧ್ಯಯನ ಮಾಡಿ, ಆಧುನಿಕ ಪೀಠೋ ಪಕರಣಗಳ ಜತೆಯಲ್ಲಿ ಈ ಗ್ರಂಥಾಲಯ ವಿಭಾಗವನ್ನು ನವೀಕರಣ ಗೊಳಿಸಲಾಗಿದೆ. ಈ ಪ್ರಾಜೆಕ್ಟ್‌ಗೆ ಅಂತರಾಷ್ಟ್ರೀಯ ಪ್ರಶಸ್ತಿ ದೊರೆತಿರುವುದು ಅಪಾರ ಸಂತಸ ತಂದಿದೆ. ಭವಿಷ್ಯದಲ್ಲಿ ಕಾರವಾರದಲ್ಲೇ ನೆಲಸಲಿದ್ದು, ಅತ್ತೆ ಕಾಂಚಾನಾ ವೆರ್ಣೇಕರ್ ಹಾಗೂ ಪತಿ ಪ್ರತೀಕ ಜತೆಯಲ್ಲಿ ಕೆಲಸ ಮುಂದುವರೆಸುತ್ತೇನೆ."

–ಶ್ರೇಯಾ ರಾಯ್ ವೆರ್ಣೇಕರ್





ಯೆಂದರೆ ವರ್ಲ್ಡ್ ಆರ್ಕಿಟೆಕ್ಚರ್ ಕಮ್ಯುನಿಟಿ ಅವಾರ್ಡ್‌ನ ಆನ್‌ಲೈನ್ ಸ್ಪರ್ಧೆಯಲ್ಲಿ ಈ ಪ್ರಾಜೆಕ್ಟ್ ದಕ್ಷಿಣ ಭಾರತ ಮಟ್ಟದಲ್ಲಿ, ನಂತರ ರಾಷ್ಟ್ರೀಯ ಮಟ್ಟದಲ್ಲಿ ಅತ್ಯುತ್ತಮ ಪ್ರಾಜೆಕ್ಟ್ ಎಂದು ಆಯ್ಕೆಯಾಗಿ ಈಗ ಅಂತರಾಷ್ಟ್ರೀಯ ಪ್ರಶಸ್ತಿಯನ್ನೂ ಮುಡಿಗೇರಿಸಿಕೊಂಡಿದೆ.

ಅತ್ತೆಗೆ ತಕ್ಕ ಸೊಸೆ:

ಶ್ರೇಯಾ ರಾಯ್ ವೆರ್ಣೇಕರ್ ಮೂಲತಃ ಜಾರ್ಖಂಡ್‌ನ ಧನಾಬಾದ್‌ನವರು. ಎರಡು ತಿಂಗಳ ಹಿಂದೆ ಕಾರವಾರದ ಪ್ರತೀಕ ವೆರ್ಣೇಕರ್ ಅವರೊಂದಿಗೆ ವಿವಾಹವಾಗಿ ಈಗ ಕಾರವಾರದಲ್ಲೇ ನೆಲೆಸಿದ್ದಾರೆ. ಶ್ರೇಯಾ ಅವರ ಪತಿ ಪ್ರತೀಕ ವೆರ್ಣೇಕರ್ ಕೂಡ ಆರ್ಕಿ–ಟೆಕ್ಟರ್ ಆಗಿದ್ದು, ಕಾಲೇಜಿನಲ್ಲಿ ಇಬ್ಬರೂ ಸಹಪಾಠಿಗಳಾಗಿದ್ದವರು. ಕಾಲೇಜಿನ ದಿನಗಳಲ್ಲೇ ತಮ್ಮ ಅತ್ತೆ ಕಾಂಚಾನಾ ವೆರ್ಣೇಕರ್ ಅವರಿಂದ ಸಲಹೆ ಮಾರ್ಗದರ್ಶನ ಪಡೆದುಕೊಳ್ಳುತ್ತಿದ್ದೆ ಎಂದು ಶ್ರೇಯಾ ಸಂತಸದಿಂದಲೇ ತಿಳಿಸುತ್ತಾರೆ.

ಕಾಂಚಾನಾ ವೆರ್ಣೇಕರ್ ಹಾಗೂ ಸೋಮನಾಥ ವೆರ್ಣೇಕರ್ ದಂಪತಿಗಳು ಈಗಾಗಲೇ ಜಿಲ್ಲೆಯ ಆರ್ಕಿಟೆ ಕ್ಷೇತ್ರದಲ್ಲಿ ಅಪಾರವಾದ ಪ್ರಸಿದ್ಧಿ ಹಾಗೂ ಯಶಸ್ಸುಗಳಿಸಿದ್ದಾರೆ.

ಕಾರವಾರ, ಮುರ್ಡೇಶ್ವರ, ಗೋಕರ್ಣ ರೈಲ್ವೆ ನಿಲ್ದಾ ವಿನ್ಯಾಸ, ಎನ್‌ಪಿಸಿಎಲ್ ಕೈಗಾದಲ್ಲಿ, ಕಾರವಾರದ ಖಾಸ ಇಂಜಿನಿಯರಿಂಗ್ ಕಾಲೇಜ್, ಕಾರವಾರದ ಆಧುನಿಕ ಮೀನ ಮಾರುಕಟ್ಟೆ, ಕಾರವಾರದ ಮೊದಲ 7 ಮಹಡಿಗಳ ಕಟ್ಟ ವರ್ಚುವಲ್ ಪಾರಾಡೈಸ್ ಸೇರಿದಂತೆ ಬಹುತೇಕ ಉತ್ತಮ ಕಟ್ಟ ವಿನ್ಯಾಸದಲ್ಲಿ ಇವರ ಕೌಶಲ್ಯವಿದೆ. ಹೀಗಾಗಿ ಶ್ರೇಯಾ ಅತ್ತೆಗೆ ತ ಸೊಸೆಯಾಗಿ ಹೆಮ್ಮೆ ಮೂಡಿಸಿದ್ದಾರೆ. ಶ್ರೇಯಾ ಅವರ ಪ ಪ್ರತೀಕ ಆರ್ಕಿಟೆಕ್ಟರ್ ಕ್ಷೇತ್ರದಲ್ಲಿ ಪ್ರಸಿದ್ದಿ ಪಡೆದಿದ್ದು, ಭವಿಷ್ಯ ಯೋಜನೆಗಳ ತಯಾರಿಕೆ ಬಗ್ಗೆ ವೊಲ್ಯೂಮ್ ಝಿರೋ ಎಂ ಸಂಸ್ಥೆ ಜಾಗತಿಕ ಮಟ್ಟದಲ್ಲಿ ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ಟಾಪ್ 5 ರ ಪಟ್ಟಿಯಲ್ಲಿ ಆಯ್ಕೆ ಆಗಿ ಈ ಹಿಂದೆಯೇ ಗಮನಸೆಳೆದಿದ್ದರು.

◆◆◆◆





# 40. ಈಜಿನಲ್ಲಿ ಗಿನ್ನಿಸ್ ದಾಖಲೆ ಮಾಡಿದ ಶ್ರೀ ಗೋಪಾಲ ಖಾರ್ವಿ



ಕರ್ನಾಟಕದ ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ 37 ವರ್ಷದ ಕೊಂಕಣ ಖಾರ್ವಿ ಸಮುದಾಯದ ಶ್ರೀ ಗೋಪಾಲ ಖಾರ್ವಿಯವರು ದಿನಾಂಕ: 09-01-2011ರಂದು ತಮ್ಮ ಕೈ ಹಾಗೂ ಕಾಲುಗಳಿಗೆ ಕಬ್ಬಿಣದ ಚೈನುಗಳನ್ನು ಕೈ ಹಾಗೂ ಕಾಲುಗಳಿಗೆ ಹಾಕಿಕೊಂಡು ಸಮುದ್ರದಲ್ಲಿ 3 ಕಿಲೋ ಮೀಟ-ರ್ ಈಜಿಕೊಂಡು ಗಿನ್ನೀಸ್ ದಾಖಲೆ ಮಾಡಿದ್ದು, ಕರ್ನಾಟಕದವರಿಗೂ ಹಾಗೂ ಕೊಂಕಣಿ ಭಾಷಿಕರಿಗೂ ಅಭಿಮಾನದ ಸಂಗತಿಯಾಗಿದೆ. ವೃತ್ತಿಯಿಂದ ರಿಕ್ಷಾ ಚಾಲಕರಾಗಿ, ಕುಟುಂಬದ ನಿರ್ವಹಣೆಯ ಜೊತೆಗೆ ಈಜಿನ ಹವ್ಯಾಸ ಬೆಳೆಸಿಕೊಂಡು ಇವರು ಈಜುವ ದಾಖಲೆ ಮಾಡಿರುವುದು ನಮಗೆಲ್ಲಾ ಕೊಂಕಣಿ ಭಾಷಿಕರಿಗೆ ಸಂತೋಷದ ಸಂಗತಿಯಾಗಿದೆ. ಇವರ ಈ ಸಾಧನೆಯನ್ನು ಪರಿಗಣಿಸಿ ಹಲವಾರು ಸಂಘ ಸಂಸ್ಥೆಗಳು ಸನ್ಮಾನಿಸಿವೆ.

# 41. ಕರ್ನಾಟಕ ರಾಜ್ಯ ಕ್ರೀಡಾ ರತ್ನ ಪ್ರಶಸ್ತಿ ವಿಜೇತ ಕಂಬಳ ಓಟಗಾರ ಶ್ರೀ ಶ್ರೀನಿವಾಸ ಗೌಡ



ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯ ಶ್ರೀ ಶ್ರೀನಿವಾಸ ಗೌಡ ವಯಸ್ಸು 28 ಕೊಂಕಣಿ ಭಾಷಿಕ ಕುಡಬಿ ಸಮುದಾಯದವರು. ವ್ಯವಸಾಯ, ಕಟ್ಟಡ ಕಾರ್ಮಿಕ ಜೊತೆಗೆ ಬಾಲ್ಯದಿಂದಲೇ ಕಂಬಳ ಓಟದಲ್ಲಿ ಆಸಕ್ತಿ ವಹಿಸಿ ತಮ್ಮ ಮಾಲಿಕರ ಎತ್ತುಗಳ ಜೊತೆ ನಿರಂತರವಾಗಿ ಓಡುವ ಅಭ್ಯಾಸ ಮಾಡಿ ಹಲವಾರು ಚಿಕ್ಕಪುಟ್ಟ ಕಂಬಳ ಓಟದ ಸ್ಪರ್ಧೆಯಲ್ಲಿ ಭಾಗವಹಿಸಿ ಕೊನೆಗೊಂದು ದಿನ ಕಂಬಳ ಓಟದ ಸ್ಪರ್ಧೆಯಲ್ಲಿ 142 ಮೀಟರ್ ಅಂತರವನ್ನು ಬರೀ 13.5 ಸೆಕೆಂಡುಗಳಲ್ಲಿ ಓಡಿ ದಾಖಲೆ ಮಾಡಿ ಇಂದು ರಾಜ್ಯ, ರಾಷ್ಟ್ರ ಅಷ್ಟೇ ಅಲ್ಲ ವಿವಿಧ ದೇಶದ ಜನರು ಕುತೂಹಲದಿಂದ ಚರ್ಚಿಸುವ ವಿಷಯವಾಗಿದೆ. ಕಾರಣ ಓಲಂಪಿಕ್ ಬಂಗಾದ ಪದಕ ಪಡೆದ ಪ್ರಸಿದ್ಧ ಹುಸೇನ್ ಬೋಲ್ಟ್‌ರವರೊಂದಿಗೆ ಹೋಲಿಸಿ ಮಾತನಾಡುತ್ತಿದ್ದಾರೆ. ಇಂತಹ ಮಹಾನ್ ಗ್ರಾಮೀಣ ಭಾಗದ ಕ್ರೀಡಾಪಟುವಿಗೆ ಭಾರತ ಸರ್ಕಾರ ಸರಿಯಾದ ತರಬೇತಿ ನೀಡಿದ್ದಲ್ಲಿ ಖಂಡಿತ ಓಲಂಪಿಕ್ ಓಟದಲ್ಲಿ ಚಿನ್ನದ ಪದಕ ಪಡೆದು ಭಾರತಕ್ಕೆ ಕೀರ್ತಿ ತರಬಲ್ಲರು. ಇವರ ಭಾವೀ ಭವಿಷ್ಯ ಉಜ್ವಲವಾಗಲೆಂದು ನಮ್ಮೆಲ್ಲ ಕೊಂಕಣಿ ಭಾಷಿಕರ ಆಶಯವಾಗಿದೆ.

**ಸಂಗ್ರಹ: ಡಾ. ವಸಂತ ಬಾಂದೇಕರ-ಕಾರವಾರ**

# 42. ಮುಂಬೈ ನಗರದ ಆಧುನಿಕ ಶಿಲ್ಪಕಾರ (ನಾನಾ) ಜಗನ್ನಾಥ ಶಂಕರ ಶೇಠ (1803-65)

ಮೂಲ: ಶ್ರೀ ಅನಂತ ಜೋಡಣಕರ (ಇಂಗ್ಲೀಷ್
ಅನುವಾದ : ಶ್ರೀಪಾದ ಪೂಜಾರ (ಕನ್ನ



**ಹಿನ್ನಲೆ**

16ನೇ ಶತಮಾನದಲ್ಲಿ ಇಂದಿನ ಭಾರತದ ಪ್ರಸಿದ್ಧ ಮುಂಬೈ ನಗರವು 7 ದ್ವೀಪಗಳಿಂದ ಕೂಡಿದ ದ್ವೀಪ ಸಮೂಹವಾಗಿತ್ತು. 1) ದೊಡ್ಡ ಕುಲಾಬಾ 2) ಸಣ್ಣ ಕುಲಾಬಾ 3) ಮಜಗಾಂವ 4) ಪರೇಲ 5) ವೋರ್ಲಿ 6) ಮಾತುಂಗಾ 7) ಮಾಹಿಂ 1665ರಲ್ಲಿ ಪೊರ್ತುಗೀಸರು ಮುಂಬೈಯನ್ನು ಬ್ರಿಟೀಷ ಅಧಿಕಾರಿಗಳಿಗೆ ಒಪ್ಪಿಸಿದರು. 1669ರಲ್ಲಿ ಮುಂಬಯಿಯ ಆಡಳಿತವನ್ನು ಈಸ್ಟ್ ಇಂಡಿಯಾ ಕಂಪನಿ ತನ್ನ ವಶಕ್ಕೆ ತೆಗೆದುಕೊಂಡಿತು ಹಾಗೂ ದೇಶ ವಿದೇಶಗಳ ವ್ಯಾಪಾರಕ್ಕಾಗಿ, ವಹಿವಾಟಿಗಾಗಿ ಸೂಕ್ತ ಸ್ಥಾನವಾಗಬಲ್ಲದೆಂದು ಅರಿತು ಮುಂಬಯಿಯನ್ನು ಅಭಿವೃದ್ಧಿಪಡಿಸಿದರು. ಇದರಿಂದಾಗಿ ಮುಂಬೈಯಿಯಲ್ಲಿ ಜನಸಂಖ್ಯೆ ಹೆಚ್ಚುತ್ತಾ ಹೋಯಿತು.

## ನಾನಾರ ಪೂರ್ವಜರು

ನಾನಾ ಅವರ ಮೂಲ ಪುರುಷರು ಮಹಾರಾಷ್ಟ್ರದ ಥಾಣಾ ಜಿಲ್ಲೆಯ ಶಹಾಪೂರ್ ತಾಲೂಕಿನ ಮುರ್ಬಾದ್ ಎಂಬ ಸ್ಥಳಕ್ಕೆ ಸೇರಿದವರು. ದೈವಜ್ಞ ಬ್ರಾಹ್ಮಣ ಪಂಗಡಕ್ಕೆ ಸೇರಿದ ಇವರ ಕುಲವೃತ್ತಿ ಆಭರಣಗಳನ್ನು ಮಾಡುವುದು. ಅವರ ಮನೆತನದ ಹೆಸರು 'ಮುರ್ಕುಟ' ನಮಗೆ ಈ ವಂಶದ ನಾರಾಯಣ ಶೇಟ್ ಮುರ್ಕುಟೆಯವರ ತಲೆಮಾರಿನ ನಂತರದ ಬೆಳವಣಿಗೆಗಳು ಮಾತ್ರ ಲಭ್ಯವಾಗಿದೆ. ಈ ನಾರಾಯಣಶೇಟರು ತಮ್ಮ ಕುಲವೃತ್ತಿಯೊಂದಿಗೆ ತಮ್ಮ ಸ್ಥಳದ ಪೋತೇದಾರರೂ ಆಗಿದ್ದರು. ಜೊತೆಗೆ ಈ ಕುಟುಂಬವು ವ್ಯಾಪಾರ ವಹಿವಾಡಿನೊಂದಿಗೆ ತಮ್ಮ ಆರ್ಥಿಕ ಅಭಿವೃದ್ಧಿಯನ್ನು ಹೊಂದುವ ಮಹಾತ್ವಾಕಾಂಕ್ಷಿ ವಣಿಕ ಕುಟುಂಬವಾಗಿ ರೂಪುಗೊಳ್ಳತೊಡಗಿತ್ತು. ತಮ್ಮ ವೃತ್ತಿಗೆ ಸಂಬಂಧಪಟ್ಟಂತಹ ಮುತ್ತು, ಹವಳ ಮುಂತಾದ ಅಮೂಲ್ಯ ವಸ್ತುಗಳ ವ್ಯಾಪಾರವನ್ನು ನಾರಾಯಣಶೇಟರು ಪ್ರಾರಂಭಿಸಿದ್ದರು. ಅವರು ಮಗ ಮಾಣೀಕ್‌ಶೇಟ್ ತಮ್ಮ ಸ್ಥಾನೀಯ ಅಧಿಕಾರವಾದ ಪೋತೇದಾರಿಕೆ, ತಂದೆಯ ಬಳುವಳಿಯಾದ ಮುತ್ತು, ಹವಳಗಳ ವ್ಯಾಪಾರದ ಜೊತೆಗೆ ಚಹಾ ಸಕ್ಕರೆಗಳಂತಹ ಸಾಮಾನ್ಯ ಅಗತ್ಯದ ಸಾಮಗ್ರಿಗಳಗೂ ತಮ್ಮ ವಹಿವಾಟವನ್ನು ವಿಸ್ತರಿಸಿಕೊಂಡರು. ಮಾಣಿಕಶೇಟರ ಮಗ ಬಾಬುಲ್ ಶೇಟರು ತಮ್ಮ ವ್ಯವಹಾರವನ್ನು ಬೀಡಿ ಎಲೆಗಳ ಸಗಟು ವ್ಯಾಪಾರಕ್ಕೂ ವಿಸ್ತರಿಸಿದರು. ಇವೆಲ್ಲದರ ಜೊತೆಗೆ ಈ ಕುಟುಂಬದವರು ಲೇವಾದೇವಿ ವ್ಯವಹಾರದಲ್ಲೂ ಸಿದ್ಧಹಸ್ತರಾಗಿದ್ದರು. ಹೀಗಾಗಿ ಮುರ್ಕುಟೆ ವಂಶವು ಆ ಪ್ರಾಂತ್ಯದಲ್ಲಿ ಬಾಬುಲ್ ಶೇಟ್‌ರ ಕಾಲದ ಹೊತ್ತಿಗೆ ಒಂದು ಪ್ರತಿಷ್ಠಿತ ವಣಿಕ ಕುಟುಂಬ ಮತ್ತು ಉತ್ತಮ 'ಬ್ಯಾಂಕರ್'ಗಳೆಂಬ ಖ್ಯಾತಿಗೆ ಪಾತ್ರವಾಗಿತ್ತು ಪೋರ್ಚುಗಿಜರ ದೌರ್ಜನ್ಯಗಳನ್ನು ಎದುರಿಸಲಾರದೆ ಈ ಕುಟುಂಬವು ಸುರಕ್ಷಿತ ಪ್ರದೇಶಗಳಿಗೆ ತನ್ನ ಕಾರ್ಯಸ್ಥಾನವನ್ನು ಸ್ಥಳಾಂತರಿಸುವುದ ಅನಿವಾರ್ಯವಾಯಿತು. ಹಿಗಾಗಿ ನಾರಾಯಣಶೇಟ ಮತ್ತು ಮಾಣಿಕ ಶೇಟರು ಪೋರಬಂದರಿಗೆ ಮತ್ತ ಬಾಬುಲ್‌ಶೇಟ್‌ರು ಘೋಡ'ಬಂದರಿಗೆ ತಮ್ಮ ವ್ಯವಹಾರಗಳನ್ನು ಸ್ಥಳಾಂತರಿಸಿಕೊಂಡರು. ಗುಜರಾತಿನ ಈ ಎರಡೂ ನಗರಗಳ ನಡುವೆ ಉತ್ತಮ ವ್ಯಾಪಾರಿ ಸಂಬಂಧವಿದ್ದುದ್ದರಿಂದ ಎರಡೂ ಕಡೆ ಇವರ ವ್ಯಾಪಾರ-ವ್ಯವಹಾರಗಳು ಉತ್ತಮವಾಗಿ ನೆಲೆಗೊಳ್ಳುವಂತಾಯಿತು. ಬಾಬುಲ್‌ಶೇಟರು ವಲಸೆ ಬಂದ ಘೋಡಬಂದರ್, ಪೇಷ್ವೆಯವರ ಆಡಳಿತದಲ್ಲಿದ್ದು, ಪರಿಶ್ರಮೀ ವ್ಯಾಪಾರಸ್ಥರ ಅಭಿವೃದ್ಧಿಗೆ ಹೇಳಿ ಮಾಡಿಸಿದ ಸ್ಥಳವಾಗಿತ್ತು. ಹೀಗಾಗಿ ಸ್ವಭಾವತಃ ಪರಿಶ್ರಮಿಗಳಾಗಿದ್ದ ಬಾಬುಲ್‌ಶೇಟ್‌ರು ಅಲ್ಲಿ ತಮ್ಮ ವಹಿವಾಟನ್ನು ಭದ್ರವಾಗಿ ಸ್ಥಾಪಿಸಲು ಅನುಕೂಲವಾಯಿತು. ತಮ್ಮ ವ್ಯವಹಾರಗಳನ್ನು ಟೀ, ಕಾಫಿ, ಮಸಾಲೆ, ಸಕ್ಕರೆ ಮುಂತಾದ ಅನೇಕ ಜನೋಪಯೋಗಿ ಸಾಮಗ್ರಿಗಳ ವ್ಯಾಪಾರಕ್ಕರೂ ವಿಸ್ತರಿಸಿಕೊಂಡು ಬಾಬುಲ್‌ಶೇಟರು ಕೆಲವೇ ದಿನಗಳಲ್ಲಿ ಘೋಟಬಂದರಿನ ಪ್ರತಿಷ್ಠಿತ ವಣಿಕರಾಗಿ ಪ್ರತಿಷ್ಠಾಪಿತರಾದರು. ಸುಂದರ, ಬೃಹತ್ ಬಂಗಲೆಯನ್ನು ಕಟ್ಟಿಸಿಕೊಂಡು ಸುಖಶಾಂತಿಗಳಿಂದ ನೆಲೆಸಿದ್ದರು.

ಈ ಮಧ್ಯೆ ಬ್ರಿಟಿಷರ್ ಪ್ರಯತ್ನಗಳಿಂದಾಗಿ ಮುಂಬಯಿ ಒಂದು ಉತ್ತಮ ವ್ಯಾಪಾರಿ ಕೇಂದ್ರವಾಗಿ ಅಭಿವೃದ್ಧಿ

ಿಂದತೊಡಗಿತ್ತು. ಇದು ಸುತ್ತಮುತ್ತಲಿನ ಪ್ರದೇಶದ ಜನರನ್ನು ಸಹಜವಾಗಿಯೇ ಆಕರ್ಷಿಸತೊಡಗಿತ್ತು. ದೂರದರ್ಶಿಯಾದ ಬಾಬುಲ್‌ಶೇಟ್‌ರು ಮುಂಬೈಗೂ ತಮ್ಮ ವ್ಯಾಪಾರವನ್ನು ವಿಸ್ತರಿಸುವ ಅನಿವಾರ್ಯತೆಯನ್ನು ಮನಗಂಡು ಅಲ್ಲಿಯೂ ಒಂದು ಶಾಖೆಯನ್ನು ಪ್ರಾರಂಭ ಮಾಡಿದರು. ಅದರ ಉಸ್ತುವಾರಣೆಗೆ ಅವರು ತಮ್ಮ ಪುತ್ರ ಶಂಕರಶೇಟ್‌ರನ್ನೇ ನೇಮಿಸಿದರು.

ಶಂಕರಶೇಟ್ ಸ್ವಭಾವತಃ ತುಂಬಾ ಸಾಹಸಿ ಮತ್ತು ಕುಶಾಗ್ರಮತಿ. ಎಳೆಯ ವಯಸ್ಸಿನ ಅವರು ತನ್ನ ತಂದೆಯಿಂದ ವ್ಯಾಪಾರದ ಸೂಕ್ಷ್ಮತೆಗಳನ್ನು ಬಳುವಳಿಯಾಗಿ ಪಡೆದಿದ್ದರು. ವ್ಯಾಪಾರದ ಮುಖ್ಯ ಸೂತ್ರವಾದ ತಾಳ್ಮೆ ಮತ್ತು ವಿನಯ ಅವರಲ್ಲಿ ಅಂತರ್ಗತವಾಗಿತ್ತು. ವ್ಯಾಪಾರಿಯಾದವನಿಗೆ ತನ್ನ ಗ್ರಾಹಕರ ಭಾಷೆಯ ಜ್ಞಾನ ಅತ್ಯಗತ್ಯ ಎಂದು ಅರಿತಿದ್ದ ಶಂಕರಶೇಟ್ ತನ್ನ ಮುಖ್ಯ ಗ್ರಾಹಕರ ಭಾಷೆಗಳಾದ ಗುಜರಾತಿ, ಇಂಗ್ಲೀಷ್ ಮತ್ತು ಪೋರ್ಚುಗೀಸ್ ಭಾಷೆಗಳನ್ನು ಕಲಿತಿದ್ದು, ಅದರಲ್ಲಿ ಸರಳವಾಗಿ ವ್ಯವಹರಿಸಬಲ್ಲವರಾಗಿದ್ದರು. ಚಾಣಾಕ್ಷ ವ್ಯಾಪಾರಿಗಳಾದ ಬ್ರಿಟಿಷ್‌ರಿಂದ ವ್ಯಾಪಾರದ ಸೂಕ್ಷ್ಮತೆಗಳನ್ನು ಅರಿಯಲು ಬ್ರಿಟಿಷ್ ಸಂಸ್ಥೆಯೊಂದಲ್ಲಿ ಅವರು ಸ್ವತಃ ದುಡಿದಿದ್ದರು. ದೂರದ ಬಂಗಾಳ ವ್ಯಾಪಾರಿಗಳೊಂದಿಗಿನ ವ್ಯಾಪಾರವೊಂದರಲ್ಲಿ ಬೃಹತ್ ಮೊತ್ತದ ಲಾಭಗಳಿಸಿ ಅವರು ಲಕ್ಷಾಧಿಪತಿಯಾದರು. ತಮ್ಮ ಸಂಸ್ಥೆಯಲ್ಲಿ ಅಂದಿನ ಕಾಲದಲ್ಲಿಯೇ ಲಕ್ಷಾಂತರ ರೂಪಾಯಿಗಳ ದೈನಂದಿನ ವ್ಯವಹಾರ ನಡೆಸುವಷ್ಟು ಅವರ ವ್ಯಾಪಾರ ಬೃಹತ್ತಾಗಿತ್ತು. ಬೆಳವಣಿಗೆಯ ಹಾದಿಮುಂಬೈನ ಪ್ರತಿಷ್ಠಿತ ಭೂಮಾಲಿಕರಾದರು. ಅನೇಕ ಮನೆ ವಠಾರಗಳನ್ನು ಕಟ್ಟಿಸಿ ಬೃಹತ್ ಸಂಪತ್ತಿನ ಒಡೆ-ಯರಾದರು. ಇಂದು ಗಿರಿಗಾಂವ್ ಎಂದು ಕರೆಯಲ್ಪಡುತ್ತಿರುವ ಅಂದಿನ ಪಲ್ಲವ ರಸ್ತೆಯಲ್ಲಿ ತಮ್ಮ ಸ್ವಂತ ಬಳಕೆಗಾಗಿ ಒಂದು ಬೃಹತ್ ಬಂಗಲೆಯನ್ನು ಕಟ್ಟಿಸಿದರು. ಅವರ ಯಶಸ್ಸಿನ ಅಧ್ಯಾಯ ಕಾಲವೆಂದರೆ 1795 ರಿಂದ 1800. ಹೀಗೆ ನಾನಾರ ಜನನದ ಹೊತ್ತಿಗೆ ಅವರ ವಂಶವು ಮುಂಬಯಿನ ಒಂದು ಪ್ರತಿಷ್ಠಿತ ಕುಟುಂಬವಾಗಿ ಪ್ರಸಿದ್ಧಿ ಹೊಂದಿತ್ತು.

## ನಾನಾ ಜಗನ್ನಾಥ ಶಂಕರ ಶೇಠರ ಜನ್ಮ :

ಮನೆದೇವರಾದ ತಿರುಪತಿ ವೇಂಕಟೇಶ್ವರನ ದಯೆಯಿಂದ ಮದುವೆಯಾದ ಕೆಲ ದಿನಗಳಲ್ಲಿ ಭವಾನಿಬಾಯಿಯವರು ಗರ್ಭಿಣಿಯಾದರು. ಭಗವಂತನ ಅಪಾರ ಕರುಣೆ ತಮ್ಮ ಮೇಲೆ ಉಂಟಾಗಿದ್ದಕ್ಕಾಗಿ ಸತಿಪತಿಯರಿಬ್ಬರೂ ಕೃತಜ್ಞಾಪೂರ್ವಕವಾಗಿ ಅನೇಕ ವ್ರತ-ಪೂಜೆಗಳನ್ನು ಮಾಡಿ ಮುಗಿಸಿದರು. ಒಂಬತ್ತು ತಿಂಗಳ ಪೂರ್ಣಗರ್ಭದ ನಂತರ 1803ರ ಫೆಬ್ರುವರಿ 10ನೇ ತಾರೀಖಿನಂದು ಮಧ್ಯಾಹ್ನ 2 ಗಂಟೆಗೆ ಭವಾನಿಬಾಯಿಯವರು ಗಂಡು ಮಗುವಿಗೆ ಜನ್ಮಕೊಟ್ಟರು. ಭಗವಂತನ ಆಶೀರ್ವಾದದಿಂದ ದೊರಕಿದ ಮಗು ಅದೆಂಬುದರಲ್ಲಿ ಕುಟುಂಬಕ್ಕೆ ಯಾವುದೇ ಸಂಶಯವಿರಲಿಲ್ಲ. ಅನೇಕ ದಿನಗಳ ಕಾಯಿವಿಕೆಯ ಫಲ ದೊರಕಿದ್ದರಿಂದ ಇಡೀ ಕುಟುಂಬ ಸಂತೋಷ ಸಾಮ್ರಾಜ್ಯದಲ್ಲಿ ತೇಲಾಡತೊಡಗಿತ್ತು. ವಿಧಿವತ್ತಾಗಿ ನಡೆಯಬೇಕಾದ ಎಲ್ಲ ಜಾತ ಸಂಸ್ಕಾರ ವಿಧಿಗಳೂ ಸಮರ್ಪಕವಾಗಿ ನಡೆದು 12ನೇ ದಿನ ಮಗುವಿನ ನಾಮಕರಣ ಮಹೋತ್ಸವನ್ನು ವಿಜೃಂಭಣೆಯಿಂದ ಆಚರಿಸಲಾಯಿತು. ಮುಂಬಯಿನ ಪ್ರತಿಷ್ಠಿತರೆಲ್ಲ ಉಪಸ್ಥಿತರಿದ್ದ ಅಂದಿನ ಸಮಾರಂಭದಲ್ಲಿ ಮಗುವಿಗೆ 'ಜಗನ್ನಾಥ' ಎಂದು ನಾಮಕರಣ ಮಾಡಿದರು. ಎಲ್ಲರೂ ಮಗುವನ್ನು ಮುದ್ದಿನಿಂದ 'ನಾನಾ' ಎಂದು ಕರೆಯತೊಡಗಿದರು.

ಶಂಕರಶೇಟ್‌ರ ಮನೆಯಲ್ಲಿ ಇಂತಹ ಸಂಭ್ರಮದ ಬದಲಾವಣೆಯ ಗಾಳಿ ಬೀಸತೊಡಗಿದ್ದರೆ, ದೇಶದಲ್ಲಿ ಇನ್ನೊಂದು ರೀತಿಯ ಪರಿವರ್ತನೆ ಆಗತೊಡಗಿತ್ತು. ಬಾಜೀರಾವ್ ಪೇಶ್ವಾನ ಆಡಳಿತದಲ್ಲಿ ಐಷಾರಾಮೀ ಜೀವನಕ್ಕೆ ಪ್ರಾಧಾನ್ಯತೆ ದೊರಕಿ ಜನತೆಯಲ್ಲಿ ಸಾಹಸೀ ಪ್ರವೃತ್ತಿ ನಿರ್ನಾಮನವಾಗಿ 1818ರ ಹೊತ್ತಿಗೆ ಪೇಶ್ವೆಗಳು ಪೂರ್ಣ ಅವನತಿ ಹೊಂದಿ ಬ್ರಿಟಿಷ್‌ರು ಪ್ರಬಲರಾಗತೊಡಗಿದ್ದರು. ಹೀಗೆ ಮುರ್ಕುಟೆ ಕುಟುಂಬ ಮತ್ತು ರಾಷ್ಟ್ರಗಳು ಐತಿಹಾಸಿಕ ಪರಿವರ್ತನೆಯ ಹೊಸ್ತಿಲಲ್ಲಿ ಬಂದು ನಿಂತಿದ್ದವು.

## ಬಾಲ್ಯ - ಶಿಕ್ಷಣ ಯೌವನ

ಶಂಕಶೇಟ್ ರ ಏಕೈಕ ಪುತ್ರ ಅಪರೂಪದ ಮಗು ಈಗ ಎಲ್ಲರ ಕಣ್ಮಣಿ. ಆಟಪಾಟಗಳಿಂದ ಮನೆಯವರಲ್ಲಿ ಸಂಭ್ರಮೋತ್ಸಾಹವನ್ನುಂಟು ಮಾಡುತ್ತಿದ್ದ ಮಗುವನ್ನು ಎಲ್ಲರೂ ಮುದ್ದಿಸುವವರೇ. ಆದರೆ ಶಂಕರಶೇಟ್‌ರಿಗೆ ತಮ್ಮ ಮಗ ಮುಂದೆ ಹೊರಬೇಕಾದ ಹೊಣೆಯ ಪೂರ್ಣ ಅರಿವಿತ್ತು. ಹೀಗಾಗಿ ಈ ಮುದ್ದು ಹದ್ದು ಮೀರದಂತೆ ಅವರು ಎಚ್ಚರವಹಿಸಿದರು. ಉತ್ತಮ ಸಂಸ್ಕಾರಗಳು ಮಗನಲ್ಲಿ ಮೂಡುವಂತಾಗಲು ಚಿಕ್ಕಂದಿನಿಂದಲೇ ಭಾರತದ ವಿರ ಪುರುಷರ ಸಾಧನೆಗಳನ್ನು ರಂಜನಿಯ ಕತೆಗಳ ಮೂಲಕ ಎಳೆಯ ಬಾಲಕನಿಗೆ ಪರಿಚಯಿಸಿದರು. ಐದು ವರ್ಷಗಳಾಗುತ್ತಿದ್ದಂತೆಯೇ ಅವನ ಶಿಕ್ಷಣದ ಏರ್ಪಾಟುಗಳನ್ನು ಸಮರ್ಪಕವಾಗಿ ಮಾಡಿದರು.

ಅಂದು ಶಿಕ್ಷಣವು ಮನೆಗೆ ಬಂದು ಪಾಠ ಹೇಳುತ್ತಿದ್ದ ಶಿಕ್ಷಕರಿಗೆ ಮಾತ್ರ ಸೀಮಿತವಾಗಿತ್ತು. ಆಗರ್ಭ ಶ್ರೀಮಂತಿಕೆಯಲ್ಲಿಯೇ ಹುಟ್ಟಿದ ನಾನಾರಿಗೆ ಶಿಕ್ಷಣದ ಕೊರತೆ ಕಂಡು ಬರುವ ಸಾಧ್ಯತೆಯೇ ಇರಲಿಲ್ಲ. ಸಂಸ್ಕೃತ ಮರಾಠಿ ಭಾಷೆಗಳನ್ನು ಕಲಿಸಲು ಆಯಾ ಭಾಷೆಯ ಪಂಡಿತರು ನೇಮಕವಾದರೆ, ಇಂಗ್ಲೀಷ್ ಕಲಿಸಲು ಅಂದಿನ ಖ್ಯಾತ ವಿದ್ವಾಂಸರುಗಳಾದ ರಾಬರ್ಟಮರ್ಫಿ ಮತ್ತು ಡಬ್ಲ್ಯೂ.ವಿ. ಮ್ಯಾನ್ ವೇರಿಂಗ್ ಅವರು ನೇಮಕರಾದರು. ಈ ಇಬ್ಬರು ಮಹನೀಯರೂ ಆಂಗ್ಲ ಭಾಷೆಯೊಂದಿಗೆ ಹಿಂದಿ ಮತ್ತು ಮರಾಠಿ ಭಾಷೆಗಳಲ್ಲೂ ತಜ್ಞರಾಗಿದ್ದರು. ಜೊತೆಗೆ ರಾಬರ್ಟಮರ್ಫಿ ತೋಟಗಾರಿ-ಕೆ ಮತ್ತು ಕುಶಲ ಕಲೆಗಾರಿಕೆಯಲ್ಲಿ ಪರಿಣತಿ ಹೊಂದಿದ್ದರು. ಹೀಗಾಗಿ ನಾನಾ ಅವರಿಗೆ ಪ್ರಾರಂಭದಲ್ಲಿಯೇ ವೈವಿಧ್ಯಮಯ ಶಿಕ್ಷಣ ಪರಿಣಿತರಿಂದ ದೊರಕುವ ಭಾಗ್ಯ ಪ್ರಾಪ್ತವಾಯಿತು. ಸ್ವಭಾವತಃ ಕುಶಾಗ್ರಮತಿ, ಜ್ಞಾನಪಿಪಾಸುವಾಗಿದ್ದ ನಾನಾ ಅಪೂರ್ವವಾದ ಜ್ಞಾಪಕ ಶಕ್ತಿಯನ್ನು ದೊರಕಿಸಬಲ್ಲ. ಅಗಾಧ ಸಂಪತ್ತು ಉತ್ತಮ ಶಿಕ್ಷಣಕ್ಕೆ ಇನ್ನೇನು ಬೇಕು? ಹೀಗಾಗಿ ತಮ್ಮ ಎಳೆಯ ವಯಸ್ಸಿನಲ್ಲಿಯೇ ನಾನ ಭಾರತೀಯ ಭಾಷೆಗಳಾದ ಸಂಸ್ಕೃತ, ಮರಾಠಿಗಳ ಜೊತೆಗೆ ಆಂಗ್ಲ ಭಾಷಾ ಜ್ಞಾನ, ಬ್ರಿಟಿಷ್ ಇತಿಹಾಸ, ಆಡಳಿತ, ನ್ಯಾಯಾಂಗ, ಶಿಕ್ಷಣದ ಬಗ್ಗೆಯೂ ತೀವ್ರವಾದ ಅಭ್ಯಾಸ ಮಾಡುವಂತಾಯಿತು. ಈ ಶಿಕ್ಷಣದಿಂದ ಸ್ವಭಾವಗತವಾದ ಅವರ ಚಾತುರ್ಯಕ್ಕೆ ಒಂದು ತಾರ್ಕಿಕ ನೆಲೆಗಟ್ಟು ದೊರಕಿತು. 62 ವರ್ಷದ ಅವರ ಸಾರ್ಥಕ ಬದುಕಿನ

ಸಾಧನೆಗಳ ಯಶಸ್ಸಿನ ಬೇರುಗಳ ಅವರ ಈ ಬಾಲ್ಯದ ಶಿಕ್ಷಣದಲ್ಲಿಯೇ ಅಡಗಿವೆ. ಈ ವೈವಿಧ್ಯಮಯ ಶಿಕ್ಷಣದಿಂದ ನಾನಾ ಅವರು ಯಾವುದೇ ವಿಷಯದ ಬಗ್ಗೆ ಖಚಿತತೆಯಿಂದ ಮಾತಾಡಬಲ್ಲ ಪಾಂಡಿತ್ಯವನ್ನು ಪಡೆದರು.

1822 ರಲ್ಲಿ ತಂದೆ ತೀರಿಕೊಂಡಾಗ ನಾನಾರ ವಯಸ್ಸು ಕೇವಲ ಹತ್ತೊಂಭತ್ತು ಹದಿಹರೆಯರ ಯುವಕನ ಹೆಗಲ ಮೇಲೆ ಅಗಾಧವಾದ ಹೊರೆ ಬಿತ್ತು. ಆದರೆ ಇಂತಹ ಸಮಸ್ಯೆಗಳನ್ನು ಧೃತಿಗೆಡದೆ ಎದುರಿಸುವ ಪಕ್ವತೆಯನ್ನಾಗಲೇ ನಾನಾ ಪಡೆದಿದ್ದರು. ಸಾಮಾನ್ಯವಾಗಿ ಹರಿಹರೆಯಕ್ಕೆ ಸಂಪತ್ತಿನ ಮದ ಕೂಡಿದಾಗ ದಾರಿ ತಪ್ಪುವ ಸಹಜತೆಗೆ ನಾನಾ ಅಪಪಾದವಾಗಿದ್ದರು. ತಮಗೆ ದೊರಕಿದ ಶಿಕ್ಷಣ, ಸಂಸ್ಕಾರಗಳಿಂದಾಗಿ ಅವರು ಧೃತಿಗೆಡದೆ ಬಾಳಹಾದಿಯಲ್ಲಿ ಮುನ್ನುಗಿದರು. ತಂದೆಗೆ ಸಲ್ಲಬೇಕಾದ ಎಲ್ಲ ಧಾರ್ಮಿಕ ವಿಧಿಗಳನ್ನು ತಪ್ಪದೇ ಒಂದು ವರ್ಷ ಪರ್ಯಂತ ನಡೆಸಿದರು. ತಂದೆಯ ಆತ್ಮಶಾಂತಿಗಾಗಿ ಅವರು ನಡೆಸಿದ ಧಾರ್ಮಿಕಾಚರಣೆ, ದಾನ ಧರ್ಮಗಳಿಗೆ ಮಿತಿಯೇ ಇಲ್ಲ.

ತಮಗೆ ದೊರಕಿದ ಅಗಾಧ ಸಂಪತ್ತನ್ನು ತಮ್ಮ ಸುಖಲೋಲುಪತೆಗೆ ಉಪಯೋಗಿಸಬಹುದಾಗಿದ್ದ ವಯಸ್ಸು ನಾನಾ ಅವರದು. ಆದರೆ ಅವರು ಅಂತಹ ಯಾವುದೇ ದೌರ್ಬಲ್ಯಕ್ಕೆ ಒಳಗಾಗಲಿಲ್ಲ. ಮನುಷ್ಯನ ಮಹಾಕಾರ್ಯಗಳ ಯಶಸ್ಸು ಅವರ ವಯಸ್ಸಿನ ಮೇಲೆ ಅವಲಂಬಿತವಾಗಿಲ್ಲವೆಂಬುದನ್ನು ಶಿವಾಜಿ ಮಹಾರಾಜರ ಚರಿತ್ರೆಯಿಂದ ನಾವು ಬಲ್ಲೆವು ತನ್ನ 16ನೇ ವಯಸ್ಸಿನಲ್ಲಿ ತೋರಣದುರ್ಗವನ್ನು ಬಯಸಿದ ಶಿವಾಜಿಯ ನಾಡಿನವರಾದ ನಾನಾ, ತಾವೂ ತಮ್ಮ ಯುವವಯಸ್ಸಿನಲ್ಲಿಯೇ ಸಾರ್ವಜನಿಕ ಕ್ಷೇತ್ರಕ್ಕೆ ಧುಮುಕಿದ್ದು ಆಶ್ಚರ್ಯದ ಸಂಗತಿಯೇನೂ ಅಲ್ಲ.

ಅಂದಿನ ಶ್ರೀಮಂತರ ಸಮಾಜ ಸೇವೆಯೆಂದರೆ, ವಿಪುಲದಾನ-ದಕ್ಷಿಣೆ, ದೇವ ಮಂದಿರಗಳಿಗೆ ಪ್ರೋತ್ಸಾಹ, ಇಂತಹ ಧಾರ್ಮಿಕಾಚರಣೆಗೆ ಮಾತ್ರ ಸೀಮಿತವಾಗಿತ್ತು. ನಾನಾ ಅವರ ಪೂರ್ವಜರೂ ಇದಕ್ಕೆ ಅಪವಾದವಾಗಿರಲಿಲ್ಲ. ಅಂತ್ಯಂತ ಧಾರ್ಮಿಕ – ಸಜ್ಜನ ವಂಶವಾದರೂ, ನಾನಾರ ಕುಟುಂಬ ಸಾರ್ವಜನಿಕಾಸಕ್ತಿಯ ಕಾರ್ಯಗಳಲ್ಲಿ ಹೆಚ್ಚಾಗಿ ಕಾರ್ಯ ಪ್ರವೃತ್ತರಾಗಿದ್ದು, ಗಾಢವಾದ ಧಾರ್ಮಿಕ ಮನೋಭಾವ ಹೊಂದಿದವರಾದರು ನಾನಾರು ಜೀವನ ನೋಡುವ ದೃಷ್ಟಿಯೇ ಬೇರೆಯಾಗಿತ್ತು. 'ಜನ ಸೇವೆಯೇ ಜನಾರ್ಧನನ ಸೇವೆ' ಎಂಬ ತತ್ವವನ್ನು ನಾನಾ ತತ್ವಶಃ ಪಾಲಿಸಿದರು. 'ವಸುದೈವ ಕುಟುಂಬಕಂ' ಹಸನಾಗಿಸಲು ಅಹರ್ನಿಶಿ ದುಡಿದರು. ಅಂದಿನ ಮುಂಬೈನ ಸಾರ್ವಜನಿಕ ಜೀವನದ ಯಾವುದೇ ಕಾರ್ಯಕ್ರಮವಿರಲಿ, ನಾನಾ ಅದರಲ್ಲಿ ಪ್ರಮುಖ ಪಾತ್ರವಹಿಸಲೇ ಬೇಕಾಗಿತ್ತು ಎನ್ನುವಷ್ಟು ಮಟ್ಟಿಗೆ ಅವರು ಅನಿವಾರ್ಯವಾಗಿದ್ದರು. ಅವರ ಅಗಾಧ ಕಾರ್ಯ ಚಟುವಟಿಕೆಗಳನ್ನು ಗಮನಿಸಿದಾಗ ಅವು ಸಾಮಾನ್ಯ ಮನುಷ್ಯನ ಪರಿಮಿತಿಯನ್ನು ಮೀರಿದ ಸಾಧನೆ ಎಂಬುದು ಅರಿವಾಗಿ, ಕಾಳದ ಕರೆಯಿಂದ ಅವತಿರಿಸುವ ಅಸಾಮಾನ್ಯ ಪುರುಷರೊಬ್ಬರಾಗಿ ಅವರು ಕಂಡು ಬರುತ್ತಾರೆ. ನಾನಾರ ಕಾಲದ ಮುಂಬೈ ಇಂದು ಅಭೂತಪೂರ್ವ ಬದಲಾವಣೆ ಹೊಂದಿದ್ದರೂ ಅದರ ಸರ್ವಾಂಗೀಣ ಬೆಳವಣಿಗೆಯ ಪ್ರತಿಯೊಂದು ಘಟ್ಟದ ಪ್ರಾಥಮಿಕ ಹಂತದಲ್ಲಿ ನಾನಾ ಅವರ ಹೆಜ್ಜೆ ಗುರುತುಗಳು ಸ್ಪಷ್ಟವಾಗಿ ಮೂಡಿವೆ ಎಂಬುದನ್ನು ಅವರ ಸಾಧನಾ ಚಿತ್ರ ಸ್ಪಷ್ಟಪಡಿಸುತ್ತದೆ. ಅವರ ಸಾಧನೆಯು ವಿವಿಧ ಮಜಲು[illegible] ಮುಂಬೈನ ನವೋದಯದ ವಿವಿಧ ಆಯಾಮಗಳಾಗಿವೆ. ನಾ[illegible] ಅವರು ಈ ಎಲ್ಲ ಸಾಧನೆಗಳನ್ನು ಏಕಾಂಗಿಯಾಗಿ ಮಾಡಿ[illegible] ಎಂಬುದು ಉತ್ಪ್ರೇಕ್ಷೆಯ ಮಾತಾದರೂ ಸಮಾನ ಮನ[illegible] ಒಂದು ಕ್ರಿಯಾಶೀಲ ತಂಡದ ಮುಂಚೂಣಿಯಲ್ಲಿ ಅವರಿ[illegible] ಎಂಬುದಂತೂ ನಿಜ.

## ಶಿಕ್ಷಣ ರಂಗ

ನಾನಾ ಆದಾಗಲೇ ಶಿಕ್ಷಣದ ಬಗ್ಗೆ ಖ[illegible] ಧೋರಣೆಗಳನ್ನು ಹೊಂದಿದ್ದರು. ಕ್ರೈಸ್ತ ಧರ್ಮೀ[illegible] ಶಿಕ್ಷಣದಿಂದ ಭಾರತೀಯರಿಗೆ ಪ್ರಯೋಜನವಿದ್ದರು ದೇ[illegible] ಹಿತದೃಷ್ಟಿಯಿಂದ ಭಾರತೀಯರಿಗೆ ವಿದ್ಯಾಭ್ಯಾಸದ [illegible] ಅಗತ್ಯ ಇದೆ. ಎಂಬುದನ್ನು ಅವರು ಗಮನಿಸಿದ್ದ[illegible] ಜನರ ಅನಕ್ಷರತೆಯನ್ನು ಹೋಗಲಾಡಿಸಲಬಲ್ಲ, ಅವ[illegible] ಜ್ಞಾನಾರ್ಜನೆಯ ಹಂಬಲವನ್ನು ಹುಟ್ಟಿಸಬಲ್ಲ ಒಂದು ದೇಶಿ[illegible] ಶಿಕ್ಷಣ ನೀತಿಯ ಅಗತ್ಯ ಅವರಿಗೆ ಕಂಡುಬರತೊಡಗಿ[illegible] ಅವರ ಯೋಚನಾಸರಣಿ ಈ ಹಂತದಲ್ಲಿರುವಾಗ ಗೌರ್ನರರಿ[illegible] ಶಿಕ್ಷಣದ ಅಭಿವೃದ್ಧಿಯಲ್ಲಿ ಅವರ ಸಹಕಾರ ಬಯಸುವ ಪ್ರಸ[illegible] ಬಂತು. ಬಾರತೀಯರ ಕಲ್ಯಾಣದ ಬಗ್ಗೆ ಯೋಚನೆ ಮಾಡ[illegible] ಸಮಾನ ಮನಸ್ಕರ ತಂಡವೊಂದು ಆಗಲೇ ರೂಪಿತಗೊಂಡಿ[illegible] ಅವರೆಲ್ಲ ಸೇರಿ ಗವರ್ನರರೊಂದಿಗೆ ಸಲಹೆಯನ್ನು ಚಚಿ[illegible] ಭಾರತಿಯರ ಶಿಕ್ಷಣದ ಬಗೆಗಿನ ಒಂದು ಯೋಜನೆಯ[illegible] ಗವರ್ನರರಿಗೆ ಸಲ್ಲಿಸಿದರು. ಸರಿಯಾದ ದಿಕ್ಕಿನಲ್ಲಿ ನಡೆಯುತ್ತ[illegible] ಅವರ ಈ ಪ್ರಯತ್ನಗಳಿಂದ ಪ್ರಭಾವಿತರಾಗಿ ಗೌವರ್ನರ[illegible] ಅವರಿಗೆ ಸಂಪೂರ್ಣ ಸಹಕಾರ ಕೊಡುವ ಭರವಸೆ ಕೊಟ್ಟಿ[illegible] ಫಲವಾಗಿ 21-08-1822 ರಂದು "The Bombay N[illegible]tives School and School B ooks Societ[illegible] ಎಂಬ ಸಂಸ್ಥೆ ಭಾರತೀಯರ ಶಿಕ್ಷಣದ ಮೂಲೋದ್ದೇಶವನ್ನ[illegible] ಹೊತ್ತು ಸ್ಥಾಪಿತವಾಯಿತು. ಮುಂಬಯಿಚಿ ಹಿಂದ ಶಾಲಾ ಆ[illegible] ಶಾಲಾ ಪುಸ್ತಕ ಮಂಡಳ' ಎಂದೂ ನಾಮಕರಣಗೊಂಡ [illegible] ಸಂಸ್ಥೆಗೆ ಹನ್ನೆರಡು ಜನ ಸ್ಥಳೀಯರು ಮತ್ತು ಹನ್ನೆರಡು ಮಂ[illegible] ಬ್ರಟಿಷರೂ ಇದ್ದ ಒಂದು ಸಲಹಾ ಮಂಡಳಿ ನೇಮಕವಾಯಿತ[illegible] ಅದರ ಪ್ರಮುಖ ಸದಸ್ಯರುಗಳೆಂದರೆ, ಜನನ್ನಾಥ ಶಂಕರಶೇ[illegible] (ನಾನಾ) ಜಗನ್ನಾಥ ಶಾಸ್ತ್ರಿ, ಕ್ರಮವಂತ, ಜಮಶೇಟ್‌ಜಿ[illegible] ಜೀಜೀಬಾಯಿ, ವೆಂಕಟೇಶ ಸದಾಶಿವ ನಾಯಕ್, ಕ್ಯಾಪ್ಟ[illegible] ಜಾರ್ವಿಶ್ ಮತ್ತಿತರು. ವ್ಯವಹಾರ ತಜ್ಞರಾದ ನಾನ ಈ ಸಂಸ್ಥೆ[illegible] ಒಂದು ಭದ್ರ ಆರ್ಥಿಕ ತಳಹದಿಯ ಅಗತ್ಯವಿದೆ ಎಂ[illegible] ಮನಗಂಡು, ಸ್ಥಾನೀಯರ ಕಲ್ಯಾಣದಲ್ಲಿ ಆಸಕ್ತರಾಗಿದ್ದ ಅನೇ[illegible] ರಾಜ ಮಹಾರಾಜರು, ಶ್ರೀಮಂತ ವಣಿಕರುಗಳಿಂದ ಧ[illegible] ಸಹಾಯ ಪಡೆಯುವಲ್ಲಿ ಯಶಸ್ವಿಯಾದರು. ಸ್ವತಃ ಮುಕ್ತ ಧ[illegible] ಸಹಾಯಮಾಡಿ ಇತರರಿಗೆ ಮಾದರಿಯಾದರು.

ನಾನಾ ಮತ್ತು ಅವರ ಸ್ನೇಹಿತರು ಪೋಷಕ[illegible] ಮನೆ-ಮನೆಗೆ ಭೇಟಿಕೊಟ್ಟು ವಿದ್ಯಾಭ್ಯಾಸ ಅಗತ್ಯವನ್ನ[illegible] ಮನಗಾಣಿಸತೊಡಗಿದರು. ಅದರಲ್ಲಿಯೇ ಅವರ ಮಕ್ಕ[illegible] ಅಭಿವೃದ್ಧಿ ಅಡಗಿದೆ ಎಂಬುದನ್ನು ಅವರಿಗೆ ಮನವರಿ[illegible] ಮಾಡಿಕೊಡತೊಡಗಿದರು. ತಮ್ಮ ನೇತೃತ್ವದ[illegible] ನಡೆಯುವ ವಿದ್ಯಾಭ್ಯಾಸದ ಕ್ರಮದ ಬಗ್ಗೆ ಜನತೆ ಭರವಸ[illegible]

ಬೇಕೆಂದು ಆಗ್ರಹಪಡಿಸತೊಡಗಿದರು. ಈ ಮುಖಂಡರೆಲ್ಲ ಾಜದಲ್ಲಾಗಲೇ ಪ್ರತಿಷ್ಠಿತ ಸ್ಥಾನ ಮತ್ತು ವಿಶ್ವಾಸಾರ್ಹತೆ ದರವರಾಗಿದ್ದರು. ಹೀಗಾಗಿ ಜನಕ್ಕೆ ಅವರ ಮಾತುಗಳಲ್ಲಿ ್ವಾಸ ಮೂಡಿತು. ಇದರಿಂದ ಶಾಲೆಗೆ ಬರಲು ಬಯಸುವ ್ಯಾರ್ಥಿಗಳ ಸಂಖ್ಯೆಯಲ್ಲಿ ಹೆಚ್ಚಳ ಕಂಡು ಬರತೊಡಗಿತು.

ನಾನಾ ಮತ್ತು ಮಿತ್ರರು ತಜ್ಞ ಅಧ್ಯಾಪಕರುಗಳು ವಿನಿಂದ ಸೂಕ್ತ ಪಠ್ಯ ವಿಷಯ-ಪಠ್ಯ ಕ್ರಮವನ್ನು ಚಿಸಿದರು. ಮರಾಠಿ ಮತ್ತು ಆಂಗ್ಲ ಭಾಷೆಗಳ ಅಕ್ಷರಜ್ಞಾನ, ್ಯಕರಣಗಳ ಕಲಿಕೆ, ಸಂಖ್ಯೆಗಳ ಕಲಿಕೆ, ಗಣಿತ, ಭೂಗೋಳ ತ್ತು ಮರಾಠಿ ಸಾಹಿತ್ಯದ ಅಧ್ಯಯನಕ್ಕೆ ಪಠ್ಯ ಕ್ರಮದಲ್ಲಿ ವಿಶೇಷ ಮುಖ್ಯತೆ ನೀಡಲಾಯಿತು. ಈ ಶಿಕ್ಷಣ ಶ್ರೀಮಂತರಿಗೆ ತ್ರ ಸೀಮಿತವಾಗದಿರಲೆಂಬ ಸದಾಶಯದಿಂದ ಅರ್ಹ ಬಡ ್ಯಾರ್ಥಿಗಳಿಗೆ ಶುಲ್ಕ ಮತ್ತು ಉಚಿತ ಪಠ್ಯ ಪುಸ್ತಕಗಳನ್ನು ಗಿಸುವ ಏರ್ಪಾಡು ಮಾಡಲಾಯಿತು. ನಾನಾರೂ ಸೇರಿದಂತೆ ಮುಖ ನಾಯಕರು ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಲು ನೇಕ ಬಹುಮಾನ, ವಿದ್ಯಾರ್ಥಿ ವೇತನಗಳನ್ನು ಕೊಡಲು ುಂದೆ ಬಂದು ಈ ಇಡೀ ವ್ಯವಸ್ಥೆಗೆ ಅಗತ್ಯವಾಗಿದ್ದ, ಬೃಹತ್ ಾಪನ್ಮೂಲಗಳನ್ನು ತಮ್ಮ ಉದಾರ ಸಹಾಯ ಧನದಿಂದಲೇ ್ರೀಢಿಕರಿಸುವ ಕಾರ್ಯಕ್ರಮದ ಮುಂಚೂಣಿಯಲ್ಲಿ ನಾನಾ ವರಿದ್ದರು.

ಮುಂಬಯಿನಲ್ಲಿ ನಡೆಯತೊಡಗಿದ ಈ ಶೈಕ್ಷಣಿಕ ಟುವಟಿಕೆಗಳತ್ತ ಸುತ್ತಮುತ್ತಲಿನ ಪ್ರದೇಶದವರು ಹಜವಾಗಿಯೇ ಆಕರ್ಷಿತರಾಗಿ ತಮ್ಮ ಮಕ್ಕಳಿಗೂ ಂತಹ ಸೌಲಭ್ಯ ದೊರಕಲಿ ಎಂದು ಹಾರೈಸತೊಡಗಿದರು. ದ್ಯಾಕಾಂಕ್ಷಿಗಳಾದ ಅನೇಕ ವಿದ್ಯಾರ್ಥಿಗಳು ಮುಂಬಯಿಗೆ ರತೊಡಗಿದರು. ಆದರೆ ಅಂದಿನ ದಿನಗಳಲ್ಲಿ ವಿದ್ಯಾರ್ಥಿ ಲಯಗಳ ಸೌಕರ್ಯ ಇರಲಿಲ್ಲವಾಗಿ ಅಂತಹ ವಿದ್ಯಾರ್ಥಿಗಳ ಸಹಾಯಕ್ಕೆ ಪುನಃ ನಾನಾ ಅವರೇ ಮುಂದಾದ ಅನೇಕ ರ್ಹ ವಿದ್ಯಾರ್ಥಿಗಳಿಗೆ ನಾನಾ ಅವರು ಉಚಿತ ಊಟ ವಸತಿಗಳ ಸೌಕರ್ಯ ಒದಗಿಸುವ ಅವರ ವಿದ್ಯಾರ್ಥಿ ಜೀವನದ ಆಧಾರಸ್ತಂಭರಾದರು. ನಾನಾ ಅವರಿಂದ ಹೀಗೆ ಸಹಾಯ ಪಡೆದು ಅಭಿವೃದ್ಧಿ ಹೊಂದಿದವರಲ್ಲಿ ಬಾಳಾಶಾಸ್ತ್ರಿ ಜಾಂಬೇಕರ್ ಮತ್ತು ಆರ್.ಜಿ. ದಾದೋಬಾರಂತಹ ಪ್ರಮುಖರೂ ಇದ್ದಾರೆ. ನಾನಾರ ಅವಸಾನದ ನಂತರ ಅವರಿಗೆ ಶ್ರದ್ಧಾಂಜಲಿ ಅರ್ಪಿಸುವ ವಿದ್ಯಾರ್ಥಿಗಳ ಬಗ್ಗೆ "ನಾನು ಎಲ್ಫಿನ್‌ಸ್ಟನ್ ಇನ್‌ಸ್ಟಿಟ್ಯೂಟ್‌ನ ವಿದ್ಯರ್ಥಿಯಾಗಿದ್ದಾಗ ನನ್ನಂತಹ ವಿದ್ಯಾರ್ಥಿಗಳ ಬಗ್ಗೆ ನಾನಾ ಅವರು ತೋರಿಸುತ್ತಿದ್ದ ಅವರ ನೆರವೂ, ನೆನಪು ನಮ್ಮಂತಹವರಿಗೆ ಅವಿಸ್ಮರಣಿಯ ಅದಕ್ಕೆ ಪ್ರತಿಯಾಗಿ ನಾವು ಅವರಿಗೆ ವಿನಯಪೂರ್ವಕ ಶ್ರದ್ಧಾಂಜಲಿಗಳನ್ನು ಅರ್ಪಿಸಲು ಮಾತ್ರ ಸಾಧ್ಯ" ಎಂದು ನುಡಿದು ನಾನಾರಿಂದ ಉಪಕೃತರಾದ ಎಲ್ಲ ವಿದ್ಯಾರ್ಥಿಗಳ ಭಾವನೆಗಳನ್ನು ಅಭಿವ್ಯಕ್ತಗೊಳಿಸಿದ್ದಾರೆ.

ವಿದ್ಯಾಭ್ಯಾಸ ಇನ್ನು ಹೆಚ್ಚಿನ ಸಂಖ್ಯೆಯ ಜನರನ್ನು ತಲುಪಿಲ್ಲವೆಂಬ ಅಂಶ ಖಚಿತವಾದ್ದರಿಂದ ಮುಂಬೈ ನಗರವನ್ನು ಶಿಕ್ಷಣದ ದೃಷ್ಟಿಯಿಂದ ಐದು ವಿಭಾಗಗಳಾಗಿ ವಿಂಗಡಿಸಿ, ಪ್ರತಿಯೊಂದು ವಿಭಾಗದ ಮೇಲ್ವಿಚಾರಣೆಯನ್ನು ಒಬ್ಬೊಬ್ಬ ಸದಸ್ಯನಿಗೆ ವಹಿಸಲಾಯಿತು. ಆ ವಿಭಾಗಗಳೆಂದರೆ, (1) ಗಿರಿಗಾಂ (2) ಪರೇಲ್ (3) ಡೋಂಗ್ರಿ (4) ಬಜಾರ್‌ಗೇಟ್




(5) ಚರ್ಚ್‌ಗೇಟ್ ನಾನಾ ಅವರಿಗೆ ಗಿರಿಗಾಂ ಪ್ರದೇಶದ ಮೇಲ್ವಿಚಾರಣೆಯ ಹೊಣೆ ಹೊರಿಸಲಾಯಿತು. ಅದರ ಎಲ್ಲೆ ಚೌಪಾಟಿಯಿಂದ ಧೋಬಿತಲಾವ್ ಪ್ರದೇಶದವರೆಗೂ ವಿಸ್ತರಿಸಿತ್ತು.

ನಾನಾ ಕೂಡಲೇ ಕಾರ್ಯ ಪ್ರವೃತ್ತರಾದರು. ಇಡೀ ಪ್ರದೇಶದ ಶೈಕ್ಷಣಿಕ ಸಮೀಕ್ಷೆಯನ್ನು ಅವರಾಗಲೇ ಮಾಡಿ ಮುಗಿಸಿದ್ದರು. ಅವರು ಈ ಸಂದರ್ಭದಲ್ಲಿ ಗಮನಿಸಿದ ಅಂಶವೆಂದರೆ ಚೌಪಾಟಿ ಪ್ರದೇಶವು ಬಡ ಬೆಸ್ತರ ಕುಟುಂಬದವರಿಂದಲೇ ತುಂಬಿದ್ದು, ಅವರು ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಯಾವುದೇ ಆಸಕ್ತಿಯನ್ನು ಹೊಂದಿರಲಿಲ್ಲ. ವರ್ಗರಹಿತ-ವರ್ಣರಹಿತ ಶಿಕ್ಷಣಮೊಂದೇ ಭಾರತದ ಔನತ್ಯಕ್ಕೆ ಪ್ರಥಮ ಸೋಪಾನವೆಂದು ಬಲವಾಗಿ ನಂಬಿದ್ದ ನಾನಾ ಅವರು ಹೆಚ್ಚಿನ ಸಂಖ್ಯೆಯ ಬಡಜನತೆ ಶಿಕ್ಷಣ ಕ್ಷೇತ್ರದ ಪರಿಧಿಯಿಂದ ಹೊರಗಿರುವುದನ್ನು ಗಮನಿಸಿದರು. ಅವರನ್ನು ತಲುಪಬಲ್ಲಂತಹ ಶಾಲೆಗಳ ಅಗತ್ಯವನ್ನು ಅವರು ಮನಗಂಡರು. ಹೀಗಾಗಿ ಶ್ರೀಮಂತರಿಗೆ ಮೀಸಲಾಗಿದ್ದ ಕೆಲವು ಶಾಲೆಗಳಲ್ಲಿ ಬಡಮಕ್ಕಳಿಗೂ ಉಚಿತ ಪ್ರವೇಶ ಸಿಗುವಂತಹ ಏರ್ಪಾಡುಗಳನ್ನು ಮಾಡಿದರು. ಇಷ್ಟಾಗಿಯೂ ಚೌಪಾಟಿಯ ಬಡ ಬೆಸ್ತರ ಕುಟುಂಬಗಳ ಅಗತ್ಯ ಪೂರ್ಣವಾಗಲಿಲ್ಲವಾಗಿ ತಾವೇ ಸ್ವತಃ ಒಂದು ಶಾಲೆಯನ್ನು ಪ್ರಾರಂಭಿಸಿ ಅವರ ಮಕ್ಕಳಿಗೆ ಉಚಿತ ಶಿಕ್ಷಣದ ಏರ್ಪಾಡು ಮಾಡಿದ್ದಲ್ಲದೆ, ಅಗತ್ಯವಾಗಿದ್ದ ಪಠ್ಯಪುಸ್ತಕಗಳನ್ನು ಮತ್ತು ಇತರ ಪಠ್ಯ ಸಾಮಗ್ರಿಗಳನ್ನು ಉಚಿತವಾಗಿ ಹಂಚಿದರು. ವರ್ಗರಹಿತ ಸಮಾಜದ ಬಗೆಗೆ ಕೇವಲ ಭಾಷಣಗಳನ್ನೇ ಮಾಡುವ ಇಂದಿನ ನಾಯಕರ ವೈಯಕ್ತಿಕ ಅಪವಾದವಾಗಿ ನಾನಾರವರು ತನು, ಮನ, ಧನಗಳಂದ ಅಗತ್ಯವಿದ್ದ ಎಲ್ಲರಿಗೂ ಶಿಕ್ಷಣ

ಲಭ್ಯವಾಗುವಂತೆ ಮಾಡುವ ಅಹರ್ನಿಶಿ ದುಡಿದು ವರ್ಗರಹಿತ ಸಮಾಜದ ತಳಹದಿಯನ್ನು ರೂಪಿಸಿದರು. ಎಂಬುದು ಬಹಳ ಮಹತ್ವದ ಸಂಗತಿಯಾಗುತ್ತದೆ. ನಾನಾರೊಂದಿಗೆ ಅಂದು ಸಾರ್ವಜನಿಕ ಜೀವನದಲ್ಲಿ ದುಡಿಯುತ್ತಿರುವ ನಾಯಕರುಗಳ ಪ್ರಾಮಾಣಿಕ ಪ್ರಯತ್ನದಿಂದ ಪ್ರಾಥಮಿಕ ಶಿಕ್ಷಣಕ್ಕೆ ಒಂದು ಸ್ಪಷ್ಟ ನೆಲೆ ದೊರೆತು ಅರ್ಹ ಮಕ್ಕಳಿಗೆ ಅದು ಸುಲಭವಾಗಿ ಸಿಗುವಂತಹ ವಾತಾವರಣ ನಿರ್ಮಾಣವಾಯಿತು.

### ಪ್ರೌಢ ಮತ್ತು ಕಾಲೇಜು ಶಿಕ್ಷಣ

ಆದರೆ ಅದು ವಿದ್ಯಾಭ್ಯಾಸದ ಪ್ರಾರಂಭಿಕ ಹಂತ ಮಾತ್ರವಾಗಿತ್ತು. ಏಕೆಂದರೆ ಪ್ರೌಢ ಮತ್ತು ಕಾಲೇಜು ಶಿಕ್ಷಣಗಳ ಸೌಲಭ್ಯವಿಲ್ಲದೆ ಶಿಕ್ಷಣ ಅಪೂರ್ಣ ಎಂಬುದು ನಾನಾ ಅವರಿಗೆ ಗೊತ್ತಿತ್ತು. ಪ್ರೌಢ ಶಿಕ್ಷಣದ ಪ್ರಾರಂಭದ ಸೂಕ್ತ ಅವಕಾಶದ ನಿರೀಕ್ಷೆಯಲ್ಲಿ ಅವರಿದ್ದರು. 1821 ರ ಹೊತ್ತಿಗೆ ಜನಾನುರಾಗಿ ಗವರ್ನರ್ ಆಗಿದ್ದ ಎಲ್‌ಫಿನ್‌ಸ್ಟನ್ ಅವರ ಕಾರ್ಯಾವಧಿ ಮುಗಿಯುವದರಲ್ಲಿತ್ತು. ಸಂಪ್ರದಾಯದಂತೆ ಅವರ ಸೇವೆಯನ್ನು ಗೌರವಿಸುವ ಒಂದು ಸ್ಮಾರಕವನ್ನು ಅವರಿಗೆ ಸಲ್ಲಿಸುವ ಅವಕಾಶವನ್ನೇ ನಾನಾ ಅವರು ಪ್ರೌಢಶಿಕ್ಷಣದ ನಾಂದಿಯನ್ನಾಗಿ ಪರಿವರ್ತಿಸುವ ಬುದ್ಧಿವಂತಿಕೆ ಪ್ರದರ್ಶಿಸಿದರು.

ಶಿಕ್ಷಣ ಕ್ಷೇತ್ರದಲ್ಲಿ ದುಡಿಯುತ್ತಿದ್ದ ಸಕ್ರಿಯ ಕಾರ್ಯಕರ್ತರ ಒಂದು ಸಭೆಯನ್ನು ನಾನಾ ಕರೆದರು. ಭಾರತೀಯ ಮತ್ತು ಬ್ರಿಟೀಷ್ ಜನಾಂಗಕ್ಕೆ ಸೇರಿದ ಪ್ರತಿಷ್ಠಿತರೆಲ್ಲ ಈ ಸಭೆಯಲ್ಲಿ ಭಾಗವಹಿಸಿದ್ದರು. ಅಂದಿನ ಸಭೆಯಲ್ಲಿ ನಾನಾ ಅವರು ಗೌರ್ನರ್ ಎಲ್‌ಫಿನ್‌ಸ್ಟನ್ ಅವರು ಮಾಡಿದ ಸೇವೆಯನ್ನು ಮುಕ್ತಕಂಠದಿಂದ ಪ್ರಶಂಸಿಸಿದರು. ವಿಶೇಷತಃ ಭಾರತೀಯರ ಶಿಕ್ಷಣ ಕ್ಷೇತ್ರಕ್ಕೆ ಅವರು ಕೊಟ್ಟಿರುವ ಕೊಡುಗೆ ಮರೆಯಲಾಗದಂತಹದು, ಕೃತಜ್ಞತಾಪೂರ್ವಕವಾಗಿ ನಾವು ಅವರ ಹೆಸರು ಶಾಶ್ವತವಾಗಿರುವಂತೆ ಮಾಡುವ ಸಂಸ್ಥೆಯನ್ನು ಅವರಿಗೆ ಸ್ಮಾರಕವಾಗಿ ಅರ್ಪಿಸಬೇಕೆಂಬ ಸಲಹೆಯನ್ನು ಸಭೆಯ ಮುಂದಿಟ್ಟರು. ಸಭೆ ತತ್‌ಕ್ಷಣ ಅವರ ಸಲಹೆಯನ್ನು ಅಂಗೀಕರಿಸಿತಲ್ಲದೆ, ತತ್‌ಸಂಬಂಧವಾಗಿ ದೇಣಿಗೆಯನ್ನು ಸಂಗ್ರಹಿಸುವ ಕಾರ್ಯವೂ ಅಂದಿನ ಸಭೆಯಲ್ಲಿಯೇ ಪ್ರಾರಂಭವಾಯಿತು. ಎಂದಿನ ತಮ್ಮ ಉದಾರತೆಯನ್ನು ಮತ್ತೊಮ್ಮೆ ಮೆರೆದ ನಾನಾ ಸ್ಥಳದಲ್ಲಿಯೇ 25,000– ರೂಗಳ ಸಹಾಯಧನವನ್ನು ಘೋಷಿಸಿದರಷ್ಟೇ ಅಲ್ಲ, ಮಿತ್ರರ ಸಹಾಯದಿಂದ ಅಲ್ಪ ಸಮಯದಲ್ಲಿಯೇ 5 ಲಕ್ಷರೂಗಳಷ್ಟು ಬೃಹತ್ ಮೊತ್ತವನ್ನು ಸಂಗ್ರಹಿಸಿದರು. ಅದಕ್ಕೆ 'ಎಲ್‌ಫಿನ್‌ಸ್ಟನ್ ನಿಧಿ' ಎಂದು ನಾಮಕರಣ ಮಾಡಲಾಯಿತು. ಈ ನಿಧಿಯಿಂದ ಪ್ರೌಢಶಾಲೆಗಾಗಿ ಒಂದು ಸುಂದರ ಕಟ್ಟಡವನ್ನು ಧೋಬಿತಲಾವ್ ಪ್ರದೇಶದಲ್ಲಿ ಕಟ್ಟಿಸಲಾಯಿತು. ಅಲ್ಲಿಯೇ ಪ್ರಸಿದ್ಧ ಎಲ್‌ಫಿನ್‌ಸ್ಟನ್ ಪ್ರೌಢಶಾಲೆಯನ್ನು ಪ್ರಾರಂಭಿಸಲಾಯಿತು. ನಂತರದಲ್ಲಿ ಇದೇ ಹಣದಿಂದ ಮ್ಯೂಸಿಯಂ ಪ್ರದೇಶದಲ್ಲಿರುವ ಇಂದಿಗೂ ಮುಂಬಯಿನ ಸುಂದರ ಕಟ್ಟಡಗಳಲ್ಲೊಂದಾದ ಎಲ್‌ಫಿನ್‌ಸ್ಟನ್ ಕಾಲೇಜನ್ನೂ ಕಟ್ಟಲಾಯಿತು. ಹೀಗೆ ಮುಂಬಯಿನ ಪ್ರಾಥಮಿಕ ಶಿಕ್ಷಣದ ರೂವಾರಿಗಳಾದ ನಾನಾ ಮತ್ತು ಅವರ ಮಿತ್ರರೇ ಪ್ರೌಢ ಮತ್ತು ಕಾಲೇಜು ಶಿಕ್ಷಣ ವ್ಯವಸ್ಥೆಯ ಸಂಸ್ಥಾಪಕರೂ ಆದರು.

1845ರಲ್ಲಿ ಪ್ರಾರಂಭವಾದ ಎಲ್‌ಫಿನ್‌ಸ್ಟನ್ ಕಾಲೇಜಿನ ಪ್ರಿನ್ಸಿಪಾಲರಾಗಿ ಜಾನ್ ಹಾರ್ಕ್‌ನೆಸ್ ನೇಮಕರಾದರು. ಆಗ ನಾನಾ ಕಾಲೇಜಿನ ಮುಖ್ಯ ಮಾರ್ಗದರ್ಶಿಯಾಗಿದ್ದ. ಭಾರತೀಯರ ಬಗ್ಗೆ ವಿಶೇಷ ವಾತ್ಸಲ್ಯ ಹೊಂದಿದ್ದ ಎಲ್‌ಫಿನ್‌ಸ್ಟ ಇಂಗ್ಲೆಂಡಿಗೆ ಮರಳಿದ ನಂತರವೂ ವಿವಿಧ ವಿಷಯಗ ತಜ್ಞರಾದ ಪ್ರಾಧ್ಯಾಪಕರುಗಳನ್ನು ಆಯ್ಕೆ ಮಾಡಿ ಈ ಕಾಲೇಜ ಸೇವೆಗೆಂದು ಕಳಿಸುವ ಏರ್ಪಾಡು ಮಾಡುತ್ತಿದ್ದರು. ನು ಪ್ರಾಧ್ಯಾಪಕರುಗಳಿಂದ ಯಶಸ್ವಿಯಾಗಿ ನಡೆಯುತ್ತಿದ್ದ ಕಾಲೇಜಿನ ವಿದ್ಯಾಭ್ಯಾಸ ಕ್ರಮದಿಂದಾಗಿ ಉಚ್ಚ ಶಿಕ್ಷ ಕ್ಕಾಗಿ ಇಂಗ್ಲೆಂಡ್‌ನತ್ತಲೇ ನೋಡುತ್ತಿದ್ದ ಪ್ರತಿಭಾವ ಭಾರತೀಯ ಯುವಕರು ಈ ಕಾಲೇಜಿನಲ್ಲಿಯೇ ನ ಅಗತ್ಯವನ್ನು ಪೂರೈಸಿಕೊಳ್ಳುವಂತಾಯಿತು. ಎಲ್‌ಫಿನ್‌ಸ್ಟ ಮಹಾವಿದ್ಯಾಲಯದಲ್ಲಿ ಅಭ್ಯಸಿಸಿದ ಈ ಕೆಳಗಿನ ವಿದ್ವಾಂ ಪಟ್ಟಿಯಿಂದಲೇ ಆ ಮಹಾ ವಿದ್ಯಾಲಯದ ಶ್ರೇಷ್ಠ ಮತ್ತು ಉಪಯುಕ್ತತೆಯ ಅರಿವಾಗುತ್ತದೆ. ಅಲ್ಲಿ ಓದಿ ಮಹನೀಯರುಗಳಲ್ಲಿ ಮುಖ್ಯರಾದವರು ದಾದಾಭಾ ನವರೋಜಿ, ಪ್ರೊಫೆಸರ್ ಬಾಳಶಾಸ್ತ್ರಿ ಜುಬೇಕರ್, ಆರ್. ಭಂಡಾಲ್ಕರ್, ದಿಶಾ ಏ ವಾಚಾ, ಜಸ್ಟೀಸ್ ಕೆ.ಟಿ. ತೇಲಂಗ ಜಸ್ಟೀಸ್ ಎನ್.ಜೆ. ಚಂದಾವರ್ಕರ್, ಲೋಕಮಾ ಬಾಲಗಂಗಾಧರ ತಿಲಕ್, ಮಾನ್ಯ ಗೋಪಾಲಕೃಷ್ಣ ಗೋಖ ಭೂಲಾಭಾಯಿದೇಸಾಯಿ ಮತ್ತು ಸಿ.ಡಿ. ದೇಶಮುಖ್, ಮಹನೀಯರುಗಳೆಲ್ಲ ಎಲ್‌ಫಿನ್‌ಸ್ಟನ್ ಕಾಲೇಜಿನಲ್ಲಿ ಪಡೆ ವಿದ್ಯಾಭ್ಯಾಸದಿಂದ ಪ್ರೇರಿತರಾಗಿ ಮುಂದೆ ಇಂಗ್ಲೆಂಡ್‌ನ ಇನ್ನೂ ಹೆಚ್ಚಿನ ಶಿಕ್ಷಣವನ್ನು ಪಡೆದು ದೇಶಕ್ಕೆ ಅನುಪಮ ಸೇ ಸಲ್ಲಿಸಿದರು.

1840 ರಲ್ಲಿ Native Education Society ಅ ಕೆಲಸಗಳನ್ನು ಶಿಕ್ಷಣ ಮಂಡಳಿಗೆ ವಹಿಸಿ ವಿದ್ಯಾಭ್ಯಾಸದ ಎ ಆಡಳಿತವನ್ನು ಈ ಸಂಸ್ಥೆಗೆ ವಹಿಸಲಾಯಿತು. ಸರ್ ಎರ್‌ಸ್ಕಿನ ಪೆರಿಯಂತಹ ಕಲ್ಪನಾ ಶಕ್ತಿ, ಕತೃತ್ವ ಶಕ್ತಿ ಹೊಂದಿದ್ದ ವ್ಯಕ್ತಿಯ ನೇತೃತ್ವದ ಈ ಸಂಸ್ಥೆಯಲ್ಲಿ ಯುರೋಪಿಯನ್ ಸದಸ್ಯರ ತುಂಬಿದ್ದರೂ ಜಗನ್ನಾಥ ಶಂಕರಶೇಟ್, ಸರ್ ಜೇಮ್‌ಶೇಟ್‌ಜಿ ಜೀಜೀಭಾಯ್ ಮತ್ತು ಎಮ್.ಐ. ಮುಕ್ಬಾರನ್ನು ಸದಸ್ಯರನ್ನಾ ನೇಮಿಸಿದ್ದು ನಾನಾ ಅವರು ಶಿಕ್ಷಣ ಕ್ಷೇತ್ರದಲ್ಲಿ ಅಂ ದು ಎಂತಹ ಮಹತ್ವದ ಸ್ಥಾನ ಪಡೆದಿದ್ದರು ಎಂಬುದನ್ನು ಸೂಚಿಸುತ್ತದೆ. 1855ರಲ್ಲಿ ಇದೇ ಮಂಡಳಿ ಸಾರ್ವಜನಿ ಶಿಕ್ಷಣ ನಿರ್ದೇಶನಾಲಯವಾಗಿ ಪರಿವರ್ತಿತವಾಯಿತು ಸಾಮಾನ್ಯವಾಗಿ ಶಿಕ್ಷಣ ಮಂಡಳಿಯನ್ನು ಪ್ರತಿ ಮೂರ ವರ್ಷಕ್ಕೊಮ್ಮೆ ಪುನರ್ರಚಿಸುತ್ತಿದ್ದರೂ ಪ್ರತಿ ಬಾರಿಯೂ ನಾನಾ ಅವರು ಅವಿರೋಧವಾಗಿ ನೇಮಕವಾಗುತ್ತಿದ್ದರು ಎಂಬುದ ಅವರು ಶಿಕ್ಷಣ ಕ್ಷೇತ್ರದಲ್ಲಿ ಎಂತಹ ಪ್ರತಿಷ್ಠಿತ ಸ್ಥಾನವನ್ನು ಸಂಪಾದಿಸಿದ್ದರು ಎಂಬುದರ ಸೂಚಿಯಾಗಿದೆ.

### ಬಾಲಕಿಯರ ಶಿಕ್ಷಣ

ಶಿಕ್ಷಣ ಕ್ಷೇತ್ರದಲ್ಲಿ ಇದೆಲ್ಲ ಸಾಧನೆಗಳನ್ನು ಮೀರಿಸಿದ, ಭಾರತೀಯ ಸಾಮಾಜಿಕ ಜೀವನದಲ್ಲಿ ಕ್ರಾಂತಿ-ಕಾರಿ ಬದಲಾವಣೆಯನ್ನು ತಂದ ಇನ್ನೊಂದು ಮಹತ್ವದ ಸಾಧನೆಯಲ್ಲಿಯೂ 'ನಾನಾ' ರು ಪ್ರಮುಖ ಪಾತ್ರವಹಿಸಿದ್ದರು ಎಂಬುದು ಅವರ ಘನತೆಯನ್ನು ಹೆಚ್ಚಿಸಬಲ್ಲದ್ದಾಗಿದೆ. ಅದೇ ಭಾರತೀಯ ಮಹಿಳೆಯರ ಸಾಮಾಜಿಕ ಸ್ಥಿತ್ಯಂತರಕ್ಕೆ

ಣವಾದ 'ಬಾಲಕಿಯಡಿ ಶಿಕ್ಷಣ ನೀತಿಯ ಯೋಜನೆ ಮತ್ತು ಅನುಷ್ಠಾನದ ಕಾರಕ್ರಮ.

ಸಾರ್ವಜನಿಕ ಶಿಕ್ಷಣ ಸೌಲಭ್ಯವೂ ರೂಪಿತವಾಗುವ ಮುಂಚೆ ಕಲವು ಬಾಲಕರಾದರೂ ಮನೆಪಾಠಗಳ ಮೂಲಕ ಶಿಕ್ಷಣವನ್ನು ಪಡೆಯುತ್ತಿದ್ದರು. ಆದರೆ ಬಾಲಕಿಯರಿಗೆ ಶಿಕ್ಷಣ ಪೂರ್ಣ ನಿಷಿದ್ಧವಾಗಿತ್ತು. ಕಿರಿಯ ವಯಸ್ಸಿನಲ್ಲಿಯೇ ಮದುವೆಯಾಗುತ್ತಿದ್ದ ಬಾಲಕಿಯರಿಗೆ ಶಿಕ್ಷಣದ ಅಗತ್ಯವೇ ಇಲ್ಲ, ಮನೆಕೆಲಸಗಳನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗಬಲ್ಲ ಸಾಮಾನ್ಯ ನಡವಳಿಕೆಗಳನ್ನು ಅವರು ಕಲಿತರೆ ಸಾಕು ಎಂಬುದು ಪೋಷಕರ ನಂಬಿಕೆಯಾಗಿತ್ತು. ಮಹಿಳೆಯ ಜೀವನವು ಸದ್ಗೃಹಿಣಿಯಾಗಿ ಮನೆಯ ಸುವ್ಯವಸ್ಥೆಯನ್ನು ನೋಡಿಕೊಳ್ಳುವುದಕ್ಕೆ ಮಾತ್ರ ಸೀಮಿತವಾಗಿತ್ತು. ಮಹಿಳೆಯರನ್ನು ನಿಯಂತ್ರಿಸುವ ಅನೇಕ ಸಾಮಾಜಿಕ ಕಟ್ಟುಪಾಡುಗಳು ... ಎಲ್‌ಫಿನ್‌ಸ್ಟನ್ ಕಾಲೇಜಿನಲ್ಲಿ ಅಭ್ಯಸಿಸಿದ ಅನೇಕ ವಿದ್ಯಾರ್ಥಿಗಳು ತಮ್ಮ ಜ್ಞಾನವನ್ನು ಇತರರಿಗೂ ಹಂಚುವ ಬಯಕೆಯುಳ್ಳವರಾಗಿದ್ದರು. ಅವರೆಲ್ಲ ಮಾರ್ಗದರ್ಶನಕ್ಕಾಗಿ ಶಿಕ್ಷಣ ಕ್ಷೇತ್ರದಲ್ಲಿ ಅನೇಕ ಪ್ರಯತ್ನಗಳನ್ನು ಮಾಡುತ್ತಿದ್ದ ನಾನಾ ಅವರ ಬಳಿಗೆ ಬಂದರು. ವಿಷಯಗಳ ಚರ್ಚೆಗೆ ಮತ್ತು ಬರವಣಿಗೆಗೆ ಅನುಕೂಲವಾಗುವ ಉದ್ದೇಶದಿಂದ ಅವರೆಲ್ಲ ಸೇರಿ 'Native Literary Society' ಎಂಬ ಸಾಹಿತ್ಯಿಕ ಸಂಸ್ಥೆಯೊಂದನ್ನು ಸ್ಥಾಪಿಸಿದರು. ಆದರೆ ಕೆಲವು ಸಮಸ್ಯೆಗಳಿಂದ ಇದು ಹೆಚ್ಚು ದಿನ ನಡೆಯಲಿಲ್ಲ.



ಎಲ್‌ಫಿನ್‌ಸ್ಟನ್ ಕಾಲೇಜಿನ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು ಇನ್ನೊಂದು ಪ್ರಯತ್ನವನ್ನು ಈ ದಿಶೆಯಲ್ಲಿ ಮಾಡಿದರು. ಅವರೆಲ್ಲ 6-6-1848ರಂದು ಸಭೆ ಸೇರಿ ಪ್ರೊಫೆಸರ್ ದಾದಾಭಾಯಿ ನವರೋಜಿ ಅವರ ಅಧ್ಯಕ್ಷತೆಯಲ್ಲಿ 'ಸ್ಟುಡೆಂಟ್ಸ್ ಲಿಟರರಿ ಅಂಡ್ ಸೈಂಟಿಫಿಕ್ ಸೊಸೈಟಿ' ಎಂಬ ಇನ್ನೊಂದು ಸಂಸ್ಥೆಯನ್ನು ಪುನಃ ಪ್ರಾರಂಭಿಸಿದರು. ಈ ಸಂಸ್ಥೆಯ ಮುಖ್ಯ ಪೋಷಕರೆಂದರೆ ನಾನಾರ ಪುತ್ರ ವಿನಾಯಕರಾವ್, ದಾದಾಭಾಯಿ ನವರೋಜಿ, ಡಾ. ಭಾವುದಾಜಿ, ಶ್ರೀ ವಿ.ಎಲ್ ಮಹಾದಿಕ್ ಮುಂತಾದವರು. ನಾನಾ ಅವರು ಈ ಸಂಸ್ಥೆಗೆ ಸಮಯ ಸಮಯಕ್ಕೆ ಅಗತ್ಯವಾದ ಆರ್ಥಿಕ ಸೌಲಭ್ಯವನ್ನು ಒದಗಿಸಿ ಕಾರ್ಯಕ್ರಮಗಳನ್ನು ಪ್ರೋತ್ಸಾಹಿಸಿದರು. ಈ ಸಂಸ್ಥೆಯು ಸಭೆ, ವಿಚಾರಸಂಕಿರಣ ಮತ್ತು ಶಿಕ್ಷಣ ತಜ್ಞರ ಭಾಷಣಗಳ ಮೂಲಕ ಬಾಲಕಿಯರ ವಿದ್ಯಾಭ್ಯಾಸದ ಅಗತ್ಯವನ್ನು ಜನತೆಗೆ ಮನಗಾಣಿಸುವ ಪ್ರಯತ್ನ ಪ್ರಾರಂಭಿಸಿತು. ಸಂಸ್ಥೆಯು 'ಜ್ಞಾನ ಪ್ರಸಾರಕ' ಎಂಬ ಪತ್ರಿಕೆಯನ್ನು ಮರಾಠಿ ಮತ್ತು ಗುಜರಾತಿ ಭಾಷೆಯಲ್ಲಿ ಹೊರತಂದು ಅದರ ಲೇಖನಗಳ ಮೂಲಕ ಬಾಲಕಿಯರ ವಿದ್ಯಾಭ್ಯಾಸದ ಬಗ್ಗೆ ಜನಗಳ ಜವಾಬ್ದಾರಿಯ ಕಡೆಗೆ ಗಮನ ಸೆಳೆಯ ತೊಡಗಿತು. ಒಂದು ಮಹತ್ವದ ಸಭೆಯಲ್ಲಿ ಪಾರ್ಸಿ ಮುಖಂಡರಾದ ಜಯರಾಮ್‌ಜಿ ಕರಶೇಟ್‌ಜೀ ತಮ್ಮ ವಿದ್ವತ್‌ಪೂರ್ಣ ಭಾಷಣದಲ್ಲಿ ಶಿಕ್ಷಣವಿಲ್ಲದ ಭಾರತೀಯ ಹೆಣ್ಣು ಮಕ್ಕಳು ಅನುಭವಿಸುತ್ತಿರುವ ಬವಣೆಗಳನ್ನು ಜನತೆಗೆ ಮನದಟ್ಟಾಗುವಂತೆ ನಿರೂಪಿಸಿದರು. ಇದರಿಂದ ಜನತೆಯಲ್ಲಿ ಬಾಲಕಿಯರ ಶಿಕ್ಷಣದ ಬಗೆಗಿನ ಧೋರಣೆ ಬದಲಾಗುವಂತಾಗಿ 1849ರಲ್ಲಿ ಪ್ರೊಫೆಸರ್ ಪ್ಯಾಟನ್ ಅವರ ಅಧ್ಯಕ್ಷತೆಯಲ್ಲಿ ನಡೆದ ಈ ಸಂಸ್ಥೆಯ ಸಭೆಯಲ್ಲಿ ಮುಂಬಯಿಯ ಪ್ರದೇಶಗಳಲ್ಲಿ ಬಾಲಕಿಯರಿಗಾಗಿ ಪಾಠಶಾಲೆ ಪ್ರಾರಂಭಿಸಲು ಒಮ್ಮತದಿಂದ ನಿರ್ಧರಿಸಲಾಯಿತು.

ನಾನಾ ಅವರು ಮುಂಬಯಿಗೆ ಬರುತ್ತಿದ್ದ ರಾಜ-ಮಹಾರಾಜರು ಮತ್ತು ಇತರ ಶ್ರೀಮಂತ ಗಣ್ಯವ್ಯಕ್ತಿಗಳನ್ನು ಈ ಶಾಲೆಗಳ ಭೇಟಿಗೆ ಕರೆದುಕೊಂಡು ಬಂದು ಅವರಿಗೆ ಅವುಗಳ ಪ್ರಗತಿಯನ್ನು ಮನದಟ್ಟು ಮಾಡಿ ಅವರೆಲ್ಲ ಈ ಕಾರ್ಯಕ್ಕಾಗಿ ಉದಾರ ಧನಸಹಾಯ ಮಾಡುವಂತೆ ಪ್ರೇರೇಪಿಸುತ್ತಿದ್ದರು. ಇದ-ರಿಂದ ಯೋಜನೆಗೆ ಒಂದು ಭದ್ರ ಆರ್ಥಿಕ ತಳಹದಿ ದೊರಕಿ ಹೆಣ್ಣು ಮಕ್ಕಳ ವಿದ್ಯಾಭ್ಯಾಸವು ಕ್ರಮೇಣ ಒಂದು ಸ್ಥಿರವಾದ ನೆಲೆ ಪಡೆಯಿತು. ನಾನಾ ಅವರು ಬಾಲಕಿಯರ ಶಿಕ್ಷಣಕ್ಕೆ ಮಾಡಿದ ಸೇವೆಯ ಜೀವಂತ ಸ್ಮಾರಕವಾಗಿ ಅವರು ಅಂ-ದು ಪ್ರಾರಂಭ ಮಾಡಿದ ಶಾಲೆ ಇಂದಿಗೂ ನಡೆಯುತ್ತಿದೆ. ಅದರ ಆಡಳಿತವನ್ನು ಈಗ ಪುರಸಭೆಯವರು ನೋಡಿಕೊಳ್ಳುತ್ತಿದ್ದಾರೆ.

## ಸಂಸ್ಕೃತ ಶಿಕ್ಷಣ

ನಾನಾ ಶಿಕ್ಷಣ ಕ್ಷೇತ್ರದಲ್ಲಿ ಮಾಡಿದ ಇನ್ನೊಂದು ಮಹತ್ವದ ಸಾಧನೆಯೆಂದರೆ ಸಂಸ್ಕೃತ ಶಿಕ್ಷಣವನ್ನು ಸಾಮಾನ್ಯರಿಗೂ ಎಟಕುವಂತೆ ಮಾಡಿದ್ದು. ಸ್ವತಃ ಸಂಸ್ಕೃತ ಭಾಷೆಯ ಆಳವಾದ ಜ್ಞಾನ ಹೊಂದಿದವರಾಗಿದ್ದ ನಾನಾ ಅದರ ಪರಿಚಯ ಸಾಮಾನ್ಯನಿಗೂ ಆದಾಗಲೇ ಈ ದೇಶದ ಉದ್ಧಾರ ಸಾಧ್ಯ ಎಂದು ನಂಬಿದ್ದರು. ಭಾರತೀಯ ಜೀವನ ಧರ್ಮ, ಸಂಸ್ಕೃತಿಗೆ ಪರಿಚಿತನಾದವ ಆಧ್ಯಾತ್ಮಿಕವಾಗಿ ಔನ್ನತ್ಯಕ್ಕೇರಬಲ್ಲ ಎಂಬುದು ಅವರ ನಿಲುವಾಗಿತ್ತು. ಹೀಗಾಗಿ ದೇಶವನ್ನು ಕಾಡುತ್ತಿದ್ದ ಅಜ್ಞಾನ, ಮೂಢ ನಂಬಿಕೆಗಳ ತಳಹದಿ ಧರ್ಮದ ನಿಜವಾದ ಅರ್ಥಮಾಡಿಕೊಳ್ಳದಿರುವಿಕೆಯಲ್ಲಿದೆಯೇ ಹೊರತು ಧಾರ್ಮಿಕನಾಗಿರುವುದರಲ್ಲಿಲ್ಲ. ಆದ್ದರಿಂದ ಕಟ್ಟಭದ್ರರ ಕಪಿಮುಷ್ಟಿಯಲ್ಲಿ ಬಂಧಿತವಾಗಿರುವ ಸಂಸ್ಕೃತದ ಅಭ್ಯಾಸ, ಆ ಮೂಲಕ ಭಾರತೀಯ ಧರ್ಮದ ಪರಿಚಯದಿಂದ ಸಾಮಾನ್ಯರ

ಮನೋವಿಕಾಸ ಸಾಧ್ಯವೆಂಬುದು ಅವರ ನಂಬಿಕೆಯ ತಳಹದಿಯಾಗಿತ್ತು. ಹೀಗಾಗಿ ನಾನಾ ಸಂಸ್ಕೃತ ಭಾಷೆಯ ಬೆಳವಣಿಗೆಯ ಬಗ್ಗೆ ಸಾಕಷ್ಟು ಗಮನ ಕೊಟ್ಟು ಒಂದು ನಿರ್ದಿಷ್ಟ ಕಾರ್ಯಯೋಜನೆಯ ಮೂಲಕ ಅದನ್ನು ಸಾಧ್ಯವನ್ನಾಗಿಸಿದರು.

ಶಿಕ್ಷಣ ಮಂಡಳಿಗೆ ಕಳಿಸಲಾಯಿತು. ಪ್ಯಾರಿ ಎಂಬುವರು ಆಗ ಶಿಕ್ಷಣ ಮಂಡಳಿ ಅಧ್ಯಕ್ಷರಾಗಿದ್ದರು. ಅವರು ಈ ಸಂಸ್ಕೃತ ಶಾಲೆಯನ್ನು ಮುಚ್ಚಿಬಿಡಬೇಕೆಂಬ ದೃಢ ಅಭಿಪ್ರಾಯದವರಾಗಿದ್ದರು. ಆಶ್ಚರ್ಯಕರ ಸಂಗತಿಯೆಂದ-ರೆ ಸಂಸ್ಕೃತ ಭಾಷೆ, ಸಾಹಿತ್ಯ ಅಜ್ಞಾನದಿಂದಾಗಿಯೇ ಏನೋ ಶಿಕ್ಷಣ ಮಂಡಳಿಯ ಇತರ ಭಾರತೀಯ ಸದಸ್ಯರುಗಳಾದ ಫ್ರಾಮ್‌ಜೀಕಾವ್ಸ್ ಜೀ, ಮಹಮ್ಮದ್ ಇಬ್ರಾಹಿಂ ಮುಕಬಾ ಅವರೂ ಸಹ ಅಧ್ಯಕ್ಷರ ಸೂಚನೆಗೆ ಒಪ್ಪಿಗೆ ಸೂಚಿಸಿದರು. ಆದರೆ ನಾನಾ ಒಬ್ಬರೇ ಏಕಾಂಗಿಯಾಗಿ ಈ ಸೂಚನೆಯನ್ನು ಬಲವಾಗಿ ವಿರೋಧಿಸಿದ್ದಷ್ಟೇ ಅಲ್ಲ ತಮ್ಮ ಪಾಂಡಿತ್ಯ ಪೂರ್ಣ ಭಾಷಣದಿಂದ ಸಂಸ್ಕೃತ ಭಾಷೆಯ ಮಹತ್ವವನ್ನು ಬಲವಾಗಿ ಪ್ರತಿಪಾದಿಸಿದರು. ಅಲ್ಲದೆ ಅಧ್ಯಕ್ಷರು ಸಂಸ್ಕೃತ ಶಾಲೆಯನ್ನು ಮುಚ್ಚಬೇಕಂಬ ತಮ್ಮ ಅಭಿಪ್ರಾಯವನ್ನು ಬದಲಾಯಿಸುವಂತೆ ಮಾಡುವಲ್ಲಿಯೂ ಸಫಲರಾದರು ಅವರ ವಾದದ ಮುಖ್ಯ ಅಂಶವೆಂದರೆ 'ಸಂಸ್ಕತ ಎಲ್ಲ ಭಾರತೀಯ ಭಾಷೆಗಳ ಮಾತೃಭಾಷೆ ಇದನ್ನು ಯುರೋಪಿಯನ್ನರೂ ಸೇರಿದಂತೆ ಯಾರು ಬೇಕಾದರೂ ಸುಲಭವಾಗಿ ಕಲಿಯಬಲ್ಲರು ಮೇಜರ್ ಕ್ಯಾಂಡಿಯವರಂತಹ ಅನೇಕ ಆಂಗ್ಲರು ಮತ್ತು ಜರ್ಮನರು ಈಗಾಗಲೇ ಈ ಭಾಷೆಯಲ್ಲಿ ಪರಿಣತರಾಗಿದ್ದಾರೆಂಬುದೇ ಇದಕ್ಕೆ ಉದಾಹರಣೆ. ಅನೇಕ ಹಿಂದೂ ಧಾರ್ಮಿಕ ಗ್ರಂಥಗಳು ಸಂಸ್ಕೃತದಲ್ಲಿಯೇ ರಚಿತವಾಗಿವೆಯಾದ್ದರಿಂದ ಸಂಸ್ಕೃತ ಪಾಠಶಾಲೆಯ ಮುಚ್ಚುವಿಕೆಯಿಂದ ಭಾರತೀಯರಿಗೆ ಅನ್ಯಾಯವಾಗುತ್ತದಷ್ಟೇ ಅಲ್ಲ ಅದರಿಂದ ಈ ಭಾಷೆಯ ಮೂಲಕ ಇಡೀ ಪ್ರಪಂಚಕ್ಕೆ ಒಂದು ಜನಾಂಗದ ಅತ್ಯುತ್ತಮ ಭಾಷೆಯ, ಆ ಮೂಲಕ ಆ ಸಂಸ್ಕೃತಿಯ ಪರಿಚಯವಾಗಬಹುದಾದ ಅವಕಾಶ ತಪ್ಪುತ್ತದೆ. ನನ್ನ ಅಭಿಪ್ರಾಯದಲ್ಲಿ ಇರುವ ಸಂಸ್ಕೃತ ಶಾಲೆಯನ್ನು ಮುಚ್ಚುವ ಬದಲಾಗಿ ಇನ್ನೂ ಅನೇಕ ಪ್ರೌಢ ಶಾಲೆಗಳನ್ನು ಪ್ರಾರಂಭಿಸಿ ಸಂಸ್ಕೃತ ಕಲಿಕೆಯನ್ನು ಸರಳಗೊಳಿಸಬೇಕು'. ಈ ವಾದದ ಆಧಾರದ ಮೇಲೆ ನಾನಾ ಅವರು ಸಧ್ಯಕ್ಕೆ ಸಂಸ್ಕೃತ ಶಾಲೆಯನ್ನು ಮುಚ್ಚುವ ಬದಲಾಗಿ ಅದನ್ನು ಆಂಗ್ಲ ಶಾಲೆಗಳೊಂದಿಗೆ ವಿಲೀನಗೊಳಿಸಬೇಕು ಎಂದು ಸೂಚಿಸಿದರು. ಶಿಕ್ಷಣ ಮಂಡಳಿಯು ಅವರ ಈ ಸೂಚನೆಯನ್ನು ಒಪ್ಪಿ ಎಲ್ಲ ಆಂಗ್ಲ ಶಾಲೆಗಳಲ್ಲೂ ಸಂಸ್ಕೃತ ಭಾಷೆಯನ್ನು ಕಲಿಸುವ ಒಂದು ಸೂತ್ರವನ್ನು ಜಾರಿಗೊಳಿಸಿತು. ಹೀಗೆ ನಾನಾ ಅವರ ತೀವ್ರ ವಿರೋಧದಿಂದ ಸಂಸ್ಕೃತ ಶಾಲೆಯು ಮುಚ್ಚುವ ಬದಲಾಗಿ ಸಂಸ್ಕೃತದ ಕಲಿಕೆ ಎಲ್ಲ ಆಂಗ್ಲ ಶಾಲೆಗಳಿಗೂ ವಿಸ್ತರಿಸಿ ದೇವ ಭಾಷೆಯ ಕಲಿಕೆಯ ಅವಕಾಶ ಸಾಮಾನ್ಯರಿಗೂ ತಲುಪುವಂತಾಯಿತು.

ತದನಂತರದಲ್ಲಿ ಆಜೀವ ಪರ್ಯಂತ ನಾನಾ ಅವರು ಸಂಸ್ಕೃತದ ಬೆಳವಣಿಗೆಗಾಗಿ ಅಹರ್ನಿಶಿ ದುಡಿಯುತ್ತಲೇ ಇದ್ದರು. ಅವರ ಈ ಸತ್ಸಂಪ್ರದಾಯವನ್ನು ಅವರ ಪುತ್ರ ವಿನಾಯಕರಾವ್ ಕೂಡ ಮುಂದುವರೆಸಿ ತಮ್ಮ ತಂದೆ 31-7-1865ರಂದು ತೀರಿಕೊಂಡಾಗ ಸೆಪ್ಟೆಂಬರ್ 1865ರಲ್ಲೇ ಮುಂಬಯಿ ವಿಶ್ವವಿದ್ಯಾಲಯಕ್ಕೆ ಪತ್ರವೊಂದನ್ನು ಬರೆದು ತಮ್ಮ ತ[illegible] ಜಗನ್ನಾಥ್ ಶಂಕರಶೇಟ್‌ರ ಸ್ಮರಣಾರ್ಥ ಸಂಸ್ಕೃತ ಭಾಷೆ[illegible] ಒಂದು ವಿದ್ಯಾರ್ಥಿ ವೇತನ ಕೊಡಲು ಸಾಧ್ಯವಾಗುವ[illegible] ಮೂವತ್ತು ಸಾವಿರ ರೂಗಳ ದೇಣಿಗೆ ಕೊಡುವುದಾಗಿ ತಿಳಿಸಿದ[illegible] ಜಗನಾಥ್‌ಶಂಕರಶೇಟ್‌ರು ಸಂಸ್ಕೃತ ಕ್ಷೇತ್ರದಲ್ಲಿ ಮಾ[illegible] ಸೇವೆಯನ್ನು ಪರಿಗಣಿಸಿ ಮುಂಬಯಿ ವಿದ್ಯಾಲಯದವರು [illegible] ದೇಣಿಗೆಯನ್ನು ಪಡೆಯಲು ಒಪ್ಪಿಕೊಂಡು ಅದರ ಬಡ್ಡಿಯಿ[illegible] ಬರುವ ಹಣದಲ್ಲಿ ಮುಂಬಯಿ ವಿಶ್ವವಿದ್ಯಾಲಯದವ[illegible] ನಡೆಸುತ್ತಿದ್ದ ಮೆಟ್ರಿಕ್ಯೂಲೇಶ್ ಪರೀಕ್ಷೆಯಲ್ಲಿ ಸಂಸ್[illegible] ಭಾಷೆಯಲ್ಲಿ ಅತ್ಯಧಿಕ ಅಂಕಗಳನ್ನು ಪಡೆದ ವಿದ್ಯಾರ್ಥಿಗ[illegible] 'ಜಗನ್ನಾಥ್‌ಶಂಕರಶೇಟ್ ವಿದ್ಯಾರ್ಥಿವೇತನ' ಕೊಡ[illegible] ನಿರ್ಧಸಿದರು. ಅದರಂತೆ ತಿಂಗಳಿಗೆ ಇಪ್ಪತ್ತೈದು ರೂಪಾಯಿ[illegible] ಮೂರು ಮತ್ತು ಇಪ್ಪತ್ತು ರೂಪಾಯಿಗಳ ಮೂರು, ಹೀ[illegible] ಒಟ್ಟು ಆರು ವಿದ್ಯಾರ್ಥಿ ವೇತನಗಳನ್ನು 1866ರಿಂದ[illegible] ಕೊಡಲು ಪ್ರಾರಂಭಿಸಿದರು. ನಂತರದಲ್ಲಿ ಕಾಲಕ್ಕೆ ತಕ್ಕಂತೆ [illegible] ವಿದ್ಯಾರ್ಥಿವೇತನದ ಸ್ವರೂಪ ಬದಲಾಗಿದೆಯಾದರೂ ಇಂದಿ[illegible] ಮಹಾರಾಷ್ಟ್ರದ ವಿದ್ಯಾರ್ಥಿಗಳಲ್ಲಿ ಜಗನ್ನಾಥ್ ಶಂಕರಶೇಟ್[illegible] ಸಂಸ್ಕೃತ ವಿದ್ಯಾರ್ಥಿ ವೇತನವನ್ನು ಪಡೆಯುವುದು ಹೆಮ್ಮೆ[illegible] ವಿಷಯವಾಗಿದೆ ಎಂಬುದು ಅದರ ಪ್ರತಿಷ್ಠೆಯ ಸಂಕೇತವಾಗಿ[illegible]

## ಕಾನೂನು ಶಿಕ್ಷಣ

ಹಿಂದೆ ಮುಂಬಯಿ ನಗರ ಮತ್ತು ಸುತ್ತಮುತ್ತಲ[illegible] ಪ್ರದೇಶಗಳು ಕೊಲೆ, ಇರಿತ, ದಂಗೆ, ಡಕಾಯಿತಿ ಮುಂತಾ[illegible] ಅಪರಾಧೀ ಚಟುವಟಿಕೆಗಳಿಗೆ ಪ್ರಸಿದ್ಧವಾಗಿತ್ತು. ಜೊತೆ[illegible] ಭಾರತೀಯರಲ್ಲಿ ಮನೆ ಮಾಡಿದ್ದ ಅನೈಕ್ಯತೆ ಪರಸ್ಪರ ಜಗಳಗಳ[illegible] ಪರ್ಯಾವಸನವಾಗಿ ನ್ಯಾಯಕ್ಕಾಗಿ ನ್ಯಾಯಾಲಯಗಳಿಗೆ ಮೊ[illegible] ಹೋಗುವವರ ಸಂಖ್ಯೆ ಹೆಚ್ಚಾಗಿತ್ತಾಗಿ ನ್ಯಾಯಾಲಯಗಳ[illegible] ಅಸಂಖ್ಯ ಖಟ್ಲೆಗಳಿರುತ್ತಿದ್ದವು. ಮುಂಬಯಿನಲ್ಲಿ ಪ್ರತಿಷ್ಠಿ[illegible] ಬ್ಯಾರಿಸ್ಟರುಗಳ ಸಹಕಾರ ಸಿಗುತ್ತಿದ್ದರೂ ನಗರೇತ[illegible] ಪ್ರದೇಶಗಳ ಜನಕ್ಕೆ ಇಂತಹ ಸೌಲಭ್ಯವಿಲ್ಲದ್ದರಿಂದ ಅವ[illegible] ಕಾನೂನಿನ ಪರಿಣತಿಯಿಲ್ಲದ ಅರೆಬರೆ ವಕೀಲರುಗಳನ[illegible] ಅವಲಂಬಿಸಬೇಕಾಗಿತ್ತು. ಹೀಗಾಗಿ ಸಾಮಾನ್ಯರಿಗೆ ಕಾನೂನಿ[illegible] ನೆರವು ಪಡೆಯುವುದು ದುಸ್ತರವೂ-ದುಬಾರಿಯೂ ಆಗಿ[illegible] ಬಹಳ ತೊಂದರೆಯನ್ನನುಭವಿಸುತ್ತಿದ್ದರು. ಇದನ್ನು ಅರಿ[illegible] ನಾನಾ ಮತ್ತು ಮಿತ್ರರು ಕಾನೂನಿನ ವ್ಯವಸ್ಥಿತ ಶಿಕ್ಷಣ ಮಾ[illegible] ಇದಕ್ಕೆ ಪರಿಹಾರವಾಗಬಲ್ಲದೆಂಬುದನ್ನು ಮನಗಂಡು [illegible] ದಿಶೆಯಲ್ಲಿ ಕಾರ್ಯ ಪ್ರವೃತ್ತರಾದರು. ಶಿಕ್ಷಣ ಮಂಡಳಿಯ ಅಂದಿ[illegible] ಅಧ್ಯಕ್ಷರಾಗಿದ್ದ ಸರ್. ಆಸ್ಕೀನ್ ಪ್ಯಾರಿಯವರೂ ಅವರ ನೆರವಿ[illegible] ಬಂದರು.

1830ರಲ್ಲಿ ಈಸ್ಟ್ ಇಂಡಿಯಾ ಕಂಪನಿಯ[illegible] ತಯಾರಿಸಿದ ಶಿಕ್ಷಣ ನೀತಿಯಲ್ಲಿ ಕಾನೂನು ಶಿಕ್ಷಣಕ್ಕೂ ಮಹ[illegible] ಕೊಡಲಾಗಿತ್ತು. ಸಭೆಯೊಂದರಲ್ಲಿ ನಾನಾ ಅವರು ಕಾನೂನಿ[illegible] ಶಿಕ್ಷಣ ಲಭ್ಯವಾಗುವವರೆಗೆ ಎಲ್ಫಿನ್‌ಸ್ಟನ್ ಕಾಲೇಜಿನ[illegible] ಕಾನೂನು ತಜ್ಞರಿಂದ ಕಾನೂನಿಗೆ ಸಂಬಂಧಪಟ್ಟಂತ[illegible] ವಿಷಯಗಳ ಮೇಲೆ ವಿಶೇಷ ಉಪನ್ಯಾಸಗಳನ್ನು ಯೋಜಿಸಿದ[illegible] ಅದರಿಂದ ಸಾಮಾನ್ಯ ಪದವೀಧರರಿಗೆ ಕಾನೂನಿನ ಪ್ರಾಥಮಿ[illegible] ಜ್ಞಾನ ದೊರಕುವಂತಾಗುತ್ತದೆ ಎಂಬ ಸಲಹೆ ಮುಂದಿಟ್ಟರು. ನಾನಾ ಅವರ ಈ ಸಲಹೆ ಒಪ್ಪಿತವಾಗಿ ಕಾರ್ಯಗತವಾಯಿತು.

1841ರಿಂದ 1851ರವರೆಗೆ ಸರ್ ಪ್ಯಾರಿಯವರು ಸುಪ್ರೀಂ ಕೋರ್ಟ್ ಸ್ಥ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿ ಕಾರ್ಯ ನಿರ್ವಹಿಸಿ ಜನಗಳ ಪ್ರೀತಿಯನ್ನು ಸಂಪಾದಿಸಿದ್ದರು. ...ದೇ ಈಸ್ಟ್ ಇಂಡಿಯಾ ಕಂಪನಿಯ ಶಾಸನಾಧಿಕಾರದ ...ನೀಕರಣ ಸಂದರ್ಭದಲ್ಲಿ ಭಾರತೀಯರ ಅಹವಾಲನ್ನು ...ಟಿಷ್ ಪಾರ್ಲಿಮೆಂಟಿನ ಮುಂದೆ ಮಂಡಿಸುವಲ್ಲಿ ಸರ್. ...ರಿಯವರ ನೆರವು ಪಡೆಯುವ ಅಭಿಲಾಷೆಯು ನಾನಾ ...ತ್ತು ಮಿತ್ರರಿಗಿತ್ತು. ಇಂತಹ ಸೇವೆಗಳನ್ನು ಭಾರತೀಯ ...ನರಿಕರಿಗೆ ಸಲ್ಲಿಸುತ್ತಿದ್ದ ಬ್ರಿಟೀಷ್ ಅಧಿಕಾರಿಗಳ ಸೇವೆಯನ್ನು ...ಕ್ತ ಸ್ಮಾರಕಗಳ ಮೂಲಕ ಗುರುತಿಸುವುದು ಅಂದಿನ ...ತಿಯಾಗಿತ್ತು. ಸರ್. ಪ್ಯಾರಿಯವರಿಗೂ ಅವರ ನಿವೃತ್ತಿಯ ...ದರ್ಭದಲ್ಲಿ ಇಂತಹ ಒಂದು ಸ್ಮಾರಕವನ್ನು ನಿರ್ಮಿಸುವ ...ದ್ದೇಶದ ಬಗ್ಗೆ ಚರ್ಚಿಸಲು ಎಲ್ಫಿನ್‌ಸ್ಟನ್ ಇನ್‌ಸ್ಟಿಟ್ಯೂಟ ...ಭಾಂಗಣದಲ್ಲಿ ನಾನಾ ಅವರು ನಾಗರಿಕರ ಒಂದು ಸಭೆ ಕ- ...ದರು. ಸಭೆಯ ಅಧ್ಯಕ್ಷರಾಗಿ ನೇಮಕಗೊಂಡ ನಾನಾ ಅವರು ...ಮ್ಮ ಭಾಷಣದಲ್ಲಿ "ಪ್ಯಾರಿಯವರು ನಿವೃತ್ತರಾಗಿ ಇಂಗ್ಲಂ- ...ಗೆ ಮರಳುತ್ತಿದ್ದಾರೆ. ತಮ್ಮ ಸೇವಾವಧಿಯಲ್ಲಿ ಅವರು ನಮ್ಮ ...ತಿಕ, ಬೌದ್ಧಿಕ, ಸಾಮಾಜಿ ಅಭಿವೃದ್ಧಿಗೆ ಕಾರಣರಾಗಿದ್ದಾರೆ. ...ಯ್ಯಯವನ್ನು ಶೀಘ್ರವಾಗಿ ದೊರಕಿಸಿ ಕೊಡುತ್ತಿದ್ದ ಅವರು ಶಿಕ್ಷಣ ...ಕ್ಷೇತ್ರದಲ್ಲೂ ಅಗಾಧ ಸಾಧನೆ ಮಾಡಿದ್ದಾರೆ. ಈ ಮಹನೀಯರಿಗೆ ...ಂದು ಸೂಕ್ತ ಸ್ಮಾರಕವನ್ನು ನಿರ್ಮಿಸುವುದು ನಮ್ಮ ನೈತಿಕ ...ಹೊಣೆಯಾಗಿದೆ. ಅವರು 1847 ರಷ್ಟು ಹಿಂದೆಯೆ ಎಲ್ಫಿನ್‌ಸ್ಟನ್ ...ಕಾಲೇಜಿನಲ್ಲಿ ಕಾನೂನು ಶಿಕ್ಷಣವನ್ನು ಪ್ರಾರಂಭಿಸಬೇಕೆಂದು ...ಸೂಚಿಸಿದ್ದರು ಎಂಬುದನ್ನು ಗಮನಿಸಿದಾಗ, ನನ್ನ ...ಅಭಿಪ್ರಾಯದಂತೆ ಕಾನೂನಿನ ಶಿಕ್ಷಣ ಕೊಡುವ 'ಪ್ಯಾರಿ ಪ್ರೊಫೆಸರ್‌ಶಿಪ್ ಆಫ್ ಜ್ಯೂರಿಸ್ಟುಡೆನ್ಸ್'ನ ನಿರ್ಮಾಣವೇ ಈ ...ಕ್ಕಿನಲ್ಲಿ ಸೂಕ್ತವಾದ ಕೆಲಸ ಎಂಬ ಸಲಹೆ ಮುಂದಿಟ್ಟರು. ನಾನಾ ...ಅವರ ಈ ಸಲಹೆ ಸ್ವೀಕೃತವಾಗಿ ಅದನ್ನು ಸಾಧ್ಯವಾಗಿಸಲು ...ಅವರ ನೇತೃತ್ವದಲ್ಲಿಯೇ ಒಂದು ಸಮಿತಿ ರಚಿತವಾಯಿತು. ... ಸಭೆಯಲ್ಲಿಯೇ 40,000 ರೂಪಾಯಿಗಳ ನಿಧಿಯೂ ಸಂಗ್ರಹವಾಯಿತು.

20-7-1853ರಂದು ಗೌರ್ನರ್‌ರಿಗೆ ಈ ಸಂಸ್ಥೆಯನ್ನು ಪ್ರಾರಂಭಿಸಲು ಅನುಮತಿ ಮತ್ತು ಸೂಕ್ತ ನಿಯಮಾವಳಿಗಳನ್ನು ರಚಿಸಿಕೊಡುವಂತೆ ಕೋರಿ ಪತ್ರ ಬರೆಯಲಾಯಿತು. ಸರ್ಕಾರವು ಸಮಿತಿಯು ತನ್ನಲ್ಲಿದ್ದ ನಿಧಿಯ ಮೊತ್ತವನ್ನು ಮತ್ತು ಸರ್ಕಾರದಿಂದ ಅದು ನಿರೀಕ್ಷಿಸುತ್ತಿರುವ ಸಹಾಯದ ರೀತಿಯನ್ನು ವಿವರಿಸುವಂತೆ ಸಮಿತಿಯನ್ನು ಕೇಳಿತು. ಅಲ್ಲದೆ ಉಚ್ಚ ನ್ಯಾಯಾಲಯ ಮತ್ತು ಶಿಕ್ಷಣ ಮಂಡಳಿಯ ಅಭಿಪ್ರಾಯವನ್ನು ಕೇಳಿತು. ಅವು ಸರ್ಕಾರಕ್ಕೆ ಒಳ್ಳೆಯ ಅಭಿಪ್ರಾಯವನ್ನು ಸೂಚಿಸಿದವು. ನಾನಾ ಅವರ ಸತತ ಪ್ರಯತ್ನದ ನಂತರ ಕೊನೆಗೆ ಸರ್ಕಾರದಿಂದ 17-3-1855ರಂದು ಅನುಮತಿ ದೊರಕಿ, ಬ್ಯಾರಿಸ್ಟರ್ ಆರ್.ಟಿ. ರೀಡ್ ಅವರ ಮಾರ್ಗದರ್ಶನದಲ್ಲಿ ನೂರು ವಿದ್ಯಾರ್ಥಿಗಳ ಪ್ರಥಮ ಕಾನೂನು ಶಿಕ್ಷಣ ಶಾಲೆ ಎಲ್ಫಿನ್‌ಸ್ಟನ್ ಕಾಲೇಜಿನಲ್ಲಿ 3-7-1855ರಂದು ಪ್ರಾರಂಭವಾಯಿತು. ಈ ಸಂಸ್ಥೆಯಿಂದ ಉತ್ತೀರ್ಣರಾದ ವಿದ್ಯಾರ್ಥಿಗಳು ಸರ್ಕಾರದ 14-4-1860ರ ಆದೇಶದ ಮೇರೆಗೆ ನ್ಯಾಯಾಲಯಗಳಲ್ಲಿ ತಮ್ಮ ಕೆಲಸ ಪ್ರಾರಂಭಿಸಲು ಅನುಮತಿಯೂ ದೊರಕಿತು. ನಾನಾ ಮತ್ತು ಅವರ ಮಿತ್ರರಿಂದ ಪ್ರಾರಂಭವಾದ ಈ ಕಾಲೇಜೇ ಭಾರತದ ಪ್ರಥಮ ಕಾನೂನು ಕಾಲೇಜು ಎಂಬುದು ಮಹತ್ವದ ಸಂಗತಿ.

## ತೋಟಗಾರಿಕಾ ಶಿಕ್ಷಣ

ಕೃಷಿ ಪ್ರಧಾನ ದೇಶವಾದ ಭಾರತದಲ್ಲಿ ಭಾರತೀಯರು ಸುಧಾರಿತ ಕೃಷಿ ವಿಜ್ಞಾನದ ಪರಿಯವಿಲ್ಲದೆ, ಸಾಂಪ್ರದಾಯಿಕ ಬೇಸಾಯ ಪದ್ಧತಿಗಳಿಂದಾಗಿ ಹೆಚ್ಚಿನ ಸೌಲಭ್ಯದಿಂದ ಪರಿಚಿ-ತರಾಗಿದ್ದರು. ದೇಶದ ಜನ ಸಂಖ್ಯೆಯ ಪ್ರಮುಖ ಅಂಗವಾದ ರೈತರ ಉತ್ಪಾದನಾ ಸಾಮರ್ಥ್ಯದ ಮೇಲೆ ಇತರ ಉದ್ಯಮಗಳೂ ಅವಲಂಬಿತವಾಗಿದ್ದರಿಂದ ಸಹಜವಾಗಿಯೇ ದೇಶದ ಪ್ರಗತಿ ಇದರಿಂದ ಕುಂಠಿತವಾಗಿತ್ತು. ಇದಕ್ಕೆ ಪರಿಹಾರ ಭಾರತೀಯ ರೈತರಿಗೆ ವೈಜ್ಞಾನಿಕ ಕೃಷಿ ಶಿಕ್ಷಣ ಕೊಡುವುದರಿಂದ ಮಾತ್ರ ಸಾಧ್ಯ ಎಂಬುದರಿಂದ ನಾನಾ ಈ ದಿಶೆಯಲ್ಲಿ ಕಾರ್ಯ ಪ್ರವೃತ್ತರಾದರು. ಅವರು ಅಂದಿನ ಮುಂಬಯಿಯ ಗೌರ್ನರ್‌ರಾಗಿದ್ದ ಸರ್. ಜಾನ್ ಮಲ್ಕಾನ್ ಅವರನ್ನು ಸಂಪರ್ಕಿಸಿ ಅವರ ಸಹಕಾರದೊಂದಿಗೆ ಒಂದು ಕೃಷಿ ತರಬೇತಿ ಸಂಸ್ಥೆಯನ್ನು ಸ್ಥಾಪಿಸುವ ಬಗ್ಗೆ ಚರ್ಚಿಸಿದರು. ಫಾರಂ ಕೃಷಿ ವ್ಯವಸಾಯದಲ್ಲಿ ತಜ್ಞರಾಗಿದ್ದ ಅನೇಕ ಬ್ರಿಟೀಷ್ ಕೃಷಿ ಪಂಡಿತರ ಸಲಹೆ ಸಹಕಾರಿಗಳೊಂದಿಗೆ "Agro Horticultural Society" ಎಂಬ ಸಂಸ್ಥೆಯನ್ನು 1830ರಲ್ಲಿ ಪ್ರಾರಂಭಿಸಿದರು. ಸೇವ್ರಿಯಲ್ಲಿ ಸ್ಥಾಪಿತಗೊಂಡ ಈ ಸಂಸ್ಥೆಯ ಉದ್ದೇಶ ಭಾರತೀಯರಿಗೆ ಫಾರಂ ವ್ಯವಸಾಯದ ಬಗ್ಗೆ ಸೂಕ್ತ ತರಬೇತಿ ನೀಡಿ ಅಧಿಕ ಇಳುವರಿ ಪಡೆಯುವಲ್ಲಿ ಅವರನ್ನು ಸಮರ್ಥರನ್ನಾಗಿ ಮಾಡುವುದಾಗಿತ್ತು. ಇದಕ್ಕಾಗಿ ಸೇವ್ರಿಯಲ್ಲಿ ಒಂದು ಫಾರಂ ಖರೀದಿಸಿ ವಿವಿಧ ಪ್ರದೇಶಗಳಿಂದ ತಂದ ಅನೇಕ ಜಾತಿಯ ಸಸ್ಯಗಳನ್ನು ಬೆಳೆಸಿ, ಉತ್ತಮ ತಳಿಯ ಬೀಜಗಳನ್ನು ಉತ್ಪಾದಿಸಿ, ಫಾರಂ ವ್ಯವಸಾಯದ ಬಗ್ಗೆ ಪ್ರಾಯೋಗಿಕ ಸಂಶೋಧನೆಗಳನ್ನು ನಡೆಸುವ ಏರ್ಪಾಡು ಮಾಡಲಾಯಿತು. ಪ್ರಾತ್ಯಕ್ಷಿಕೆಗಳ ಮೂಲಕ ಮತ್ತು ಸಂಶೋಧಿತ ಸಾಹಿತ್ಯವನ್ನು ಪ್ರಕಟಿಸಿ ಹಂಚುವ ಮೂಲಕ ಕ್ಷೇತ್ರದ ಬೇಸಾಯಗಾರರ ಕೃಷಿ ಜ್ಞಾನವನ್ನು ಹೆಚ್ಚಿಸುವ ವ್ಯವಸ್ಥೆಯನ್ನೂ ಮಾಡಲಾಯಿತು. ಇದರ ಫಲವಾಗಿ ರೈತರಲ್ಲಿ ಒಳ್ಳೆಯ ತಳಿಯ ಹಣ್ಣು ಹಂಪಲು, ತರಕಾರಿಗಳನ್ನು ಬೆಳೆಯುವ ಪ್ರವೃತ್ತಿ ಮೂಡಲು ಸಾಧ್ಯವಾಯಿತು.

ಇತರರಿಗೆ ಮಾದರಿಯಾಗುವಂತೆ ನಾನಾ ಅವರು 'ತಾರಾದೇವ್'ನ ತಮ್ಮ ಬಂಗಲೆಯ ಆವರಣದಲ್ಲಿಯೇ ಒಂದು 'ಮಿನಿ ಫಾರಂ' ನಿರ್ಮಾಣ ಮಾಡಿದರು. ತೋಟಗಾರಿಕಾ ಸಂಸ್ಥೆಯಲ್ಲಿ ನಡೆದ ಸಂಶೋಧನೆಗಳನ್ನು ಆಧರಿಸಿದ ಕೃಷಿಪದ್ಧತಿಯನ್ನನುಸರಿಸಿ ಹಣ್ಣು - ತರಕಾರಿ ಬೆಳೆಯ ತೊ-ಡಗಿದರು. ಜೊತೆಗೆ ಅದು ಭಾರತದಲ್ಲಿ ಅಪರೂಪವಾಗಿದ್ದ ಕಬ್ಬಿನ ಬೆಳೆಯನ್ನು ಮಾರಿಷಸ್‌ನಿಂದ ಬೀಜ ತರಿಸಿ ತಮ್ಮ ಫಾರಂನಲ್ಲಿ ಬೆಳೆಸಿ ತಾವೆಂತಹ ಪ್ರಯತ್ನಶೀಲರು ಎಂಬುವುದನ್ನು ತೋರಿಸಿದರು.

## ವೈದ್ಯಕೀಯ ರಂಗ ವೈದ್ಯಕೀಯ ಸೌಲಭ್ಯಗಳು

ನಾಗರಿಕರನ್ನು ಕಾಡುತ್ತಿದ್ದ ಇನ್ನೊಂದು ಬೃಹತ್ ಸಮಸ್ಯೆಯೆಂದರೆ ಅನಾರೋಗ್ಯದ ಸಮಸ್ಯೆ. ದೇಶೀಯ ವೈದ್ಯ ಪದ್ಧತಿಯ ಸೀಮಿತ ವೈದ್ಯಕೀಯ ಸೌಲಭ್ಯಗಳು

ವಿವಿಧ ರೀತಿಯ ಕಾಯಿಲೆಗಳಿಂದ ನರಳುತ್ತಿದ್ದ ನಾಗರಿಕರನ್ನು ಗುಣಪಡಿಸುವುದರಲ್ಲಿ ವಿಫಲವಾಗಿದ್ದವು. ಜೊತೆಗೆ ದೇಶೀಯ ವೈದ್ಯ ಪದ್ಧತಿಯನ್ನು ವೈಜ್ಞಾನಿಕವಾಗಿ ಕಲಿಸುವ ಏರ್ಪಾಡಿರಲಿಲ್ಲ. ಪೋರ್ಚುಗೀಜರಂತೂ ಸಾರ್ವಜನಿಕ ಹಿತಚಿಂತನೆಯ ಕಾರ‍್ಯಕ್ರಮಗಳನ್ನು ಕೈಗೊಂಡಿದ್ದೇ ಕಡಿಮೆ. ಜೊತೆಗೆ ಮುಂಬಯಿನ ಹವಾಮಾನವೂ ಅಂದು ಅಂತಹ ಆರೋಗ್ಯಕರವಾದದ್ದೇನೂ ಆಗಿರಲಿಲ್ಲ. ಹೀಗಾಗಿ ಮುಂಬಯಿ ನಾಗರಿಕರು ಒಂದಲ್ಲ ಒಂದು ಕಾಯಿಲೆಯಿಂದ ನರಳುತ್ತಿದ್ದುದು ಸಾಮಾನ್ಯ ಸಂಗತಿಯಾಗಿತ್ತು. ಪರದೇಶಗಳಿಂದ ಬಂದ ಬ್ರಿಟೀಷ್ ಸೈನಿಕರು, ಅಧಿಕಾರಿಗಳಿಗಂತೂ ಈ ತೊಂದರೆ ಇನ್ನೂ ಹೆಚ್ಚಿನದಾಗಿತ್ತು. ಮುಂಬಯಿಯನ್ನು ಉತ್ತಮ ನಾಗರಿಕ ಸೌಲಭ್ಯಗಳಿಂದ ಸುಸಜ್ಜಿತ ಮಾಡಲು ಪ್ರಯತ್ನಿಸುತ್ತಿದ್ದ ಈಸ್ಟ್ ಇಂಡಿಯಾ ಕಂಪನಿಯು ಅನೇಕ ಬ್ರಿಟೀಷ್ ವೈದ್ಯರ ಸೇವೆ ಜನತೆಗೆ ದೊರಕುವಂತೆ ಮಾಡಿತ್ತು. ಆದರೆ ಸಾಮಾನ್ಯವಾಗಿ ಈ ವೈದ್ಯರ ಸೇವೆ ಬ್ರಿಟಿಷ್‌ರಿಗೇ ಸೀಮಿತವಾಗಿತ್ತಾಗಿ ಸ್ಥಳೀಯರು ಇಂತಹ ಸೌಲಭ್ಯದಿಂದ ವಂಚಿತರಾಗಿದ್ದರು.

ಅಂದಿನ ಶ್ರೀಮಂತರಾದರೂ ಇಂತಹ ಸಾಮಾಜಿಕ ಸಮಸ್ಯೆಗಳತ್ತ ಗಮನ ಕೊಡುತ್ತಿದ್ದದ್ದು ಕಡಿಮೆಯೇ. ತಮ್ಮ ಪ್ರತಿಷ್ಠೆಯನ್ನು ಬೆಳೆಸಿಕೊಳ್ಳಲು ಅವರು ಕೊಡುತ್ತಿದ್ದ ದೇಣಿಗೆಗಳು ಧಾರ್ಮಿಕ ಸ್ವರೂಪದ್ದಾಗಿದ್ದವು. ಮಂದಿರ ನಿರ್ಮಾಣ, ಅವುಗಳ ಜೀರ್ಣೋದ್ಧಾರ, ದಾನ ದಕ್ಷಿಣೆಗಳಂತಹ ಕಾರ್ಯಕ್ರಮಗಳಿಗೇ ಅವರ ಸಹಾಯಧನ ದೊರಕುತ್ತಿತ್ತೇ ಹೊರತಾಗಿ ಜನರ ಸಾಮಾನ್ಯ ಸಮಸ್ಯೆಗಳಲ್ಲಿ ಇಂತಹ ಸಹಾಯಧನಗಳನ್ನು ವಿನಿಯೋಗಿಸುತ್ತಿದ್ದದ್ದು ವಿರಳ. ಆದರೆ ಕ್ರಮೇಣ ಮುಂಬಯಿನ ಪ್ರತಿಷ್ಠಿತರಲ್ಲಿನ ಈ ಮನೋಭಾವ ಬದಲಾಯಿತು. ಅವರೆಲ್ಲರಲ್ಲಿ ಸಾರ್ವಜನಿಕಾಸಕ್ತಿಯ ಕೆಲಸಗಳಲ್ಲಿ ತೊಡಗುವ ತುಡಿತ ಹೆಚ್ಚಾಗಿ ಕಂಡು ಬರತೊಡಗಿತು. ಅಂತಹವರಲ್ಲಿ ನಾನಾ ಪ್ರಮುಖರು. ನಾನಾ ಮತ್ತು ಮಿತ್ರರು ನಾಗರಿಕರ ಆರೋಗ್ಯದ ದೃಷ್ಟಿಯಿಂದ ಒಂದು ವಿಶಿಷ್ಟ ಕಾರಯೋಜನೆಯನ್ನು ಪ್ರಾರಂಭಿಸಿದರು. ಇದರ ಫಲವಾಗಿ ಮುಂಬಯಿನಲ್ಲಿ ಸಾರ್ವಜನಿಕ ದವಾಖಾನೆಗಳು, ಸಹಾಯಾರ್ಥ ಆಸ್ಪತ್ರೆಗಳು, ಬೃಹತ್ ಆಸ್ಪತ್ರೆಗಳು ಅಷ್ಟೇ ಏಕೆ ವೈದ್ಯಕೀಯ ಶಿಕ್ಷಣವೂ ಸಾರ್ವಜನಿಕರಿಗೆ ಲಭ್ಯವಾಗುವಂತಹ ಕಾರ್ಯಕ್ರಮಗಳು ಹಂತ-ಹಂತವಾಗಿ ರೂಪಿತವಾದವು.

## ಸಾರ್ವಜನಿಕ ದವಾಖಾನೆ

ಸ್ಥಳೀಯರ ವೈದ್ಯಕೀಯ ಸೌಲಭ್ಯಗಳನ್ನು ಹೆಚ್ಚಿಸುವ ದೃಷ್ಟಿಯಿಂದ ನಾನಾ, ಸರ್ ಜೇಮಶೇಟ್‌ಜೀ ಜೀಜೀಭಾಯಿ, ಫ್ರಾಮ್‌ಜೀ ಕಾವ್ಸ ಜೀ ಮತ್ತಿತರು ಅಂದಿನ ಅಗತ್ಯವಾದ ಒಂದು ಸಾರ್ವಜನಿಕ ದವಾಖಾನೆಯನ್ನು ಪ್ರಾರಂಭಿಸುವ ಬಗ್ಗೆ ಯೋಚಿಸತೊಡಗಿದರು. ಅವರ ಸಹಾಯಕ್ಕೆ ಡಾಕ್ಟರ್ ಮೆಕಿ ಬಂದರು. ಡಾಕ್ಟರ್ ಮೆಕಿ, ಯುರೋಪಿಯನ್‌ರಾದರೂ ಸ್ಥಳೀಯ ಹಿತೈಷಿಯಾಗಿದ್ದರು. ನಾಗರಿಕರ ಅನುಕೂಲಕ್ಕಾಗಿ ದವಾಖಾನೆಯೊಂದನ್ನು ಪ್ರಾರಂಭಿಸಿ ಉಚಿತ ಸೇವೆ ಸಲ್ಲಿಸಲು ಆತ ಮುಂದೆ ಬಂದರು. ಅವರ ಸೂಚನೆಯನ್ನು ಮೆಚ್ಚಿ ನಾನಾ ಮತ್ತು ಮಿತ್ರರು ಸಭೆ ಸೇರಿ ಒಂದು ದವಾಖಾನೆಯ ಮಂಜೂರಾತಿಯ ಸೂಚನೆಯನ್ನು ಸರ್ಕಾರದ ಮುಂದಿಟ್ಟರು. ಸರ್ಕಾರ ಮಂಜೂರಾತಿಯನ್ನು ನೀಡಿತಷ್ಟೇ ಅಲ್ಲ, 300 ರೂಗಳ ಸಹಾಯಧವನ್ನು ನೀಡಿತು. ನಾನಾ ಮತ್ತು ಮಿತ್ರ... ತಲಾ 200ರೂಗಳ ಸಹಾಯಧನ ನೀಡಿದರು. ಹೀಗೆ 1836... ಮುಂಬಯಿನ ಪ್ರಥಮ ಸಾರ್ವಜನಿಕ ದವಾಖಾನೆ 'Bo... bay Native Dispensary' ಅಸ್ತಿತ್ವಕ್ಕೆ ಬಂತು. ಇ... ಆಡಳಿತಕ್ಕಾಗಿ 20 ಜನರ ಒಂದು ಮಂಡಳಿ ನೇಮಕವಾಯಿ... ಹನ್ನೊಂದು ಜನ ಯುರೋಪಿಯನ್ನರು ಮತ್ತು ನಾನಾ ಅ... ಸೇರಿದಂತೆ 9 ಜನ ಭಾರತೀಯರು ಇದರಲ್ಲಿದ್ದರು. ದವಾ... ತೆರೆಯಲ್ಪಟ್ಟರೂ ಪೂರ್ವಾಗ್ರಹ ಪೀಡಿತರಾಗಿ ಭಾರತೀಯ... ಇದರ ಬಗ್ಗೆ ಆಸಕ್ತಿ ತಾಳಲಿಲ್ಲ. ಹೀಗಾಗಿ ನಾನಾ ಮತ್ತು ಅ... ಮಿತ್ರರು ಮನೆಮನೆಗಳಿಗೆ ಹೋಗಿ ದವಾಖಾನೆಯ ಸೌಲಭ... ಬಗ್ಗೆ ವಿವರಿಸಿ ಅದರ ಸದುಪಯೋಗಿ ಪಡೆದುಕೊಂಡು ರೋ... ಮುಕ್ತರಾಗಲು ಜನಗಳ ಮನ ಒಲಿಸಿದರು. ಕ್ರಮೇಣ ಹೆ... ಹೆಚ್ಚು ಭಾರತೀಯರು ದವಾಖಾನೆಯ ಪ್ರಯೋಜನವನ್ನು ಪ... ಯತೊಡಗಿದರು.

## ಜೆ.ಜೆ. ಹಾಸ್ಪಿಟಲ್

ಬೆಳೆಯುತ್ತಿರುವ ಅಗತ್ಯಗಳಿಗನುಗುಣವಾಗಿ ಒಂ... ಆಸ್ಪತ್ರೆಯ ಅಗತ್ಯವು ಕಂಡು ಬರ ತೊಡಗಿದಾಗ, ಈ ವಿಷ... ಚರ್ಚಿಸಲು ಮುಂಬಯಿಯ ನಾಗರಿಕರ ಒಂದು ಸಭೆಯ... ಕರೆಯಲಾಯಿತು. ಬಡ ಜನರ ಒಳಿತಿಗಾಗಿ ಸದಾ ದುಡಿಯುತ್ತಿ... ಶ್ರೀಮಂತ ವ್ಯಾಪಾರಿ ಸರ್ ಜೇಮ್‌ಶೀಟ್‌ಜೀ ಜೀಜೀಭಾ... ಅವರು ಸರ್ಕಾರವು ಅಷ್ಟೇ ಹಣ ಕೊಡುವುದಾದರೆ ತಾ... ಆಸ್ಪತ್ರೆಯ ಸ್ಥಾಪನೆಯ ಉದ್ದೇಶಕ್ಕಾಗಿ ಒಂದು ... ರೂಪಾಯಿಗಳ ದೇಣಿಗೆ ಕೊಡುವುದಾಗಿ ಪ್ರಕಟಿಸಿದ... ಮುಂಬಯಿ ಪ್ರಾಂತ್ಯದ ಗವರ್ನರ್ ಈ ಸೂಚನೆಯನ್ನು ಕಲ್ಕತ್ತಾ ಗವರ್ನರ್ ಜನರಲ್‌ರಿಗೆ ಕಳಿಸಿದರು. ಸರ್ಕಾರದ ಒಪ್ಪಿಗೆ ದೊರ... ಕೂಡಲೇ ಅದನ್ನು ಮುಖ್ಯ ದಾನಿಯಾದ ಸರ್ ಜೇಮ್‌ಶೀಟ್‌ಜ... ಅವರಿಗೂ, ಯೋಜನೆಯ ರೂಪುರೇಷೆಗಳನ್ನು ಸ್ಥಾನೀ... ಪ್ರಮುಖರಾದ ಜಗನ್ನಾಥ್ ಶಂಕರಶೇಟ್ ಮುಂತಾದವರಿಗ... ಕಳಿಸಲಾಯಿತು. ಎಲ್ಲರ ಸಲಹೆ ಸಹಕಾರಗಳಿ... ಪೂರ್ಣಗೊಂಡ ಆಸ್ಪತ್ರೆಯನ್ನು 'ಸರ್ ಜೇಮ್‌ಶೀಟ್‌ಜ... ಜೀಜೀಭಾಯ್ ಹಾಸ್ಪಿಟಲ್' ಎಂದು ನಾಮಕರಣ ಮಾ... 1854ರಲ್ಲಿ ಅದರ ಪ್ರಾರಂಭವನ್ನು ಪ್ರಕಟಿಸಲಾಯಿತು. ಈ... ಸರ್ಕಾರದ ಸ್ವಾಮ್ಯದಲ್ಲಿರುವ ಈ ಆಸ್ಪತ್ರೆಯು ಭಾರತ... ಪ್ರತಿಷ್ಠಿತ, ಸುಸಜ್ಜಿತ ಆಸ್ಪತ್ರೆಗಳಲ್ಲೊಂದಾಗಿದೆ. ಜೆ.ಜೆ ಆಸ್ಪತ್ರೆ... ಪ್ರಾರಂಭದ ನಂತರ ಅಲ್ಲಿ ದವಾಖಾನೆ ಇದ್ದುದರಿಂದ ಸರ್ಕಾರ... 'Bombay Native Dispensary' ಗೆ ಕೊಡುತ್ತಿದ್ದ 30... ರೂ.ಗಳ ಸಹಾಯಧನವನ್ನು ನಿಲ್ಲಿಸಿ ಬಿಟ್ಟಿತು. ನಾನಾ ಅವರು ... ದವಾಖಾನೆಯ ಆಗಿನ ಆಡಳಿತ ಮಂಡಳಿಯ ಮುಖ್ಯಸ್ಥರಾಗಿದ್ದರು. ಗಿರಿಗಾಂವ್, ಕೊಲಾಬಾ, ಫೋರ್ಟ್ ಮತ್ತು ಸುತ್ತಮುತ್ತಲ... ಪ್ರದೇಶದವರಿಗೆ ಹತ್ತಿರದ ದವಾಖಾನೆಯಾದ್ದರಿಂದ ಜೆ.ಜ... ಆಸ್ಪತ್ರೆಯ ಪ್ರಾರಂಭದ ನಂತರವೂ ಈ ದವಾಖಾನೆಗೆ ಬರು... ರೋಗಿಗಳ ಸಂಖ್ಯೆ ಇಳಿದಿಲ್ಲವೆಂಬುದನ್ನು ಗಮನಿಸಿ ಮಂಡಳಿಯು ಸರ್ಕಾರವು ಸಹಾಯಧನದ ಸೌಲಭ್ಯವನು ಮುಂದುವರೆಸಬೇಕೆಂದು ಆಗ್ರಹಪಡಿಸಿತು. ಅವರ ಈ ವಿನಂತಿಯನ್ನು ಸರ್ಕಾರ ಒಪ್ಪಿಕೊಂಡಿದ್ದರಿಂದ ನಾನಾ ಮತ್ತು ಅವರ ಮಿತ್ರರು ಮುಚ್ಚಬಹುದಾಗಿದ್ದ ಆಸ್ಪತ್ರೆಯ ಸೌಲಭ್ಯ ಬ...

ಜತೆಗೆ ದೊರಕುವಂತೆ ಮಾಡಿದರು.

ಮುಂಬಯಿಯ ಶೀಘ್ರ ಬೆಳವಣಿಗೆಯಿಂದಾಗಿ ತಾರಾದೇವ್, ಗಿರಿಗಾಂವ್, ಮಹಾಲಕ್ಷ್ಮಿ ಮತ್ತು ಸುತ್ತಮುತ್ತಲಿನ ಪ್ರದೇಶಗಳ ಜನಸಂಖ್ಯೆಯು ಶೀಘ್ರವಾಗಿ ಹೆಚ್ಚತೊಡಗಿತು. ಇದರಿಂದಾಗಿ ಆ ಪ್ರದೇಶದ ಜನತೆಗೆ ವೈದ್ಯಕೀಯ ಸೌಲಭ್ಯ ಸುಲಭವಾಗಿ ಸಿಗುವುದು ದುಸ್ತರವಾಯಿತು. ಇದನ್ನು ಮನಗಂಡ ನಾನಾ ಅವರು ತಮ್ಮ ತಂದೆಯ ಸ್ಮರಣಾರ್ಥ 'ಶಂಕರಶೇಟ್ ಬಾಬುಲ್‌ಶೇಟ್ ಉಚಿತ ದವಾಖಾನೆ'ಯನ್ನು 1858ರಲ್ಲಿ ತಾರಾದೇವ್‌ನಲ್ಲಿ ಪ್ರಾರಂಭಿಸಿದರು. ಇದರ ಸೂಕ್ತ ನಿರ್ವಹಣೆಗಾಗಿ 30,000 ರೂಪಾಯಿಗಳ ದೇಣಿಗೆಯನ್ನು ಕೊಟ್ಟು ಒಂದು ಆಡಳಿತ ಟ್ರಸ್ಟ್‌ನ್ನು ಸ್ಥಾಪಿಸಿದರು. ನಾನಾ ಅವರ ಜೊತೆಗೆ ವಿನಾಯಕರಾವ್, ವರಜೀವನದಾಸ್ ಮಾಧವದಾಸ್ ಮತ್ತು ಬಾಬಾಜೀ ಕಾಶೀನಾಥಜೀ ಅವರು ಟ್ರಸ್ಟಿಗಳಾಗಿ ನೇಮಕಗೊಂಡರು. (ನಿರ್ವಹಣಾ ವೆಚ್ಚವು ಹೆಚ್ಚಾದ್ದರಿಂದ 1929ರಲ್ಲಿ ಈ ದವಾಖಾನೆಯನ್ನು ಬಾಯಿ ಯಮುನಾ ಬಾಯಿ ನಾಯರ್ ದವಾಖಾನೆ'ಗೆ ಹಸ್ತಾಂತರಿಸಲಾಯಿತು. ಆದರೆ ಸಮಸ್ಯೆಗಳು ಇಲ್ಲಿಗೆ ಮುಗಿಯಲಿಲ್ಲ. ವೈದ್ಯಕೀಯ ಸೌಲಭ್ಯಗಳ ವಿವಿಧ ಪ್ರಾಕಾರಗಳ ಬಗ್ಗೆ ಯೋಚಿಸಬೇಕಾದ ಅಗತ್ಯವಿತ್ತು. ಇವುಗಳಲ್ಲಿ ಪ್ರಮುಖವಾದದ್ದು ಸ್ತ್ರೀಯರಿಗೆ ಅಗತ್ಯವಾಗಿದ್ದ ಹೆರಿಗೆ ಆಸ್ಪತ್ರೆ.

## ಸರ್ ಜೆ.ಜೆ. ಮೆಟರ್ನಿಟಿ ಹೋಂ :

ಕಲ್ಕತ್ತಾ ಮತ್ತು ಮದ್ರಾಸಿನಲ್ಲಾಗಲೇ ಹೆರಿಗೆ ಆಸ್ಪತ್ರೆಗಳು ಪ್ರಾರಂಭವಾಗಿದ್ದವು. ಮುಂಬಯಿನಲ್ಲಿ ಇಂತಹ ಸೌಲಭ್ಯವಿಲ್ಲದೆ ಗರ್ಭಿಣಿಯರು ಅನಕ್ಷರಸ್ತ ಸೂಲಗಿತ್ತಿಯರ ಸಹಕಾರ ಪಡೆಯುತ್ತಿದ್ದುದರಿಂದ ನವಜಾತ ಶಿಶುಗಳ ಸಾವಿನ ಸಂಖ್ಯೆ ಗಣನೀಯ ಪ್ರಮಾಣದಲ್ಲಿತ್ತು. ಮಹಿಳೆಯರ ಈ ಸಮಸ್ಯೆಗೆ ಸೂಕ್ತ ಪರಿಹಾರ ಕಂಡು ಹಿಡಿಯಲು ಡಿ.ಎ. ಜ್ಞಾನ ಅವರು 22-4-1850ರಂದು ಭಾರತೀಯ ಮತ್ತು ಯುರೋಪಿಯನ್ ಪ್ರತಿಷ್ಠಿತರ ಸಭೆಯನ್ನು ಕರೆದರು. ಅಂದಿನ ಸಭೆಯಲ್ಲಿ ನಾನಾ ಅವರು ತಮ್ಮ ಭಾಷಣದಲ್ಲಿ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳು, ಹೆಚ್ಚಿನ ಸಂಖ್ಯೆಯಲ್ಲಿ ಆಗುತ್ತಿರುವ ನವಜಾತ ಶಿಶುಗಳ ಸಾವಿನ ಬಗ್ಗೆ ಸಭೆಯ ಗಮನ ಸೆಳೆದು ಒಂದು ಹೆರಿಗೆ ಆಸ್ಪತ್ರೆಯ ಅಗತ್ಯವನ್ನು ಒತ್ತಿ ಹೇಳಿದರು. ಇತರ ಪ್ರಮುಖರೂ ಈ ಆಗತ್ಯವನ್ನು ಮನಗಂಡಿದ್ದರಿಂದ ಈ ದಿಕ್ಕಿನಲ್ಲಿ ಒಂದು ಒಮ್ಮತದ ನಿರ್ಣಯ ಅನುಮೋದಿತವಾಯಿತು. ನಾನಾ ಮತ್ತು ಸರ್‌ಜೇಮ್‌ಶೇಟ್‌ಜೀ ಜೀಜೀಭಾಯ್ ಅವರ ತಲಾ 1000ರೂಗಳ ದೇಣಿಗೆಯೂ ಸೇರಿದಂತೆ ಅಂದಿನ ಸಭೆಯಲ್ಲಿಯೇ ಈ ಕಾರ್ಯಕ್ಕಾಗಿ 12000ರೂಗಳ ಚಂದಾ ಸಂಗ್ರಹವಾಯಿತು. ಅಲ್ಲದೆ ಸರ್ ಜೇಮ್‌ಶೇಟ್‌ಜೀ ಜೀಜೀಭಾಯ್ ಅವರು ಗ್ರ್ಯಾಂಟ್‌ಮೆಡಿಕಲ್ ಕಾಲೇಜಿನ ಬಳಿ ಇದ್ದ ತಮ್ಮ ನಿವೇಶನವನ್ನು ಹೆರಿಗೆ ಆಸ್ಪತ್ರೆಯ ಕಟ್ಟಡಕ್ಕಾಗಿ ದಾನ ಕೊಟ್ಟರು. ನಂತರ ಅವರು ತಮ್ಮ ದೇಣಿಗೆಯನ್ನು 15000ರೂಗಳಿಗೆ ಹೆಚ್ಚಿಸಿದರು. ಹೀಗೆ ಮುಂಬಯಿನ ಪ್ರಥಮ ಹೆರಿಗೆ ಆಸ್ಪತ್ರೆಯಾದ 'ಸರ್ ಜೇಮ್‌ಶೇಟ್‌ಜೀ ಜೀಜೀಭಾಯ್ ಈ ಆಸ್ಪತ್ರೆ' ಪ್ರಾರಂಭವಾಯಿತು. ಈ ಆಸ್ಪತ್ರೆಯ ಹಣ ಸಂಗ್ರಹ ಕಾರ್ಯದಲ್ಲಿ ನಾನಾ ಅವರು ಪ್ರಮುಖ ಪಾತ್ರವಹಿಸಿದರು.

## ಗ್ರಾಂಟ್ ಮೆಡಿಕಲ್ ಕಾಲೇಜು

ಆದರೆ ಬ್ರಿಟೀಷ್ ವೈದ್ಯರ ಸಂಖ್ಯೆ ಕಡಿಮೆ ಪ್ರಮಾಣದಲ್ಲಿದ್ದುದರಿಂದ ಹೆಚ್ಚುತ್ತಿರುವ ಬೇಡಿಕೆಯನ್ನು ಪೂರೈಸಲಾಗಲಿಲ್ಲ. ಹೀಗಾಗಿ ಸ್ಥಳೀಯವಾಗಿಯೂ ವೈದ್ಯಕೀಯ ಶಿಕ್ಷಣವನ್ನು ಕೊಟ್ಟು ಹೆಚ್ಚಿನ ಸಂಖ್ಯೆಯಲ್ಲಿ ವೈದ್ಯರು ಲಭ್ಯವಾಗುವಂತೆ ಮಾಡುವ ಅಗತ್ಯ ಉಂಟಾಯಿತು. ಅದಕ್ಕಾಗಿ ನಾನಾ ಅವರು ತಮ್ಮ ಕುಟುಂಬ ವೈದ್ಯರಾದ ಡಾಕ್ಟರ್ ಮೋರ್‌ಹೆಡ್ ಅವರ ಸಹಕಾರದಿಂದ ವೈದ್ಯಕೀಯ ಶಿಕ್ಷಣದ ಯೋಜನೆಯೊಂದನ್ನು ಸಿದ್ಧಪಡಿಸಿ ಗವರ್ನರ್ ಗ್ರಾಂಟ್ ಅವರಿಗೆ ಸಲ್ಲಿಸಿದರು. ನಾನಾ ಅವರ ಈ ಯೋಜನೆಯನ್ನು ಮೆಚ್ಚಿದ ಸರ್ ಗ್ರಾಂಟ್ ಅದನ್ನು ಮಂಜೂರಾತಿಗಾಗಿ ಕಳಿಸಿದರು. ಸರ್ ರಾಬರ್ಟ್ ಗ್ರಾಂಟ್ ಮುಂಬಯಿಯ ಗೌವರ್ನರ್ ರಾಗಿ 1835ರಲ್ಲಿ ನೇಮಕಗೊಂಡ ನಂತರ ತೆರಿಗೆ ದರ ಇಳಿಸುವ ಮೂಲಕ, ರಸ್ತೆಗಳನ್ನು ರಿಪೇರಿಗೊಳಿಸುವ ಹೊಸ ರಸ್ತೆಯನ್ನು ಅಭಿವೃದ್ಧಿಪಡಿಸಿ ಸಂಚಾರ ವ್ಯವಸ್ಥೆಯನ್ನು ಸುಗಮಗೊಳಿಸುವ ಮೂಲಕ ಅತ್ಯಂತ ಜನಾನುರಾಗಿ ಗೌರ್ನರ್‌ರಾಗಿ ಹೆಸರು ಪಡೆದಿದ್ದರು. ಸಾರ್ವಜನಿಕ ಆರೋಗ್ಯದ ಬಗ್ಗೆಯೂ ತೀವ್ರ ಆಸಕ್ತಿ ಹೊಂದಿದ್ದ ಅವರ ಬಗ್ಗೆ ನಾಗರಿಕರಿಗೆ ಬಹಳ ಪ್ರೀತಿ ಗೌರವಗಳಿದ್ದವು. ಅಕಸ್ಮಾತ್ ಆಗಿ ಅವರು 9-7-1838ರಂದು ತೀರಿಕೊಂಡರು. ಶ್ರದ್ಧಾಂಜಲಿ ಸೂಚಿಸಲು 28-7-1838ರಂದು ಒಂದು ಸಾರ್ವಜನಿಕ ಸಂತಾಪಸೂಚಕ ಸಭೆ ನಡೆಯಿತು. ತಮ್ಮ ಭಾಷಣದಲ್ಲಿ ನಾನಾ ಅವರು ಸರ್ ರಾಬರ್ಟ್ ಗ್ರಾಂಟ್ ಅವರ ಸ್ಮರಣಾರ್ಥ ಅವರ ಹೆಸರಿನಲ್ಲಿ ಒಂದು ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸುವುದು ಅವರಿಗೆ ಸೂಕ್ತ ಸ್ಮಾರಕವಾಗುತ್ತದೆ ಎಂಬ ಸಲಹೆಯನ್ನು ಮುಂದಿಟ್ಟರು. ಸಲಹೆ ಸಭೆಯಿಂದ ಸ್ವೀಕೃತವಾಗಿ ಸ್ಥಳದಲ್ಲಿಯೇ 15,000ರೂಪಾಯಿಗಳ ನಿಧಿ ಸಂಗ್ರಹವಾಯಿತು. ಕಟ್ಟಡದ ನಿಧಿಯು ನಾನಾ ಅವರ ಪ್ರಯತ್ನದಿಂದ 50,000 ರೂಪಾಯಿಗಳಗೇರಿತು. ಅದರಲ್ಲಿ ನಾನಾ ಅವರ ಪಾಲೂ ದೊಡ್ಡದಾಗಿತ್ತು. ಸರ್ಕಾರ ಸಹ ಸಾಕಷ್ಟು ಸಹಾಯ ಧನವನ್ನು ಒದಗಿಸಿತಾದ್ದರಿಂದ 1845ರಲ್ಲಿ ಗ್ರಾಂಟ್ ಮೆಡಿಕಲ್ ಕಾಲೇಜಿನ ಕಟ್ಟಡದ ನಿರ್ಮಾಣವಾಗಿ ಡಾ. ಮೋರ್‌ಹೆಡ್ ಅವರು ಪ್ರಥಮ ಪ್ರಾಚಾರ್ಯರಾಗಿ ನೇಮಕವಾದರು.

ಮೆಡಿಕಲ್ ಕಾಲೇಜೇನೋ ಸ್ಥಾಪಿತವಾಯಿತು. ಆದರೆ ಪ್ರವೇಶವನ್ನು ಬಯಸಲು ಯಾವ ವಿದ್ಯಾರ್ಥಿಯೂ ಮುಂದೆ ಬರಲಿಲ್ಲ. ಮೆಡಿಕಲ್ ಕಾಲೇಜಿನಲ್ಲಿ ಹೆಣಗಳನ್ನು ಕೊಯ್ಯುತ್ತಾರೆಂಬ ನಂಬಿಕೆ ಸಾಮಾನ್ಯರಲ್ಲಿದ್ದು ಮತ್ತು ಅದು ಧರ್ಮ ವಿರೋಧಿ ಕೃತ್ಯ ಎಂಬುದರಿಂದ ಈ ಸ್ಥಿತಿ ಪ್ರಾಪ್ತವಾಗಿತ್ತು. ಎಂದಿನಂತೆ ನಾನಾ, ಪಾರ್ಸಿ ಮುಖಂಡ ಫ್ರಾಮ್‌ಜೀ ಕಾವ್‌ಜೀ ತಮ್ಮ ಇತರ ಮಿತ್ರರೊಂದಿಗೆ ಅರ್ಹ ವಿದ್ಯಾರ್ಥಿಗಳ ಪೋಷಕರನ್ನು ಸಂಪರ್ಕಿಸಿ ಅಂತಹ ವಿದ್ಯಾರ್ಥಿಗಳನ್ನು ಮೆಡಿಕಲ್ ಕಾಲೇಜಿಗೆ ಕಳಿಸುವಂತೆ ಮನವೊಲಿಸಿದರು. ಶವಗಳ ಶಸ್ತ್ರಚಿಕಿತ್ಸೆಯ ನಂತರ ಅದ್ಯಾರ್ಥಿಗಳು ಸ್ನಾನ ಮಾಡಲು ಅನುಕೂಲವಾಗುವಂತೆ ಕಾಲೇಜಿನಲ್ಲಿ ಒಂದು ವಿಶೇಷ ಸ್ನಾನ ಗೃಹ ಸೌಲಭ್ಯವನ್ನು ಒದಗಿಸಿದರು. ಈ ಎಲ್ಲ ಪ್ರಯತ್ನಗಳಿಂದಾಗಿ ಮೂವರು ಹಿಂದೂ ಮತ್ತು ಎಂಟು ಪಾರ್ಸಿ ವಿದ್ಯಾರ್ಥಿಗಳು ಪ್ರವೇಶ ಪಡೆದು ಕಾಲೇಜು ಪ್ರಾರಂಭವಾಯಿತು. ವೈದ್ಯಕೀಯ ಶಿಕ್ಷಣವನ್ನು ಪ್ರೋತ್ಸಾಹಿಸಲು ಅನೇಕ ಸೌಲಭ್ಯಗಳನ್ನು ಘೋಷಿಸಲಾಯಿತು. ಕಾಲೇಜಿನ

ಪ್ರಗತಿಯನ್ನು ಪರೀಕ್ಷಿಸಲು ನಾನಾ ಅವರು ನಿಯಮಿತವಾಗಿ ಕಾಲೇಜಿಗೆ ಭೇಟಿಕೊಡುವ ಅಭ್ಯಾಸ ಬೆಳೆಸಿಕೊಂಡಿದ್ದರು.

ವೈದ್ಯಕೀಯ ಶಿಕ್ಷಣದ ಅವಧಿ ಐದು ವರ್ಷವೆಂದು ನಿಗದಿತವಾಗಿತ್ತು. ಮೊದಲ ಗುಂಪಿನ ಶಿಕ್ಷಣಾವಧಿಯನ್ನು ಮುಗಿಸಿ ನಿಗದಿತ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ 15-4-1851ರಂದು 'ಡಾಕ್ಟರ್' ಪದವಿಯನ್ನು ಪ್ರದಾನ ಮಾಡಲಾಯಿತು. ಮೊದಲ ಎಂಟುಜನ ಡಾಕ್ಟರುಗಳೆಂದರೆ, ಭಾವೂದಾಜೀ, ಅನಂತ ಚಂದ್ರೋಬಾ ಡುಕ್ಲೆ, ಆತ್ಮಾರಾಮ್ ಪಾಂಡುರಂಗ್, ಬರ್ಜೋರ್‌ಜೀ ಡೋರಾಬ್ಜೀ, ಮರ್ವಾನ್‌ಜೀ ಸೊರಾಬ್ಜೀ, ಜೇ.ಸಿ. ಬಿಸ್‌ಬೋವಾ, ಪಿ.ಎಸ್. ಗೋಮ್ಸ್ ಮತ್ತು ಎಸ್.ಐ.ಡಿ. ಕರ್ವಾಲೋ, ಕ್ರಮೇಣ ಮೆಡಿಕಲ್ ಕಾಲೇಜಿಗೆ ಬರುವ ವಿದ್ಯಾರ್ಥಿಗಳ ಸಂಖ್ಯೆಯೂ ಹೆಚ್ಚತೊಡಗಿತು.

ಮರಾಠಿ ಭಾಷಿಕರಲ್ಲಿ ವೈದ್ಯಕೀಯ ಶಿಕ್ಷಣವನ್ನು ಜನಪ್ರಿಯಗೊಳಿಸಲು ನಾನಾ ಅವರು ಮರಾಠಿ ಮಾಧ್ಯಮದಲ್ಲಿಯೂ ವೈದ್ಯಕೀಯ ಶಿಕ್ಷಣವನ್ನು ಒದಗಿಸಬೇಕೆಂಬ ಬೇಡಿಕೆಯೊಂದನ್ನು ಗ್ರಾಂಟ್ ಮೆಡಿಕಲ್ ಕಾಲೇಜಿನ ಮುಂದಿಟ್ಟರು. ಡಾ. ನಾರಾಯಣ್‌ದಾಜಿ ಲಾಡ್ ಮತ್ತು ಡಾ. ಭಿಕಾಜಿ ಅನಂತ ಚೋಭೆ ಮರಾಠಿಯಲ್ಲಿ ಕಲಿಸಲು ಪ್ರಾರಂಭಿಸಿದರು. ಈ ಯೋಜನೆಯಲ್ಲಿ ಅಭ್ಯಸಿಸುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಕೊಡಲು, ಅದರ ವೆಚ್ಚಕ್ಕಾಗಿ ನಾನಾ 5,000 ರೂಪಾಯಿಗಳ ಸಹಾಯ ಧನವನ್ನು ಕೊಟ್ಟರು. ಪ್ರಾರಂಭದಲ್ಲಿ ಮರಾಠಿ ವಿದ್ಯಾರ್ಥಿಗಳಿಂದ ಉತ್ತೇಜಕ ಪ್ರತಿಕ್ರಿಯೆ ದೊರಕಿದರೂ ನಂತರದಲ್ಲಿ ಆಂಗ್ಲ ಭಾಷೆಯ ಬಗ್ಗೆ ಬೆಳೆಯತೊಡಗಿದ ಆಕರ್ಷಣೆಯಿಂದ ಆ ವಿಶೇಷ ಯೋಜನೆ ಅಂತ್ಯಗೊಂಡಿತು.

ನಾನಾ ಅವರ ನಿಧನಾನಂತರ ಗ್ರಾಂಟ್ ಮೆಡಿಕಲ್ ಕಾಲೇಜಿನಲ್ಲಿ 3-1-1866ರಂದು ನಡೆದ ಒಂದು ಬಹುಮಾನ ವಿತರಣಾ ಸಂದರ್ಭದಲ್ಲಿ ಅಂದಿನ ಅಧ್ಯಕ್ಷರಾಗಿದ್ದ ಸಿ.ಜೆ. ಆರ್‌ಸ್ಕಿನ್ ಅವರು ತಮ್ಮ ಭಾಷಣದಲ್ಲಿ ನಾನಾ ಅವರು ತಮ್ಮ ಜೀವನ ಪರ್ಯಂತ ನಾಗರಿಕರ ಕಲ್ಯಾಣಕ್ಕೆ ಮತ್ತು ಅಭಿವೃದ್ಧಿಗಾಗಿ ಬರುತ್ತಿದ್ದ ಸಲಹೆಗಳನ್ನು ವಿಶಾಲ ಮನೋಭಾವದಿಂದ ಸ್ವೀಕರಿಸಿ ಕಾರ್ಯ ಪ್ರವೃತ್ತರಾಗುತ್ತಿದ್ದರು ಎಂದು ಪ್ರಶಂಸಿಸಿ ಗ್ರಾಂಟ್ ಮೆಡಿಕಲ್ ಕಾಲೇಜಿನಲ್ಲಿ ವೈದ್ಯಕೀಯ ಶಿಕ್ಷಣಕ್ಕಾಗಿ ಅವರು ನೀಡಿರುವ ವಿದ್ಯಾರ್ಥಿ ವೇತನವು ಅವರು ಮಾಡಿದ ಅತ್ಯುತ್ತಮ ಕೆಲಸಗಳಲ್ಲೊಂದು ಎಂದು ಪ್ರಶಂಸಿಸಿದರು.

ಅಂದು ನಾನಾ ಮತ್ತು ಮಿತ್ರರು ಕಾಲೇಜಿಗೆ ವಿದ್ಯಾರ್ಥಿಗಳನ್ನು ಕರೆ ತರುವಲ್ಲಿ ಕಷ್ಟಪಟ್ಟಿದ್ದಕ್ಕೆ ಬದಲಾಗಿ ಇಂದು ಜೆ.ಜೆ. ಆಸ್ಪತ್ರೆ ಆವರಣದಲ್ಲಿರುವ ಆ ಪ್ರತಿಷ್ಠಿತ ಕಾಲೇಜಿನಲ್ಲಿ ಸ್ಥಾನ ಸಿಗುವುದು ದುಸ್ತರವಾಗಿರುವಷ್ಟು ಮಟ್ಟಿಗೆ ಚಿತ್ರ ಬದಲಾಗಿದೆ. ಅತ್ಯಂತ ಪ್ರತಿಭಾವಂತ ವಿದ್ಯಾರ್ಥಿಗಳು ಮಾತ್ರ ಅಲ್ಲಿ ಈಗ ಸ್ಥಾನ ಪಡೆಯಬಲ್ಲರು. ಜೊತೆಗೆ ಅಂದು ಅಲಭ್ಯವಾಗಿದ್ದ ವೈದ್ಯಕೀಯ ಸೌಲಭ್ಯಗಳು ಯಥೇಚ್ಛವಾಗಿ ಸಿಗುವ ಭಾಗ್ಯ ಇಂದಿನ ನಾಗರಿಕರದ್ದಾಗಿದೆ. ಇಂತಹ ಸೌಲಭ್ಯವನ್ನು ಸಾಧ್ಯವನ್ನಾಗಿಸಿದ ನಾನಾ ಅಂತಹ ನಾಯಕರನ್ನು ಜನ ಮರೆಯಲು ಸಾಧ್ಯವೇ ಇಲ್ಲ.

## ಪೌರ ಸೌಲಭ್ಯಗಳು

ಮುಂಬಯಿ ಇಂದು ಭಾರತದ ಮಹಾನಗರವಾ[ಗಿ] ಬೆಳೆದಿದೆ. ನಾನಾರ ಕಾಲದ ಮುಂಬಯಿಗೂ ಇಂದಿ[ನ] ಅಜಗಜಾಂತರ ವ್ಯತ್ಯಾಸ. ಮುಂಬಯಿ ನಗರವನ್ನು ಒಂ[ದು] ಸುವ್ಯವಸ್ಥಿತ ನಗರವನ್ನಾಗಿ ಅಭಿವೃದ್ಧಿ ಪಡಿಸುವಲ್ಲಿ ಮ[ತ್ತು] ಅದರ ನಾಗರಿಕರಿಗೆ ಸೂಕ್ತ ಪೌರ ಸೌಲಭ್ಯಗಳನ್ನು ಒದಗಿಸು[ವ] ಅನೇಕ ಚಟುವಟಿಕೆಗಳಲ್ಲಿ ನಾನಾ ಅವರು ಸಕ್ರಿಯವಾ[ಗಿ] ದುಡಿದಿದ್ದರು. ಫೋರ್ಟ್, ಮುಂಬಯಿನ ಒಂದು ಮುಖ್ಯ ಜನವಸತಿ ಪ್ರದೇಶ. ಹಿಂದೆ ಬ್ರಿಟೀಷರು ಮುಂಬಯಿ ನಗರ[ದ] ರಕ್ಷಣೆಗಾಗಿ ಈ ಪ್ರದೇಶದ ಸುತ್ತ ಒಂದು ಭದ್ರಕೋಟೆಯನ್ನು ಕಟ್ಟಿಸಿದ್ದರು. ಶತ್ರುದಾಳಿಯಿಂದ ತಮ್ಮ ಆಡಳಿತದ ಪ್ರದೇಶವನ್ನು ಸಂರಕ್ಷಿಸುವುದು ಅವರ ಉದ್ದೇಶವಾಗಿತ್ತು. ಆದರೆ ಭಾರತದಲ್ಲಿ ಬ್ರಿಟೀಷ್ ಸಾಮ್ರಾಜ್ಯಶಾಹಿ ವಿಸ್ತರಿಸಿದಂತೆಲ್ಲ ಹೊರಗಿ[ನ] ಆಕ್ರಮಣದ ಭಯ ಇಲ್ಲವಾಗಿ ಪ್ರಾರಂಭದಲ್ಲಿದ್ದ ಅಗತ್ಯತೆಯನ್ನು ಈ ಕೋಟೆ ಕಟ್ಟಡ ಕಳೆದುಕೊಂಡಿತು. ಜೊತೆಗೆ ಶೀಘ್ರ ಬೆಳವಣಿಗೆಯನ್ನು ಕಾಣುತ್ತಿದ್ದ ಮುಂಬಯಿ ನಗರದ ಸುವ್ಯವಸ್ಥಿತ ಬೆಳವಣಿಗೆಗೂ ಈ ಕಟ್ಟಡ ಅಡ್ಡ ಬರತೊಡಗಿತು. ಇದರಿಂದ ಈ ಕಟ್ಟಡವನ್ನು ನಾಶ ಮಾಡುವ ಒಂದು ಪ್ರಸ್ತಾಪ ಸರ್ಕಾರದ ಮುಂದೆ ಬಂದಾಗ ಅದರ ಸಾಧ್ಯಾಸಾಧ್ಯತೆ, ಅನುಕೂ[ಲ] ಅನಾನುಕೂಲಗಳ ಕೂಲಂಕಷ ಅಧ್ಯಯನಕ್ಕೆ ಅಂದಿನ ಕಸ್ಟಮ್ಸ್ ಕಲೆಕ್ಟರ್ ಆಗಿದ್ದ ಎಚ್. ಯಂಗ್ ಅವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ಸರ್ಕಾರ ನೇಮಕಮಾಡಿತು. ಅದರ ಇತರ ಸದಸ್ಯರೆಂದರೆ ಜಗನ್ನಾಥ ಶಂಕರಶೇಟ್, ಕರ್‌ಶೇಟ್‌ಜೀ ಕಾವ್ಸ್‌ಜೀ, ಕ್ಯಾಪ್ಟನ್ ಹರ್ಟ್, ಮೇಜರ್ ಕೊಗ್ಲಾನ್. ಸಮಿತಿಯು ದೀರ್ಘ ಅಧ್ಯಯನದ ನಂತರ ಕೋಟೆಯ ನಾಶಕ್ಕೆ ಶಿಫಾರಸು ಮಾಡಿತಾದ್ದರಿಂದ ಕೋಟೆಯನ್ನು ನಾಶಪಡಿಸುವ ವ್ಯವಸ್ಥೆ ಮಾಡಲಾಯಿತು. ಇದರಿಂದ ನಗರದ ಸುವ್ಯವಸ್ಥಿತ ಬೆಳವಣಿಗೆಗೆ ಇದ್ದ ಅಡ್ಡಿಯೊಂದರ ನಿವಾರಣೆಯಾಯಿತು.

ನಾನಾ ಅವರ ಕಾಲದಲ್ಲಿ ಮುಂಬಯಿ ನಗರವನ್ನು ರಾತ್ರಿಯ ಹೊತ್ತು ಎಣ್ಣೆಯ ದೀಪಗಳಿಂದ ಬೆಳಗಿಸಲಾಗುತ್ತಿತ್ತು. ಅವುಗಳ ಪ್ರಭಾವಳಿ ಸೀಮಿತವಾದದ್ದರಿಂದ ಹೆಚ್ಚಿನ ಪ್ರದೇಶ ಕತ್ತಲಿನಲ್ಲಿ ಮುಳುಗಿ ಕಳ್ಳತನ ಮುಂತಾದ ಅಪಾರಾಧಗಳಿಗೆ ಅದು ಅನುವುಮಾಡಿಕೊಟ್ಟಿತ್ತು. 1843ರ ಹೊತ್ತಿಗಾಗಲೇ ಇಂಗ್ಲೆಂಡಿನಲ್ಲಿ ಗ್ಯಾಸ್ ದೀಪಗಳ ಬಳಕೆ ಪ್ರಾರಂಭವಾಗಿ ಬೀದಿ ದೀಪಗಳಿಗೂ ಅವನ್ನೇ ಬಳಸುವ ಪದ್ಧತಿ ಪ್ರಾರಂಭವಾಗಿತ್ತು. ವೃತ್ತಪತ್ರಿಕೆಗಳು ಈ ಬಗ್ಗೆ ಮುಂಬಯಿನ ಅಧಿಕಾರ ವರ್ಗವೂ ಗಮನ ಕೊಡಬೇಕೆಂದು ಸೂಚಿಸಿದ್ದವು. ಅಂದಿನ ಪೌರಾಡಳಿತ ಮಂಡಳಿಯ ಸದಸ್ಯರಾಗಿದ್ದ ನಾನಾ ಅವರು ಈ ಸೂಚನೆಯನ್ನು ತೀವ್ರವಾಗಿ ಪರಿಗಣಿಸಿ 9-11-1861ರಂದು ಪುರಭವನದಲ್ಲಿ ನಡೆದ ಸಭೆಯಲ್ಲಿ ಮುಂಬಯಿಯ ರಸ್ತೆಗಳನ್ನು ಗ್ಯಾಸ್ ದೀಪಗಳಿಂದ ಅಲಂಕರಿಸಿ ಸಾರ್ವಜನಿಕರ ತೊಂದರೆಗಳನ್ನು ಕಡಿಮೆ ಮಾಡಬಹುದು ಎಂದು ಸಲಹೆಕೊಟ್ಟರು. ಜೊತೆ-ಗೆ 12-5-1863ರಲ್ಲಿ ಚಿಂಚಪೋಕಲಿಯಲ್ಲಿ ಬಾಂಬೆಗ್ಯಾಸ್ ಕಂಪನಿಯೆಂಬ ಒಂದು ಸಂಸ್ಥೆಯ ಸ್ಥಾಪನೆಗೂ ಕಾರಣರಾದರು. ಎರಡು ವರ್ಷಗಳ ಅವಧಿಯಲ್ಲಿ ಸಾಕಷ್ಟು ಗ್ಯಾಸ್ ದೀಪಗಳು ಸರಬರಾಜಾದ್ದರಿಂದ 26-5-1865ರಂದು ಮುಂಬೈಯಲ್ಲಿ ಪ್ರಥಮವಾಗಿ ಗ್ಯಾಸ್ ಲೈಟ್‌ಗಳನ್ನು ಬಳಸುವ ಪದ್ಧತಿ ಪ್ರಾರಂಭವಾಯಿತು. ಈ ಸಂದರ್ಭದಲ್ಲಿ ಚಿಂಚಪೋಕಲಿಯ

...ಿಯನ್ನು ಗ್ಯಾಸ್ ದೀಪಗಳಿಂದ ಅಲಂಕರಿಸಿ ಅದರ ...ರಂಭೋತ್ಸವವನ್ನು ನಡೆಸಲಾಯಿತು. ಈ ಸಂದರ್ಭದಲ್ಲಿ ...ಗಝಗಿಸುವ ಬೆಳಕಿನ ಸಂಭ್ರಮವನ್ನು ನಾಗರಿಕರು ಬಹಳ ...ತೋಷದಿಂದ ಅನುಭವಿಸಿದರು.

ಬೆಳೆಯತೊಡಗಿದ ಮುಂಬೈಯನ್ನು ಕುಡಿಯುವ ...ರಿನ ಸಮಸ್ಯೆಯೂ ಕಾಡತೊಡಗಿತು. ಹೀಗಾಗಿ ಅನೇಕ ...ಗಳ ನಿರ್ಮಾಣ ಅಗತ್ಯವಾಯಿತು. ಅದರಲ್ಲಿ ಬಹಳ ...ಮುಖವಾದದ್ದು ವಿಹಾರ್ ಸರೋವರ. ಇಂದು ಬೃಹತ್ ...ರೋವರವಾಗಿ ಅಭಿವೃದ್ಧಿಯಾಗಿರುವ ಇದರ ಶಂಖು ಸ್ಥಾಪನೆ ...-1-1856ರಂದು ಅಂದಿನ ಗವರ್ನರ್ ಜನರಲ್ ಲಾರ್ಡ್ ...ನಿಂಗ್ ಅವರಿಂದ ನೆರವೇರಿತು. ಈ ಸರೋವರದ ...ರ್ಮಾಣ, ಅಭಿವೃದ್ಧಿಯ ಕೆಲಸಗಳಲ್ಲಿ ನಾನಾ ಅವರು ತಮ್ಮನ್ನು ...ರ್ಣವಾಗಿ ತೊಡಗಿಸಿಕೊಂಡಿದ್ದರು.

ಪೌರ ಸೌಲಭ್ಯಗಳ ಹೊಣೆಹೊತ್ತಿದ್ದ ಒಳ ಚರಂಡಿ ...ಂಡಳ, ಸುಧಾರಣಾ ಸಮಿತಿ ಮತ್ತು ಜಸ್ಟೀಸ್ ಆಫ್ ...ೀಸ್‌ಗಳಂತಹ ಅಧಿಕಾರಿ ಮಂಡಳಗಳ ಸದಸ್ಯರಾಗಿ ನಾನಾ ...ವರು ಅಂದಿನ ಮುಂಬೈ ನಗರಾಡಳಿತದಲ್ಲಿ ಸಕ್ರಿಯವಾಗಿ ...ೊಡಗಿಸಿಕೊಂಡಿದ್ದು, ನಾಗರಿಕರ ಕುಂದು ಕೊರತೆಗಳ ಬಗ್ಗೆ ...ೀವ್ರ ಗಮನ ಕೊಡುತ್ತಿದ್ದವರಾಗಿ ನಾಗರಿಕರ ಗೌರವಾದರಗಳಿಗೆ ...ಾತ್ರರಾಗಿದ್ದರು. ಅಂದಿನ ಮತ್ತು ಇಂದಿನ ಮುಂಬೈ ನಾಗರಿಕರು ...ಶೇಷತಃ ಹಿಂದೂಗಳು ಎಂದಿಗೂ ಮರೆಯಲಾಗದ ...ಂದು ಉಪಕಾರವನ್ನು ನಾನಾ ಮಾಡಿದ್ದಾರೆ. ಅದೇ ಅವರು ರುದ್ರಭೂಮಿ'ಗಳ ಉಳಿವಿಗಾಗಿ ಮಾಡಿದ ಹೋರಾಟ. ಅದರ ಪೂರ್ಣ ವಿವರಗಳನ್ನು ಅರಿತಾಗಲೇ ಅವರು ಮಾಡಿದ ಹೋರಾಟದ ಮಹತ್ವದ ಅರಿವಾಗಲು ಸಾಧ್ಯ.

ಅಂದು ಮುಂಬೈನಲ್ಲಿ ಅನೇಕ ರುದ್ರಭೂಮಿಗಳಿದ್ದವು. ಅದರಲ್ಲಿ ಪ್ರಮುಖವಾದದ್ದು ಇಂದಿನ ಮರೀನ್ ಲೈನ್ಸ್ ಬಳಿ ಇರುವ ರುದ್ರಭೂಮಿ. ಅದು ಸಮುದ್ರ ದಡದ ವಿಸ್ತಾರ ಪ್ರದೇಶದಲ್ಲಿದ್ದು ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಜನಾಂಗದವರು ಬಳಸುತ್ತಿದ್ದ ರುದ್ರಭೂಮಿಯಾಗಿತ್ತಷ್ಟೇ ಅಲ್ಲ ಪ್ರಾಣಿಗಳನ್ನು ಹೂಳಲೂ ಬಳಸುತ್ತಿದ್ದ ರುದ್ರಭೂಮಿಯಾಗಿತ್ತು. ಈ ಸ್ಮಶಾನಕ್ಕೆ ಯಾವುದೇ ಕಾಂಪೌಂಡ್ ಇಲ್ಲದ್ದರಿಂದ ಶವಸಂಸ್ಕಾರದ ದೃಶ್ಯ ಆ ದಾರಿಯಲ್ಲಿ ಹೋಗುತ್ತಿದ್ದ ಇತರ ನಾಗರಿಕರಿಗೂ ಕಾಣುವಂತಿದ್ದು ಸಂಬಂಧಿಸಿದವರಿಗೆಲ್ಲ ಮುಜುಗರವನ್ನುಂಟು ಮಾಡುತ್ತಿತ್ತು. ಪೌರಾಡಳಿತ ವ್ಯವಸ್ಥೆ ನೋಡಿಕೊಳ್ಳುತ್ತಿದ್ದ ಅಂದಿನ ಒಳಚರಂಡಿ ಮಂಡಳಿಯ ಸದಸ್ಯರಲ್ಲಿ ಒಬ್ಬರಾಗಿದ್ದ ನಾನಾ ಅವರು ಈ ರುದ್ರಭೂಮಿಗೆ ಒಂದು ಕಾಂಪೌಂಡು ಕಟ್ಟಲು ಮಂಜೂರಾತಿ ನೀಡುವಂತೆ ಸರ್ಕಾರವನ್ನು ಪ್ರಾರ್ಥಿಸಿದರು. ಅಂತಹ ಅನುಮತಿ ಸಿಕ್ಕ ತಕ್ಷಣ ಕಾರ್ಯಪ್ರವೃತ್ತರಾದ ನಾನಾ ಮತ್ತು ಇತರ ಹಿಂದೂ ಸದಸ್ಯರು ಸರ್ಕಾರದ ಸಹಾಯ ಪಡೆಯದೆ ಸ್ವ-ಂತ ಖರ್ಚಿನಲ್ಲಿ ಕಾಂಪೌಡ್ ಅನ್ನು ಕಟ್ಟಿಸುವ ಹೊಣೆ ಹೊತ್ತು 25000/-ರೂಗಳ ಚಂದಾ ಸಂಗ್ರಹಿಸಿ ರುದ್ರಭೂಮಿಗೆ ಒಂದು ಕಾಂಪೌಂಡ್ ಕಟ್ಟಿಸಿದರು. ಒಂದು ವಿಶೇಷ ಸಂಗತಿ ಎಂದ-ರೆ ಈ ರುದ್ರಭೂಮಿಯ ವಿಸ್ತಾರವಾದ ಪ್ರದೇಶದ ಬಹುತೇಕ ಭೂಮಿಯ ಒಡೆತನ ನಾನಾ ಅವರ ಕುಟುಂಬಕ್ಕೆ ಸೇರಿತ್ತು. (ಈ ರುದ್ರಭೂಮಿಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದ ಅವರ ಕುಟುಂಬದವರ ಪರವಾಗಿ 1870ರಲ್ಲಿ ನಾನಾ ಅವರ ಮಗ ವಿನಾಯಕರಾವ್ ಹಿಂದೂಗಳಸಭೆಯನ್ನು ಕರೆದು ಲೆಕ್ಕದಲ್ಲಿದ್ದ 20000 ರೂ ಗಳೊಂದಿಗೆ ರುದ್ರಭೂಮಿಯ ವಹಿವಾಟಗಳ ಒಂದು ಟ್ರಸ್ಟಿಗೆ ಹಸ್ತಾಂತರಿಸಿದರು).

1855ರ ಸುಮಾರಿಗೆ ಮುಂಬಯಿನಗರದ ಆರೋಗ್ಯಾಧಿಕಾರಿಯಾಗಿದ್ದ ಡಾ. ಲಿ ಒಂದು ಆರೋಗ್ಯ ವರದಿಯನ್ನು ಪ್ರಕಟಿಸಿದ್ದ. ಅದರ ಪ್ರಕಾರ ಮುಂಬೈ ನಗರದಲ್ಲಿವ ಸುಮಾರು 70 ಸ್ಮಶಾನಗಳಲ್ಲಿ ಹೆಚ್ಚಿನವು ಅತ್ಯಂತ ಹೀನ ಸ್ಥಿತಿಯಲ್ಲಿದ್ದು ತಮ್ಮ ಅಶುಚಿತ್ವದ ಕಾರಣದಿಂದ ಅನಾರೋಗ್ಯದ ತಾಣಗಳಾಗಿ ನಾಗರಿಕರ ಆರೋಗ್ಯ-ಕ್ಕೆ ಸಮಸ್ಯೆ ಉಂಟು ಮಾಡುತ್ತವೆ. ಆದ್ದರಿಂದ ಅವುಗಳಲ್ಲಿ ಹೆಚ್ಚಿನವನ್ನು ಮುಚ್ಚಿಬಿಡಬೇಕು ಎಂದು ಸೂಚಿಸಿದ್ದ. ಹೀಗೆ ದುಸ್ಥಿತಿಯಲ್ಲಿವೆ ಎಂದು ಸೂಚಿಸಿದ್ದ ರುದ್ರಭೂಮಿಗಳಲ್ಲಿ ಮರೀನ್‌ಲೈನ್ಸ್ ಬಳಿಯ ರುದ್ರಭೂಮಿಯು ಒಂದು. ಸರ್ಕಾರವು ಈ ವರದಿಯನ್ನು ಆಧರಿಸಿ ಒಳಚರಂಡಿ ಮಂಡಳಿ ಈ ದಿಶೆಯಲ್ಲಿ ಯಾವ ನಿವಾರಣಾಕ್ರಮ ಕೈಗೊಳ್ಳುತ್ತಿದೆ ಎಂದು ತಿಳಿಯಬಯಸಿತು. ಹೆಚ್ಚಿನ ಸಂಖ್ಯೆಯ ಬ್ರಿಟೀಷ್ ಸದಸ್ಯರನ್ನೇ ಹೊಂದಿದ್ದ ಒಳಚರಂಡಿ ಮಂಡಳಿ ಈ ಸಂದರ್ಭವನ್ನು ಎಲ್ಲ ರುದ್ರಭೂಮಿಗಳನ ದೂರದ ಪ್ರದೇಶಗಳಿಗೆ ಸ್ಥಳಾಂತರಿಸುವ ಸದವಕಾಶವನ್ನಾಗಿ ಬಳಸಿಕೊಳ್ಳಲು ಪ್ರಯತ್ನಿಸಿತು ಪೋಲಿಸ್ ನ್ಯಾಯಾಧೀಶರು ಈ ಎಲ್ಲ ರುದ್ರಭೂಮಿಗಳನ್ನು ಶಾಶ್ವತವಾಗಿ ಮುಚ್ಚಿ ಆ ಪ್ರದೇಶದ' ನಾಗರಿಕರು ರೈಲುಗಳ ಮೂಲಕ ದೂರದ, ಸುವ್ಯವಸ್ಥೆಯಲ್ಲಿದ್ದ ರುದ್ರಭೂಮಿಗಳಿಗೆ ಶವ ಸಾಗಿಸುವ ಏರ್ಪಾಡು ಮಾಡಿಕೊಳ್ಳಬಹುದು ಎಂಬ ಆಶಯವಿದ್ದ ಒಂದು ಮಸೂದೆಯನ್ನು ಸಮಿತಿಯ ಅನುಮೋದನೆಗೆ ಸಲ್ಲಿಸಿದರು. ಇದರ ಪ್ರಕಾರ ಗಿರಿಗಾಂವ್ ಮತ್ತು ಸುತ್ತಮುತ್ತಲಿನ ಪ್ರದೇಶಗಳ ನಾಗರಿಕರು ಶವಸಂಸ್ಕಾರಕ್ಕಾಗಿ ದೂರದ ವೋರ್ಲಿಗೆ ಹೋಗಬೇಕಾದಂತಹ ಸಂದರ್ಭ ಏರ್ಪಡುತ್ತಿತ್ತು. ಈ ಸೂಚನೆ ಒಳಚರಂಡಿ ಮಂಡಳಿಯ ಮುಂದೆ ಬಂದಾಗ ಅದರಲ್ಲಿದ್ದ ಭಾರತೀಯ ಸದಸ್ಯರುಗಳೆಂದರೆ ನಾನಾ, ಅಲಿ ಮಹಮ್ಮದ್ ಮತ್ತು ನಾರಾಯಣ ದೀನಾನಾಥ್‌ಜಿ ನಾನಾ ಎಂದಿನಂತೆ ನಾಗರಿಕರ ಹಿತಾಸಕ್ತಿಗೆ ವಿರುದ್ಧವಾಗಿದ್ದ ರುದ್ರಭೂಮಿಯ ಮುಚ್ಚುವಿಕೆಯನ್ನು ತೀವ್ರವಾಗಿ ವಿರೋಧಿಸುತ್ತಾ ಇಂತೆ-ಂದರು, "ಇಲ್ಲಿ ಯಾವುದೇ ನಿರ್ಧಾರ ತೆಗೆದುಕೊಳ್ಳುವ ಮುಂಚೆ ಈ ಸೂಚನೆಯನ್ನು ಜನಗಳ ಅವಗಾಹನೆಗೆ ತಂದು ಅವರ ಅಭಿಪ್ರಾಯವನ್ನು ಪಡೆಯುವುದು ಅಗತ್ಯವಾಗಿದೆ. ಅಲ್ಲದೆ ನಾಗರಿಕರು ಸ್ವಂತ ಖರ್ಚಿನಿಂದ ಕಲ್ಲಿನ ಕಾಂಪೌಂಡನ್ನು ಕಟ್ಟಿ-ಕೊಂಡಿದ್ದಾರೆ. ಜೊತೆಗೆ ಹಿಂದೂ ಶವಸಂಸ್ಕಾರದ ಪದ್ಧತಿಯಲ್ಲಿ ಅನಾರೋಗ್ಯದ ಹರಡುವಿಕೆಗೆ ಅವಕಾಶವಿಲ್ಲವೆಂಬುದನ್ನು ಮನಗಾಣಬೇಕು. ಹಿಂದೂಗಳು ಸಂಸ್ಕಾರಕ್ಕಾಗಿ ವಿಳಂಬ ಮಾಡದೆ ಸಂಬಂಧಿಕರೆಲ್ಲ ಸೇರಿದ ತಕ್ಷಣ ಆವೇಳೆಯಾಗಿದ್ದರೂ ಅದಕ್ಕೆ ಹೊರಡುತ್ತಾರೆ. ರುದ್ರಭೂಮಿಯಲ್ಲಿ ಶವಸಂಸ್ಕಾರದ ವಿಧಿಗಳು ಮುಗಿಯುವವರೆಗೆ ಅಲ್ಲಿಯೇ ಉಪಸ್ಥಿತರಿರಬೇಕಾದ್ದು ಅವರಲ್ಲಿ ಒಂದು ಸಂಪ್ರದಾಯ, ಅಂತಹ ಅವೇಳೆಗಳಲ್ಲಿ ರೈಲುಗಳ ಸೌಲಭ್ಯವಿಲ್ಲದಿದ್ದರೆ ಅವರು ನಡೆದುಕೊಂಡೇ ಅತಿದೂರವನ್ನು ಕ್ರಮಿಸಬೇಕಾದ ಅನಿವಾರ್ಯತೆಯನ್ನು ಈ ಸ್ಥಿತಿ ತಂದೊಡ್ಡುತ್ತದೆ. ಜೊತೆಗೆ ಶಾಸ್ತ್ರ ನಿಯಮದ ಪ್ರಕಾರ ಸಂಸ್ಕಾರ ಮುಗಿಸಿ ಸ್ನಾನವಾಗುವ ತನಕ ಅವರು ಉಪವಾಸವಿರಬೇಕಾಗುತ್ತದಾಗಿ

ಅವರು ಇನ್ನೂ ಹೆಚ್ಚಿನ ತೊಂದರೆ ಅನುಭವಿಸಬೇಕಾಗುತ್ತದೆ. ಹೀಗಾಗಿ ಹಿಂದೂ ಪ್ರತಿನಿಧಿಯಾದ ನಾನು, ಹಿಂದೂಗಳಿಗೆ ತೊಂದರೆ ಕೊಡುವ ಈ ಸೂಚನೆಯನ್ನು ತೀವ್ರವಾಗಿ ವಿರೋಧಿಸುತ್ತೇನೆ', ಇತರ ಭಾರತೀಯ ಸದಸ್ಯರು ನಾನಾರನ್ನು ಸಮರ್ಥಿಸಿದರು. ನಾನಾ ಆರೋಗ್ಯದ ದೃಷ್ಟಿಯಿಂದ ಎಳೆಯ ಮಕ್ಕಳ ಮತ್ತು ಪ್ರಾಣಿಗಳ ಹೂಳುವಿಕೆಗೆ ಬೇರೆ ಸ್ಥಳವನ್ನು ಮೀಸಲಾಗಿಸಿ, ಆಳವಾದ ಗುಳಿಗಳನ್ನು ತೆಗೆದು ಅವುಗಳನ್ನು ಹೂಳುವ ವ್ಯವಸ್ಥೆ ಮಾಡಿ ಶುಚಿತ್ವ ಕಾಪಾಡಿಕೊಳ್ಳಬಹುದು ಎಂಬ ಸಲಹೆಯನ್ನು ಮುಂದಿಟ್ಟರು.

ಗೌರ್ನರ್ ಲಾರ್ಡ್ ಎಲ್ಫಿನ್‌ಸ್ಟನ್ ನಾನಾ ಅವರ ಅಭಿಪ್ರಾಯದೊಂದಿಗೆ ಮಸೂದೆಯನ್ನು ಕಲ್ಕತ್ತಾದ ಗವರ್ನರ್ ಜನರಲ್‌ಗೆ ಕಳಿಸಿದ. ವೈದ್ಯಕೀಯ ಮಂಡಳಿಯ ಅಭಿಪ್ರಾಯವನ್ನು ಪಡೆಯಲು ಆತ ಸೂಚಿಸಿದ. ವೈದ್ಯಕೀಯ ಮಂಡಳಿಯು ರುದ್ರಭೂಮಿಯು ಉತ್ತಮ ಕಾಂಪೌಂಡನ್ನು ಹೊಂದಿರುವುದರಿಂದ ಸುವ್ಯವಸ್ಥಿತವಾಗಿದ್ದು ಅಲ್ಲಿನ ದಹನ ಸಂಸ್ಕಾರಗಳು ಜನಗಳ ಆರೋಗ್ಯದ ಮೇಲೆ ಪರಿಣಾಮ ಬೀರುತ್ತಿಲ್ಲವೆಂದು ಅಭಿಪ್ರಾಯಪಟ್ಟಿತು. ಹೀಗಾಗಿ ನಾನಾ ಅವರ ತೀವ್ರ ವಿರೋಧದಿಂದಾಗಿ 1855 ರಲ್ಲಿ ಈ ರುದ್ರಭೂಮಿಯನ್ನು ಮುಚ್ಚುವ ಮಸೂದೆ ತಿರಸ್ಕೃತವಾಯಿತು. ಆದರೆ ಯುರೋಪಿನ ಅಧಿಕಾರಿಗಳು ಈ ನಿರ್ಧಾರದಿಂದ ಸಂತುಷ್ಟರಾಗಿರಲಿಲ್ಲ. ಹೇಗಾದರೂ ಮಾಡಿ ತಮ್ಮ ಕಾರ್ಯ ಸಾಧಿಸಲೇಬೇಕೆಂಬ ಹಟ ಅವರಲ್ಲಿ ಹುಟ್ಟಿತು. ಅದಕ್ಕಾಗಿ ಅವರು ಈ ರುದ್ರಭೂಮಿಗಳು ಜನರೋಗ್ಯಕ್ಕೆ ಮಾರಕವಾಗಿವೆ ಎಂಬ ಅಪಪ್ರಚಾರವನ್ನು ಮುಂದುವರೆಸಿದರು. ನೇರವಾದ ಪ್ರಯತ್ನ ವಿಫಲವಾದ್ದರಿಂದ ಅವರು ಅಪರೋಕ್ಷ ವಿಧಾನವನ್ನು ಅನುಸರಿಸುವ ಚಾಣಾ-ಕ್ಷತೆ ತೋರಿದರು. ಒಳಚರಂಡಿ ಮಂಡಳಿಯ ಮೂಲಕ ತಮ್ಮ ಪ್ರಯತ್ನ ವಿಫಲವಾಗಿತ್ತಾಗಿ ಈ ಬಾರಿ ಅವರು ಶಾಸನ ಸಭೆಯಲ್ಲಿಯೇ ಈ ಬಗ್ಗೆ ಹೋರಾಡಲು ನಿರ್ಧರಿಸಿದರು. ಶಾಸನ ಸಭೆಯ ಸದಸ್ಯನಾಗಿದ್ದ ಟ್ರಷ್ಟ್ರಯಿನ್ ಒಂದು ಮಸೂದೆಯನ್ನು ಮಂಡಿಸಿದ. ಅದರಲ್ಲಿ ಆತ ಹೆಣಗಳ ವಿಲೇವಾರಿ, ರುದ್ರಭೂಮಿಗಳ ನಿರ್ವಹಣೆಯ ನಿಯಮಗಳು ಸಂದಿಗ್ಧವಾಗಿದೆ. ಇದರಿಂದ ಮುನಸಿಪಲ ಕಮೀಷನರಿಗೆ ಜನಗಳ ಆರೋಗ್ಯವನ್ನು ಕಾಪಾಡುವ ದೃಷ್ಟಿಯಿಂದ ಹೆಚ್ಚಿನ ಅಧಿಕಾರಗಳಲ್ಲ. ಹೀಗಾಗಿ 'ಮೌನ ಸ್ಥಂಭ' ವೂ ಸೇರಿದಂತೆ ಅನೇಕ ರುದ್ರಭೂಮಿಗಳು ದುರವಸ್ಥೆಯಲ್ಲಿದ್ದರೂ ಅವರು ಅಸಹಾಯಕರಾಗಿದ್ದಾರೆ. ಅದಕ್ಕಾಗಿ ಮುನಿಸಿಪಲ್ ಕಮೀಷನರಿಗೆ ಹೆಚ್ಚಿನ ಅಧಿಕಾರಗಳನ್ನು ಕೊಡುವುದು ಅಗತ್ಯ ಎಂಬ ಸೂಚನೆ ಅವನದಾಗಿತ್ತು. ಭಾರತೀಯರ ರುದ್ರಭೂಮಿಗಳನ್ನು ಮುಚ್ಚಿಸಲ್ಲು ಹಿಂದೆ ವಿಫಲರಾದವರು ಹಿಂಬಾಗಿಲ ಮೂಲಕ ಅಂತಹದೇ ಪ್ರಯತ್ನವನ್ನು ಮಾಡುವ ಹುನ್ನಾರು ಇದಾಗಿತ್ತು.

ಈ ಮಸೂದೆ ಮುಂಬಯಿನ ನಾಗರಿಕರಿಗೆ ಪುನಃ ಒಂದು ಗಂಭೀರ ಸವಾಲನ್ನು ಒಡ್ಡಿತು. ಎಂದಿನಂತೆ ನಾನಾ ಅವರೇ ಈ ಸವಾಲನ್ನು ಸಮರ್ಥವಾಗಿ ಕೈಗೆತ್ತಿಕೊಂಡರು. ಆಗ ಅವರು ಶಾಸನ ಸಭೆಯ ಸದಸ್ಯರೂ ಆಗಿದ್ದರು. ಮಸೂದೆಯು ಚರ್ಚೆಗೆ ಬಂದಾಗ ಅದನ್ನು ಅಮೂಲಾಗ್ರವಾಗಿ ವಿರೋಧಿಸುತ್ತಾ ಹೀಗೆ ವಾದಿಸಿದರು, " 1856 ರ ಅಧಿನಿಯಮ ಈಗಾಗಲೇ ಪೌರಾಡಳಿತಕ್ಕೆ ಹೆಚ್ಚಿನ ಅಧಿಕಾರವನ್ನು ಕೊಟ್ಟಿದೆ. ಅದರಂತೆ ನಾಗರಿಕರ ಆರೋಗ್ಯಕ್ಕೆ ತೊಂದರೆ ಕೊಡುವಂತಹ ಸ್ಮಶಾನಗಳನ್ನು ಸ್ವಚ್ಛಗೊಳಿಸಲು ಮತ್ತ ಅಲ್ಲಿಗೂ ಅವುಗಳು ಸುಸ್ಥಿತಿಯಲ್ಲಿಲ್ಲದಿದ್ದರೆ ಅವನ್ನು ಮುಚ್ಚು ಅಧಿಕಾರ ಕಮೀಷನರಿಗಿದೆ. ಅಲ್ಲದೇ, ಕಮೀಷನರಿಗೆ ಆಗಾ ರುದ್ರಭೂಮಿಗಳನ್ನು ಮತ್ತು ಅದರ ಅನುಷ್ಠಾನಕ್ಕೆ ಸೂಕ್ತವಾ ಆಡಳಿತ ಕ್ರಮವನ್ನು ರೂಪಿಸುವ ಅಧಿಕಾರವೂ ದತ್ತವಾಗಿದ ಈ ದತ್ತ ಅಧಿಕಾರಗಳ ಮೂಲಕವೇ ಕಮೀಷನರ್ ಅವ ನಾಗರಿಕರ ಆರೋಗ್ಯಕ್ಕೆ ಉಂಟು ಮಾಡಬಲ್ಲ, ಶುಚಿತ್ವವಿಲ್ಲ ಸ್ಮಶಾನಗಳನ್ನು ಮುಚ್ಚುವ ಪೂರ್ಣ ಅಧಿಕಾರ ಹೊಂದಿದ್ದಾರ ಇದರಿಂದ ಸಧ್ಯದ ಮಸೂದೆ ಮುನಿಸಿಪಲ್ ಕಮೀಶನರಿಗೆ ಈ ದತ್ತವಾಗಿರುವ ಅಧಿಕಾರಗಳ ನಿರ್ಜೀವಗೊಳಿಸಬಲ್ಲ ಉದ್ದೇ ಹೊಂದಿದೆ. ಇದರ ಮೂಲ ಉದ್ದೇಶ ಬಹುಶಃ ಜನಗಳಿಂ 'ಮೌನಸ್ಥಂಭ' ವನ್ನೂ ಮತ್ತು ಇತರ ಜನಾಂಗದವರಿಂದ ಅವ ರುದ್ರಭೂಮಿಗಳನ್ನು ಕಿತ್ತುಕೊಳ್ಳುವ ಸಂಚಾಗಿದೆ.

ಹಿಂದೂಗಳ ಶವದಹನ ಸಂಸ್ಕಾರದ ವಿಧಿ ಅನಾರೋಗ್ಯಪೂರ್ಣ ಎಂದು ಹೇಳುವುದು ಯಾವುದೇ ಆಧಾರವಿಲ್ಲ. ವೈದ್ಯಕೀಯ ಮಂಡಳಿಯ ನನ್ನ ಗೌರವಾನ್ವಿ ಸಹೋದ್ಯೋಗಿಗೆ ಈ ಅಂಶವನ್ನು ಈಗಾಗಲೇ ಸಾರ್ವತ್ರಿಕವಾಗಿ ಒಪ್ಪಿಕೊಂಡಿದ್ದಾರೆ. ಯಾರು ಬೇಕಾದರೂ ಬಂದು ಈ ಅಂಶವನ್ನು ಪರಿಶೀಲಿಸಲು ನಾನು ಈ ಮೂಲಕ ಆಹ್ವಾನ ಕೊಡುತ್ತೇನೆ ಇಂತಹ ಶವಸಂಸ್ಕಾರದ ಸಂದರ್ಭದಲ್ಲಿ ಸೌದೆ ಉರಿಯುವ ವಾಸನೆಯೊಂದನ್ನು ಬಿಟ್ಟು ಇನ್ಯಾವುದು ದುರ್ವಾಸನೆ ಇಲ್ಲದಿರುವುದನ್ನು ಯಾರು ಬೇಕಾದರೂ ಪರಿಶೀಲಿಸಬಹುದು ವಾಸ್ತವದಲ್ಲಿ ಈ ವಾಸನೆಗಿಂತ ಸ್ಮಶಾನದ ಸುತ್ತಮುತ್ತಲಿನ ಪ್ರದೇಶದ ಚರಂಡಿಗಳನ್ನು ಸ್ವಚ್ಛವಾಗಿಡದಿದ್ದರಿಂದ ಹೊರಸೂಸುವ ದುರ್ವಾಸನೆಯೇ ಹೆಚ್ಚು ಅಸಹ್ಯವಾಗಿದೆ ಈ ಅಂಶವನ್ನು ಡಾ. ಬ್ರಾಹ್ಮನದ ಅವರು ನನ್ನೊಂದಿಗಿನ ಸಂಭಾಷಣೆಯಲ್ಲಿಯೂ ಸಮರ್ಥಿಸಿದ್ದಾರೆ. ಈ ಎಲ್ಲ ಅಂಶಗಳನ್ನು ಪರಿಗಣಿಸಿ ನಾನು ಖಚಿತವಾಗಿ ಹೇಳುವುದೇನೆಂದರೆ ಹಿಂದೂಗಳ ಈಗಿನ ರುದ್ರಭೂಮಿಗಳನ್ನು ಸ್ಥಳಾಂತರಿಸುವ ಅಥವ ಮುಚ್ಚುವ ಯಾವುದೇ ನಿರ್ಧಾರ ಹಿಂದೂಗಳಲ್ಲಿ ತೀವ್ರತರವಾದ ಅಸಂತೋಷವನ್ನು ಹುಟ್ಟುಹಾಕುತ್ತದೆ. ಅಲ್ಲದೆ, ಅವರು ತೀವ್ರತರವಾದ ತೊಂದರೆಗಳಿಗೂ ಈಡಾಗುವ ಸ್ಥಿತಿ ಏರ್ಪಡುತ್ತದೆ. ನಾನು ಈ ಹಿಂದೆ ಒಳಚರಂಡಿ ಮಂಡಳಿಯ ಸಭೆಯಲ್ಲಿ ಸ್ಪಷ್ಟಪಡಿಸಿರುವಂತೆ ರೈಲಿನಲ್ಲಿ ಶವವನ್ನು ಸಾಗಿಸುವ ವ್ಯವಸ್ಥೆಗೆ ಹಿಂದೂಗಳು ಒಪ್ಪುವ ಸಾಧ್ಯತೆ ಇಲ್ಲವೇ ಇಲ್ಲ. ಅವರ ನಂಬಿಕೆಯಂತೆ ಶವವನ್ನು ಸಂಬಂಧಿಕರಲ್ಲದ ಇತರರು ಮುಟ್ಟುವುದೂ ಅವರ ಸಂಪ್ರದಾಯಕ್ಕೆ ವಿರೋಧವಾದದ್ದು. ಇದ-ರಿಂದ ದೂರದ ಸ್ಮಶಾನಗಳಿಗೆ ಅವರು ಕಾಲುನಡಿಗೆಯಲ್ಲಿಯೇ ಶವವನ್ನು ಸಾಗಿಸುವ ವ್ಯವಸ್ಥೆ ಮಾಡಿಕೊಳ್ಳಬೇಕಾಗುವುದು. ಅನಿವಾರ್ಯವಾಗುತ್ತದೆ. ಹೀಗಾಗಿ ಹೆಚ್ಚು ಜನಗಳ ಸಹಕಾರ ಸಿಗದಿರುವ ಬಡ ಜನತೆಗೆ ಶವ ಸಂಸ್ಕಾರದ ವಿಧಿಯೇ ಒಂದು ದೊಡ್ಡ ಹೊರೆಯಾಗುವ ಸಂಭವವೂ ಇದೆ. ಅಲ್ಲದೆ, ಶವ ಸಂಸ್ಕಾರಕ್ಕಾಗಿ ಹೋದ ಪರಿವಾರದವರು ಹಿಂತಿರುಗಿ ಬಂದು ಸ್ನಾನ ಮಾಡುವವರೆಗೆ ಅವರು ಮತ್ತು ಇತರ ಸಂಬಂಧಿಕರು ಕಡ್ಡಾಯವಾಗಿ ಉಪವಾಸವಿರುವ ಸಂಪ್ರದಾಯವೂ ಇರುವುದರಿಂದ ಈಗಿನ ವ್ಯವಸ್ಥೆಯ ಯಾವುದೇ ಬದಲಾವಣೆ

ದೂಗಳಿಗೆ ಅತೀವ ತೊಂದರೆ ಉಂಟು ಮಾಡುತ್ತದೆ. ತಹದೇ ಕೆಲವು ವಿಶಿಷ್ಟ ಪದ್ಧತಿಗಳು ಪಾರ್ಸಿ ಮತ್ತು ಸಲ್ಮಾನ ಜನಾಂಗಗಳಲ್ಲೂ ಇವೆ. ಈಗಿನ ನಮ್ಮ ಗವರ್ನರ ಸ್ಥಳೀಯ ಜನಾಂಗಗಳ ವಿಶಿಷ್ಟ ಪರಂಪರೆಯನ್ನು ತವರಾದುದರಿಂದ ಅವರು ಈಗಿನ ವ್ಯವಸ್ಥೆಯನ್ನೇ ುಂದುವರೆಸಿಕೊಂಡು ಹೋದಾರು. ಆದರೆ ಇಂತಹ ನವಿಲ್ಲದವರು ಮುಂದೆ ಈ ಹುದ್ದೆಯನ್ನು ನಿರ್ವಹಿಸುತ್ತಿರುವಾಗ ಅತಹ ಸೌಲಭ್ಯಗಳು ಸ್ಥಳೀಯರಿಗೆ ಸಿಗದೆ ಈ ಮಸೂದೆ ನಿಯಮವಾದರೆ ಅವರಿಗೆ ಪ್ರದತ್ತವಾಗುವ ಅಧಿಕಾರದ ರುಪಯೋಗವಾಗಿ ಸ್ಥಳೀಯರಿಗೆ ತುಂಬ ಅನ್ಯಾಯವಾಗುವ ಧ್ಯತೆಗಳು ಇಲ್ಲದಿಲ್ಲ. ಮುಂದೊಂದು ದಿನ ಶವಸಂಸ್ಕಾರದ ನಗರದ ಹೊರವಲಯದ ಪ್ರದೇಶಗಳಲ್ಲೇ ನಡೆಯಬೇಕೆಂಬ ಚನೆ ಬಂದರೂ ಆಶ್ಚರ್ಯವಿಲ್ಲ'. ಇದರ ಜೊತೆಗೆ ನಾನಾ ಸೂದೆಯಲ್ಲಿ ಅಂತರ್ಗತವಾಗಿರುವ ವಿರೋಧಾಭಾಸಗಳನ್ನು ತ್ತು ಅಸಂಗತಗಳನ್ನು ಸಭೆಯ ಗಮನಕ್ಕೆ ತಂದರು. ಟ್ಟಿನಲ್ಲಿ ನಾನಾ, ಅವರ ಈ ಭಾಷಣ ಭಾರತೀಯ ಜನಾಂಗದ ಮಸ್ಯೆಗಳ ಬಗ್ಗೆ ಅವರಿಗಿದ್ದ ಕಾಳಜಿ ಮತ್ತು ಶಾಸನ ಯಮಗಳ ಬಗ್ಗೆ ಅವರಿಗಿದ್ದ ವಿದ್ವತ್ತಿನ ಪ್ರತೀಕವಾಗಿತ್ತು. ತಮ್ಮ ದ್ವತ್ ಪೂರ್ಣ ಭಾಷಣದ ಮೂಲಕ ನಾನಾ ಅವರು ಚರ್ಚೆಗೆ ಂದಿರುವ ಮಸೂದೆಯನ್ನು ಒಪ್ಪಿಕೊಳ್ಳಲು ಯಾವುದೇ ಆಧಾರ ಲ್ಲವೆಂಬುದನ್ನು ಸಮರ್ಥವಾಗಿ ನಿರೂಪಿಸಿದರು.

ನಾನಾ ಅವರ ಈ ಭಾಷಣ ಗೌರ್ನರ್ ಅವರನ್ನಷ್ಟೇ ಅಲ್ಲ, ಈ ಮಸೂದೆಯ ಪ್ರಸ್ತಾಪ ಮಾಡಿದ ಟ್ರಸ್ಟ್ರೇಯನ್ ಅವರನ್ನೂ ಪ್ರಭಾವಿತಗೊಳಿಸಿ ಅವರು ತಮ್ಮ ಮಸೂದೆಯನ್ನು ಸ್ವಯಂ ಪ್ರೇರಿತರಾಗಿ ಹಿಂತೆಗೆದುಕೊಂಡರು. ಅಧ್ಯಕ್ಷ ಸ್ಥಾನದಲ್ಲಿದ್ದ ಗವರ್ನರ್ ಸರ್ ಬಾರ್ಟ್ಲ್ ಫ್ರೇರೆ ಅವರು ಈ ಮಸೂದೆಯಿಂದ ಎಲ್ಲ ಜನಾಂಗಗಳ ನಾಗರೀಕರ ಭಾವನೆಗಳಿಗೆ ಧಕ್ಕೆ ತಗಲುತ್ತದೆಂಬುದರಿಂದ ಮಸೂದೆಯನ್ನು ತಿರಸ್ಕರಿಸಲು ನಿರ್ಧರಿಸಿದರು. ಹೀಗೆ ಮತ್ತೊಮ್ಮೆ ನಾನಾ ಅವರ ದೃಢ ಪ್ರಯತ್ನದಿಂದ ಮುಂಬಯಿನ ರುದ್ರಭೂಮಿಗಳು ಮುಚ್ಚುವದು ಸ್ಥಗಿತವಾಯಿತು. ಇದರಿಂದಾಗಿ ಮುಂದಿನ ಪೀಳಿಗೆಯೆಲ್ಲಾ ನಾನಾ ಅವರಿಗೆ ಋಣಿಯಾಗುವಂತಾಯಿತು. ಮರೀನ್ ಲೈನ್ಸ್ ಬಳಿಯ ಹಿಂದೂ ರುದ್ರಭೂಮಿಯ ಪ್ರವೇಶದ್ವಾರದಲ್ಲಿ ಸ್ಥಾಪಿತವಾಗಿರುವ ನಾನಾ ಅವರ ಬಿಳಿ ಅಮೃತ ಶಿಲೆಯ ಪುತ್ಥಳಿ ನಾನಾರ ಬಗೆಗಿನ ಜನಗಳ ಕೃತಜ್ಞತೆಯ ಪ್ರತೀಕವಾಗಿ ನಿಂತಿದೆ.

## ಸಂಪರ್ಕ ಸಾಧನಗಳು

ನಾಗರೀಕತೆಯಲ್ಲಿ ಸಂಪರ್ಕ ಸಾಧನಗಳು ಬಹಳ ಮಹತ್ವದ ಪಾತ್ರವನ್ನು ವಹಿಸುತವೆ. ಊರಿಂದೂರಿಗೆ ಸೂಕ್ತ ರಸ್ತೆಗಳೇ ಇಲ್ಲದಿದ್ದಾಗಿನ ಪರಿಸ್ಥಿತಿಯಲ್ಲಿ ರೈಲು ಮಾರ್ಗಗಳ ಅನ್ವೇಷಣೆಯೂ ಆಗದಿದ್ದಾಗಿನ ಪರಿಸ್ಥಿತಿಯನ್ನು ಯಾರೂ ಊಹಿಸಬಹುದು. ನಾನಾ ಅವರ ಸೇವೆ ಈ ದಿಕ್ಕಿನಲ್ಲಿಯೂ ಮಹತ್ತರವಾದುದು. ಅವರ ಸಾಧನೆ ಅದ್ಭುತವಾದುದು. ವಿಶೇಷತಃ ಭಾರತದಲ್ಲಿ ರೈಲು ಮಾರ್ಗದ ಪ್ರವರ್ತಕರ ಹೆಸರಿನಲ್ಲಿ ಅವರಿಗೆ ಪ್ರಥಮ ಪ್ರಾಶಸ್ತ ಸಲ್ಲುತ್ತದೆ ಅಂತರ್‌ರಾಜ್ಯ ಸಂಪರ್ಕದ ದಿಕ್ಕಿನಲ್ಲಿ ರಸ್ತೆಗಳು, ರೈಲುಗಳ ಬಗ್ಗೆ ಗಮನ ಕೊಟ್ಟಂತ ವಿದೇಶೀಯ ಸಂಪರ್ಕದ ಸಾಧನಕ್ಕಾಗಿ ನೌಕೋದ್ಯಮದಲ್ಲೂ ನಾನಾ ಅವರು ಸಕ್ರಿಯವಾಗಿ ದುಡಿದರು ಎಂಬುದು ಅವರ ಸೇವೆಯ ವೈವಿಧ್ಯತೆಯನ್ನು ಸೂಚಿಸುತ್ತದೆ. ಈ ಸಾಧನೆಗಳ ವಿಸ್ತೃತ ಪರಿಚಯದಿಂದ ಅವರ ಸೇವೆಯ ಮಹತ್ವ ಅರಿವಾದೀತು.

## ರಸ್ತೆಗಳು

ಮುಖ್ಯ ರಸ್ತೆಗಳ ನಿರ್ವಹಣೆಯಲ್ಲಿ ಸರ್ಕಾರದ ಆಡಳಿತಕ್ಕೊಳಪಟ್ಟಿದ್ದರಿಂದ ಸಾರ್ವಜನಿಕ ಸೇವಾಸಕ್ತರು ಈ ದಿಕ್ಕಿನಲ್ಲಿ ಅಂತಹ ಪ್ರಯತ್ನ ಮಾಡಬೇಕಾದ ಹೆಚ್ಚಿನ ಅಗತ್ಯ ಇರಲಿಲ್ಲ. ಆದರೂ ಅನೇಕ ಸ್ಥಳಗಳಲ್ಲಿ ರಸ್ತೆ ನಿರ್ಮಾಣವಾಗಬೇಕಾದಾಗ ಅದಕ್ಕಾಗಿ ನಾನಾ ಉದಾರ ಸಹಾಯ ಮಾಡುತ್ತಿದ್ದರು. ಪುಣೆಯ 'ವೇತಾಳ ಪೇಟ್'ನ ಹಿಂಭಾಗದಲ್ಲಿ ನಾನಾ ಅವರ ಬಂಗಲೆಯೊಂದಿತ್ತು. ಆ ಪ್ರದೇಶದ ಸಾರ್ವಜನಿಕರ ಅನುಕೂಲಕ್ಕಾಗಿ ಅವರು ಅಲ್ಲಿಂದ 'ಪಾರ್ವತಿ'ವರೆಗಿನ ರಸ್ತೆಯನ್ನು ಸ್ವಂತ ಖರ್ಚಿನಲ್ಲಿ ನಿರ್ಮಾಣ ಮಾಡಿದ್ದರು. ಅಂದಿನ ದಿನಗಳಲ್ಲೇ ಅದಕ್ಕೆ ತಗುಲಿದ ವೆಚ್ಚ 15000/ ರೂಗಳು. ಹಾಗೆಯೇ ಪುಣೆಯ ರೈಲ್ವೇ ನಿಲ್ದಾಣಕ್ಕೆ

ಸಂಪರ್ಕವೇರ್ಪಡಿಸುವ ರಸ್ತೆಗಾಗಿ 5000/-ರೂಗಳ ಉದಾರ ಧನ ಸಹಾಯ ಮಾಡಿದ್ದಲ್ಲದೇ ಸಾರ್ವಜನಿಕರ ಅನುಕೂಲಕ್ಕಾಗಿ ಅಲ್ಲಿ ಒಂದು ಗಡಿಯಾರ ಕಂಬ ಸ್ಥಾಪಿಸಲು 3000 ರೂಗಳ ಅಧಿಕ ಸಹಾಯಧನವನ್ನು ಕೊಟ್ಟಿದ್ದರು. ಅದರಂತೆಯೇ ವಜ್ರೇಶ್ವರಿ, ನಾಸಿಕ್, ತ್ರ್ಯಂಬಕೇಶ್ವರ ಮತ್ತು ಅಭಿವೃದ್ಧಿ ಹೊಂದುತ್ತಿದ್ದ ಇನ್ನೂ ಅನೇಕ ಪ್ರದೇಶಗಳಲ್ಲಿ ರಸ್ತೆ ನಿರ್ಮಾಣಕ್ಕಾಗಿ ನಾನಾ ಅವರು ಉದಾರ ಧನ ಸಹಾಯ ಮಾಡಿದ್ದರೆಂದು ತಿಳಿದು ಬರುತ್ತದೆ. ಅಲ್ಲದೆ ರಸ್ತೆ ಬದಿಯ ಬಾವಿಗಳು-ಕಾರಂಜಿಗಳ ನಿರ್ಮಾಣದಲ್ಲೂ ನಾನಾ ಆಸಕ್ತಿ ತೋರಿ ಅವುಗಳಿಗಾಗಿಯೂ ಯಥೇಚ್ಛ ಧನ ಸಹಾಯ ಮಾಡಿದ್ದರು. ಇದೆಲ್ಲದರಿಂದ ವ್ಯಕ್ತಪಡುವ ಒಂದು ಅಂಶವೆಂದರೆ ಅವರ ಸಾಮಾಜಿಕ ಚಟುವಟಿಕೆಗಳ ಪರಿಧಿ ಅಗತ್ಯವಾದಾಗ ಮುಂಬಯಿಯನ್ನು ಮೀರಿ ಬೆಳೆಯುತ್ತಿತ್ತು ಎನ್ನುವುದು. ಇದೆಲ್ಲಕ್ಕಿಂತ ಹೆಚ್ಚಾಗಿ ಭಾರತೀಯ ಸಂಪರ್ಕ ಸಾಧನಗಳ ಕ್ಷೇತ್ರದಲ್ಲಿ ಕ್ರಾಂತಿಯನ್ನುಂಟು ಮಾಡಿದ ರೈಲು ಮಾರ್ಗಗಳ ಪ್ರಾರಂಭದ ಕತೆ ಇನ್ನೂ ರೋಚಕವಾಗಿದೆ.

## ರೈಲು ಮಾರ್ಗಗಳು

ರೈಲು ಮಾರ್ಗಗಳು ಇಂದು ಭಾರತದ ಸಂಪರ್ಕ ಸಾಧನಗಳ ಜೀವನಾಡಿಗಳಾಗಿವೆ. ಆದರೂ ಸ್ವಾತಂತ್ರ್ಯ ದೊ-ರೆತ 45 ವರ್ಷಗಳ ನಂತರವೂ ಸರ್ಕಾರ ಇನ್ನೂ ಅನೇಕ ಪ್ರದೇಶಗಳಿಗೆ ರೈಲು ಸಂಪರ್ಕ ಕಲ್ಪಿಸುವ ಭಗೀರಥ ಪ್ರಯತ್ನದಲ್ಲಿ ಪೂರ್ಣಯಶಸ್ಸು ಸಾಧಿಸಿಲ್ಲ. ಕೊಂಕಣ ರೈಲ್ವೆಯ ಇತಿಹಾಸ ಇದಕ್ಕೊಂದು ಒಳ್ಳೆಯ ಉದಾಹರಣೆ. ಆದರೆ ಸರ್ಕಾರಕ್ಕಿರುವ ಸಂಪನ್ಮೂಲಗಳ, ಇತರ ಸೌಲಭ್ಯಗಳ ಯಾವ ಸಹಾಯವೂ ಇಲ್ಲದೆ ಕೇವಲ ಜನತೆಯ ಹಿತ ಸಾಧಿಸಬೇಕೆಂಬ ಛಲವೊಂದರ ಆಧಾರದ ಮೇಲೆ ಅಂದು ರೈಲು ಮಾರ್ಗಗಳ ಪ್ರಾರಂಭಕ್ಕೆ ಕಾರಣರಾದ ನಾನಾ ಮತ್ತು ಇತರ ನಾಯಕರು ನಮಗೆ ಪ್ರಾತಃಸ್ಮರಣೀಯರಾಗಿದ್ದಾರೆ.

1832ರಲ್ಲಿ ಇಂಗ್ಲೆಂಡಿನಲ್ಲಿ ರೈಲುಗಳು ಅಸ್ತಿತ್ವಕ್ಕೆ ಬಂದಿದ್ದವು. ಅವುಗಳಿಂದ ಬರುತ್ತಿದ್ದ ಅಗಾಧ ಹೊಗೆಯಿಂದ ಉಂಟಾಗುವ ಪರಿಸರಮಾಲಿನ್ಯದಿಂದಾಗಿ ಮೊದ ಮೊದಲು ಇದಕ್ಕೆ ವಿರೋಧ ಬಂದರೂ ಅದರ ಜನೋಪಯೋಗಿ ಸ್ವಭಾವದಿಂದಾಗಿ

ಕ್ರಮೇಣ ನಾಗರೀಕರು ರೈಲ್ವೆಗೆ ಹೊಂದಿಕೊಳ್ಳಬೇಕಾಯಿತು. ಒಂದು ದಶಕದ ಅವಧಿಯಲ್ಲಿಯೇ ರೈಲು ಶೀಘ್ರ ಮತ್ತು ಅಗ್ಗದ ಸಂಚಾರಿ ಮಾಧ್ಯಮವಾಗಿ ಬೃಹತ್ ಬೆಳವಣಿಗೆ ಕಂಡು-ಕೊಂಡಿತು. ಮುಂಬಯಿಗೆ ಬರುತ್ತಿದ್ದ ಬ್ರಿಟೀಷ್ ವ್ಯಾಪಾರಿಗಳು ಮತ್ತು ಅಧಿಕಾರಿಗಳಿಂದ ರೈಲ್ವೆಯ ಅನುಕೂಲತೆಗಳ ಬಗೆಗಿನ ವಿವರಗಳು ಮುಂಬಯಿಯನ್ನು ತಲುಪತೊಡಗಿದ್ದವು. ಇದ-ರಿಂದ ಮುಂಬಯಿನ ಪ್ರತಿಷ್ಠಿತ ನಾಯಕರೂ ಈ ಹೊಸ ಸಂಚಾರ ವ್ಯವಸ್ಥೆಯ ಬಗ್ಗೆ ತೀವ್ರ ಗಮನ ಕೊಡುವಂತಾಯಿತು. 1843ರಲ್ಲಿ ಮುಂಬಯಿನಲ್ಲಿಯೂ ರೈಲು ಮಾರ್ಗದ ಸಾಧ್ಯಾಸಾಧ್ಯತೆಗಳನ್ನು ಚರ್ಚಿಸಲು ಜಗನ್ನಾಥ ಶಂಕರಶೇಟ್, ಜೇಮ್‌ಶೀಟ್‌ಜೀ ಜೀಜೀಭಾಯ್ ಅವರುಗಳು ಸರ್ ಆರ್ಸ್ಕಿನ್ ಪ್ಯಾರಿ ಮತ್ತು ಇತರ ಯುರೋಪಿಯನ್ ಅಧಿಕಾರಿಗಳೊಂದಿಗೆ ಒಂದು ಚರ್ಚೆನಡೆಸಿದರು. ಈ ಮಹನೀಯರೆಲ್ಲ ಸೇರಿ 'ಗ್ರೇಟ್ ಈಸ್ಟರ್ನ್ ರೈಲ್ವೆ' ಎಂಬ ಸಂಸ್ಥೆಯೊಂದನ್ನು ಪ್ರಾರಂಭಿಸಿ, ರೈಲು ಮಾರ್ಗವು ನಿರ್ಮಾಣವಾಗಬೇಕೆಂಬ ಬೇಡಿಕೆಯ ಪತ್ರವನ್ನು 13-1-1844ರಂದು ಸರ್ಕಾರಕ್ಕೆ ಕಳಿಸಿದರು. ಈ ಸಂಸ್ಥೆಯು ಕರ್ನಲ್ ಜಾರ್ವಿಸ್ ಅವರ ಅಧ್ಯಕ್ಷತೆಯಲ್ಲಿ 19-4-1845ರಂದು ಒಂದು ಸಭೆ ನಡೆಸಿ ರೈಲು ಮಾರ್ಗ ನಿರ್ಮಾಣಕ್ಕೆ ಮೊದಲು ಅನುಸರಿಸಬೇಕಾದ ನೀತಿಯ ಬಗ್ಗೆ ಚರ್ಚಿಸಿತು. ಸಂಸ್ಥೆಯು ಆಗಲೇ ಷೇರುಗಳ ರೂಪದಲ್ಲಿ ಸಾಕಷ್ಟು ಹಣವನ್ನು ಸಂಗ್ರಹಿಸಿತ್ತು. ಅಂದಿನ ಸಭೆಯಲ್ಲಿ ಸಂಸ್ಥೆಯ ಹೆಸರನ್ನು 'ಗ್ರೇಟ್ ಈಸ್ಟರ್ನ್ ರೈಲ್ವೆ'ಯಿಂದ 'ದಿ ಇನ್‌ಲ್ಯಾಂಡ್

ರೈಲ್ವೆ ಅಸೋಸಿಯೇಷನ್' ಎಂದು ಬದಲಾಯಿಸಿ ಮೊದಲಿನ ಸಂಸ್ಥೆಯ ಷೇರುದಾರರು ಇಷ್ಟಪಟ್ಟರೆ ಷೇರು ಹಣ ವಾಪಾಸ್ಸು ಪಡೆಯಬಹುದೆಂದು ತೀರ್ಮಾನಿಸಲಾಯಿತು. ಉಳಿದ ಷೇರು ಹಣವನ್ನು ಹೊಸ ಕಂಪನಿಗೆ ವರ್ಗಾಯಿಸಲಾಯಿತು. ಅಂದಿನ ಸಭೆಯಲ್ಲಿ ಜೆ.ಪಿ. ವಿಲೋಗ್ಬಿಯವರ ಅಧ್ಯಕ್ಷತೆಯಲ್ಲಿ ಜಗನ್ನಾಥ ಶಂಕರಶೇಟ್, ಜೇಮ್‌ಶೇಟ್‌ಜೀ ಜೀಜೀಭಾಯ್ ಮುಂತಾದ ಪ್ರಮುಖರು ಸದಸ್ಯರಾಗಿದ್ದ ಒಂದು ಸಮಿತಿಯನ್ನು ರಚಿಸಲಾಯಿತು.

ನಾನಾ ಅವರು ರೈಲ್ವೇ ಯೋಜನೆಯು ದೇಶದ ಅಭಿವೃದ್ಧಿಗೆ ಅತ್ಯಗತ್ಯ ಎಂದು ನಂಬಿದ್ದರು. ಅದಕ್ಕೆ ಬೇಕಾಗುವ ಬೃಹತ್ ಸಂಪನ್ಮೂಲಗಳ ಕಾರಣದಿಂದ ಮತ್ತು ಅದು ಜನಗಳಿಗೆ ಕಲ್ಯಾಣವುಂಟು ಮಾಡುವ ಸ್ವರೂಪದ್ದಾಗಿದ್ದರಿಂದ ಇದರ ಕಾರ್ಯಗಳನ್ನು ಸರ್ಕಾ ವಹಿಸಿಕೊಳ್ಳಬೇಕೆಂಬ ಅಭಿಪ್ರಾಯವುಳ್ಳವರಾಗಿದ್ದು ಅದಕ್ಕಾಗಿ ಸೂಕ್ತ ಪ್ರಯತ್ನ ಮಾಡುತ್ತಿದ್ದರು.

ಬ್ರಿಟೀಷ್ ಬಂಡವಾಳದಾರರು ಇಂಗ್ಲಂಡಿನಲ್ಲಿ ರೈಲ್ವೆಯು ಉತ್ತಮ ಆದಾಯದ ಮೂಲವಾಗಿದ್ದು ಕಂಡುಕೊಂಡು ತಮ್ಮ ಹಣವನ್ನು ಭಾರತದಲ್ಲಿಯೂ ರೈಲ್ವೆಯ ಮೇಲೆ ಹೂಡಲು ಉತ್ಸುಕರಾಗಿದ್ದರು. ಈ ಸಂಬಂಧದಲ್ಲಿ ಅಲ್ಲಿನ ಉದ್ಯಮ ಪತಿಗಳು ಲಾರ್ಡ್ ವಾರ್ನ್ ಫಿಲಿಪ್ಸ್ ಅವರ ನೇತೃತ್ವದಲ್ಲಿ 1845 ರಲ್ಲಿ 'ಗ್ರೇಟ್ ಇಂಡಿಯನ್ ಪೆನಿನ್ಸುಲಾರ್ ರೈಲ್ವೆ' ಎಂಬ ಕಂಪನಿಯನ್ನು ಪ್ರಾರಂಭಿಸಿದ್ದರು. ಅವರಿಗೆ ಭಾರತದಲ್ಲೂ ಕೆಲವು ಆಸಕ್ತರು ಈ ದಿಶೆಯಲ್ಲಿ ಪ್ರಯತ್ನಶೀಲರಾಗಿದ್ದಾರೆಂಬ ಮಾಹಿತಿ ದೊರಕಿತು. ಪೂರ್ಣ ಮಾಹಿತಿಯನ್ನು ತಿಳಿದುಕೊಳ್ಳಲು ಆ ಕಂಪನಿಯು ಚಾಪ್‌ಮನ್ ಎಂಬುವವರನ್ನು ಆ ಬಗ್ಗೆ ಅಧ್ಯಯನ ನಡೆಸಲು ಭಾರತದ ಭೇಟಿಗಾಗಿ ನಿಯೋಜಿಸಿ[illegible] ಮುಂಬಯಿಗೆ ಬಂದ ಚಾಪಮನ್ ಇಲ್ಲಿನ ಜನಗಳು ರೈಲ್ವೆ[illegible] ಬಗ್ಗೆ ಬಹಳ ಉತ್ಸುಕರಾಗಿದ್ದು ಆಗಲೇ ಕೆಲವು ಪ್ರಾಥ[illegible] ಕಾರ್ಯಗಳನ್ನು ಮಾಡಿ ಮುಗಿಸುವುದಲ್ಲದೆ, ಸೂಕ್ತ ಬಂಡವಾ[illegible] ಸಂಗ್ರಹ ಮಾಡುವುದನ್ನೂ ಗಮನಿಸಿದ. ಚಾಪಮನ್ ಇ[illegible] ಸಂಬಂಧಪಟ್ಟ ನಾಯಕರುಗಳೊಂದಿಗೆ ಚರ್ಚೆ ನ[illegible] ಒಂದೇ ಉದ್ದೇಶಕ್ಕಾಗಿ ಎರಡು ಬೇರೆ ಬೇರೆ ಸಂಸ್ಥೆಗಳು ಕೆ[illegible] ಮಾಡುವುದು ಅಷ್ಟು ಸೂಕ್ತವಾಗಲಿಕ್ಕಿಲ್ಲ ಮತ್ತು ಉದ್ದೇಶ ಒ[illegible] ಆಗಿರುವುದರಿಂದ ಈ ಎರಡು ಕಂಪನಿಗಳು ಐಕ್ಯವಾಗಿ ಒ[illegible] ಸಂಸ್ಥೆಯ ನೇತೃತ್ವದಲ್ಲಿ ಕಾರ್ಯ ಸಾಧಿಸಬಹುದೆಂದು ಸೂಚಿಸಿ[illegible] ಆತನ ತೀವ್ರ ಪ್ರಯತ್ನದ ನಂತರ ಮತ್ತು ಭಾರತೀ[illegible] ನಾಯಕರ ಸಹಕಾರದಿಂದ ಕೊನೆಗೆ ಈ ಎರಡೂ ಸಂಸ್ಥೆ[illegible] ವಿಸರ್ಜನೆಯಾಗಿ 'ಗ್ರೇಟ್ ಇಂಡಿಯನ್ ಪೆನಿನ್ಸುಲಾರ್ ರೈ[illegible] (G. I. P.R) ಅಸ್ತಿತ್ವಕ್ಕೆ ಬಂದಿತು. ಈ ಸಂಸ್ಥೆಯ ಆಶ್ರಯ[illegible] ರೈಲು ಮಾರ್ಗಗಳನ್ನು ನಿರ್ಮಾಣ ಮಾಡಲು ಸರ್ಕಾರದಿ[illegible] ಅನುಮತಿ ಕೋರಲಾಯಿತು. 1848 ರಲ್ಲಿ ಮುಂಬಯಿಯಿ[illegible] ಕಲ್ಯಾಣ್‌ವರೆಗಿನ 35 ಮೈಲುಗಳ ರೈಲು ಮಾರ್ಗದ ನಿರ್ಮಾ[illegible] ಈ ಸಂಸ್ಥೆಗೆ ಮಂಜೂರಾತಿ ದೊರಕಿತು. 5 ಲಕ್ಷ 30 ಸಾ[illegible] ಪೌಂಡಿನ ಅಂದಾಜು ವೆಚ್ಚದ ಈ ಕಾರ್ಯ ಯೋಜನೆಗಾಗಿ ಅ[illegible] ಮೊತ್ತದ ಹಣವನ್ನು ಉ. ಖ. ಕಖ. ಸರ್ಕಾರದಲ್ಲಿ ಠೇವ[illegible] ಇಡಬೇಕು, ಸರ್ಕಾರವು 99 ವರ್ಷಗಳ ಗುತ್ತಿಗೆಯ ಆಧಾರ[illegible] ಮೇಲೆ ಜಮೀನನ್ನು ಉಚಿತವಾಗಿ ಸಂಸ್ಥೆಗೆ , ಮತ್ತು ಇಚ್ಛೆಪಟ್ಟ[illegible] ಸರ್ಕಾರವೇ ಕಂಪನಿಯ ವ್ಯವಹಾರಗಳನ್ನು ತನ್ನ ಅಧಿಕಾರ[illegible] ತೆಗೆದುಕೊಳ್ಳಬಹುದು ಎಂಬ ಷರತ್ತಿನೊಂದಿಗೆ ಈ ಸಂಸ್ಥೆ[illegible] ಕಾರ್ಯಾನುಮತಿ ದೊರಕಿತು. ಈ ರೈಲು ಮಾರ್ಗಗಳ ಮೂಲ[illegible] ಉಚಿತ ಅಂಚೆ ಸೇವೆಯನ್ನು ಪಡೆಯುವ ಅನುಕೂಲ[illegible] ಸರ್ಕಾರಕ್ಕೆ ಲಭಿಸಿತು. ಉ. ಖ. ಕ ಖ. ಸಂಸ್ಥೆಯು ಷೇರುಗ[illegible] ಸಂಗ್ರಹಣೆಗಾಗಿ ಇಂಗ್ಲಂಡಿನಲ್ಲಿ ಪ್ರಚಾರ ನೀಡಿದಾಗ ಇ[illegible] ಲಾಭದಾಯಕ ಉದ್ಯಮ ಎಂಬುದು ಅಲ್ಲಿನ ಜನಗಳ[illegible] ಅರಿವಿತ್ತಾದ್ದರಿಂದ ಷೇರುಗಳಿಗೆ ಬಹುಬೇಡಿಕೆ ಬಂದು ಕೆಲ[illegible] ದಿನಗಳಲ್ಲಿ ಷೇರುಗಳು ಸಂಪೂರ್ಣವಾಗಿ ಮಾರಾಟವಾ[illegible] ನಿರೀಕ್ಷಿತ ಹಣ ಸಂಗ್ರಹದಲ್ಲಿ ಯಾವುದೇ ತೊಂದರೆಯಾಗಲಿ[illegible] 5 ಪೌಂಡಿನ 1,00,000 ಷೇರುಗಳಲ್ಲಿ, 70,000 ಷೇರುಗಳನ[illegible] ಇಂಗ್ಲಂಡಿಗೂ 30,000 ಷೇರುಗಳನ್ನು ಭಾರತಕ[illegible] ಮೀಸಲಿಡಲಾಯಿತು. ಅನೇಕ ಭಾರತೀಯರು ಈ ಷೇರಗಳನ[illegible] ಖರೀದಿ ಮಾಡಿದರು.

ಹೀಗೆ ಅಸ್ತಿತ್ವಕ್ಕೆ ಬಂದ 'ಗ್ರೇಟ್ ಇಂಡಿಯನ್ ಪೆನಿನ್ಸುಲಾ[illegible] ರೈಲ್ವೆ' ಕೂಡಲೇ ಕಾರ್ಯ ಪ್ರವೃತ್ತವಾಯಿತು. ನಾನಾ ಮತ್ತ[illegible] ಅವರ ಮಿತ್ರರು ಈ ಕಂಪನಿಯ ನಿರ್ದೇಶಕರುಗಳಾ[illegible] ನೇಮಕರಾದರು. ನಾನಾ ಅವರಿಗೆ ಆಡಳಿತದ ಹೊಣೆಯನ್ನು[illegible] ವಹಿಸಲಾಯಿತು. ಇಂಗ್ಲೆಂಡಿನಿಂದ ಇಂಜನೀಯರುಗಳನ[illegible] ಕರೆಸಲಾಯಿತು. ಆದರೆ ಕಛೇರಿಯನ್ನು ತೆರೆಯಲು ಸೂ[illegible] ಸ್ಥಳಾವಕಾಶ ದೊರೆಯದಿದ್ದಾಗ ನಾನಾ ಅವರು ತಮ[illegible] ಎಂದಿನ ವಿಶಾಲ ಮನೋಭಾವದಿಂದ ತಮ್ಮ ಬಂಗಲೆಯ[illegible] ಒಂದು ಭಾಗವನ್ನೇ ಈ ಉದ್ದೇಶಕ್ಕಾಗಿ ಬಿಟ್ಟುಕೊಟ್ಟರು. ಅವ[illegible] 'ವಾಡೆ'ಯ ಒಂದು ಭಾಗದಲ್ಲಿಯೇ ಮುಖ್ಯ ರೈಲ್ವೆ ಕಛೇ[illegible] ಸ್ಥಾಪಿತವಾಗಿ ತನ್ನ ಕೆಲಸ ಪ್ರಾರಂಭಿಸಿತು. ಪ್ರಾಥಮಿಕ ಕೆಲಸಗ[illegible]




ಂತರ 31-10-1850ರಂದು ಸಯಾನ್‌ನಲ್ಲಿ ಯೋಜನೆಯ ಂಖುಸ್ಥಾಪನಾ ಸಮಾರಂಭ J.P. ವಿಲ್ಲೊಗ್ಬಿ ಅವರ ಅಮೃತ ಸ್ತದಿಂದ ನೆರವೇರಿತು. ಈ ಕಾರ್ಯದ ಜವಾಬ್ದಾರಿಯನ್ನು ಇಂಗ್ಲೆಂಡಿನ ಮೆ॥ ಫೇವಿಲ್ ಅಂಡ್ ಫೇವ್‌ಲೋರ್ ಸಂಸ್ಥೆಗೆ ವಹಿಸಲಾಯಿತು. ಅವರು ಕೇವಲ 3 ವರ್ಷಗಳ ಕಡಿಮೆ ಅವಧಿಯಲ್ಲಿ ಕಾರ್ಯವನ್ನು ಸೂಕ್ತವಾಗಿ ಮುಗಿಸಿಕೊಟ್ಟರು. 16-4-1853 ಭಾರತದ ಚರಿತ್ರೆಯಲ್ಲಿ ಅದರಲ್ಲೂ ವಿಶೇಷವಾಗಿ ಮುಂಬಯಿಯ ಚರಿತ್ರೆಯಲ್ಲಿ ಒಂದು ಸುವರ್ಣದಿನ. ಅಂದು ಭಾರತದ ಪ್ರಥಮ ರೈಲು ಮುಂಬಯಿಯಿಂದ ಥಾಣಾವರೆಗೆ ತನ್ನ ಸಂಚಾರ ಪ್ರಾರಂಭ ಮಾಡಿತು. ಸುಂದರವಾಗಿ ಅಲಂಕೃತವಾದ ಈ ರೈಲಿನಲ್ಲಿ ಮೂರು ಎಂಜಿನ್‌ಗಳು ಮತ್ತು 20 ಬೋಗಿಗಳು ಇದ್ದವು. 500 ಜನ ಆಹ್ವಾನಿತ ಪ್ರಮುಖರಿಗೆ ಸ್ಥಳಾವಕಾಶ ಮಾಡಿಕೊಡಲಾಗಿತ್ತು. ನಾನಾ ಅವರಿಗೆ ಗೌರ್ನರ್ ಅವರೊಂದಿಗೆ ಗೌರವಯುತ ಸ್ಥಾನ ಕೊಡಲಾಗಿತ್ತು. ಇಕ್ಕಡೆಗಳಲ್ಲೂ ಸಂಭ್ರಮದಿಂದ ರೈಲಿಗೆ ಸ್ವಾಗತ ಕೋರುತ್ತ, ಕೈಬೀಸುತ್ತಿದ್ದ ಜನಗಳ ಮಧ್ಯೆ ಈ ಪ್ರಥಮ ರೈಲು ಸಿಳ್ಳೆಹಾಕುತ್ತಾ ರಾಜಗಾಂಭೀರ್ಯದಿಂದ ಹೊರಟಿದ್ದು ಅವಿಸ್ಮರಣೀಯ ಅನುಭವವಾಗಿತ್ತು. 20 ಮೈಲುಗಳ ಈ ಪ್ರವಾಸವನ್ನು ಮುಗಿಸಲು ರೈಲು ಒಂದು ಗಂಟೆ ತೆಗೆದು-ಕೊಂಡಿತು. ಈ ಸುಂದರ ಅಲಂಕೃತ ರೈಲು ಬೋರಿಬಂದರನ್ನು ಸಂಜೆ 5 ಗಂಟೆಗೆ ಬಿಟ್ಟು ಪುನಃ 8 ಗಂಟೆಗೆ ಹಿಂತಿರುಗಿ ಬಂದಿತು. ಥಾಣೆಯಲ್ಲಿ ಉಲ್ಲಸಿತರಾಗಿದ್ದ ನಾಗರಿಕರು ಗೌರ್ನರ್ ಮತ್ತು ಕಂಪನಿಯ ನಿರ್ದೇಶಕರನ್ನು ಸಂಭ್ರಮದಿಂದ ಸ್ವಾಗತಿಸಿದರು. ನಂತರ ಕಂಪನಿಯ ಕಛೇರಿಯನ್ನು ನಾನಾ ಅವರ ವಾಡೆಯಿಂದ ಬೋರಿಬಂದರ್ ನಿಲ್ದಾಣಕ್ಕೆ ಸ್ಥಳಾಂತರಿಸಲಾಯಿತು. ಕಂಪನಿಯ ಅಂದಿನ ಆ ಪ್ರಥಮ ನಿರ್ದೇಶಕರುಗಳ ಪುತ್ಥಳಿಗಳು ಮುಖ್ಯ ಕಛೇರಿಯ ಪ್ರವೇಶದ್ವಾರದ ಮೇಲಿನ ಗೋಡೆಗಳಲ್ಲಿ ಪ್ರತಿಷ್ಠಾಪಿತವಾಗಿವೆ. ಇಂದಿಗೂ ಅಲ್ಲಿ ಸ್ಥಾಪಿತವಾಗಿರುವ ನಾನಾ ಅವರ ಪ್ರತಿಮೆ ಮತ್ತು ಅದಕ್ಕೆ ದೊರಕಿರುವ ಪ್ರಾಮುಖ್ಯತೆ ಅವರು ರೈಲು ಮಾರ್ಗದ ನಿರ್ಮಾಣದಲ್ಲಿ ಆಸಕ್ತಿಯಿಂದ ದುಡಿದು ಮುಂಬಯಿಗಷ್ಟೇ ಅಲ್ಲ, ಇಡೀ ಭಾರತಕ್ಕೆ ಸಲ್ಲಿಸಿದ ಅಪ್ರತಿಮ ಸೇವೆಯ ಪ್ರತೀಕವಾಗಿ ಮೈತಳೆದು ನಿಂತಿದೆ. ನಾನಾ ಅವರ ಸೇವೆಯನ್ನು ಗೌರವಿಸಿ ಕಂಪನಿಯು ಅವರಿಗೆ 'ಗೋಲ್ಡನ್ ಪಾಸ್' ಅನ್ನು ಕೊಟ್ಟಿತು. ಇದರ ನಂತರ ರೈಲು ಮಾರ್ಗಗಳ ವಿಸ್ತಾರ ಹೆಚ್ಚುತ್ತಾ ಹೋಗಿ ಭಾರತದ ಅನೇಕ ಪ್ರದೇಶಗಳು ರೈಲು ಸೌಲಭ್ಯ ಪಡೆಯುವಂತಾಯಿತು.

"ಬಾಂಬೆ, ಬರೋಡಾ ಅಂಡ್ ಸೆಂಟ್ರಲ್ ಇಂಡಿಯನ್ ರೈಲ್ವೆ' ಎಂಬ ಇನ್ನೊಂದು ಸಂಸ್ಥೆಯು ಕೊಲಾಬಾ ಮತ್ತು ಬರೋಡಾಗಳ ನಡುವೆ ರೈಲು ಮಾರ್ಗದ ನಿರ್ಮಾಣ ಮಾಡಿತು. ಹೀಗೆ ಚಿಕ್ಕದಾಗಿ ಪ್ರಾರಂಭವಾದ ರೈಲು ಮಾರ್ಗ ಇಂದು ಇಡೀ ದೇಶವನ್ನು ವ್ಯಾಪಿಸಿ ನಿಂತಿದೆ. ಅದರಲ್ಲೂ ಮುಂಬಯಿನಲ್ಲಿ ಅದರ ಬೆಳವಣಿಗೆ, ಅದರ ಕಾರ್ಯ ನಿರ್ವಹಣೆ ಒಂದು ಅದ್ಭುತವಾಗಿದೆ. ರೈಲುಗಳು ನಿಂತರೆ ಮುಂಬಯಿನ ಜೀವನವೇ ಸ್ತಬ್ದವಾಗಿ ಬಿಡುವಷ್ಟು ಮಟ್ಟಿಗೆ ಜನಗಳ ಅಗತ್ಯವಾಗಿರುವ ರೈಲು ಮಾರ್ಗದ ಸ್ಥಾಪಕರನ್ನು ಜನ ಮರೆಯಲು ಸಾಧ್ಯವೆ ? ಅದರಿದಾಗಿ 'ವಿಕ್ಟೋರಿಯಾ ಟರ್ಮಿನಸ್ ನಿಲ್ದಾಣದ ಹೆಸರನ್ನು 'ಜಗನ್ನಾಥ ಶಂಕರಶೇಟ್ ರೈಲು ನಿಲ್ದಾಣ'ವೆಂದು ಬದಲಿಸಬೇಕೆಂಬ ಜನತೆಯ ಬೇಡಿಕೆ ಸೂಕ್ತವಷ್ಟೇ ಅಲ್ಲ, ಅಂದಿನ ನಿರ್ಮಾಪಕರ ತ್ಯಾಗ ಸೇವಾ ಮನೋಭಾವಗಳಿಗೆ ಇಂದಿನ ಜನಾಂಗ ಸಲ್ಲಿಸಬಹುದಾದ ಕೃತಜ್ಞತೆಯ ಕುರುಹು ಆಗುತ್ತದೆಂಬುದರಿಂದ ಅತ್ಯಂತ ಅಗತ್ಯದ ಕ್ರಮವಾಗಿದೆ.

## ನೌಕಾಯಾನ ಸೌಲಭ್ಯ

ದೇಶಿಯ ಸಂಪರ್ಕ ಸಾಧನಗಳ ಇಂತಹ ಪ್ರಯತ್ನಗಳ ಜೊತೆಗೆ ಭಾರತದ ವ್ಯಾಪರೋದ್ಯಮ ಅಭಿವೃದ್ಧಿಗೆ ಅಂದಿನ ಅಗತ್ಯವಾದ ನೌಕಾಯಾನ ಸೌಲಭ್ಯ ನೌಕಾ ಉದ್ಯಮದ

ಚಟುವಟಿಕೆಗಳಲ್ಲೂ ನಾನಾರದು ಪ್ರಮುಖ ಪಾತ್ರವೇ.

ಮುಂಬಯಿನ ವ್ಯಾಪಾರೋದ್ಯಮವು ಅಂದು ಮುಖ್ಯವಾಗಿ ಪಾರ್ಸಿಗಳ ಕೈಯಲ್ಲಿತ್ತು ವಿದೇಶಗಳ ಸಂಪರ್ಕ ಹೊಂದಿದ್ದ ಕೆಲವು ಇಂಗ್ಲೀಷ್ ಮತ್ತು ಸ್ಕಾಚ್ ಸಂಸ್ಥೆಗಳಿದ್ದವು. ಕೆಲ ಸಮಯಾ ನಂತರ ಗುಜರಾತಿ, ಮಾರ್ವಾಡಿ ಮತ್ತು ಮುಸ್ಲಿಮರು ವ್ಯಾಪಾರೋದ್ಯಮದಲ್ಲಿ ಕಂಡು ಬರತೊಡಗಿದರೂ, ಮಹಾರಾಷ್ಟ್ರೀಯರು ಇದರಲ್ಲಿ ಹೆಚ್ಚಿನ ಆಸಕ್ತಿ ತೋರಲಿಲ್ಲ. ಜಗನ್ನಾಥಶಂರ ಶೇಟ್ ಅವರ ಕುಟುಂಬ ಇದಕ್ಕೆ ಒಂದು ಅಪವಾದವಾಗಿತ್ತು. ನಾನಾ ಅವರು ಚೀನಾ, ಬರ್ಮಾ ಯುರೋಪುಗಳಲ್ಲಿನ ವ್ಯಾಪಾರಿಗಳೊಂದಿಗೆ ಸಂಪರ್ಕ ಹೊಂದಿದವರಾಗಿದ್ದರು. ಆಗಿನ್ನೂ ಸುಯೇಜ್ ಕಾಲುವೆಯು ಹಡಗುಗಳ ಯಾನಕ್ಕೆ ಮುಕ್ತದ್ವಾರವಾಗಿರಲಿಲ್ಲವಾಗಿ ಭಾರತಕ್ಕೆ ಬರುವ ವ್ಯಾಪಾರಿ ಹಡಗುಗಳು 'ಕೇಪ್ ಆಫ್ ಗುಡ್‌ಹೋಪ್'ನ ಮೂಲಕ ಬರಬೇಕಾಗಿತ್ತು. ಈ ಪ್ರಯಾಣವು ದೂರವೂ, ಕಠಿಣವೂ ಆಗಿದ್ದು ನಾಲ್ಕು ತಿಂಗಳ ಅವಧಿಯನ್ನು ತೆಗೆದುಕೊಳ್ಳುತ್ತಿತ್ತು. ಅಂತಾರಾಷ್ಟ್ರೀಯ ವ್ಯಾಪಾರೋದ್ಯಮಕ್ಕೆ ಅಗತ್ಯವಾಗಿದ್ದ ಈ ನೌಕಾಯಾನವು ಸಂಪೂರ್ಣವಾಗಿ ವಿದೇಶಿಯರ ಹಿಡಿತದಲ್ಲಿತ್ತು. ಭಾರತೀಯ ನೌಕಾಯಾನದ ಸೌಲಭ್ಯಗಳನ್ನು ವ್ಯಾಪಾರೋದ್ಯಮದ ದೃಷ್ಟಿಯಿಂದ ಅಭಿವೃದ್ಧಿ ಪಡಿಸುವ ಸಲುವಾಗಿ ನಾನಾ ಮತ್ತು ಅವರ ವ್ಯಾಪಾರೀ ಮಿತ್ರರು 17-4-1830 ರಂದು ಒಂದು ಕಂಪನಿ ಪ್ರಾರಂಭಿಸಿದರು. ವೆದರ್‌ಬರ್ನ್, ನಾನಾ, ಜೇಮ್‌ಶೇಟ್‌ಜೀ ಜೀಜೀಭಾಯ್ ಅವರು ಇದರಲ್ಲಿದ್ದರು. ಮುಂದಿನ ಕಾರ್ಯಕ್ರಮಗಳನ್ನು ತೀರ್ಮಾನಿಸಲು ಮತ್ತು ಅಗತ್ಯವಾದ ನಿಧಿ ಸಂಗ್ರಹಿಸಲು ಕ್ಯಾಪ್ಟನ್ ವಿಲ್ಸನ್, ಕ್ಯಾಪ್ಟನ್ ಕೋಗಲ್, ಕಾರ್‌ವಾಲ್‌ಬಾರ್ ಮತ್ತು ಡಾ. ವಿಲ್ಸನ್ ಮುಂತಾದ ಪರಿಣತರಿದ್ದ ಒಂದು ಉಪಸಂಸ್ಥೆಯನ್ನು ರಚಿಸಲಾಯಿತು. ಒಂದು ಸ್ಟೀಮರ್ ಅನ್ನು ನಿರ್ಮಿಸಲು ಒಂದು ಲಕ್ಷ ಅರವತ್ತೈದು ಸಾವಿರ ರೂಪಾಯಿಗಳ ಹಣ ಸಂಗ್ರಹಿಸಲಾಯಿತು. ಅನೇಕ ಜನಗಳು ಈ ಕಾರ್ಯಕ್ಕೆ ತಮ್ಮ ಸಹಾಯಧನ ಸಲ್ಲಿಸಿದರು. ಸಾವಿರ ರೂಪಾಯಿಗಳಿಗೂ ಮೇಲ್ಪಟ್ಟು ಸಹಾಯ ಧನ ಕೊಟ್ಟವರಿಗೆ ಉಚಿತ ಪ್ರಯಾಣದ ಅವಕಾಶ ಕಲ್ಪಿಸಲಾಯಿತು. ನಾನಾ ಅಂತಹವರಲ್ಲೊಬ್ಬರಾಗಿದ್ದರು. 14-5-1833ರಲ್ಲಿ 'ಫೋರ್ಬ್' ಎಂಬ ಪ್ರಥಮ ಸ್ಟೀಮರ್ ಕಾರ್ಯಸನ್ನದ್ಧವಾಯಿತು. ಪುನಃ 1836ರಲ್ಲಿ 'ಕ ಚಿಟಜ ಔ' ಎಂಬ ಕಂಪನಿಯೊಂದಿಗೆ ಒಪ್ಪಂದ ಮಾಡಿಕೊಂಡು ಹೆಚ್ಚಿನ ಸಂಖ್ಯೆಯ ಸ್ಟೀಮರುಗಳು 1855ರಲ್ಲಿ ಪ್ರಯಾಣ ಪ್ರಾರಂಭಿಸಿದವು. ಇವುಗಳ ಮೂಲಕ ಹೊರಗಿನ ದೇಶಗಳೊಂದಿಗೆ ವ್ಯಾಪಕ ವಹಿವಾಟುಗಳನ್ನು ನಡೆಸುವ ಅನುಕೂಲತೆ ಭಾರತೀಯ ಉದ್ಯಮಿಗಳಿಗೆ ಪ್ರಾಪ್ತವಾಯಿತು. ನಾನಾ ಅವರಿಗೆ ಮೊದಲಿನಿಂದಲೂ ವಿದೇಶಗಳೊಂದಿಗಿನ ನೌಕಾಯಾನದಲ್ಲಿ ಆಸಕ್ತಿಯಿತ್ತು. ಈ ಕಂಪನಿಯು ಅನೇಕ ಸಂಕಷ್ಟಗಳನ್ನು ಎದುರಿಸಬೇಕಾಗಿ ಬಂದರೂ ಧೈರ್ಯವಾಗಿ ಕಾರಪ್ರವೃತ್ತವಾಯಿತು. ಜೊತೆಗೆ ಭಾರತೀಯ ಸರಕುಗಳನ್ನು ಯುರೋಪಿನ ಬಂದರುಗಳಲ್ಲಿ ಇಳಿಸುವಾಗಾಗಲಿ ಅಥವಾ ಅಲ್ಲಿ ಭಾರತೀಯ ಹಡಗುಗಳಿಗೆ ಸರಕು ತುಂಬುವುದಕ್ಕಾಗಲಿ ಹೆಚ್ಚಿನ ಸುಂಕ ಕೊಡಬೇಕಾಗುತ್ತಿತ್ತು. ಭಾರತೀಯರ ಈ ಸಮಸ್ಯೆಯನ್ನು ನಿವಾರಿಸಲು ನಾನಾ ಮತ್ತು ಅವರ ಮಿತ್ರರು ದೀರ್ಘ ಹೋರಾಟ ನಡೆಸಿ ಸಂಸತ್ತಿನಿಂದ ಈ ಸುಂಕಗಳ ಮೇಲೆ ರಿಯಾಯಿತಿ ಪಡೆಯುವಲ್ಲಿ ಸಫಲರಾದರು. ಇದರಿಂ ಭಾರತೀಯ ಉದ್ಯಮಿಗಳ ಒಂದು ಕೊರತೆ ಸಮರ್ಪಕವಾ ನಿವಾರಣೆಯಾಯಿತು.

ಭಾರತದ ಅಂತರ್‌ರಾಜ್ಯ ನೌಕಾಯಾನವು ಅಂದಿ ಅಗತ್ಯಗಳಲ್ಲೊಂದಾಗಿತ್ತು. ಗುಜರಾತ್, ಸಿಂಧ್ ಮತ್ತ ಇತರ ಪ್ರಾಂತ್ಯಗಳೊಂದಿಗಿನ ವ್ಯಾಪಾರೋದ್ಯಮವನ್ನ ಅಭಿವೃದ್ಧಿಪಡಿಸಲು ನಾನಾ ಮತ್ತು ಅವರ ಇತರ ಮಿತ್ರರು ಒಂದ ನೌಕಾ ಸಂಸ್ಥೆಯನ್ನು ಪ್ರಾರಂಭಿಸುವ ಅಗತ್ಯವನ್ನು ಕಂಡು-ಕೊಂಡರು. ಈ ಎಲ್ಲ ನಾಯಕರು ಸಭೆಸೇರಿ ಅಗತ್ಯವಾಗಿ ಹಣ ಸಂಗ್ರಹಿಸಿ 'ಬಾಂಬೆ ಸ್ಟೀಮ್ ನ್ಯಾವಿಗೇಶನ್ ಕಂಪನಿ' ಎಂ ಸಂಸ್ಥೆಯ ಪ್ರಾರಂಭಕ್ಕೆ ಅನುಮತಿ ಕೋರಿ 2-10-1845ರಂದ ಸರ್ಕಾರಕ್ಕೆ ಮನವಿ ಸಲ್ಲಿಸಿದರು. 500 ರೂಪಾಯಿಗ ಶೇರಿನ, 10 ಲಕ್ಷ ರೂಪಾಯಿನ ಮೂಲ ಬಂಡವಾಳವನ್ನು ಈ ಕಂಪನಿ ಹೊಂದಿತ್ತು. ಕಲೆಕ್ಟರ್ ಜಾರ್ಜ್ ಗ್ರ್ಯಾಂಟ್, ಜಗನ್ನಾ ಶಂಕರಶೇಟ್, ದಾದಾಭಾಯಿ ರುಸ್ತುಂಜೀ, ಜೀಜೀಭಾಯ ದಾದಾಭಾಯ್, ಟಿ.ಆರ್. ಮರ್ಚಂಟ್ ಇವರುಗಳು ಆಡಳಿ ಮಂಡಳಿಯ ನಿರ್ದೇಶಕರಾಗಿದ್ದರು. ಸರ್ಕಾರದ ಅನುಮತಿ ದೊರಕಿದ ನಂತರ ಕಾರವಾರದಿಂದ ಮುಂಬಯಿಯನ್ನು ಸೇರಿದಂತೆ ಕರಾಚಿವರೆಗೆ ಈ ಕಂಪನಿಯ ನೌಕಾಯಾನದ ಸೇವೆ ಪ್ರಾರಂಭವಾಯಿತು. ಈ ಸೇವೆಯಲ್ಲಿ ಅಂಚ ಸಾಮಗ್ರಿಗಳನ್ನು ಕಳಿಸುವ ವ್ಯವಸ್ಥೆಯೂ ಇತ್ತು. ನಾನಾ ಅವರು ನಿರ್ದೇಶಕರಾಗಿದ್ದರಷ್ಟೇ ಅಲ್ಲ ಆ ಕಂಪನಿಯ ಟ್ರಸ್ಟಿಯಾಗಿಯೂ ನೇಮಕವಾಗಿದ್ದರು.

ಈ ಕಂಪನಿಯ ಅಧೀನದಲ್ಲಿ 'ಬಾಂಬೆ', 'ದ್ವಾ-ರಕಾ', 'ವಿಕ್ಟೋರಿಯಾ', 'ಜಾರ್ಜ್‌ರಸೆಲ್ ಕ್ಲರ್ಕ್' ಮತ್ತು 'ಸೂರತ್' ಎಂಬ ಹೆಸರಿನ ಐದು ಸ್ಟೀಮರ್‌ಗಳಿದ್ದವು. ಇವುಗಳ ನೌಕಾಯಾನದ ಮೂಲಕ ಸರಕು ಸಾಗಾಣಿಕ ವ್ಯವಸ್ಥೆ ಮಾಡಿ ಸ್ಥಳೀಯ ಉದ್ಯಮಿಗಳಿಗೆ ಅನುಕೂಲ ಮಾಡಿಕೊಡಲಾಯಿತು.

ಹೀಗೆ ದೇಶೀಯ - ಅಂತಾರಾಷ್ಟ್ರೀಯ ನೌಕಾಯಾನದ ಯೋಜನೆಯಲ್ಲಿಯೂ ನಾನಾ ಮತ್ತು ಅವರ ಮಿತ್ರರು ಪ್ರಾರಂಭಿಕ ಪ್ರಯತ್ನಗಳನ್ನು ಮಾಡಿದರು ಎಂಬುದು ಮಹತ್ವದ ಸಂಗತಿಯಾಗಿದೆ.

## ಉದ್ಯಮ ರಂಗ

ನಾನಾ ಮೂಲತಃ ಒಬ್ಬ ವ್ಯಾಪಾರೋದ್ಯಮಿಯಾಗಿದ್ದರೂ ಇತರ ಉದ್ಯಮಗಳಲ್ಲಿನ ಅವರ ಆಸಕ್ತಿಯೂ ಕಡಿಮೆಯಾಗಿರಲಿಲ್ಲ. ಅದರಲ್ಲಿ ವಿಶೇಷವಾದ್ದೆಂದರೆ 'ಬ್ಯಾಂಕಿಂಗ್' ಉದ್ಯಮ ಅಂದಿನ ಕಾಲದಲ್ಲಿ ಇನ್ನೂ ಬ್ಯಾಂಕುಗಳ ಆವಿಷ್ಕಾರ ಆಗಿರಲಿಲ್ಲ. ಆದರೂ ಲೇವಾದೇವಿ ವ್ಯವಹಾರದ ಪದ್ಧತಿ ಇದ್ದು ಅದು ಕೆಲವು ವೈಯಕ್ತಿಕ ಮನೆತನಗಳಿಗೆ ಸೀಮಿತವಾಗಿತ್ತು. ಹೀಗೆ ಪ್ರಸಿದ್ಧವಾದ 'ಬ್ಯಾಂಕರ್' ಮನೆತನಗಳಲ್ಲಿ ನಾನಾ ಅವರ ಕುಟುಂಬವೂ ಒಂದು. ಕ್ರಮೇಣ ಕೆಲವು ಯುರೋಪಿಯನ್ ಕಂಪನಿಗಳು 'ಬ್ಯಾಂಕ್' ರೀತಿಯ ಕಾರ್ಯನಿರ್ವಹಿಸುತ್ತಿದ್ದರೂ ನಿಯಮಿತ ಬ್ಯಾಂಕುಗಳು ಇನ್ನೂ ಸ್ಥಾಪಿತವಾಗಿರಲಿಲ್ಲ.

ನೌಕೋದ್ಯಮದಲ್ಲಿ ಪ್ರಾಮುಖ್ಯ ಪಡೆದಿದ್ದ ವಾಡಿಯಾ ಕುಟುಂಬವು ಅಂದಿನ ಉದ್ಯಮ ಪತಿಗಳಿಗೆ ಬ್ಯಾಂಕ್‌ನ ಸೌಲಭ್ಯ ಅಗತ್ಯವಿರುವುದನ್ನು ಮನಗಂಡು ಸರ್. ಮಲ್ಕಾನ್ ಎಂಬ ಯುರೋಪಿಯನ್ನನ ಸರಕಾರದಿಂದ 1840ರಲ್ಲಿ ಬ್ಯಾಂಕ್ ಆಫ್

...ಚೆ' ಎಂಬ ಬ್ಯಾಂಕನ್ನು ಪ್ರಾರಂಭ ಮಾಡಿದ್ದು ಬ್ಯಾಂಕ್ ...ಮಕ್ಕೆ ಚಾಲನೆ ನೀಡಿತ್ತು. ತದ ನಂತರದಲ್ಲಿ ಭಾರತ ...ಯುರೋಪ್‌ಗಳ ನಡುವಿನ ವ್ಯಾಪಾರೀ ಸಂಬಂಧವನ್ನು ...ವೃದ್ಧಿ ಪಡಿಸುವ 'ಬ್ಯಾಂಕ್ ಆಫ್ ವೆಸ್ಟರ್ನ್ ಇಂಡಿಯಾ' ...ಇನ್ನೊಂದು ಬ್ಯಾಂಕ್ ಅಸ್ತಿತ್ವಕ್ಕೆ ಬಂದಿತು. ಮೊದಲು ...ಬ್ಯಾಂಕ್‌ನೊಂದಿಗೆ ವ್ಯಾಪಾರಿ ಸಂಪರ್ಕ ಹೊಂದಿದ್ದ ...ನಾ ಮುಂದೆ ಈ ಬ್ಯಾಂಕ್‌ನ ನಿರ್ದೇಶಕರಾಗಿ ಬ್ಯಾಂಕಿಂ- ...ಕ್ಷೇತ್ರಕ್ಕೆ ಕಾಲಿಟ್ಟರು. ಯುರೋಪಿಯನ್ ನಿರ್ದೇಶಕರುಗಳೇ ...ಬಿದ್ದ ಈ ಬ್ಯಾಂಕಿನ ಭಾರತೀಯ ನಿರ್ದೇಶಕರೆಂದರೆ ನಾನಾ ...ಟ್ಟು ಜೀಜೀಭಾಯ್ ದಾದಾಭಾಯ್ ಮಾತ್ರ. ಮುಂದೆ ...ರಂಭವಾದ ಬ್ಯಾಂಕ್‌ಗಳೆಲ್ಲೆಲ್ಲ ನಾನಾ ಅವರ ಪಾತ್ರ ಇದ್ದೆ ...ತ್ತಿತ್ತು. 1852ರಲ್ಲಿ ಪ್ರಾರಂಭವಾದ 'ಕಮರ್ಷಿಯಲ್ ...ಂಕ್ ಆಫ್ ಇಂಡಿಯಾ'ದ ನಿರ್ದೇಶಕ ಮಂಡಳಿಯಲ್ಲಿ ...ನಾ ಮತ್ತು ಅವರ ಮಗ ವಿನಾಯಕರಾವ್ ಇಬ್ಬರೂ ಇದ್ದರು. ...ರಂತೆ 1854ರಲ್ಲಿ ಪ್ರಾರಂಭವಾದ ಇನ್ನೊಂದು ಪ್ರಮುಖ ...ಂಕ್ 'ಮರ್ಕೆಂಟೈಲ್ ಬ್ಯಾಂಕ್ ಆಫ್ ಇಂಡಿಯಾ'ದ ...ಪಕ ಭಾರತೀಯ ಸದಸ್ಯರೆಂದರೆ ನಾನಾ ಮಾತ್ರವಾಗಿದ್ದರು. ...60ರಲ್ಲಿ ಪ್ರಾರಂಭವಾದ 'ಸೆಂಟ್ರಲ್ ಬ್ಯಾಂಕ್ ಆಫ್ ...ಡಿಯಾ'ದ ಸ್ಥಾಪನೆಗಾಗಿ ನಾನಾ ಬಹಳ ದುಡಿದರು. ...ತ್ತು ತಮ್ಮ ಮಗ ವಿನಾಯಕರಾವ್ ನಿರ್ದೇಶಕರಾಗಿ ಸೇವೆ ...ಡಲು ಅವಕಾಶ ಮಾಡಿಕೊಟ್ಟರು. ಹೀಗೆ ಮುಂಬಯಿನಲ್ಲಿ ...ರಂಭವಾದ ಪ್ರಮುಖ ಬ್ಯಾಂಕುಗಳ ನಿರ್ದೇಶಕ ಮಂಡಳಿಯಲ್ಲಿ ...ುರೋಪಿಯನ್ ನಿರ್ದೇಶಕರುಗಳೇ ಅಧಿಪತ್ಯ ನಡೆಸುವ ...ತಿ ಇದ್ದಾಗ ಭಾರತೀಯರ ಪ್ರತಿನಿಧಿಯಾಗಿ ಆ ಬ್ಯಾಂಕುಗಳಲ್ಲಿ ...ತೀಯರ ಹಿತಾಸಕ್ತಿಗಳನ್ನು ಕಾಪಾಡುವ ಕೆಲವೇ ಪ್ರಮುಖರಲ್ಲಿ ...ನಾ ಒಬ್ಬರಾಗಿದ್ದರು ಎಂಬುದು ಈ ಕ್ಷೇತ್ರದಲ್ಲೂ ಅವರು ...ೊರಕಿಸಿಕೊಂಡ ಪ್ರತಿಷ್ಠತೆಯನ್ನು ಸೂಚಿಸುತ್ತದೆ.

ಇಂದು ಮುಂಬೈ ನಗರ ಜವಳಿ ಉದ್ಯಮದಲ್ಲಿ ಭಾರತದ ...ಾಂಚೆಸ್ಟರ್' ಎಂಬ ಖ್ಯಾತಿಯನ್ನು ಪಡೆಯುವಷ್ಟು ಮಟ್ಟಿಗೆ ...ಭಿವೃದ್ಧಿ ಹೊಂದಿದೆ. ನಾನಾ ಅವರ ಕಾಲದಲ್ಲಿ ಅದು ಇನ್ನೂ ...ೈಶವಾವಸ್ಥೆಯಲ್ಲಿತ್ತು. ಈ ಉದ್ಯಮದಲ್ಲೂ ನಾನಾ ಅವರ ...ಾತ್ರ ಕಂಡು ಬರುತ್ತದೆ. ಮುಂಬೈನ ಪ್ರಮುಖ ವ್ಯಾಪಾರಸ್ಥ ...ಟುಂಬವಾದ್ದರಿಂದ ಮತ್ತು ಬ್ಯಾಂಕಿನ ಉದ್ಯಮದಲ್ಲಿ ಹೆಚ್ಚಿನ ...ತಿಷ್ಠೆ ಸಂಪಾದಿಸಿದ್ದರಿಂದ ಅಂದು ಪ್ರಾರಂಭವಾದ ಜವಳಿ ...ಾರ್ಖಾನೆಗಳ ಜೊತೆಗೆ ಅವರ ಸಂಬಂಧ ಇದ್ದೇ ಇತ್ತು. ...ಲ್ಲದೆ, 'ಗ್ರೇಟ್ ಈಸ್ಟರ್ನ್ ಸ್ಪಿನ್ನಿಂಗ್ ಅಂಡ್ ವೀವಿಂಗ್ ...ಮಿಲ್ಸ್'ನ ನಿರ್ದೇಶಕ ಮಂಡಳಿಯಲ್ಲಿ ನಾನಾ ಮತ್ತು ಅವರ ಪುತ್ರ ವಿನಾಯಕರಾವ್ ಇದ್ದುಕೊಂಡು ಈ ಕ್ಷೇತ್ರದಲ್ಲೂ ತಮ್ಮ ಅನುಭವಯುತ ಮಾರ್ಗದರ್ಶನವನ್ನು ನೀಡಿದರು.

ಇಂತಹ ಉದ್ಯಮದ ಜೊತೆಗೆ ಸಾರ್ವಜನಿಕರಿಗೆ ಸಹಕಾರಿಯಾಗುವಂತಹ ಉದ್ಯಮದಲ್ಲಿಯೂ ನಾನಾ ದುಡಿದರು. ಸುಭಿಕ್ಷದ ಅಂದಿನ ದಿನಗಳಲ್ಲೂ ಕಾಳಸಂತೆಯ ಮಾರಿ ನಾಗರಿಕರನ್ನು ಕಾಡದೆ ಬಿಟ್ಟಿದ್ದಿಲ್ಲ. ಇಂದಿನಂತೆ ಅಂದೂ ಉಪಯುಕ್ತ ಆಹಾರ ಸಾಮಾಗ್ರಿಗಳ ಅಕ್ರಮ ದಾಸ್ತಾನು, ಅವುಗಳ ಕಾಳಸಂತೆಯ ವ್ಯಾಪಾರ ಅವ್ಯಾಹತವಾಗಿ ಸಾಗಿ ಅನೇಕಬಾರಿ ಸಾಮಾನ್ಯ ನಾಗರಿಕರು ಬೆಲೆ ಏರಿಕೆಯ ಹೊಡೆತದಿಂದ ತತ್ತರಿಸಬೇಕಾಗುತ್ತಿತ್ತು. ಸಾರ್ವಜನಿಕರ ಬವಣೆಯನ್ನು ಕಂಡ ನಾನಾ ಮತ್ತು ಅವರ ಮಿತ್ರರು ಕೂಲಂಕಷವಾಗಿ ಚರ್ಚಿಸಿ ಅಕ್ರಮ ದಾಸ್ತಾನು ತಡೆಗಟ್ಟಿ ಸಾರ್ವಜನಿಕರಿಗೆ ಸೂಕ್ತ ಬೆಲೆಯಲ್ಲಿ ಆಹಾರ ಸಾಮಾಗ್ರಿಗಳನ್ನು ಒದಗಿಸುವ ಸದುದ್ದೇಶದಿಂದ 'ಜಾಯಿಂಟ್ ಸ್ಟಾಕ್ ಗ್ರೇನ್ ಕಂಪನಿ' ಎಂಬ ಸಂಸ್ಥೆಯೊಂದನ್ನು 5 ಲಕ್ಷ ರೂಗಳ ಮೂಲ ಬಂಡವಾಳದೊಂದಿಗೆ ಪ್ರಾರಂಭಿಸಿದರು. ಈ ಕಂಪನಿಯ ಷೇರುಗಳು ಕೇವಲ 25ರೂಗಳದ್ದಾಗಿದ್ದು ಸಾಮಾನ್ಯರೂ ಇದನ್ನು ಪಡೆಯಬಹುದಾಗಿತ್ತು. ಇದರ ಸ್ಥಾಪಕ ಸದಸ್ಯರಲ್ಲಿ ಪ್ರಮುಖರೆಂದರೆ, ನಾನಾ, ಜಿ.ಎಸ್. ಚಾಪ್ಲಿನ್, ಕರ್‌ಶೇಟ್‌ಜೀ ಕಾವ್ಸಜೀ, ಕ್ಯಾಪ್ಟನ್ ಬಾರ್, ಡಾ. ಬೂಸ್ಟ್, ಜೆ. ಮುಲ್ಲಾಜಿ ಮತ್ತು ರಾಘೋಬಾ ಜನಾರ್ದನ್.

## ನೀರಾಮ ಯೋಜನೆಗಳು :

ನಾನಾ ಅವರು ಪ್ರಯತ್ನಿಸಿ ವಿಫಲರಾದ ಒಂದು ಕ್ಷೇತ್ರವೂ ಉಂಟು. ಅದೇ ರೈತರಿಗೆ ನೀರಾವರಿಯ ಸೌಲಭ್ಯವನ್ನು ಒದಗಿಸಲು ಮಾಡಿದ ವಿಫಲ ಪ್ರಯತ್ನ. ಮಳೆಯನ್ನು ಆಧರಿಸಿದ ಭಾರತದ ಕೃಷಿ ಕ್ಷೇತ್ರಕ್ಕೆ ನೀರಾವರಿ ಸೌಲಭ್ಯದ ಅಗತ್ಯವನ್ನು ಅವರು ಬಹಳ ಹಿಂದೆಯೇ ಮನಗಂಡು ಅದಕ್ಕಾಗಿ ಪ್ರಾಮಾಣಿಕ ಪ್ರಯತ್ನ ಮಾಡಿದರು. ಈ ಕ್ಷೇತ್ರದಲ್ಲಿ ಪರಿಣತಿ ಹೊಂದಿದ್ದ ಮೇಧಾವಿ ಡಾಕ್ಟರ್ ಬೂಸ್ಟ್ ಅವರು ಭಾರತದಲ್ಲಿ ಈ ದಿಕ್ಕಿನಲ್ಲಿ ಪ್ರಯತ್ನಿಸಲು ಆಲೋಚಿಸಿದರು. ಏಕಾಂಗಿಯಾಗಿ ಸಾಧಿಸಲಸಾಧ್ಯವಾದ ಈ ಕಾರ್ಯದಲ್ಲಿ ಆತ ನಾನಾ ಅವರ ಸಹಕಾರ ಕೋರಿದ. ಯಾವುದೇ ಕೆಲಸ ಪ್ರಾರಂಭಿಸಿದರೂ ಅದನ್ನ ಯಶಸ್ಸಿನ ಮಜಲಿಗೆ ಮುಟ್ಟಿಸಬಲ್ಲ ಕಾರ್ಯಕುಶಲಿಯಾಗಿದ್ದ ನಾನಾ. ಅವರೂ ಸಾರ್ವಜನಿಕ ಹಿತಾಸಕ್ತಿಯ ಈ ಕಾವ್ಯಕ್ಕೆ ಕೂಡಲೇ ಸ್ಪಂದಿಸಿದರು.

## ಧರ್ಮ ಶ್ರದ್ಧೆ ಮತ್ತು ಮತೀಯ ಸೌಹಾರ್ದ

ಪರಂಪರಾಗತವಾಗಿ ಧಾರ್ಮಿಕ ಶ್ರದ್ಧೆಯುಳ್ಳ ಹಿಂದೂ ಕುಟುಂಬದಿಂದ ಬಂದ ನಾನಾ ಅವರು ಅತ್ಯಂತ ಧಾರ್ಮಿಕ ಸ್ವಭಾವವುಳ್ಳವರಾಗಿದ್ದರು. ಸಂಪ್ರದಾಯನಿಷ್ಠರಾದ ಅವರ ದೈನಂದಿನ ಚಟುವಟಿಕೆಗಳು ಪೂಜಾ ಪ್ರಾರ್ಥನೆಗಳಿಂದಲೇ ಪ್ರಾರಂಭವಾಗುತ್ತಿದ್ದವು. ಬೆಳಗಿನ ಸಮಯದಲ್ಲಿ ತಮ್ಮ ಪೂಜಾಪಾಠಗಳ ನಂತರ ಧಾರ್ಮಿಕ ಕಾರ್ಯಗಳಿಗೆ ಸಂಬಂಧಿಸಿದಂತೆ ಯಾಚಕರಾಗಿ ಬಂದಿದ್ದ ಪಂಡಿತ, ಪುರೋಹಿತರ ಸಮಸ್ಯೆಗಳನ್ನು ಪರಿಹರಿಸುವುದು ಅವರ ಬೆಳಗಿನ ದಿನಚರಿಯ ಒಂದು ಅಂಗವಾಗಿತ್ತು ಈ ಸಂದರ್ಭದ ಒಂದು ಘಟನೆ ಬಹಳ ಮೋಜಿನದ್ದಾಗಿಯೂ ಮತ್ತು ನಾನಾ ಅವರ ತೀಕ್ಷ್ಣಮತಿಯ ಕುರುಹಾಗಿಯೂ ಉಲ್ಲೇಖಾರ್ಹವಾಗಿದೆ. 1857ರ ಸಿಪಾಯಿ ದಂಗೆಯ ನಂತರ ಅದರಲ್ಲಿ ಸಕ್ರಿಯವಾಗಿ ಪಾತ್ರವಹಿಸಿದವರ ಬಗ್ಗೆ ವಿಚಾರಣೆ ನಡೆಸಲು ಪೊಲೀಸ್ ಖಾತೆಯ ಮುಖ್ಯಸ್ಥನಾಗಿ ಫೋರ್‌ಜೆಟ್ ಎಂಬ ಒಬ್ಬ ದಕ್ಷ ಅಧಿಕಾರಿಯನ್ನು ನೇಮಿಸಲಾಗಿತ್ತು. ಛದ್ಮವೇಷಧಾರಿಯಾಗಿ ಬೇಹುಗಾರಿಕೆ ನಡೆಸುವುದರಲ್ಲಿ ಆತನ ಪ್ರಸಿದ್ಧಿ ಎಷ್ಟಿತ್ತೆಂದರೆ ಆತನೊಮ್ಮೆ ಕಸಗುಡಿಸುವ ಆಳಿನ ವೇಷದಲ್ಲಿ ಹೋಗಿ ಗವರ್ನರರಿಗೆ ನಮಸ್ಕರಿಸಿದಾಗ ಆತನನ್ನು ಗುರುತಿಸದೆ ಗವರ್ನರ್ ಮತ್ತು ಅವರ ಸಿಬ್ಬಂದಿ ವರ್ಗದ ಪೋಲೀಸರು ಬೇಸ್ತು ಬಿದ್ದಿದ್ದರು. ಸಿಪಾಯಿ ದಂಗೆಯ ಪ್ರಕರಣದ ನಾನಾರ ಮೇಲಿನ ಆಪಾದನೆಯ ತನಿಖೆಗೆ ಫೋರ್‌ಜೆಟ್ ಒಂದು ದಿನ

ಪುರೋಹಿತನೊಬ್ಬನ ವೇಷದಲ್ಲಿ ನಾನಾರ ಮನೆಗೆ ಬಂದು ಅಲ್ಲಿದ್ದ ಅಂತರ ಸಮೂಹದೊಂದಿಗೆ ಬೆರೆತಿದ್ದ. ಆ ಜನ ಸಮೂಹವನ್ನು ನೋಡಲು ಬಂದ ನಾನಾ ಫೋರ್‌ಜೆಟ್‌ರನ್ನು ತಕ್ಷಣ ಗುರುತಿಸಿ "ಓಹೋಹೊ, ಫೋರ್‌ಜೆಟ್ ಪುರೋಹಿತ ಮಹಾಶಯರು ಬರಬೇಕು ಬರಬೇಕು. ಪೂನಾದಿಂದ ತಮ್ಮ ಬರೋಣ ಯಾವಾಗಾಯಿತು?" ಎಂದು ಫೋರ್‌ಜೆಟ್‌ರನ್ನು ತಮಾಷೆ ಮಾಡಿದರು. ನಾನಾರ ಪ್ರತಿಭೆಯನ್ನು ಕಂಡು ಫೋರ್‌ಜೆಟ್ ಮೂಕವಿಸ್ಮಿತರಾದರು.

ದಾನ ದಕ್ಷಿಣೆ ಕೊಡುವುದರಲ್ಲಿ, ಮಂದಿರ ನಿರ್ಮಾಣ, ಜೀರ್ಣೋದ್ಧಾರದ ಕಾರ್ಯಗಳಿಗೆ ಸಂಬಂಧಿಸಿದ ದೇಣಿಗೆ-ಯ ವಿಷಯದಲ್ಲಿ ನಾನಾ ಮುಕ್ತಹಸ್ತರಾಗಿದ್ದರು. ತಮ್ಮ ಪರಿವಾರದೊಂದಿಗೆ ನಿಯಮಿತವಾಗಿ ತೀರ್ಥಕ್ಷೇತ್ರಗಳನ್ನು ದರ್ಶಿಸುವುದು ಅವರ ನೆಚ್ಚಿನ ಹವ್ಯಾಸವಾಗಿತ್ತು. ತಾರಾದೇವ್‌ನಲ್ಲಿ ತಮ್ಮ ತಂದೆ ಕಟ್ಟಿಸಿದ್ದ 'ಭವಾನಿ ಶಂಕರ್' ದೇವಸ್ಥಾನವನ್ನು ದುರಸ್ತಿ ಮಾಡಿಸಿ ಅದರ ಸೌಂದರ್ಯವರ್ಧನೆಗೆ ಹೇರಳ ಹಣ ಖರ್ಚುಮಾಡಿದರಷ್ಟೇ ಅಲ್ಲ ಅದರ ಆಡಳಿತ ಸುಸೂತ್ರವಾಗಿ ಮತ್ತು ನಿರಂತರವಾಗಿ ನಡೆಯಲು ಸಾಕಾಗುವ ಧನಸಹಾಯ ಮಾಡಿದರು. ಇದರಿಂದಾಗಿ ಆ ದೇವಸ್ಥಾನವು ಇಂದಿಗೂ ಆ ಪ್ರದೇಶದ ಭಕ್ತರ ಆಕರ್ಷಣಾ ಕೇಂದ್ರವಾಗಿ ಉಳಿದು ನಾನಾ ಅವರ ಧಾರ್ಮಿಕ ಶ್ರದ್ಧೆಯ ಪ್ರತೀಕವಾಗಿ ಮೆರೆಯುತ್ತಿದೆ. ಇದೇ ರೀತಿ ತಮ್ಮ ಅಜ್ಜ ಬಾಬಲ್‌ಶೇಟರು ಘೋಡ್ ಬಂದರ್‌ನಲ್ಲಿ ಕಟ್ಟಿಸಿದ 'ಅಮೃತೇಶ್ ಮಂದಿರ'ದ ಸೌಂದರ್ಯ ವರ್ಧನೆಯನ್ನೂ ಮಾಡಿಸಿದರು.

ನಾನಾ ಅವರು ತಮ್ಮ ವೇಷಭೂಷಣಗಳಿಂದ ಮೊದಲುಗೊಂಡು ಮಾನಸಿಕ ನೆಲೆಯಲ್ಲೂ ಒಬ್ಬ ಕಟ್ಟಾ ಹಿಂದೂ ಆಗಿದ್ದರು. ಸ್ವತಃ ಸಂಸ್ಕೃತ ಪಂಡಿತರಾಗಿದ್ದ ಅವರ ಶಾಸ್ತ್ರಜ್ಞಾನ ಉಚ್ಚಮಟ್ಟದ್ದಾಗಿದ್ದರಿಂದ ಸಹಜವಾಗಿಯೇ ಅವರು ತಮ್ಮ ಧರ್ಮಾಭಿಮಾನಿಗಳಾಗಿದ್ದರು.

## ಪಂಢಾರಾಪುರದ ಸಮಸ್ಯೆ

ವಿಠಲನ ಆವಾಸಸ್ಥಾನವಾದ ಪಂಢರಾಪುರ ಭಾರತೀಯರ ಪವಿತ್ರ ಕ್ಷೇತ್ರಗಳಲ್ಲೊಂದು. ತಮ್ಮ ಆರಾಧ್ಯದೈವವಾದ ವಿಠಲನ ದರ್ಶನಕ್ಕೆ ಹಬ್ಬ ಹರಿದಿನಗಳಲ್ಲಿ ಅಸಂಖ್ಯಾತ ಜನ ಸೇರುತ್ತಿದ್ದರು. ಇಂತಹ ಒಂದು ಸಂದರ್ಭದಲ್ಲಿ ಪಂಢರಾಪುರದಲ್ಲಿ ಗಲಭೆಯುಂಟಾಗಿ ಪರಿಸ್ಥಿತಿಯನ್ನು ನಿಯಂತ್ರಣದಲ್ಲಿಡಲು ಸರ್ಕಾರವು ದೇವರ ದರ್ಶನವನ್ನೇ ನಿಷೇಧಿಸಿತು. ಈ ಧಾರ್ಮಿಕ ನಿಷೇಧದಿಂದಾಗಿ ತಮ್ಮ ಇಷ್ಟದೈವದ ಸಂದರ್ಶನಾ ಲಾಭವಿಲ್ಲದಂತಾದ ಹಿಂದೂಗಳಿಗೆ ತೀವ್ರ ಮಾನಸಿಕ ಆಘಾತವಾಯಿತು ಅಲ್ಲಿನ ಈ ನಿಷೇಧದ ರದ್ದಿಗೆ ಸ್ಥಳೀಯ ಜನರು ಮಾಡಿದ ಪ್ರಯತ್ನಗಳು ಫಲಕಾರಿಯಾಗಲಿಲ್ಲ. ಆಗ ಪಂಢರಾಪುರದ ಕೆಲವು ದೈವ ಭಕ್ತರು ನಾನಾ ಅವರಬಳಿಗೆ ಹೋಗಿ ದೇವದರ್ಶನ ನಿಷೇಧದಿಂದ ಉಂಟಾಗಿರುವ ಮನೋವೇದನೆಯನ್ನು ಅವರಿಗೆ ತಮ್ಮ ಹಕ್ಕಾದ ವಿಠಲದ ದರ್ಶನಕ್ಕೆ ಅನುವು ಮಾಡಿ ಕೊಟ್ಟು ತಮಗಾದ ಅನ್ಯಾಯ ಸರಿಪಡಿಸಬೇಕೆಂದು ಕೋರಿದರು. ಈ ದೈವಭಕ್ತರ ನ್ಯಾಯಯುತ ಬೇಡಿಕೆಯಿಂದ ಮನಕರಗಿ ನಾನಾ ಕಡಲೇ ಗವರ್ನರ್ ಅವರನ್ನು ಸಂಪರ್ಕಿಸಿ ಆಡಳಿತಗಾರರ ಸ್ವೇಚ್ಛಾಚಾರಗಳಲ್ಲಿ ಅಸಹಾಯಕರಾದ ಹಿಂದೂಗಳ ಪರಿಸ್ಥಿತಿಯನ್ನು ಅವರಿಗೆ ತಿಳಿಸಿದರು. ಆದ ಅನ್ಯಾಯವನ್ನು ಮನಗಂಡ ಗವರ್ನರ್ ಕೂಡಲೇ ನಿಷೇಧವನ್ನು ಹಿಂತೆಗೆದುಕೊಳ್ಳುವ ಆಜ್ಞೆ ಮಾಡಿದರು, ಕಣ್ಮಣಿ ವಿಠಲ ಮತ್ತೆ ಭಕ್ತರ ದರ್ಶನಕ್ಕೆ ಲಭ್ಯನಾದ.

## ದ್ವಾರಕಾ ದೇವಸ್ಥಾನ

ಗುಜರಾತಿನ ವಾಘರಿ ಜನಾಂಗವು ಬಹಳ ಹಿಂದುಳಿದ ಜನಾಂಗವಾಗಿದ್ದು, ದಿನಗಳಲ್ಲಿ ಲೂಟಿ, ದರೋಡೆಗಳನ್ನು ತಮ್ಮ ದಂಧೆಯನ್ನಾಗಿ ಮಾಡಿಕೊಂಡಿದ್ದ ಜನಾಂಗವಾಗಿತ್ತು ಒಮ್ಮೆ ದ್ವಾರಕಾನಗರಿಗೆ ನುಗ್ಗಿದ ಈ ಜನ ಲೂಟಿ, ಹಲ್ಲೆಗಳನ್ನು ಪ್ರಾರಂಭಿಸಿದರು. ಪರಿಸ್ಥಿತಿಯನ್ನು ನಿಯಂತ್ರಣದಲ್ಲಿಡಲು ಕೂಡಲೇ ಸಶಸ್ತ್ರ ಪೊಲೀಸರು ಕಾರ್ಯ ಪ್ರವೃತ್ತರಾದರು ಈ ಪೋಲೀಸ್ ಪಡೆಯನ್ನು ಎದುರಿಸಲಾರದ ದುಷ್ಕರ್ಮಿಗಳು ದ್ವಾರಕಾನಾಥ ದೇವಾಲಯನ್ನು ತಮ್ಮ ಅಡಗುದಾಣವನ್ನಾಗಿ ಮಾಡಿಕೊಂಡರು. ಅವರನ್ನು ಸೆರೆಹಿಡಿದ ಪೋಲೀಸ್ ಅನಿವಾರ್ಯವಾಗಿ ದೇವಸ್ಥಾನವನ್ನು ಪ್ರವೇಶಿಸಬೇಕಾಯಿತು ದುಷ್ಕರ್ಮಿಗಳನ್ನು ಸೆರೆಹಿಡಿದ ಈ ಪೋಲೀಸ್ ಪಡೆ ಸ್ಥಳೀಯ ಮಹತ್ವವನ್ನು ಅರಿಯದವರಾದ್ದರಿಂದ ಈ ದೇವಸ್ಥಾನವು ದುಷ್ಕರ್ಮಿಗಳಿಗೆ ಸೇರಿದ್ದೆಂದು ಅದನ್ನು ನಾಶಪಡಿಸಿದರು ಈ ಘಟನೆಯಿಂದ ಗುಜರಾತಿ ಜನಾಂಗದವರಿಗೆ ಅತೀವ ಸಂತಾಪವಾಯಿತು. ಮುಂಬೈನಲ್ಲಿದ್ದ ಗುಜರಾತಿಗಳೂ ಸಹ ತಮ್ಮ ಜನ್ಮ ಸ್ಥಾನದಲ್ಲಿನ ಪ್ರಮುಖ ದೇವಸ್ಥಾನಕ್ಕಾದ ಹಾನಿಯಿಂದ ಬಹಳ ದುಃಖಿತರಾದರು. ಸಂಭ್ರಮದ ದೀಪಾವಳಿ ಹತ್ತಿರ ಬಂದಿದ್ದರೂ ಆ ಜನಗಳಲ್ಲಿ ಉತ್ಸಾಹ, ಸಂತೋಷ ನಿರ್ನಾಮವಾಗಿತ್ತು. ಈ ಪರಿಸ್ಥಿತಿಯು ಗವರ್ನರ್ ಅವರ ಗಮನಕ್ಕೆ ಬಂದಿತು. ಮುಂಬೈನ ಒಂದು ಪ್ರಮುಖ ವಣಿಕ ಜನಾಂಗವಾಗಿ ಈ ಜನ ಸಮುದಾಯಕ್ಕೆ ಆದ ನೋವನ್ನು ಶಮನ ಮಾಡಲು ಗವರ್ನರ್ ಆ ಜನಂಗಗಳ ಮಿತ್ರರಾಗಿದ್ದ ನಾನಾ ಅವರ ಸಹಾಯ ಬಯಸಿದರು. ನಾನಾ ಗುಜರಾತಿ ಜನಾಂಗಕ್ಕೆ ಗವರ್ನರ್‌ರ ಸಂದೇಶ ತಲುಪಿಸಿ ಘಟನೆಯ ಬಗ್ಗೆ ಸೂಕ್ತ ವಿಚಾರಣೆ ನಡೆಸಿ ದೇವಸ್ಥಾನಕ್ಕಾದ ಹಾನಿಯನ್ನು ತುಂಬಿಕೊಡುವ ಅವರ ಪ್ರಸ್ತಾಪವನ್ನು ಮುಂದಿಟ್ಟರು. ನಾನಾ ಅವರ ಪ್ರಯತ್ನದ ಫಲವಾಗಿ ಗುಜರಾತಿ ಜನಾಂಗ ಗವರ್ನರ್‌ರ ಸಂದೇಶವನ್ನು ಸಮರ್ಪಕವಾಗಿ ಸ್ವೀಕರಿಸಿದ್ದರಿಂದ ಪುನಃ ಸಹಜ ಸ್ಥಿತಿ ನಿರ್ಮಾಣವಾಯಿತು.

## ಗೋವಾದ ಪಲ್ಲಕ್ಕಿ ಉತ್ಸವಗಳು

ಗೋವಾದ ದೈವಜ್ಞ ಸಮಾಜದವರಲ್ಲಿ ಒಂದು ವಿಶಿಷ್ಟ ಸಂಪ್ರದಾಯವಿತ್ತು. ದೇವತೆಗಳ ಪಲ್ಲಕ್ಕಿ ಉತ್ಸವಗಳ ಸಂದರ್ಭದ ಮೆರವಣಿಗೆಗಳನ್ನು ದೀಪಗಳಿಂದಲಂಕರಿಸಿ ಭಜನಾ ಮೇಳಗಳೊಂದಿಗೆ ಪಟಾಕಿಗಳನ್ನು ಸಿಡಿಸುತ್ತ ಅವಕ್ಕೆ ವೈಭವವನ್ನು ತಂದು ಕೊಡುವ ಏರ್ಪಾಡು ಮಾಡಲಾಗುತ್ತಿತ್ತು ಇದರ ಜೊತೆಗೆ ಕಲಾವಂತಿಯರೆಂದು ಕರೆಯಲ್ಪಡುತ್ತಿದ್ದ ಕಲಾವಿದೆಯರ ನೃತ್ಯ ಸಂಗತಿಗಳು.

## ಕಲಾ ಪ್ರಪಂಚ

ಮಾನವನ ಮನೋವಿಕಾಸದಲ್ಲಿ ಕಲೆಯ ಪಾತ್ರ ಬಹಳ ಮುಖ್ಯವಾದದ್ದು. ನವೋದಯದ ನಂತರ ಕಲಾ ಪ್ರಪಂಚದಲ್ಲಿ ಅಗಾಧವಾದ ಪರಿವರ್ತನೆಯಾಗತೊಡಗಿತ್ತು. ಇದರ ಲಾಭ ಭಾರತಕ್ಕೂ ಲಭಿಸುವಂತೆ ಮಾಡುವ ಒಂದು ಸುವ್ಯವಸ್ಥಿತ ಯೋಜನೆ ಅಂದಿನ ಅಗತ್ಯವಾಗಿತ್ತು ಎಂದಿನಂತೆ ನಾನಾ ಅವರು ಈ ಐತಿಹಾಸಿಕ ಅಗತ್ಯವನ್ನು ಪೂರೈಸುವಲ್ಲಿ ಹಿಂದೆ ಬೀಳಲಿಲ್ಲ.

ುಂಬಯಿನ ಕಲಾಪ್ರಪಂಚ ಒಂದು ಹೊಸ ಉತ್ಸಾಹದಿಂದ ಪ್ರವೃತ್ತವಾಗುವಂತಹ ಅನೇಕ ಕಾರಕ್ರಮಗಳನ್ನು ರೂಪಿಸಿ ನ್ನು ಸಮರ್ಥವಾಗಿ ಕಾರ್ಯರೂಪಕ್ಕಿಳಿಸಿದ ಯಶಸ್ಸು ನಾನಾ ರಿಗೆ ಸಲ್ಲುತ್ತದೆ. ಅವರ ಅಂದಿನ ಕೆಲಸಗಳ ಸ್ಥಾಯೀ ಪಗಳು ಇಂದಿಗೂ ಮುಂಬಯಿ ಕಲಾ ಪ್ರಪಂಚದ ಅವಿಭಾಜ್ಯ ಗಗಳಾಗಿವೆ ಎಂಬುದೇ ಈ ಸಾಧನೆಗಳ ಮಹತ್ವವನ್ನು ೇರಿಸುತ್ತದೆ. ಅವುಗಳಲ್ಲಿ ಕೆಲವು ಪ್ರಮುಖ ಕಾರ್ಯಗಳನ್ನು ಇಲ್ಲಿ ುತಿಸಲಾಗಿದೆ.

## ಾಶಾಲೆ

ಆಧುನಿಕ ಮಾನವ ಸಮಾಜದಲ್ಲಿ ಚಿತ್ರಕಲೆಯೂ ಿತ್ಯದಂತೆ ಬಹಳ ಪ್ರಮುಖ ಕಲಾಮಾಧ್ಯಮವಾಗಿ ೆಯತೊಡಗಿತ್ತು. ಭಾರತ ಸಾಂಪ್ರದಾಯಿಕ ಚಿತ್ರಕಲೆಯಲ್ಲಿ ್ಯತಿಯನ್ನು ಪಡೆದಿತ್ತಾದರೂ, ಆಧುನಿಕ ಶಿಕ್ಷಣಕ್ರಮದಲ್ಲಿ ತ್ರಕಲೆಯನ್ನು ಶಾಸ್ತ್ರೀಯವಾಗಿ ಬೋಧಿಸುವ ಶಾಲೆಗಳ ಾರತೆ ಇತ್ತು. ಮದ್ರಾಸಿನಲ್ಲಾಗಲೇ ಅಂತಹ ಒಂದು ಶಾಲೆ ಾರಂಭವಾಗಿದ್ದು ತಮ್ಮ ಕಲೆಯ ಪ್ರಚಾರ ದೃಷ್ಟಿಯಿಂದ ಇತರ ೆಗೂ ಇಂತಹ ಶಾಲೆಗಳು ಪ್ರಾರಂಭವಾಗಬೇಕೆಂದು ಅಲ್ಲಿನ ಾಕಾರರು ಬಯಸುತ್ತಿದ್ದುದು ಸಹಜವಾಗಿತ್ತು. ಚಿತ್ರಕಲಾ ಾಧ್ಯಮದಲ್ಲಿ ಆಗುತ್ತಿರುವ ಕ್ರಾಂತಿಕಾರಿ ಬದಲಾವಣೆಗಳನ್ನು ಮ್ಮಜನರಿಗೆ ತಲುಪಿಸಲು ಇಂತಹ ಶಾಲೆಗಳ ಅಗತ್ಯ ಎಂದಿಗಿಂತ ಚ್ಚಾಗಿ ಉಂಟಾಗಿತ್ತು. ಮುಂಬಯಿನ ಕೆಲ ಪ್ರಮುಖ ಪತ್ರಿಕೆಗಳು ಅಂಶದತ್ತ ಸಾರ್ವಜನಿಕರ ಗಮನ ಸೆಳೆದು ಮುಂಬಯಿನ ತಿಷ್ಠಿತ ನಾಯಕರಾದ ಜೇಮ್‌ಶೇಟ್‌ಜೀ ಜೀಜೀಭಾಯಿ ುತ್ತು ಜಗನ್ನಾಥ ಶಂಕರಶೇಟ್‌ರಂತಹ ಪ್ರಮುಖರು ಇಂತಹ ಾರ್ಯಕ್ರಮವನ್ನು ರೂಪಿಸುವಲ್ಲಿ ಮುಂದಾಗಬೇಕು ಎಂದು ುಚಿಸಿದ್ದವು. ಈ ಮುಂಚೆ ಪ್ರಾಮ್‌ಜೀ ಕಾವ್ಸ್‌ಜೀ ಅವರು ಒಂದು ಕಲಾ ಶಾಲೆಯನ್ನು ಪ್ರಾರಂಭಿಸಬಯಸಿದ್ದರಾದರೂ ಅವರ ಆಕಸ್ಮಿಕ ನಿಧನದಿಂದ ಅದು ಕಾರ್ಯಗತವಾಗಿರಲಿಲ್ಲ. ಆಪ್ತ ಮಿತ್ರರಾಗಿದ್ದ ಜೇಮ್‌ಶೇಟ್‌ಜೀ ಜೀಜೀಭಾಯಿ ಮತ್ತು ನಾನಾ ಅವರು ಪತ್ರಿಕೆಯಲ್ಲಿ ಪ್ರಕಟವಾದ ಲೇಖನವನ್ನೋದಿ ಅದರ ಸಾಧ್ಯಾಸಾಧ್ಯತೆಯ ಬಗ್ಗೆ ಚರ್ಚಿಸಿದರು. ಕಲಾಶಾಲೆಯ ನಿರ್ಮಾಣದಲ್ಲಿ ತೀವ್ರ ಆಸಕ್ತಿಯನ್ನು ಹೊಂದಿದ್ದ ಜೇಮ್‌ಶೇಟ್‌ಜೀ ಜೀಜೀಭಾಯ್ ಅವರು ನಾನಾ ಅವರ ಮಾರ್ಗದರ್ಶನದಲ್ಲಿ ಕಲಾಶಾಲೆಯ ಯೋಜನೆಯೊಂದನ್ನು ಸಿದ್ಧಪಡಿಸಿ ಒಂದು ಲಕ್ಷ ರೂಪಾಯಿಗಳ ದೇಣಿಗೆಯ ವಾಗ್ದಾನದೊಂದಿಗೆ ಸರ್ಕಾರದ ಮಂಜೂರಾತಿಗೆ ಒಪ್ಪಿಸಿದರು. ಆಗಿನ ಗವರ್ನರ್ ಆಗಿದ್ದ ಲಾರ್ಡ್ ಫಾಕ್ಲ್ಯಾಂಡ್ ಅವರ ಶಿಫಾರಸಿನಿಂದ ಸರ್ಕಾರದ ಮಂಜೂರಾತಿಯೂ ದೊರಕಿತು. ತದ ನಂತರ ಡಬ್ಲ್ಯೂ. ಯಾರ್ಡಿ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ನೇಮಕವಾಯಿತು. ಸರ್ ಜೇಮ್‌ಶೇಟ್‌ಜೀ ಜೀಜೀಭಾಯ್ ಉಪಾಧ್ಯಕ್ಷರಾಗಿದ್ದ ಈ ಸಮಿತಿಯ ಪ್ರಮುಖ ಸದಸ್ಯರು ಜಗನ್ನಾಥ ಶಂಕರ ಶೇಟ್, ಸಿ.ಜೆ. ಆರ್ಕಸಿನ್, ಜೆ.ಎಚ್. ಕ್ರಾಪರ್ಡ್ ಮುಂತಾದವರು. ಈ ಸಮಿತಿಯು ಕಲಾಶಾಲೆಯ ನಿಯಮಾವಳಿ, ಅಂದಾಜು ವೆಚ್ಚ ಮತ್ತು ಪಠ್ಯಕ್ರಮದ ಬಗ್ಗೆ ವರದಿಯನ್ನು ತಯಾರಿಸಲು ರುಸ್ತುಂಜೀ ಜೇಮ್‌ಶೇಟ್‌ಜೀ, ಜಗನ್ನಾಥ ಶಂಕರ ಶೇಟ್, ಜಾನ್ ಹಾರ್ಕನೆಸ್ ಅವರನ್ನೊಳಗೊಂಡ ಉಪಸಮಿತಿಯೊಂದನ್ನು ರಚಿಸಿತು. ಈ ಉಪಸಮಿತಿಯು 15-12-1855ರಂದು ತಾನು ತಯಾರಿಸಿದ ವರದಿಯನ್ನು ಸರ್ಕಾರದ ಮಂಜೂರಾತಿಗಾಗಿ ಇಂಗ್ಲಂಡಿಗೆ ಕಳುಹಿಸಿತು. ಯಥಾಪ್ರಕಾರ ಈ ಮಂಜೂರಾತಿಯಲ್ಲಿ ವಿಳಂಬವಾಗಿ ಕೊನೆಗೆ 1857ರಲ್ಲಿ ಸರ್ಕಾರದಿಂದ ಕಲಾಶಾಲೆ ಪ್ರಾರಂಭಿಸಲು ಅನುಮತಿ ದೊರಕಿತು. ಆದರೆ ಈ ಹೊತ್ತಿಗೆ ಕಲಾಶಾಲೆಯ ಪ್ರಮುಖ ಯೋಜಕರಾಗಿದ್ದ ಸರ್ ಜೇಮ್‌ಶೇಟ್‌ಜೀ ಜೀಜೀಭಾಯ್ ವೃದ್ಧಾಪ್ಯದಿಂದಾಗಿ ತಮ್ಮ 70ನೇ ವಯಸ್ಸಿನಲ್ಲಿ ತೀರಿಕೊಂಡುಬಿಟ್ಟಿದ್ದರು. ಹೀಗಾಗಿ ಅವರ ಸ್ಮಾರಕವಾಗಿ 'ಜೇಮ್‌ಶೇಟ್‌ಜೀ ಜೀಜೀಭಾಯ್ ಸ್ಕೂಲ್ ಆಫ್ ಆರ್ಟ್ಸ್' ಎಂಬ ಕಲಾಶಾಲೆ 2-3-1857ರಂದು ಪ್ರಾರಂಭವಾಯಿತು. ಸಂಸ್ಥೆಯ ನಿರ್ವಹಣೆಯ ಜವಾಬ್ದಾರಿಯನ್ನು ಒಂದು ಸಮಿತಿಗೆ ವಹಿಸಲಾಗಿತ್ತು. ನಾನಾ ಅವರು ಈ ಸಮಿತಿಯ ಮುಖ್ಯ ಸದಸ್ಯರಾಗಿದ್ದು ಪ್ರಾರಂಭಿಕ ದಿನಗಳಲ್ಲಿ ಸೂಕ್ತ ಮಾರ್ಗದರ್ಶನ ನೀಡಿ ಸಂಸ್ಥೆಯ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದರು. ಹೀಗೆ ಮುಂಬಯಿನ ಪ್ರಥಮ ಕಲಾಶಾಲೆ ಪ್ರಾರಂಭವಾಗಿ ಅಬಾಧಿತವಾಗಿ ನಡೆಯತೊಡಗಿತು. ಈಗ 'J.J. School of Art' ಎಂದೇ ಪ್ರಸಿದ್ಧವಾಗಿರುವ ಈ ಸಂಸ್ಥೆ ಭಾರತದ ಅತ್ಯಂತ ಪ್ರತಿಷ್ಠಿತ ಕಲಾಶಾಲೆಯಾಗಿ ರೂಪುಗೊಂಡು ಅಂದು ಜೇಮ್‌ಶೇಟ್‌ಜೀ ಜೀಜೀಭಾಯ್ ಮತ್ತು ನಾನಾ ಅವರು ಕಂಡ ಕನಸನ್ನು ನನಸು ಮಾಡುವಲ್ಲಿ ನಿರಂತರವಾಗಿ ಕಾರ್ಯ ಪ್ರವೃತ್ತವಾಗಿದೆ.

## ಬಾದಶಾಹಿ ರಂಗ ಮಂದಿರ

ಮುಂಬಯಿಯ ಆಡಳಿತ ಬ್ರಿಟೀಷ್‌ರ ಕೈಗೆ ಬಂದಾಗಿನಿಂದಲೂ ಅಲ್ಲಿಗೆ ಬರುವ ಅಧಿಕಾರಿಗಳ, ವ್ಯಾಪಾರಿಗಳ ಸಂಖ್ಯೆ ಬೆಳೆಯುತ್ತಲೇ ಇತ್ತು. ಹೀಗಾಗಿ ಮುಂಬಯಿಯಲ್ಲಿ ಇದ್ದ ಬ್ರಿಟೀಷ್ ಜನಸಂಖ್ಯೆ ಗಣನೀಯ ಪ್ರಮಾಣದಲ್ಲಿತ್ತು. ಅವರೆಲ್ಲ ಮನೋರಂಜನೆಗಾಗಿ ನಾಟಕಗಳನ್ನು ನೋಡುವ ಹವ್ಯಾಸ ಹೊಂದಿದವರಾಗಿದ್ದರು. ಅವರಲ್ಲೇ ಕೆಲವು ಉತ್ತಮ ನಟರೂ ಇದ್ದದ್ದರಿಂದ ನಾಟಕಗಳನ್ನು ಆಡುವ ಬಯಕೆ ಅವರಿಗಿದ್ದರೂ ಅದಕ್ಕಾಗಿ ಒಂದು ಸೂಕ್ತ ರಂಗಮಂದಿರವಿರಲಿಲ್ಲ. ಈ ಕೊರತೆಯನ್ನು ತುಂಬಿಕೊಳ್ಳಲು ಯುರೋಪಿಯನ್ನರೆಲ್ಲ ಸೇರಿ ತಾವೇ ಸ್ವತಃ ಚಂದಾ ಎತ್ತಿ "ಎಲ್ಫಿನ್‌ಸ್ಟನ್ ಸರ್ಕಲ್' ಎಂಬ ಒಂದು ಸ್ಥಳವನ್ನು ಖರೀದಿಸಿದರು. ತಮ್ಮದೇ ಸರ್ಕಾರವಿದ್ದದರಿಂದ ಅವರು ಅಲ್ಲಿ 'ಬಾಂಬೆ ಥೇಟರ್' ಎಂಬ ಹೆಸರಿನ ರಂಗಮಂದಿರವೊಂದನ್ನು ಕಟ್ಟಿಕೊಳ್ಳಲು ಸರ್ಕಾರದಿಂದ ಸುಲಭವಾಗಿ ಅನುಮತಿ ಪಡೆದರು. ಆದರೆ ಅವರು ಸಂಗ್ರಹಿಸಿದ 15,000 ರೂಪಾಯಿಗಳ ಮೊತ್ತವು ಕಟ್ಟಡದ ನಿರ್ಮಾಣಕ್ಕೆ ಸಾಕಾಗಲಿಲ್ಲವಾಗಿ ಅವರು ಫೋರ್ಬ್ ಕಂಪನಿಯ ಸಹಾಯದಿಂದ ಕಾರ್ಯ ಪೂರೈಸಿದರು. ಅಲ್ಲಿ ನಡೆಯುತ್ತಿದ್ದ ನಾಟಕಗಳಿಗೆ ಯುರೋಪಿಯನ್ನರಿಗೆ ಮಾತ್ರ ಪ್ರವೇಶಾವಕಾಶವಿತ್ತು. ಈ ರಂಗಮಂದಿರದ ಯೋಜನೆಯ ಪ್ರಮುಖರಲ್ಲಿ ಕೆಲವರು ನಿವೃತ್ತಿಯ ನಂತರ ತಮ್ಮ ದೇಶಗಳಿಗೆ ಹಿಂತಿರುಗಿ ಹೋದರು. ಹೀಗಾಗಿ ಕಾರ್ಯಕ್ರಮಗಳ ಸಂಖ್ಯೆ ಕಡಿಮೆಯಾಗಿ ರಂಗ ಮಂದಿರವು ನಷ್ಟದಲ್ಲಿ ನಡೆಯತೊಡಗಿತು. ಫೋರ್ಬ್ ಕಂಪನಿಯ ಸಾಲ 30,000 ರೂಪಾಯಿಗಳಿಗೇರಿ ಅದರಲ್ಲಿ ವ್ಯವಸ್ಥಾಪಕರಾದ ನೂನ್‌ಹಾಮ್ ಎಂಬುವರು ಸಾಲವನ್ನು ತೀರಿಸಲು ಒಂದು ಮಾಡುವಂತೆ ಸರ್ಕಾರವನ್ನು

ಕೋರಿದರು. ಸರ್ಕಾರವು ರಂಗ ಮಂದಿರದ ಆಸ್ತಿಯನ್ನು ಹಣ ಹಾಕಿದಾಗ ಸರ್ ಜೇಮ್‌ಶೇಟ್‌ಜೀ ಜೀಜೀಭಾಯ್ ಅವರು ಅದನ್ನು 50,000 ರೂಪಾಯಿ ಖರೀದಿ ಮಾಡಿ ಅದನ್ನು ಅರಳೆಯನ್ನು ತುಂಬುವ ದಾಸ್ತಾನು ಮಳಿಗೆಯಾಗಿ ಉಪಯೋಗಿಸತೊಡಗಿದರು. ಸಾಲ ತೀರಿದ ನಂತರ ಉಳಿದ 27,000 ರೂಪಾಯಿಗಳನ್ನು ಸರ್ಕಾರಿ ಖಜಾನೆಯಿಂದ ಜಮಾ ಮಾಡಲಾಯಿತು. ಹೀಗೆ ಮುಂಬಯಿನಲ್ಲಿದ್ದ ಏಕಮಾತ್ರ ರಂಗಮಂದಿರ ಸರಿಯಾಗಿ ನಿರ್ವಹಣೆಯಿಲ್ಲದೆ 'ಗೋಡೌನ್' ಆಗಿ ಪರಿವರ್ತಿತವಾಯಿತು.

ಬ್ರಿಟೀಷ್ ಈ ಚಟುವಟಿಕೆಗಳಿಂದ ಪ್ರೇರಿತರಾಗಿದ್ದ ನಾನಾ ಮತ್ತು ಅವರ ಮಿತರ್ರು ಸಾಮಾನ್ಯ ಜನತೆಯ ಮನೋರಂಜನೆಗೋಸ್ಕರ ರಂಗಮಂದಿರದ ಅಗತ್ಯವಿರುವುದನ್ನು ಮನಗಂಡ ಈ ಉದ್ದೇಶದಿಂದ ನಾನಾ, ಫ್ರಾಮ್‌ಜೀ ಕಾವ್ಸ್‌ಜೀ ಮತ್ತಿತರರು ಸೇರಿ ಸರ್ಕಾರಕ್ಕೆ ಒಂದು ಚಿಟಿಕೆ ಪತ್ರವನ್ನು ಸಲ್ಲಿಸಿ ಮುಂಬಯಿನ ನಾಗರಿಕರ ಮನೋರಂಜನೆಗೆ ಒಂದು ರಂಗಮಂದಿರದ ಅಗತ್ಯವಿರುವುದರಿಂದ ಸರ್ಕಾರವು ಖಜಾನೆಯಲ್ಲಿರುವ 27,000 ರೂಪಾಯಿಗಳನ್ನು ಬಳಸಿಕೊಂಡು ಒಂದು ರಂಗ ಮಂದಿರವನ್ನು ಕಟ್ಟಿಸಿಕೊಡಬೇಕೆಂದು ಪ್ರಾರ್ಥಿಸಿದರು. ಮುಂಬಯಿನ ಗವರ್ನರ ಸೂಕ್ತ ಶಿಫಾರಸಿನೊಂದಿಗೆ ಈ ಮನವಿಯನ್ನು ಇಂಗ್ಲೆಂಡ್‌ಗೆ ಕಳುಹಿಸಿದರು. 1840 ಕ್ಕೆ ಅನುಮತಿ ದೊರಕಿದರೂ ಈ ದಿಶೆಯಲ್ಲಿ ಪ್ರಯತ್ನಗಳು ಮುಂದುವರೆದದ್ದು ಸ್ವಲ್ಪ ತಡವಾಗಿ 28-12-1841 ರಂದು ನಾಯಕರ ಒಂದು ಸಭೆ ನಡೆದು ರಂಗಮಂದಿರದ ನಿರ್ಮಾಣಕ್ಕೆ ಒಂದು ಸಮಿತಿಯನ್ನು ನೇಮಿಸಲಾಯಿತು. ಜಗನ್ನಾಥ ಶಂಕರ ಶೇಟ್‌ಜೀ, ಕರ್‌ಶೇಟ್ ಜೀ ಜಮಶೇಟ್‌ಜೀ, ಜೆನ್ನಿಫೋಸೆಟ್, ಹೆಚ್.ಎಲ್. ಆ್ಯಂಡರ್‌ಸನ್, ಪಿ.ಡಬ್ಲ್ಯೂ ಲೆಗೆಟ್, ಡೆನ್‌ವರ್ಸ್ಟ್ ಅವರುಗಳು ಈ ಸಮಿತಿಯ ಸದಸ್ಯರಾಗಿ ನೇಮಕರಾದರು. ಸಮಿತಿಯ ಮುಂಚೆ ಇದ್ದ ಮುಖ್ಯ ಕೆಲಸವೆಂದರೆ ಸರ್ಕಾರದಲ್ಲಿದ್ದ 27,000 ರೂಪಾಯಿಗಳನ್ನು ಪಡೆಯುದು, ಮತ್ತಷ್ಟು ನಿಧಿ ಸಂಗ್ರಹಿಸುವುದು ಮತ್ತು ರಂಗಮಂದಿರ ನಿರ್ಮಾಣಕ್ಕಾಗಿ ಸೂಕ್ತ ನಿವೇಶನ ಪಡೆಯುವುದು, ನಾನಾ ಅವರು ಗ್ರ್ಯಾಂಟ್ ರಸ್ತೆಯಲ್ಲಿದ್ದ ತಮ್ಮ ಜಾಗೆಯೊಂದನ್ನು ಈ ಉದ್ದೇಶಕ್ಕಾಗಿ ಕೊಡಲು ಬಯಸಿದ್ದರಿಂದ ನಿವೇಶನದ ಸಮಸ್ಯೆ ಸುಲಭವಾಗಿ ಪರಿಹಾರವಾಯಿತು. ಅವರ ಈ ಉಪಕಾರವನ್ನು ಸ್ಮರಿಸುತ್ತ ಸಮಿತಿಯ ಅಧ್ಯಕ್ಷ ಹೆನ್ರಿ ಫೋಸೆಟ್ ಅವರು ಗವರ್ನರ್ ಈ ರೀತಿ ಪತ್ರ ಬರೆದರು. "ಮಾನ್ಯ ಜಗನ್ನಾಥ ಶಂಕರ ಶೇಟ್ ಅವರ ಔದಾರ್ಯದಲ್ಲಿ ರಂಗಮಂದಿರದ ನಿರ್ಮಾಣಕ್ಕಾಗಿ ಇಂತಹ ಸೂಕ್ತ ಸ್ಥಳ ದೊರೆಯುವುದು ಅವಶ್ಯವಾದ ಮಾತಾಗಿತ್ತು. ಅಲ್ಲದೆ ಲಭ್ಯವಿರುವ ಕನಿಷ್ಠ ಪ್ರಮಾಣದ ಹಣದಲ್ಲಿ ನಿವೇಶನಕ್ಕಾಗಿಯೇ ಹೆಚ್ಚಿಗೆ ಪಾಲನ್ನು ಖರ್ಚು ಮಾಡುವಂತಾಗಿದ್ದರೆ ರಂಗಮಂದಿರವನ್ನು ಹೆಚ್ಚಿನ ಸೌಲಭ್ಯಗಳೊಂದಿಗೆ ಸಾರ್ಜನಿಕರಿಗೆ ಒದಗಿಸುವುದು ದುಸ್ತರವಾಗುತ್ತಿತ್ತು. ಅಲ್ಲದೆ, ನಗರದ ಕೇಂದ್ರ ಸ್ಥಾನದಲ್ಲಿರುವ ಗಾಳಿ ಬೆಳಕಿನ ಅನುಕೂಲತೆಯ ದೃಷ್ಟಿಯಿಂದ ಉತ್ತಮ ಸ್ಥಳದಲ್ಲಿ ಸ್ಥಾಪಿತವಾಗಿದೆ ಎಂಬ ಎರಡು ಪ್ರಯೋಜನಗಳಿಂದಾಗಿ ಈ ನಿವೇಶನಕ್ಕಾಗಿ ವ್ಯಯಿಸಿದ ಹಣವು ತೀರ ಭಾವೂದಾಜೀ ಮುಂತಾದ ಭಾರತೀಯರನ್ನು ಒಳಗೊಂಡ ಸಮಿತಿಗೆ ವಹಿಸಿದ್ದರು. ತಮ್ಮ ಹಿಂದಿನ ಅನುಭವದಿಂದ ಈ ಜವಾಬ್ದಾರಿಯನ್ನು ಸಮಿತಿಯು ಅತ್ಯಂತ ಸಮರ್ಪಕವಾಗಿ ಮಾಡಿ ಮುಗಿಸಿತು.

ಹೀಗೆ ಎರಡು ಬಾರಿ ವಸ್ತುಪ್ರದರ್ಶನಗಳ ಏರ್ಪಾಡಿನಲ್ಲಿ ಕಾರಪ್ರವೃತ್ತರಾಗಿದ್ದ ಈ ಭಾರತೀಯ ನಾಯಕರು ತಮ್ಮ ಅನುಭವವನ್ನು ಬಳಸಿಕೊಂಡು ಮುಂಬಯಿನಲ್ಲೂ ಒಂದು ವಸ್ತು ಪ್ರದರ್ಶನ ಏರ್ಪಾಡು ಮಾಡುವ ಬಗ್ಗೆ ಯೋಚಿಸತೊಡಗಿದರು. ಅದರಂತೆ ಅವರೆಲ್ಲ ಸಭೆ ಸೇರಿ 3-3-1865 ರಂದು 'InternationalExhibition Cormpany' ಎಂಬ ಸಂಸ್ಥೆಯನ್ನು ಪ್ರಾರಂಭಿಸಿದರು. ಇದರ ಪ್ರಮುಖ ಪ್ರತಿಪಾದಕರೆಂದರೆ ಜಗನ್ನಾಥ ಶಂಕರಶೇಟ್, ಚೇಮ್ ಶೇಟ್‌ಜೀ ಜೀಜೀಭಾಯ್, ಸಿ. ಜಹಂಗೀರ್ ಮುಂತಾದವರು. ಆದರೆ ಕಾರ್ಯ ಪ್ರಾರಂಭವಾಗುವ ಮುಂಚೆ ಈ ಸಂಸ್ಥೆ ಎರಡು ಬಗೆಯ ಆಘಾತಗಳನ್ನು ಎದುರಿಸಬೇಕಾಯಿತು. ಅಮೇರಿಕಾದಲ್ಲಿ ಯುದ್ಧ ಮುಗಿದಿದ್ದರಿಂದ ಇಂಗ್ಲೆಂಡ್‌ನೊಂದಿಗಿನ ಅದರ ವ್ಯಾಪಾರೀ ಸಂಬಂಧ ಪುನಃ ಪ್ರಾರಂಭವಾಗಿ ವ್ಯಾಪಾರೋದ್ಯಮದ ಮೇಲೆ ಅದು ಪರಿಣಾಮ ಬೀರಿ ಅಪಾರ ಹಾನಿಯಿಂದಾಗಿ ಎಷ್ಟೋ ಕಂಪನಿಗಳು ದಿವಾಳಿಯೆದ್ದವು. ಇದರಿಂದ ಸಂಸ್ಥೆಯು ಆರ್ಥಿಕ ಸಂಕಷ್ಟಕ್ಕೊಳಗಾಯಿತು. ಜೊತೆಗೆ ಪ್ರಮುಖ ಪ್ರತಿಪಾದಕರೂ, ಕಾರ್ಯಕರ್ತರೂ ಆಗಿದ್ದ ನಾನಾ ಅವರ ಅಕಾಲಿಕ ಸಾವಿನ ಅಘಾತದಿಂದ ಈ ಸಂಸ್ಥೆ ಚೇತರಿಸಿಕೊಳ್ಳಲಿಲ್ಲ. ಹೀಗಾಗಿ ಕಂಪನಿಯ ಎಲ್ಲ ಶೇರುದಾರರು 16-10-1865ರಂದು ಪುರಭವನದಲ್ಲಿ ಸಭೆ ಸೇರಿ ಕಂಪನಿ ಮುಚ್ಚುವ ನಿರ್ಧಾರ ತೆ-ಗೆದುಕೊಂಡರು. ನಾನಾರ ಅನುಪಸ್ಥಿತಿ ಒಂದು ಸಂಸ್ಥೆಯ ಅವಸಾನಕ್ಕೆ ಕಾರಣವಾದದ್ದು ನಾನಾ ತಾವು ತೊಡಗಿಸಿಕೊಳ್ಳುತ್ತಿದ್ದ ಚಟುವಟಿಕೆಗಳಿಗೆ ಎಷ್ಟೊಂದು ಅನಿವಾರ್ಯರಾಗಿದ್ದರು ಎಂಬುದನ್ನು ಸೂಚಿಸುತ್ತದಲ್ಲವೇ ? ಹೀಗೆ ಭಾರತದಲ್ಲೊಂದು ವಸ್ತು ಪ್ರದರ್ಶನವನ್ನು ಏರ್ಪಡಿಸುವ ನಾನಾ ಅವರ ಕನಸು ಕನಸಾಗಿಯೇ ಉಳಿಯಿತು.

## ರಾಯಲ್ ಏಷಿಯಾಟಿಕ್ ಸೊಸೈಟಿ

ಬೌದ್ಧಿಕ ಚಟುವಟಿಕೆಗಳಾದ ಭಾಷಣ, ಚರ್ಚೆ, ವಿಚಾರ ಸಂಕಿರಣ ಮುಂತಾದವುಗಳನ್ನು ನಡೆಸಲು ಇಂಗ್ಲೆಂಡಿನಲ್ಲಿ 'ರಾಯಲ್ ಏಷಿಯಾಟಿಕ್ ಸೊಸೈಟಿ' ಎಂಬ ಒಂದು ಸಂಸ್ಥೆಯನ್ನು ಅಲ್ಲಿನ ಬುದ್ಧಿಜೀವಿಗಳು ಸ್ಥಾಪಿಸಿಕೊಂಡಿದ್ದರು. ಇಂತಹದೇ ಸೌಲಭ್ಯವನ್ನು ಭಾರತದಲ್ಲಿನ ಬ್ರಿಟೀಷ್‌ರಿಗೂ ಒದಗಿಸಲು 1830ರಲ್ಲಿ ಅದರ ಒಂದು ಶಾಖೆಯನ್ನು ಮುಂಬೈನಲ್ಲಿ ಪ್ರಾರಂಭಿಸಲಾಯಿತು. ಆದರೆ ಈ ಸಂಸ್ಥೆಯ ಸದಸ್ಯತ್ವ ಬ್ರಿಟೀಷ್‌ರಿಗಷ್ಟೇ ಸೀಮಿತವಾದದ್ದಾಗಿದ್ದು ಭಾರತೀಯರಿಗೆ ಅಂತಹ ಸೌಲಭ್ಯ ಇರಲಿಲ್ಲ. ಭಾರತದಲ್ಲಿನ ಪ್ರತಿಭಾವಂತರ ಸಂಖ್ಯೆಯೂ ಹೆಚ್ಚಾಗತೊಡಗಿದಾಗ ಅಧಿಕಾರ ವರ್ಗವು ತನ್ನ ಈ ನೀತಿಯನ್ನು ಸಡಲಿಸಿ ಭಾರತೀಯರಿಗೂ ಪ್ರವೇಶವನ್ನು ಕೊಡಬಯಸಿತು. ಇದರಿಂದಾಗಿ 29-1-1840ರಂದು ಮುಂಬೈನ ಪಾರ್ಸಿ ಮಾಣಿಕಜೀ ಕರಶೇಟ್‌ಜೀ ಅವರು ಇದರ ಸದಸ್ಯತ್ವ ಪಡೆದ ಪ್ರಥಮ ಭಾರತೀಯರಾದರು. ನಂತರ 24-11-1845ರಂದು ಜಗನ್ನಾಥ ಶಂಕರ್ ಶೇಟ್ ಅವರು ಈ ಸಂಸ್ಥೆಯ ಸದಸ್ಯತ್ವವನ್ನು ಪಡೆದರೆಂಬುದು ಬುದ್ಧಿಜೀವಿಗಳ ವಲಯದಲ್ಲೂ ಅವರು ಪಡೆದಿದ್ದ ಪ್ರತಿಷ್ಠಿತೆಯ ಕುರುಹಾಗಿದೆ. ನಾನಾ ಅವರು ಈ ಸಂಸ್ಥೆಯ ಪ್ರತಿ ಮಾಸಿಕ ಸಭೆಯಲ್ಲಿಯೂ

...ಸಕ್ತಿಯಿಂದ ಭಾಗವಹಿಸುತ್ತಿದ್ದು ಬೌದ್ಧಿಕ ಚಟುವಟಿಕೆಗಳಲ್ಲಿ ...ರುವ ಒಲವನ್ನು ತೋರಿಸುತ್ತಿದ್ದರು.

ನಾನಾ ಅವರು ನಿಧನರಾದಾಗ 18-8-1865ರಂದು ...ಸಂಸ್ಥೆಯು ಒಂದು ಸಂತಾಪ ಸೂಚಕ ಸಭೆ ನಡೆಸಿ ಅವರಿಗೆ ...ವ ಸೂಚಿಸಿತು. ಅಂದಿನ ಅಧ್ಯಕ್ಷರಾದ ಡಾ. ವಿಲ್ಸನ್ ನಲ್ಲಿ ...ಗೆ ಶ್ರದ್ಧಾಂಜಲಿ ಸೂಚಿಸುತ್ತ ಇಂತೆಂದರು. "ಜಗನ್ನಾಥ ...ರ ಶೇಟ್ ಅವರು 1845ರಿಂದ 1865ರವರೆಗಿನ 20 ...ದಷ್ಟು ದೀರ್ಘ ಅವಧಿಗೆ ಈ ಸಂಸ್ಥೆಯ ಸದಸ್ಯರಾಗಿದ್ದರು. ...ಯುರ ಏಷಿಯಾಟಿಕ್ ಸೊಸೈಟಿಯ ಸದಸ್ಯತ್ವದ ಗೌರವ ...ದ ತೃತೀಯ ಭಾರತೀಯ ಅವರಾಗಿದ್ದರು. ಅವರು ...ವುದೇ ಉಪನ್ಯಾಸವನ್ನು ಇಲ್ಲಿ ಮಾಡದಿದ್ದರೂ ಇಲ್ಲಿನ ...ಗಳಲ್ಲಿ ತುಂಬಾ ಆಸಕ್ತಿಯಿಂದ ಭಾಗವಹಿಸುತ್ತಿದ್ದ ಸಕ್ರಿಯ ...ಸ್ಯರಾಗಿದ್ದರು. ಕೆಲವು ಕಾಲದವರೆಗೆ ಆಡಳಿತ ಸಮಿತಿಗೂ ...ಯುಕವಾಗಿದ್ದ ಅವರು ಈ ಸಂಸ್ಥೆಯ ಪ್ರಗತಿಗೆ ಕಾರಣ-...ದ್ದಾರೆ. ಇಲ್ಲಿ ವಾಚನಾಲಯದಲ್ಲಿ ವಿವಿಧ ವಿಜ್ಞಾನಗಳಿಗೆ ...ಬಂಧಿಸಿದ ಉತ್ತಮ ಪುಸ್ತಕಗಳಿರಬೇಕೆಂದು ಬಯಸಿದ ...ರು ಪ್ರಾಕೃತಿಕ ಇತಿಹಾಸದ ಮೇಲಿನ ಪುಸ್ತಕಗಳ ಖರೀದಿಗಾಗಿ ...00 ರೂಪಾಯಿಗಳ ಉದಾರ ಸಹಾಯಧನ ನೀಡಿ ಇತರರಿಗೆ ...ದರಿಯಾದರು. ಈ ಪುಸ್ತಕಗಳು ಸಂಶೋಧನಾನಿರತ ...ದ್ಯಾರ್ಥಿಗಳಿಗೆ ತುಂಬಾ ಸಹಕಾರಿಯಾಗಿವೆ."

ಈಗ 'ರಾಯಲ್ ಏಷಿಯಾಟಿಕ್ ಸೊಸೈಟಿ'ಯ ...ಸರನ್ನು 'ಏಷಿಯಾಟಿಕ್ ಸೊಸೈಟಿ ಆಫ್ ಇಂಡಿಯಾ' ಎಂದು ...ದಲಾಯಿಸಲಾಗಿದೆ. ಪುರಭವನದಲ್ಲಿ ಸ್ಥಾಪಿತವಾಗಿರುವ ... ಸಂಸ್ಥೆಯಲ್ಲಿ ಅನೇಕ ಪ್ರಾಚೀನ ಪ್ರಕಾಶನಗಳ ಬೃಹತ್ ...ಚನಾಲಯದ ಸೌಲಭ್ಯ ಇರುವುದರಿಂದ ಸಂಶೋಧನಾ ...ದ್ಯಾರ್ಥಿಗಳಿಗೆ ತುಂಬಾ ಸಹಕಾರಿಯಾಗಿದೆ. ಹೀಗೆ ಇಂದಿನ ...ಶೋಧನಾನಿರತ ವಿದ್ಯಾರ್ಥಿಗಳು ಅಪರೋಕ್ಷವಾಗಿ ...ನಾರಿಂದ ಉಪಕೃತರಾಗಿದ್ದಾರೆ ಎಂಬುದು ವಿಶೇಷ ...ಗತಿಯಾಗಿದೆ.

## ...ನ್ ವಿಕ್ಟೋರಿಯಾ ಗಾರ್ಡನ್ಸ್ ಮತ್ತು ಆಲ್ಬರ್ಟ್ ...ಮ್ಯೂಸಿಯಂ

1851ರಲ್ಲಿ ಲಂಡನ್‌ನಲ್ಲಿ ಮತ್ತು 1855ರಲ್ಲಿ ಪ್ಯಾರಿಸ್‌ನಲ್ಲಿ ...ಲಾಕೃತಿಗಳ ವಸ್ತು ಪ್ರದರ್ಶನ ವ್ಯವಸ್ಥೆ ಮಾಡಲಾಗಿತ್ತು. ಅದಕ್ಕಾಗಿ ...ರತದಿಂದಲೂ ಅನೇಕ ಕಲಾಕೃತಿಗಳು ಕಳಿಸಲ್ಪಟ್ಟಿದ್ದರವು. ...ಸ್ತು ಪ್ರದರ್ಶನದ ಮುಕ್ತಾಯದ ನಂತರ ಅವುಗಳನ್ನೆಲ್ಲ ...ಟ್ಟಿಗೆಗಳಲ್ಲಿ ಜೋಡಿಸಿ ಭಾರತಕ್ಕೆ ಹಿಂತಿರುಗಿಸಲಾಯಿತು. ಸೂಕ್ತ ...ಳಾವಕಾಶ ಇಲ್ಲದ್ದರಿಂದ ಅವುಗಳಲ್ಲಿ ಕೆಲವನ್ನು ಪುರಭವನದಲ್ಲಿ ...ನ್ನು ಕೆಲವನ್ನು ನಾನಾ ಅವರ ಬಾದಶಾಹಿರಂಗ ಮಂದಿರದಲ್ಲಿ, ...ಳಿದವುಗಳನ್ನು ಇನ್ನೂ ಅನೇಕ ಪ್ರದೇಶಗಳಲ್ಲಿ ಇಡಲಾಯಿತು. ...358ರಲ್ಲಿ ಗೋವಾದಲ್ಲಿ ನಡೆದ ವಸ್ತು ಪ್ರದರ್ಶನದಲ್ಲಿ ಕೆಲವು ...ಸುಂದರ, ಅಮೂಲ್ಯ, ಕಲಾಕೃತಿಗಳನ್ನು ಖರೀದಿಸಲಾಗಿತ್ತು. ...ಸ್ವಲ್ಪ ಅವಧಿಗಾಗಿ ಇವುಗಳನ್ನೆಲ್ಲ ಪುರಭವನದಲ್ಲಿ ಮ್ಯೂಸಿಯಂನ ...ಮಾದರಿಯಲ್ಲಿ ಪ್ರದರ್ಶಿಸಲಾಗಿತ್ತು. ಸಿಪಾಯಿದಂಗೆಯ ಸಮಯದಲ್ಲಿ ಪುರಭವನದ ಈ ಜಾಗವನ್ನು ಬೇರೆಯ ಉದ್ದೇಶಕ್ಕಾಗಿ ಬಳಸಬೇಕಾಗಿ ಬಂದದ್ದರಿಂದ ಈ ಕಲಾಕೃತಿಗಳು ಪುನಃ ಪೆಟ್ಟಿಗೆಗಳನ್ನು ಸೇರಬೇಕಾಯಿತು.

1-11-1858ರಂದು ಘೋಷಿತವಾದ ಜಾಹಿರ್ನಾಮೆಯ ಮೂಲಕ ವಿಕ್ಟೋರಿಯಾ ರಾಣಿಯು ಈಸ್ಟ್ ಇಂಡಿಯ ಕಂಪನಿಯೊಂದಿಗಿನ ಒಪ್ಪಂದವನ್ನು ಅಂತ್ಯಗೊಳಿಸಿ ತಾನೇ ಭಾರತ ಸಾಮ್ರಾಜ್ಯದ ಆಡಳಿತವನ್ನು ಕೈಗೆತ್ತಿಕೊಂಡಳು. ಹೀಗೆ ಭಾರತದಲ್ಲಿಯೂ ಸಂಸತ್ ರಾಜ್ಯ ಪ್ರಾರಂಭವಾಯಿತು. ಈ ಘಟನೆಯನ್ನು ಸಂಭ್ರಮದಿಂದ ಆಚರಿಸಲು ಮುಂಬಯಿನ ಶರೀಫರು 15-12-1858ರದು ಒಂದು ಸಭೆ ಕರೆದರು. ಪುರಪ್ರಮುಖರಾದ ನಾನಾ ಅವರು ಆ ಸಭೆಯ ಅಧ್ಯಕ್ಷತೆ ವಹಿಸಿದ್ದರು. ತಮ್ಮ ಭಾಷಣದಲ್ಲಿ ನಾನಾ ಅವರು ಈ ಸಂದರ್ಭವನ್ನು ಸ್ಮರಣೀಯವಾಗಿಸಲು ರಾಣಿಯ ಹೆಸರಿನಲ್ಲಿ ಒಂದು ಸುಂದರ ಉದ್ಯಾನವನವನ್ನು ಸ್ಥಾಪಿಸಿ ಅದರ ಒಂದು ಭಾಗದಲ್ಲಿ ಒಂದು ವಸ್ತು ಸಂಗ್ರಹಾಲಯವನ್ನು ನೆಲೆಗೊಳಿಸುವ ಸಲಹೆ ಮುಂದಿಟ್ಟರು. ಇದು ಸಾಧಿತವಾಗಲು ನಾಗರಿಕರು ಮುಕ್ತ ಹಸ್ತದಿಂದ ದೇಣಿಗೆಗಳನ್ನು ಕೊಡಬೇಕೆಂದು ಪ್ರಾರ್ಥಿಸಿದರು. ತಾವು ಸ್ವತಃ 25,000 ರೂಪಾಯಿಗಳ ದೇಣಿಗೆಯನ್ನು ಪ್ರಕಟಿಸಿದರು. ಆಗಿನ ಕ್ಯೂರೇಟರ್ ಆಗಿದ್ದ ಡಾ. ಜಾರ್ಜ್ ಬರ್ಡ್‌ವುಡ್ ತಮ್ಮ ಭಾಷಣದಲ್ಲಿ ಒಂದು ಲಕ್ಷ ರೂಪಾಯಿಗಳ ದೇಣಿಗೆ ಸಂಗ್ರಹಿಸುವ ವಾಗ್ದಾನ ಮಾಡಿದರು. ಸರ್ಕಾರದ ವತಿಯಿಂದಲೂ ಒಂದು ಲಕ್ಷ ರೂಪಾಯಿಗಳ ಸಹಾಯಧನ ಘೋಷಿತವಾಯಿತು. ಉಳಿದ ಭಾಷಣಕಾರರಾದ ಬೋಮನ್ ಜೀ ಹೊಮ್ಸ ಜೀ, ಸರ್, ಮಂಗಲದಾಸ್, ಡಾ. ಭಾವೂದಾಜೀ ಮತ್ತು ಮಹರ್ಷಿ ದಾದಾಭಾಯಿ ನವರೋಜಿ, ಅವರುಗಳೂ ಸಹ ನಾನಾ ಅವರ ಸಲಹೆಯನ್ನು ಅನುಮೋದಿಸಿದರು. ನಂತರ ಒಂದು ಸುಂದರ ಬೃಹತ್ ಕಟ್ಟಡವನ್ನು ವಸ್ತು ಸಂಗ್ರಹಾಲಯಕ್ಕಾಗಿ ಕಟ್ಟಿ ಅದರ ಸುತ್ತಲೂ ಉಪಯುಕ್ತ ಮರಗಳನ್ನೂ ಹೂಗಿಡಗಳನ್ನೂ ಒಳಗೊಂಡ ಒಂದು ಸುಂದರ ಉದ್ಯಾನವನವನ್ನು ನಿರ್ಮಿಸಬೇಕೆಂಬ ನಿಲುವಳಿ ಸಭೆಯಲ್ಲಿ ಅನುಮೋದಿತವಾಯಿತು. 'ವಿಕ್ಟೋರಿಯಾ ಅಂಡ್ ಮ್ಯೂಸಿಯಂ ಗಾರ್ಡನ್ಸ್' ಎಂದು ಕರೆಯಲಾಗುವ ಇದರ ಸಾಧನೆಗಾಗಿ ಸಾರ್ವಜನಿಕರು ಧಾರಾಳ ದೇಣಿಗೆಗಳನ್ನು ಮತ್ತು ಸರ್ಕಾರವು ಒಂದು ಸೂಕ್ತ ಸ್ಥಳವನ್ನು ಕೊಡುವಂತೆ ಕೋರುವ ನಿರ್ಣಯವು ಅನುಮೋದಿತವಾಯಿತು.

ವಾಗ್ದಾನ ಮಾಡಿದಂತೆ ಒಂದು ಉತ್ತಮ ಸ್ಥಳವನ್ನು ಕೊಡದ ಗಿಡಗಂಟೆಗಳಿಂದ ತುಂಬಿದ್ದ, ಸಮತಲವಲ್ಲದ ಒಂದು ಕೊಳಕು ಪ್ರದೇಶವನ್ನು ಈ ಉದ್ದೇಶಕ್ಕಾಗಿ ಕೊಡುವ ಸೂಚನೆ ಸರ್ಕಾರದಿಂದ ಬಂತು. ಈ ಯೋಜನೆಯಲ್ಲಿ ಕಾರ್ಯಪ್ರವೃತ್ತರಾಗಿದ್ದ ಅನೇಕರಿಗೆ ಈ ಸ್ಥಳ ಹಿಡಿಸಲಿಲ್ಲವಾದ್ದರಿಂದ ಇದನ್ನು ತಿರಸ್ಕರಿಸುವ ಸೂಚನೆ ಮಾಡಿದರು. ಆದರೆ ನಾನಾ ಅವರು ತಮ್ಮ ದೂರದರ್ಶಿತ್ವದಿಂದಾಗಿ ಅಭಿವೃದ್ಧಿಯ ನಂತರ ಈ ಪ್ರದೇಶ ಉದ್ದೇಶಿತ ಯೋಜನೆಗೆ ಸೂಕ್ತವಾದ ಸ್ಥಳವಾಗುತ್ತದೆ ಎಂಬುದನ್ನು ಊಹಿಸಿದರು. ಅದನ್ನು ತಮ್ಮ ಮಿತ್ರರಿಗೂ ಮನಗಾಣಿಸಿ ಈ ಸ್ಥಳವನ್ನು ಒಪ್ಪಿಕೊಳ್ಳುವಂತೆ ಮಾಡುವಲ್ಲಿ ಸಫಲರಾದರು. ಕೊನೆಗೆ 37 ಎಕರೆಯ ಈ ಪ್ರದೇಶವನ್ನು ಉದ್ದೇಶಿತ ಉದ್ಯಾನವನ ಮತ್ತು ವಸ್ತು ಸಂಗ್ರಹಾಲಯದ ನಿರ್ಮಾಣಕ್ಕಾಗಿ ನಾನಾರ ನೇತೃತ್ವದ 'ಆಗ್ರೋ ಹಾರ್ಟಿಕಲ್ಚರಲ್ ಸೊಸೈಟಿ'ಗೆ ವಹಿಸಿಕೊಡಲಾಯಿತು. ಈ ಯೋಜನೆಯ ಕಾರ್ಯಗಳು ಪ್ರಗತಿಯಲ್ಲಿದ್ದಾಗ 1862ರಲ್ಲಿ

ಕ್ವೀನ್ ವಿಕ್ಟೋರಿಯಾಳ ಗಂಡ ಆಲ್ಬರ್ಟ್ ರಾಜಕುಮಾರ ನಿಧನ ಹೊಂದಿದ. ಆ ಸಂದರ್ಭದಲ್ಲಿ ಒಂದು ಸಂತಾಪ ಸೂಚಕ ಸಭೆ ನಡೆದು ಮೃತರ ಗೌರವಾರ್ಥ ಉದ್ದೇಶಿತ ವಿಕ್ಟೋರಿಯಾ ಮ್ಯೂಸಿಯಂ ಅಂಡ್ ಗಾರ್ಡನ್ಸ್ ಎಂಬ ಹೆಸರನ್ನು ವಿಕ್ಟೋ-ರಿಯಾ ಗಾರ್ಡನ್ಸ್ ಅಂಡ್ ಆಲ್ಬರ್ಟ್ ಮ್ಯೂಸಿಯಂ' ಎಂದು ಅಲ್ಲ, ಉದ್ಯಾನವನದ ನಿರ್ವಹಣೆಗಾಗಿ ಪ್ರತಿತಿಂಗಳು 400 ರೂಪಾಯಿಗಳ ನಷ್ಟವನ್ನು ಈ ಸಂಸ್ಥೆ ಅನುಭವಿಸುವಂತಾಗಿತ್ತು. ಹೀಗಾಗಿ ನಾನಾ ಅವರು ಇದೇ ಸ್ಥಿತಿ ಮುಂದುವರೆದರೆ ಅದು ಸಂಗ್ರಹಾಲಯದ ಮತ್ತು ಉದ್ಯಾನವನದ ಉಳಿವಿಗೆ ಧಕ್ಕೆ ತರುತ್ತದೆಂದು ಗ್ರಹಿಸಿ ಇದರ ಆಡಳಿತವನ್ನು ಸರ್ಕಾರ ಮತ್ತು ಪುರಸಭೆಗಳು ವಹಿಸಿಕೊಳ್ಳಬೇಕು ಎಂದು ಅಂದೇ ಸೂಚಿಸಿದ್ದರು. ಇಂದು ಪುರಸಭೆಯ ಆಡಳಿತದಲ್ಲಿರುವ ಈ ಉದ್ಯಾನವನ ಮತ್ತು ವಸ್ತು ಸಂಗ್ರಹಾಲಯಗಳು ಅಲ್ಲಿರುವ ಸುಂದರ ಕಲಾಕೃತಿಗಳ ಮತ್ತು ವಿವಿಧ ಜಾತಿಯ ಸಸ್ಯಗಳ ನೆಲೆವೀಡಾಗಿ ಆಸಕ್ತರ ಅಧ್ಯಯನ ಕೇಂದ್ರಗಳಾಗಿವೆ. ಜೊತೆಗೆ ಉದ್ಯಾನವನದಲ್ಲಿ ಪ್ರಾಣಿ ಸಂಗ್ರಹಾಲಯವೂ ಪ್ರಾರಂಭವಾಗಿ ಸಾಮಾನ್ಯರ ಅದರಲ್ಲೂ ಪುಟಾಣಿ ಮಕ್ಕಳ ಮನರಂಜನಾ ಕೇಂದ್ರವಾಗಿ ಪರಿವರ್ತಿತವಾಗಿದೆ. ಮುಂಬೈನ ಕಾಂಕ್ರೀಟ್ ಕಾಡಿನ ಮಧ್ಯದ ಈ ವಿಶಾಲ ರಮಣೀಯ ಸ್ಥಳವನ್ನು ಸಂದರ್ಶಿಸಿದಾಗ ಮನಸ್ಸು ಮುದಗೊಂಡು ಸ್ವಲ್ಪ ಕಾಲವಾದರೂ ಯಾಂತ್ರಿಕ ಮುಂಬೈಯನ್ನು ಮರೆಯುವ ಶಾಂತ ಮನಸ್ಥಿತಿ ನಮ್ಮದಾಗುತ್ತದೆ. ನಾನಾರು ಕಂಡ ಅಂದಿನ ಕನಸು ಇಂದು ಸಾಕಾರವಾದದ್ದನ್ನು ನೋಡಿದಾಗ ಅದರ ಇತಿಹಾಸ ಗೊತ್ತಿರುವ ಯಾರಿಗಾದರೂ ಅವರ ಸಾಧನೆಯ ಬಗ್ಗೆ ಹೆಮ್ಮೆಯಾದರೆ ಪ್ರಾರಂಭದಿಂದ ಕೊನೆಯವರೆಗೆ ಇದರ ನಿರ್ಮಾಣಕ್ಕಾಗಿ ದುಡಿದು ಅದರ ಇಂದಿನ ಸ್ಥಿತಿಗೆ ಕಾರಣರಾದ ನಾನಾ ಅವರನ್ನು ಗೌರವಿಸುವ ಮಾತಿರಲಿ ಅವರ ಸೇವೆಯನ್ನು ಸ್ಮರಿಸುವ ಯಾವುದೇ ಗುರುತುಗಳೂ ಅಲ್ಲಿಲ್ಲದಿರುವುದನ್ನು ಕಂಡಾಗ ವಿಷಾದವಾಗುತ್ತದೆ. ಮುಂಬಯಿ ಕಲಾ ಪ್ರಪಂಚದ ರೂವಾರಿಯಾದ ನಾನಾ ಅವರನ್ನು ಸೂಕ್ತವಾಗಿ ಸ್ಮರಿಸುವ ಸ್ಮಾರಕದ ನಿರ್ಮಾಣ ಮಾತ್ರ ಇಂತಹ ಕೊರತೆಗಳನ್ನು ನೀಗಿ ಅವರಿಗೆ ನಾವು ಸಲ್ಲಿಸುವ ಕೃತಜ್ಞತೆಯ ಕುರುಹಾಗಬಲ್ಲದು.

## ಮಾನವತಾವಾದಿ ನಾಯಕ

ನಾಯಕನೊಬ್ಬ ಪ್ರಥಮತಃ ಒಬ್ಬ ಮಾನವತಾವಾದಿಯಾಗಿರಬೇಕೆಂಬ ಸತ್ಯವನ್ನು ನಾನಾ ಬದುಕಿ ತೋರಿದರು. ಅವರ ಕಾರ್ಯಕ್ಷೇತ್ರ ಮುಂಬೈ ಆಗಿದ್ದರೂ, ಅವರ ಹೆಚ್ಚಿನ ಕಾರ್ಯ ಚಟುವಟಿಕೆಗಳ ಫಲಾನುಭವಿಗಳು ಮುಂಬೈ ನಾಗರಿಕರೇ ಆಗಿದ್ದರೂ ಅವರ ಹೃದಯ ಸದಾ ಇಡೀ ಮಾನವ ಕುಲದ ಕಲ್ಯಾಣಕ್ಕಾಗಿಯೇ ತುಡಿಯುತ್ತಿತ್ತು ಎಂಬುದನ್ನು ನಾವು ಅವರ ಜೀವನದ ಅನೇಕ ಪ್ರಸಂಗಗಳಲ್ಲಿ ಕಾಣುತ್ತೇವೆ. ಅವರ ಪ್ರೀತಿ, ಅನುಕಂಪಗಳು ರಾಜ್ಯ, ದೇಶದ ಎಲ್ಲೆಗಳನ್ನು ಮೀರಿ ಪ್ರಪಂಚದ ಯಾವುದೇ ಭಾಗದಲ್ಲಿನ ನೊಂದವರ ಸಹಾಯಕ್ಕಾಗಿ ಧಾವಿಸುತ್ತಿದ್ದವು. ಮುಂಬೈ ಪ್ರಾಂತ್ಯದ ನಾಗರಿಕರು ಯಾವುದೇ ತೊಂದರೆ ಅನುಭವಿಸಿದಾಗಲೂ ಅವರು ಕೂಡಲೇ ಕಾರ್ಯಪ್ರವೃತ್ತರಾಗಿ ಅನ್ಯಾಯವಾದವರಿಗೆ ವಿಳಂಬವಿಲ್ಲದಂತೆ ನ್ಯಾಯ ಒದಗಿಸುವಲ್ಲಿ ಸಹಾಯ ಮಾಡುತ್ತಿದ್ದರು ಎಂಬುದನ್ನು ನಾವೀಗಾಗಲೇ ನೋಡಿದ್ದೇವೆ. ಅದರಂತೆಯೇ ದೇಶದ ಇತರ ಭಾಗಗಳಲ್ಲಾಗಲಿ, ಹೊರದೇಶಗಳಲ್ಲಾಗಲಿ ನೈಸರ್ಗಿಕ ಅಥವಾ ಇನ್ನಾವುದೇ ಕಾರಣದಿಂದ ಜನಸಮೂಹ ತೊಂದರೆಗೀಡಾದಾ ಅದರ ನಿವಾರಣೆಗಾಗಿ ಅವರಿಗಿಂತ ಉತ್ತಮ ಸ್ಥಿತಿಯಲ್ಲಿರುವವ ಸಹಾಯ ನೀಡಬೇಕಾದ್ದು ಮಾನವೀಯ ಕರ್ತವ್ಯ ಎಂಬುದನ ಜನತೆಗೆ ಮನಗಾಣಿಸಿ ಅವರು ಅಂತರ ಕಾರ್ಯದ ಆಸಕ್ತಿವಹಿಸುವಂತೆ ಮಾಡುವಲ್ಲಿ ನಾನಾ ಸಫಲರಾಗುತ್ತಿದ್ದ ಎಲ್ಲರಿಗಿಂತ ಮುಂಚೆ ತಾವು ತನುಮನಧನಗಳಿಂದ ನೊಂದವರಿ ಸಹಾಯ ಮಾಡಿ ಇತರರಿಗೆ ಮಾದರಿಯಾಗುತ್ತಿದ್ದರು. ಅಂತ ಅನೇಕ ಪ್ರಸಂಗಗಳನ್ನು ನಾವು ಅವರ ಜೀವನದಲ್ಲಿ ಕಾಣುತ್ತೇ

## ಬರಗಾಲ ಪೀಡಿತರಿಗೆ ಸಹಾಯ

ಐರ್ಲೆಂಡಿನಲ್ಲಿ ಭೀಕರ ಬರಗಾಲ ಬಂದು ಐರಿಷ್ ಜನ ತುಂಬ ಸಂಕಷ್ಟಕ್ಕೆ ಸಿಲುಕಿದ್ದರು. ಅವರಿಗೆ ಸೂಕ್ತ ಸಹಾಯ ಮಾಡ ಮುಂಬಯಿ ಶರೀಫರು 4-6-1846ರಂದು ಸಾರ್ವಜನಿಕ ಸಭೆಯನ್ನು ಕರೆದಿದ್ದರು. 20-6-1846 ರೊಳಗೆ ಸಾಕಷ್ಟು ಹ ಸಂಗ್ರಹ ಮಾಡಿ ಐರಿಷ್ ಜನತೆಗೆ ಕಳಿಸಲು ಸಾಧ್ಯವಾಗುವಂ ಒಂದು ಸಮಿತಿಯನ್ನು ನೇಮಕ ಮಾಡಲಾಯಿತು. ಸ ಹೆನ್ರಿರೋಬಾರ್, ಜಗನ್ನಾಥ ಶಂಕರ ಶೇಟ್, ಜೆ. ವೈಮಾ ಮತ್ತಿತರರಿದ್ದ ಆ ಸಮಿತಿಯು ಅಲ್ಪ ಅವಧಿಯಲ್ಲಿಯೇ ಹಣ ಸಂಗ್ರ ಮಾಡಿ ಬರಗಾಲ ಪೀಡಿತರ ಸಹಾಯಕ್ಕೆ ಬಂದಿತು. ನಾನಾ ಅವ ಸಕ್ರಿಯವಾಗಿ ದುಡಿದದ್ದಲ್ಲದೇ ತಾವೂ ಉದಾರ ಧನ ಸಹಾ ಮಾಡಿದರು. ಹೀಗೆಯೇ ಕ್ರಿಮಿಯನ್ ಯುದ್ಧದಲ್ಲಿ ಅನೇಕ ಸೈನಿಕ ಮೃತರಾದರು. ಅವರ ಪತ್ನಿ ಮತ್ತು ಮಕ್ಕಳಿಗೆ ಸಹಾಯ ಮಾಡ ನಿಧಿ ಸಂಗ್ರಹಿಸಲು ನಿರ್ಧರಿಸಲಾಯಿತು. ಮುಂಬಯಿಯ ಗವರ್ನ ಎಲ್ಫಿನ್‌ಸ್ಟನ್ ಅವರು ನಾನಾ ಅವರನ್ನೊಳಗೊಂಡ ಒಂ ಸಮಿತಿಯನ್ನು ಈ ಕಾರ್ಯಕ್ಕಾಗಿ ನೇಮಿಸಿದರು. ಸಮಿತಿ ಕೆಲಸಕ್ಕೆ ನಾನಾ ಅವರು ಪೂರ್ಣ ಸಹಕಾರ ಕೊಟ್ಟರು.

## ಲಂಕಾಶೈರ್ ಕೆಲಸಗಾರರ ನಿಧಿ

1862-63ರ ಅಮೇರಿಕಾ ಯುದ್ಧದಿಂದಾ ಲಂಕಾಶೈರ್‌ನ ಅನೇಕ ಜವಳಿ ಗಿರಣಿಗಳು ಮುಚ್ಚಲ್ಪಟ್ಟ ಅದರ ಕೆಲಸಗಾರರು ನಿರುದ್ಯೋಗಿಗಳಾಗಿ ಅವರ ಸಂಸಾ ನಿರ್ವಹಣೆ ಕಷ್ಟವಾಯಿತು. ಈ ನಿರುದ್ಯೋಗಿ ಕೆಲಸಗಾರರಿ ಸಹಾಯ ಸಲ್ಲಿಸಲು ಆಗಿನ ಗವರ್ನರ್ ಸರ್ ಬ್ರಾಟ್ಲೆ ಪ್ರೇ ರೆ 17-9-1861ರಂದು ಪುರಭವನದಲ್ಲಿ ಒಂದು ಸಭೆ ಕ-ರೆದರು. ತಮ್ಮ ಕೆಲಸದ ಒತ್ತಡಗಳಿಂದ ನಾನಾ ಅಂದಿನ ಸಭೆಗೆ ಹಾಜರಾಗಿರದಿದ್ದರೂ ಅವರನ್ನು ಸೇರಿದಂತೆ ಒಂದು ಸಮಿತಿಯನ್ನು ರಚಿಸಲಾಯಿತು. ನಂತರದಲ್ಲಿ ನಾನಾ ಮತ್ತು ಇತರ ಸಮಿತಿ ಸದಸ್ಯರು ಸಮರ್ಥವಾಗಿ ದುಡಿದು ಒಂದು ಲಕ್ಷ ಒಂಭತ್ತು ಸಾವಿರ ರೂಪಾಯಿಗಳ ನಿಧಿ ಸಂಗ್ರಹಿಸಿದರು.

## ಮದ್ರಾಸ್ ಪ್ರಾಂತ್ಯದ ನೇಕಾರರ ಬವಣೆ

ಹತ್ತಿ ಬೆಳೆಯ ವೈಫಲ್ಯದಿಂದಾಗಿ ಮದ್ರಾಸ್‌ನ ಕಾಂಜೀವರಂ ಜಿಲ್ಲೆಯಲ್ಲಿ ಹತ್ತಿಯ ಕೊರತೆ ಉಂಟಾಗಿ ಅಲ್ಲಿನ ನೇಕಾರರಿಗೆ ಕೆಲಸವಿಲ್ಲದಂತಾಯಿತು. ಅವರಿಗೆ ಸಹಾಯ ಮಾಡಲು ಮುಂಬಯಿನಲ್ಲಿ ಒಂದು ನಿಧಿ ಸಂಗ್ರಹ ಸಮಿತಿಯನ್ನು ರಚಿಸಲಾಯಿತು. ನಾನಾ ಅವರು 5,000 ರೂಪಾಯಿಗಳ ಹಣ ಕೊಟ್ಟಿದ್ದಲ್ಲದೆ 80,000 ರೂಪಾಯಿಗಳ ನಿಧಿ ಸಂಗ್ರಹಿಸಲು ಸಮಿತಿಗೆ ಸಹಾಯ ಮಾಡಿದರು. ಈ ಹಣವನ್ನು ಮದ್ರಾಸ್ ಸರ್ಕಾರಕ್ಕೆ ಕಳಿಸಲಾಯಿತು.




## ಲ್ಕತ್ತಾದಲ್ಲಿ ಚಂಡಮಾರುತ

1846ರಲ್ಲಿ ಕಲ್ಕತ್ತಾದಲ್ಲಿ ಚಂಡಮಾರುತದಿಂದ ಅನೇಕರು ಮ್ಮ ಜೀವವನ್ನು, ಇನ್ನೂ ಅನೇಕರು ಮನೆ ಮಾರುಗಳನ್ನು ಳೆದುಕೊಂಡರು. ಬೆಳೆದು ನಿಂತಿದ್ದ ಬೆಳೆಯು ನಾಶವಾಯಿತು. ಸಮಯದಲ್ಲಿ ಪುಣೆಯಲ್ಲಿ ಶಾಸನ ಸಭೆ ನಡೆಯುತ್ತಿತ್ತು. ಪುಣೆಗೆ ಈ ಸುದ್ದಿ ಮುಟ್ಟಿದಾಗ ನಾನಾ, ರುಸ್ತುಂಜೀ ಜೀಜೀಭಾಯ್ ಮತ್ತು ಅವರ ಇತರ ಸಹೋದ್ಯೋಗಿಗಳಿಗೆ ಹಳ ವಿಷಾದವಾಯಿತು. ಕೂಡಲೇ ಸಂತ್ರಸ್ತರ ಸಹಾಯಕ್ಕಾಗಿ ಧಿ ಸಂಗ್ರಹಿಸುವ ನಿರ್ಧಾರ ಮಾಡಲಾಯಿತು. ತಕ್ಷಣವೇ ಪುಣೆಯ ನಾಗರಿಕರ ಸಹಕಾರದಿಂದ ಒಂದು ಲಕ್ಷ, ಐವತ್ತು ಸಾವಿರ ರೂಪಾಯಿಗಳ (1,50,000) ಬೃಹತ್ ಮೊತ್ತವು ಸಂಗ್ರಹಿತವಾಗಿ ಅದನ್ನು ಕಲ್ಕತ್ತಾಗೆ ಕಳಿಸಲಾಯಿತು. ನಾನಾ ಅವರು ಈ ನಿಧಿಗೆ 5,000 ರೂಪಾಯಿಗಳನ್ನು ಕೊಟ್ಟರು.

## ಗುಜರಾತಿನಲ್ಲಿ ಆಹಾರ ಸಾಮಗ್ರಿಗಳ ಕೊರತೆ

ಆಹಾರ ಸಾಮಗ್ರಿಗಳ ಕೊರತೆಯಿಂದಾಗಿ 1864ರಲ್ಲಿ ಗುಜರಾತಿನಲ್ಲಿ ಆಹಾರ ಸಾಮಗ್ರಿಗಳ ಬೆಲೆಯೇರಿ ನಾಗರಿಕರು ತುಂಬ ಬವಣೆಗೊಳಗಾದರು. ಒಂದು ರೀತಿಯಲ್ಲಿ ಬರಗಾಲದ ಪರಿಸ್ಥಿತಿ ನಿರ್ಮಾಣವಾಯಿತು. ನಾನಾ ಅವರು ಪರಿಸ್ಥಿತಿಯ ಗಂಭೀರತೆಯನ್ನು ಅರಿತುಕೊಂಡು ಅಲ್ಲಿನ ಜನಗಳ ಸಹಾಯಕ್ಕೆ ಮುಂದಾದರು. ತಮ್ಮ ಮಿತ್ರರುಗಳಾದ ಪ್ರೇಮಾಭಾಯ್ ಹೇಮಾಭಾಯ್, ಕಾವ್ಸ್‌ಜೀ ಜಹಾಂಗೀರ್, ಪ್ರೇಮಚಂದ್ರಶೇಟ್ ಅವರ ಸಹಕಾರದಿಂದ ಪರಿಹಾರ ಸಮಿತಿಯೊಂದನ್ನು ರಚಿಸಿಕೊಂಡು 5,00,000 ರೂಪಾಯಿಗಳನ್ನು ಸಂಗ್ರಹಿಸಿ ಅದರಿಂದ ಮುಂಬಯಿ ಮಾರುಕಟ್ಟೆಯಲ್ಲಿ ಆಹಾರ ಧಾನ್ಯಗಳನ್ನು ಖರೀದಿಸಿ ಗುಜರಾತಿಗೆ ಕಳಿಸಿಕೊಟ್ಟರು. ಅಲ್ಲಿ ನ್ಯಾಯ ಬೆಲೆಯಲ್ಲಿ

## ನೆನಪಿನಂಗಳದಲ್ಲಿ ಸ್ಮಾರಕ

ತಾನು ಸಲ್ಲಿಸಿದ ಸೇವೆಗೆ ಜನತೆಯ ಕೃತಜ್ಞತೆ-ಯ ದ್ಯೋತಕವಾದ ಅಪರಿಮಿತ ಪ್ರೀತಿ ವಿಶ್ವಾಸಗಳನ್ನು ಗಳಿಸಿದವನೇ ನಿಜವಾದ ಜನನಾಯಕ. ಸಾಮಾನ್ಯವಾಗಿ ತಮ್ಮ ನಾಯಕನ ಮರಣಾನಂತರ ಅವರ ಗುಣಗಾನ ಮಾಡಿ ಅವನಿಗೆ ಸ್ಮಾರಕಗಳನ್ನು ನಿರ್ಮಿಸುವುದು ನಮ್ಮಲ್ಲಿನ ಸಾಮಾನ್ಯ ಪದ್ಧತಿ. ಆದರೆ ನಾನಾ ಇದಕ್ಕೂ ಒಂದು ಅಪವಾದವಾಗಿದ್ದರು. ಜನರಿಗೆ ಅವರ ಮೇಲೆ ಎಷ್ಟೊಂದು ಪ್ರೀತ್ಯಾದರಗಳಿದ್ದವೆಂದರೆ ಅವರು ಬದುಕಿರುವಾಗಲೇ ತಮ್ಮ ಕೃತಜ್ಞತೆಯನ್ನು ಸೂಚಿಸುವ ಅದಮ್ಯ ಬಯಕೆ ಜನರಿಗಿತ್ತು. ಹೀಗಾಗಿ ನಾನಾ ಅವರ ಸಾರ್ಥಕ ಸೇವೆಗೆ ಸೂಕ್ತ ಸ್ಮಾರಕವನ್ನು ರಚಿಸುವ ಸಾರ್ಥಕ ಕಾರ್ಯ ಅವರು ಜೀವಂತವಿದ್ದಾಗಲೇ ಪ್ರಾರಂಭವಾದದ್ದು ಒಂದು ಅಪರೂಪದ ಪ್ರಸಂಗ.

ಈ ಹಿಂದೆ ಮುಂಬಯಿನ ಖ್ಯಾತನಾಮಿಗಳು ಅವಸಾನ ಹೊಂದಿದಾಗ ಅವರಿಗೆ ಸೂಕ್ಷ್ಮ ಸ್ಮಾರಕಗಳನ್ನು ನಿರ್ಮಿಸುವಲ್ಲಿ ನಾನಾ ಪ್ರಮುಖ ಪಾತ್ರವಹಿಸಿದ್ದರು. ಹೀಗೆ-ಯೇ ತಮ್ಮ ಮಿತ್ರ ಜೇಮ್‌ಶೇಟ್‌ಜೀ ಜೀಜೀಭಾಯ್ ಮೃತರಾದಾಗ ಅವರ ಸೇವೆಯನ್ನು ಸ್ಮರಿಸಿ ಅವರ ನೆನಪು ಅಜರಾಮರವಾಗುವಂತೆ ಮಾಡಿದವರಲ್ಲಿ ನಾನಾ ಪ್ರಮುಖರು. ಹೀಗಾಗಿ ಅವರ ಪುತ್ರ ಜೇಮ್‌ಶೇಟ್ ಜೀಜೀಭಾಯ್ (2) ನಾನಾ ಅವರ ಜೀವಿತ ಕಾಲದಲ್ಲಿಯೇ ಅವರಿಗೆ ಸೂಕ್ತ ಗೌರವ ಸಲ್ಲಬೇಕೆಂಬ ಖಚಿತ ಅಭಿಪ್ರಾಯ ಉಳ್ಳವರಾಗಿದ್ದು ಈ ದಿಕ್ಕಿನಲ್ಲಿ ಪ್ರಾಥಮಿಕ ಪ್ರಯತ್ನಗಳನ್ನು ಪ್ರಾರಂಭಿಸಿದರು. ಅದಕ್ಕಾಗಿ 1864ರ ಪ್ರಾರಂಭದಲ್ಲಿ ಕಳೆದ ನಲವತ್ತು ವರ್ಷಗಳಲ್ಲಿ ನಾನಾ ಅವರು ಸಲ್ಲಿಸಿದ ಸೇವೆಯ ವಿವರಗಳನ್ನು ಪಟ್ಟಿಮಾಡಿ ಅವರಿಗೆ ಒಂದು ಸೂಕ್ತ ಸ್ಮಾರಕ ಸಲ್ಲಿಸುವ ಪ್ರಸ್ತಾಪವಿರುವ ಒಂದು ಸುತ್ತೋಲೆಯನ್ನು ಪ್ರಮುಖ ನಾಗರಿಕರಿಗೆ ಅವರು ಕಳಿಸಿದರು.

ಈ ಸುತ್ತೋಲೆಯು ನಾಗರಿಕರನ್ನು ತಲುಪಿದಾಗ ಅವರು ನಾನಾರಿಗೆ ಯಾವುದು ಉತ್ತಮ ಸ್ಮಾರಕವಾಗಬಲ್ಲುದು ಎಂಬುದರ ಬಗ್ಗೆ ಚರ್ಚಿಸತೊಡಗಿದರು. ಕೆಲವರು ಒಂದು ಬೃಹತ್ ಸಭಾಂಗಣವು ಇದಕ್ಕೆ ಸೂಕ್ತ ಎಂದರೆ, ಇನ್ನು ಕೆಲವರು ಅವರ ಒಂದು ಭವ್ಯ ಮೂರ್ತಿಯನ್ನು ಸೂಕ್ತ ಸ್ಥಳದಲ್ಲಿ

ಸ್ಥಾಪಿಸುವುದು ಉತ್ತಮ ಎಂದು ಅಭಿಪ್ರಾಯಪಟ್ಟರು. ಒಬ್ಬ 'ವ್ಯಕ್ತಿ' ಇದ್ದಾಗ ಅವರ ವೇಷ-ಭೂಷಣಗಳು, ಮಾತುಕತೆಗಳು, ನೀತಿನಡವಳಿಕೆಗಳು ಸಮಕಾಲೀನರ ಮುಂದಿದ್ದು ಅವರನ್ನು ಪ್ರೋತ್ಸಾಹಿಸುತ್ತಿರುತ್ತವೆ. ಆದ್ದರಿಂದ ಮುಂದಿನ ಪೀಳಿಗೆಯವರು ಅಂತಹ ವ್ಯಕ್ತಿಯಿಂದ ಪ್ರೇರಣೆ ಪಡೆಯಲು ಅವರ ಪ್ರತಿಮೆಯೇ ಸೂಕ್ತ ಸ್ಮಾರಕವಾಗುತ್ತದೆ ಎಂಬುದು ಬಹುಜನಗಳ ಅಭಿಪ್ರಾಯವಾಗಿತ್ತು. ಈ ಸಂಬಂಧದಲ್ಲಿ 25-2-1864ರಂದು ಮಜಗಾಂವ್‌ನ ಸರ್ ಜೀಜೀಭಾಯ್ ಅವರ ಬಂಗಲೆಯಲ್ಲಿ ಒಂದು ಪ್ರಾಥಮಿಕ ಸಭೆ ನಡೆಯಿತು. ವಿವಿಧ ಜನಾಂಗಗಳ ಇನ್ನೂರಕ್ಕೂ ಹೆಚ್ಚಿನ ಪ್ರತಿಷ್ಠಿತರು ಅದರಲ್ಲಿ ಭಾಗವಹಿಸಿದ್ದರು. ದೀರ್ಘ ಚರ್ಚೆಯ ನಂತರ ಒಂದು ಪ್ರತಿಮೆಯ ನಿರ್ಮಾಣವೇ ಸೂಕ್ತ ಸ್ಮಾರಕವಾಗುತ್ತದೆ ಎಂದು ನಿರ್ಧರಿಸಲಾಯಿತು, ತದನಂತರ ಇನ್ನೂರಕ್ಕೂ ಹೆಚ್ಚಿನ ನಾಗರಿಕರು ಸಹಿ ಮಾಡಿದ ಒಂದು ಮನವಿ ಪತ್ರವನ್ನು ಮುಂಬಯಿನ ಶರೀಫ್ ಆಗಿದ್ದ ಡಾ. ಬರ್ಡ್‌ವುಡ್ ಅವರಿಗೆ ಕೊಟ್ಟು ಈ ಸಂಬಂಧದಲ್ಲಿ ಒಂದು ಸಾರ್ವಜನಿಕ ಸಭೆಯನ್ನು ಕರೆಯಲು ಕೋರಲಾಯಿತು. ಅದರಂತೆ 9-3-1864ರಂದು ಸಂಜೆ 4 ಗಂಟೆಗೆ ಪುರಭವನದಲ್ಲಿ ಜಗನ್ನಾಥ ಶಂಕರಶೇಟ್ ಅವರಿಗೆ ಒಂದು ಸ್ಮಾರಕವನ್ನು ನಿರ್ಮಾಣ ಮಾಡುವ ವಿಷಯವನ್ನು ಚರ್ಚಿಸಲು ಒಂದು ಸಾರ್ವಜನಿಕ ಸಭೆಯನ್ನು ಏರ್ಪಡಿಸಲಾಗಿದೆ ಎಂಬ ಜಾಹಿರಾತು ವೃತ್ತ ಪತ್ರಿಕೆಗಳಲ್ಲಿ ಪ್ರಕಟವಾಯಿತು. ಪತ್ರಿಕೆಗಳ ಸಂಪಾದಕರೂ ಸಹಿತ ಈ ಸೂಚನೆಯನ್ನು ಸಮರ್ಥಿಸಿದರು. ಏಕೆಂದರೆ ನಾನಾ ಒಬ್ಬ ವ್ಯಕ್ತಿಯಾಗಿರದೆ ಮಾನವ ಕಲ್ಯಾಣಕ್ಕಾಗಿ ಬದುಕಿದ ಒಂದು ಸಂಸ್ಥೆಯಾಗಿದ್ದರು. ನಾನಾ ಅವರು ಉದಾರ ಹೃದಯಿ, ವಿಶಾಲ ಮನೋಭಾವದವರು, ಸಮಾಜ ಶಾಸ್ತ್ರಜ್ಞರು, ಕುಶಾಗ್ರಮತಿಗಳು, ಸದಾ ಮಾನವ ಕಲ್ಯಾಣಕ್ಕಾಗಿ ದುಡಿಯುವಲ್ಲಿ ತಮ್ಮ ಸಮಯ, ಹಣ, ಚಿಂತನೆಯನ್ನು ವ್ಯಯಿಸಬಲ್ಲವರೂ ಆಗಿದ್ದರು. ಮಾನವ ಕಲ್ಯಾಣದ ಕೆಲಸಕ್ಕಾಗಿ ಲಕ್ಷಾಂತರ ರೂಪಾಯಿಗಳನ್ನು ವ್ಯಯಿಸಿದ ಇಂತಹ ವ್ಯಕ್ತಿ ಕಾಣ ಬರುವುದು ಅಪರೂಪ. ಇದರಿಂದಾಗಿ ಅವರ ಸ್ಮಾರಕಕ್ಕೆ ಎಲ್ಲ ಕಡೆಯಿಂದಲೂ ಉತ್ತೇಜಕಪ್ರತಿಕ್ರಿಯೆ ಬಂದಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ.

ನಿಗದಿಯಾದಂತೆ ಸಭೆ ನಡೆಯಿತು. ಶರೀಫರಾದ ಡಾ. ಬರ್ಡ್‌ವುಡ್ ಸಭಿಕರನ್ನು ಆಮಂತ್ರಿಸಿ ಪ್ರಾರಂಭಿಕ ಭಾಷಣ ಮಾಡಿದರು. ಸಂಕ್ಷಿಪ್ತವಾಗಿಯೇ ಅವರು ನಾನಾ ಅವರು ಮಾಡಿದ ಬೃಹತ್ ಕೆಲಸಗಳ ಪರಿಚಯ ಮಾಡಿಕೊಟ್ಟರು. ಸರ್ ಜೀಜೀಭಾಯಿ ಸಭೆಯ ಅಧ್ಯಕ್ಷರಾಗಿ ಆಯ್ಕೆಯಾದರು. ಈ ಹಂತದಲ್ಲಿ ಬಾಂಬೆಯ ಗವರ್ನರ್‌ರಿಂದ ಸಭೆಗೆ ಒಂದು ಸಂದೇಶ ಬಂದಿತು. ಈ ಸಂದೇಶದಲ್ಲಿ ಗವರ್ನರ್ ಫ್ರೇರೆ ಅವರು ನಾನಾ ಅವರು ಮಾಡಿದ ಸೇಯನ್ನು ಮುಕ್ತ ಕಂಠದಿಂದ ಪ್ರಶಂಸಿಸಿ ಸಭೆಯು ಅವರ ಸ್ಮಾರಕದ ಬಗ್ಗೆ ಯಾವುದೇ ತೀರ್ಮಾನ ತೆ-ಗೆದು ಕೊಂಡರೂ ಅದು ತನಗೂ ಒಪ್ಪಿತವಾಗುತ್ತದೆಂದು ಸೂಚಿಸಿದ್ದರು. ದಾನಿಗಳ ಹೆಸರಿನಲ್ಲಿ ತಮ್ಮ ಹೆಸರನ್ನು ತಪ್ಪದೇ ಸೇರಿಸಬೇಕೆಂದು ಆತ ಆಗ್ರಹಪೂರ್ವಕವಾಗಿ ವಿನಂತಿಸಿದ್ದರು. ನಂತರ ಅಧ್ಯಕ್ಷ ಜೀಜೀಭಾಯಿ ಅವರು ಮಾತನಾಡಿ ನಾನಾ ಅವರ ಬಹುಮುಖ ಸೇವೆಯನ್ನು ಮತ್ತೆ ಸಭೆಯ ಗಮನಕ್ಕೆ ತಂದರು. ಅಲ್ಲದೆ ಈ ಹಿಂದೆ ನಡೆದ ಒಂದು ಪ್ರಾಥಮಿಕ ಸಭೆಯಲ್ಲಿ ನಾನಾ ಅವರ ಸ್ಮಾರಕವಾಗಿ ಒಂದು ಪ್ರತಿಮೆ ನಿರ್ಮಾಣವಾಗಬೇಕೆಂಬುದು ಬಹುಜನಗಳ ಅಪೇಕ್ಷೆಯಾಗಿದೆ ಅದನ್ನೇ ಇಲ್ಲಿ ಸೇರಿದ ಮಹಾಜನತೆಯ ಇಚ್ಛೆ ಎಂದು ತಿಳಿಯುವುದಾಗಿ ಅಭಿಪ್ರಾಯಪಟ್ಟರು. ಆನಂತರ ನಾನಾ ಅವರ ಆಪ್ತಮಿತ್ರರಾಗಿದ್ದ ಪ್ರೊಫೆಸರ್ ದಾದಾಭಾಯಿ ನವರೋಜಿ ಅವರು ಒಂದು ನಿಲುವಳಿ ಮಂಡಿಸಲು ಎದ್ದು ನಿಂತರು. ಸ್ಥಳೀಯ ಕಲ್ಯಾಣಕ್ಕಾಗಿ ಎಲ್ಲ ಬಗೆಯ ತ್ಯಾಗ ಮಾಡಿದ ಈ ನಾಡಿನ ಮಹಾನ್ ಪುತ್ರನೊಬ್ಬನಿಗೆ ಸಂಬಂಧ ಪಟ್ಟಂತಹ ಇಂತಹ ಒಂದು ನಿಲುವಳಿಯನ್ನು ಮಂಡಿಸುವ ಭಾಗ್ಯ ತಮಗೆ ದೊರಕಿದ್ದು ತಮಗೆ ಸಂದ ದೊಡ್ಡ ಗೌರವ ಎಂದು ತಾವು ತಿಳಿಯುವುದಾಗಿ ಹೇಳಿ ಅವರು ನಾನಾ ಅವರು ಕಳೆದ ನಾಲ್ಕು ದಶಕಗಳಲ್ಲಿ ಸಲ್ಲಿಸಿದ ವಿವಿಧ ಮುಖದ ಸೇವೆಯನ್ನು ಸಭಿಕರ ಮುಂದಿಟ್ಟರು. ನಂತರ ಅವರು ಮಂಡಿಸಿದ ನಿಲುವಳಿ ಈ ರೀತಿಯದಾಗಿತ್ತು: "ಮಾನನೀಯ ಜಗನ್ನಾಥ ಶಂಕರ ಶೇಟ್‌ರು ದೇಶ ಬಾಂಧವರಿಗೆ ಈ ನಲವತ್ತು ವರ್ಷಗಳಲ್ಲಿ ವಿನಯ ಪೂರ್ವಕ ಸೇವೆ ಸಲ್ಲಿಸಿದ್ದಾರೆ ಮತ್ತು ಅವರಿಗೆ ಕೃತಜ್ಞತೆ ಮತ್ತು ಗೌರವವನ್ನು ಸೂಚಿಸಲು ಒಂದು ಪ್ರತಿಮೆಯನ್ನು ನಿರ್ಮಿಸಿ ಅದನ್ನು ಮಾಡುತ್ತಿರುತ್ತೇನೆ ಆದರೆ ಹೆಚ್ಚು ಜನ ಸಂಸ್ಥೆಯ ಭಾರ ಹೊರುವಂತಾಗುವುದು ಅದರ ಆರೋಗ್ಯದ ದೃಷ್ಟಿಯಿಂದ ಒಳಿತು ಎಂಬುದು ನನ್ನ ಖಚಿತ ಅಭಿಪ್ರಾಯ. ಇಂತಹ ಸಂಕಟ ಸಮಯದಲ್ಲಿ ಹೆಚ್ಚಿನ ಸಂಖ್ಯೆಯ ಸದಸ್ಯರು ಇದರ ಬಗ್ಗೆ ಆಸ್ಥೆ ವಹಿಸಿ ಇದೊಂದು ಸ್ವತಂತ್ರ ಸಂಸ್ಥೆಯಾಗಿಯೇ ಉಳಿಯುವಂತಹ ಸಹಕಾರ ಕೊಡುವಿರೆಂದು ನಾನು ಆಶಿಸುತ್ತೇನೆ".

ನಾನಾರ ಈ ಮಾತುಗಳು ಒಂದು ಸಾರ್ವಜನಿಕ ಸಂಸ್ಥೆ ನಡೆಯಲಗತ್ಯವಾದ ಪ್ರಜಾತಾಂತ್ರಿಕ ಮೌಲ್ಯಗಳನ್ನು ನಿರ್ದಿಷ್ಟವಾಗಿ ಸೂಚಿಸುತ್ತವಾದ್ದರಿಂದ ಮಹತ್ವದ್ದಾಗಿವೆ. ಸಾರ್ವಜನಿಕ ಹಿತದೃಷ್ಟಿಯ ಕೆಲಸಗಳಿಗಾಗಿ ಸರ್ಕಾರದ ಸಹಾಯಕ್ಕೆ ಕಾಯದೇ ಸ್ವಾವಲಂಬಿತ ಪ್ರಕ್ರಿಯೆಯ ಮೂಲಕ ಅಂತಹ ಕೆಲಸಗಳನ್ನು ಜೀವಂತವಾಗಿಟ್ಟುಕೊಳ್ಳಬೇಕಾದ ಪ್ರಾಥಮಿಕ ಅಗತ್ಯತೆಯ ಪಾಠವನ್ನು ನಾನಾ ಈ ಮೂಲಕ ನಾಗರಿಕರಿಗೆ ಕಲಿಸಿದ್ದಾರೆ. ಸ್ವತಃ ಉದಾರ ದಾನಿಗಳಾಗಿದ್ದು ತಮ್ಮ ಸಹಾಯಧನದಿಂದಲೇ ಅನೇಕ ಸಂಘ, ಸಂಸ್ಥೆಗಳ ನಿರ್ಮಾಣ-ನಿರ್ವಹಣೆಗೆ ಕಾರಣರಾಗಿದ್ದೂ ಅವರು ಸಂಸ್ಥೆಯ ನಿರ್ವಹಣೆಯಲ್ಲಿ ಸಾಮಾನ್ಯ ಸದಸ್ಯರ ಸಹಕಾರ ಮತ್ತು ಆ ಮೂಲಕ ಸ್ಥಾಪಿತವಾಗುವ ಸ್ವಾವಲಂಬನೆಗೆ ಒತ್ತು ಕೊಟ್ಟಿದ್ದು ಅವರ ಅಲ್ಲಿನವರೆಗಿನ ಸಾರ್ವಜನಿಕ ಜೀವನದ ಅನುಭವದ ಫಲ ಎನ್ನಲಡ್ಡಿಯಿಲ್ಲ. ಪ್ರಜಾತಾಂತ್ರಿಕ ವ್ಯವಸ್ಥೆಯ ಬೇರುಗಳನ್ನು ನಾನಾ ಅವರು ಬಹಳ ಹಿಂದೆಯೇ ಗುರಿತಿಸಿದ್ದರ ಸೂಚನೆಯೂ ಆಗಿದೆ ಅವರ ಈ ಅಂತಿಮ ಭಾಷಣ.

ಕಲುಷಿತಗೊಂಡಿರುವ ಇಂದಿನ ಸಾರ್ವಜನಿಕ ಜೀವನವನ್ನು ಸ್ವಚ್ಛಗೊಳಿಸಬಲ್ಲ ಸ್ಪಷ್ಟ ಸಂದೇಶ ನಾನಾ ಅವರ ಈ ಅಂತಿಮ ನುಡಿಗಳಲ್ಲಿದೆ. ಆ ಸಂದೇಶದ ಪ್ರೇರಣೆಯಿಂದ ಹೆಚ್ಚು ಜನ ಕಾರ್ಯೋನ್ಮುಖರಾಗುವದೇ ಇಂತಹ ಧೀಮಂತ ನಾಯಕನಿಗೆ ಸಲ್ಲಿಸುವ ಸೂಕ್ತ ಗೌರವ.

## ನಾನಾ ಅವರ ಅಂತ್ಯ

"ಆಗ್ರೋ ಹಾರ್ಟಿಕಲ್ಚರಲ್ ಸೊಸೈಟಿ'ಯ ಸಭೆಯಿಂದ ಮನೆಗೆ ಬಂದ ತಕ್ಷಣ ನಾನಾ ಅವರಿಗೆ ಜ್ವರ ಬಂದಿತು. ಅನೇಕ ದಿನಗಳಾದರೂ ಅವರು ಅದರಿಂದ ಚೇತರಿಸಿಕೊಳ್ಳಲಿಲ್ಲ.

ಅನೇಕ ತಜ್ಞ ವೈದ್ಯರು ಅವರ ಸೇವೆಗೆ ಕಟಿಬದ್ಧರಾಗಿದ್ದರು. ಡಾ. ಸಿ. ಮೋರ್‌ಹೆಡ್, ಡಾ. ಬೆರಿಗಾಲ್, ಡಾ. ಭಾವುದಾಜೀ ಮತ್ತು ವೈದ್ಯ ಬಾಳಾಚಾರ್ಯವೈದ್ಯರಂತಹ ಪರಿಣತ ವೈದ್ಯರು ಶುಶ್ರೂಷೆ ನಡೆಸುತ್ತಿದ್ದರೂ ನಾನಾರ ದೇಹಸ್ಥಿತಿ ದಿನದಿಂದ ದಿನಕ್ಕೆ ಉಲ್ಬಣಿಸುತ್ತಲೇ ಹೋಯಿತು. ನಾನಾರಿಗೂ ತಮ್ಮ ಅಂತ್ಯ ಸಮೀಪಿಸಿದ್ದರ ಕುರುಹ ದೊರೆಯಿತೇನೋ. 30-7-65ರಂದು ತಮ್ಮ ವಾಸ ಸ್ಥಾನವನ್ನು ಮೂರನೇ ಮಹಡಿಯಿಂದ ಕೆಳಮಹಡಿಗೆ ಸ್ಥಳಾಂತರಿಸಲು ಅವರೇ ಸೂಚಿಸಿದರು. ಅವರ ಅಪೇಕ್ಷೆಯಂತೆ ಅನೇಕ ಧಾರ್ಮಿಕವಿಧಿಗಳನ್ನು ನಡೆಸಿ ಯಥೇಚ್ಛವಾಗಿ ದಾನದಕ್ಷಿಣೆಗಳನ್ನು ಕೊಡಿಸಲಾಯಿತು. 31-7-65ರಂದು ಮಧ್ಯಾಹ್ನ 2 ಗಂಟೆಗೆ ಮುಂಬಯಿ ನಾಗರಿಕ ಜೀವನದಲ್ಲಿ 42 ವರ್ಷಗಳಿಂದ ಪ್ರಜ್ವಲಿಸುತ್ತಿದ್ದ ತಾರೆಯೊಂದು ಅಸ್ತಂಗತವಾಯಿತು. ಆಗ ನಾನಾ ಅವರ ವಯಸ್ಸು 62 ವರ್ಷ 5 ತಿಂಗಳು 21 ದಿನ. ನಗರದ ಅಪ್ರತಿಮ ನಾಯಕನ ಸಾವಿನಿಂದ ನಗರ ಶೋಕಸಾಗರದಲ್ಲಿ ಮುಳುಗಿತು. ಅವರ ಗೌರವಾರ್ಥ ಅಂದು ಎಲ್ಲ ತಾರಾದೇವ್‌ನ ಪ್ರದೇಶದ ಒಂದು ಪ್ರಮುಖ ವೃತ್ತವನ್ನು ಜನ ಆತ್ಮೀಯತೆಯಿಂದ ಕರೆಯುತ್ತಿದ್ದ "ನಾನಾ" ಹೆಸರಿನಲ್ಲಿ "ನಾನಾಚೌಕ್' ಎಂದು ಹೆಸರಿಸಿ ಅವರ ಈ ಹೆಸರನ್ನು ಜನಮಾನಸದಲ್ಲಿ ಶಾಶ್ವತವಾಗಿಡುವ ಪ್ರಯತ್ನ ಮಾಡಲಾಗಿದೆ. ನಾನಾರ ಆಧ್ಯಾತ್ಮಿಕ ನಂಬಿಕೆಯ ಪ್ರತೀಕವಾದ ಭ್‌ವಾನಿ ಶಂಕರ ದೇವಾಲಯದ ಬಳಿಯೇ ಈ ವೃತ್ತವೂ ಇರುವುದು ಸೂಕ್ತವೂ ಆಗಿದೆ. ಬಾಲ್ಯದ ದಿನಗಳಿಂದಲೇ ಬಾಲಕರಿಗೆ ಈ ಮೇರುವ್ಯಕ್ತಿತ್ವದ ಪರಿಚಯವಾಗಲೆಂದು ಐದನೇ ತರಗತಿಯ ಮರಾಠಿ ಪಠ್ಯ ಪುಸ್ತಕದಲ್ಲಿ ವೈ.ಡಿ.ಫಡ್ಕೆ ಅವರು ಬರೆದ "ನಾನಾ ಶಂಕರ ಶೇಟ್' ಎಂಬ ಪಾಠವನ್ನು ಅಳವಡಿಸಲಾಗಿದೆ.

ಇದರ ಜೊತೆಗೆ ಮಹಾರಾಷ್ಟ್ರ ಸರ್ಕಾರವು ತನ್ನ ಈ ಸುಪುತ್ರನ ನೂರನೇ ಪುಣ್ಯ ತಿಥಿಯನ್ನು ಇಡೀ ರಾಜ್ಯಾದ್ಯಂತ ಬಹಳ ಅರ್ಥಪೂರ್ಣವಾಗಿ ಆಚರಿಸಿ ಈ ಮಹೋನ್ನತ ನಾಯಕನಿಗೆ ಗೌರವ ಸೂಚಿಸಿತು. ಈ ಸಮಾರಂಭವು 1965ರ ಜುಲೈ 29, 30 ಮತ್ತು 31 ರಂದು ನಡೆಯಿತು.

ಅಂದಿನ ಸಮಾರಂಭದಲ್ಲಿ ಭಾಗವಹಿಸಿ ಮಾತನಾಡಿದ ಅಂದಿನ ಕೇಂದ್ರ ರೈಲು ಸಚಿವರಾಗಿದ್ದ ಎಸ್.ಕೆ. ಪಾಟೀಲರು ಈ ದೇಶದ ರೈಲ್ವೆ ಆಡಳಿತ ಮಂಡಳಿಯ ಪ್ರಥಮ ಭಾರತೀಯ ನಿರ್ದೇಶಕರಾಗಿದ್ದ ದಿವಂಗತ ಜಗನ್ನಾಥ ಶಂಕರ ಶೇಟ್ ಅವರಿಗೆ ಸೂಕ್ತ ಸ್ಮಾರಕವೊಂದನ್ನು ನಿರ್ಮಿಸಲು ತಮ್ಮ ಇಲಾಖೆ ಪರಿಶೀಲಿಸುತ್ತಿದೆ ಎಂದು ಹೇಳಿದರು. ನಾನಾ ಅವರು 'ಗ್ರೇಟ್ ಇಂಡಿಯನ್ ಪೆನಿನ್ಸುಲಾರ್ ರೈಲ್ವೆ' ಕಂಪನಿಯ ಗೋಲ್ಡನ್ ಪಾಸ್ ಅನ್ನು ಅಜೀವ ಪರ್ಯಂತ ಹೊಂದಿದ್ದ ವಿಶಿಷ್ಟ ವ್ಯಕ್ತಿಯಾಗಿದ್ದರಷ್ಟೆ ಅಲ್ಲ ಅವರು ಸಾರ್ವಜನಿಕ ಜೀವನದ ಕಲೆ, ಸಾಹಿತ್ಯ, ನಾಟಕ, ಶಿಕ್ಷಣ ಯಾವುದೇ ಕ್ಷೇತ್ರವಿರಲಿ ಅದರಲ್ಲಿ ತಮ್ಮ ಹೆಜ್ಜೆಗುರುತುಗಳನ್ನು ಮೂಡಿಸಿದ್ದಾರೆ. ತನ್ನ ದೇಶಬಾಂಧವರ ಬಗ್ಗೆ ಅತೀವ ಪ್ರೀತಿ ಹೊಂದಿದ್ದ ರಾಷ್ಟ್ರಭಕ್ತ ಅವರಾಗಿದ್ದರು ಎಂದು ಅವರ ಗುಣಗಾನ ಮಾಡಿದರು.

ಅಧ್ಯಕ್ಷರಾಗಿದ್ದ ರಾಜ್ಯ ಗೃಹ ಮಂತ್ರಿಗಳಾದ ಡಿ.ಎಸ್. ದೇಸಾಯಿ ಅವರು ಮಾತನಾಡುತ್ತಾ ನಾನಾ ಸಾಹೇಬರು ನಗರದ ಪೌರಸೌಲಭ್ಯ ಮತ್ತು ಔದ್ಯಮಿಕ ಬೆಳವಣಿಗೆಯ ಹಾದಿಯನ್ನು ಸುಗಮಗೊಳಿಸಿದರಲ್ಲದೆ, ನೌಕಾ ಕಂಪನಿಗಳನು ರೈಲ್ವೆ ಮಾರ್ಗಗಳನ್ನು ಮತ್ತು ಕೃಷಿ ತೋಟಗಾರಿಕ ಸಂಸ್ಥೆಗಳನ್ನು ಕಟ್ಟಿ ಮುಂಬಯಿಗೆ ಬಹುಮುಖತೆಯನ್ನು ತಂದ ಕೊಟ್ಟರು ಎಂದು ಪ್ರಶಂಸಿಸಿದರು. ಮಹಾ ಮಹೋಪಾಧ್ಯಾಂ ಡಿ.ವಿ. ಪೋತದಾರ್ ಅವರು ನಾನಾ ಅವರನ್ನು ಹೆಣ್ಣು ಮಕ್ಕ ಶಿಕ್ಷಣದ ಆದ್ಯ ಪ್ರವರ್ತಕ ಎಂದು ವರ್ಣಿಸಿ ನಾನಾ ಅವ ಗವರ್ನರ್ ಎಲ್ಫಿನಸ್ಟನ್ ಅವರೊಂದಿಗೆ ಸೇರಿ ಅಜ್ಞಾನದ ತೊಳಲುತ್ತಿದ್ದ ಮುಂಬೈ ನಾಗರೀಕರಿಗೆ ಇಂಗ್ಲಿಷ್‌ಶಿಕ್ಷ ಸೌಲಭ್ಯ ಲಭ್ಯವಾಗುವಂತೆ ಮಾಡಿ ಜ್ಞಾನದೀವಿಗೆಯನ ಬೆಳಗಿದರು ಎಂದು ಗುಣಗಾನ ಮಾಡಿದರು. ಮಹಾಪೌ ಎಂ. ಮಾಧವನ್ ಅವರು ನಾನಾ ಶಂಕರ ಶೇಟ್ ಅವ ಭಾರತೀಯರಲ್ಲಿ ವಿಶಾಲ ಮನೋಭಾವ ಬೆಳೆಸುವಲ್ಲ ಸಾಮಾಜಿಕ ನ್ಯಾಯವನ್ನು ಪ್ರಾಯೋಗಿಕವಾಗಿ ಆಚರಿಸುವ ಮತ್ತು ಜನರಲ್ಲಿ ತಾರ್ಕಿಕತೆಯನ್ನು ಬೆಳೆಸುವ ಹಾದಿಯ ಪ್ರಯತ್ನಶೀಲರಾಗಿದ್ದರು ಎಂದು ಅಭಿಪ್ರಾಯಪಟ್ಟರ ಶಾಸಕರಾದ ಎ.ಎನ್ ನಾಮ್‌ಜೋಶಿಯವರು ವಂದನಾರ್ಪ ಮಾಡುತ್ತ ನಾನಾರವರ ಹೆಸರು ಅಮರವಾಗಿಸಲುಅವ ಹೆಸರಿನಲ್ಲಿ ಒಂದು ವಿಶ್ವವಿದ್ಯಾಲಯ ಸ್ಥಾಪಿಸಲಾಗುವುದು ಎಂದರ ಕೇಂದ್ರ ಅಂಚೆ ಇಲಾಖೆಯು ನಾನಾರವರ ಹೆಸರಿನಲ್ಲಿ ಎರಡ ರೂಪಾಯಿಯೊಂದು ಅಂಚೆ ಸೇವೆ ತಾ 15-2-1991 ರಂದ ಹಾರ ತಂದು ಅವರಿಗೆ ಗೌರವ ಸಲ್ಲಿಸಿವೆ. ಶಾಲಾಕಾಲೇಜ ವ್ಯಾಪಾರ ವಹಿವಾಟುಗಳನ್ನು ಬಂದು ಮಾಡಲಾಯಿತು. ಜಾ ಭೇದವಿಲ್ಲದೆ, ಅಸಂಖ್ಯಾತ ನಾಗರಿಕರು ಅಗಲಿದ ತಮ್ಮ ಪ್ರಿಂ ನಾಯಕನಿಗೆ ಶ್ರದ್ಧಾಂಜಲಿ ಅರ್ಪಿಸಿದರು. ಶವಯಾತ್ರೆಯಲ್ಲಿಯ ಅತ್ಯಧಿಕ ಜನ ಪಾಲ್ಗೊಂಡು ಅಗಲಿದ ನಾಯಕನಿಗೆ ಅಂತಿ ನಮನ ಸಲ್ಲಿಸಿದರು. ನಾನಾರ ಹೋರಾಟದ ಫಲವಾ ಹಿಂದೂಗಳಿಗೆ ಲಭ್ಯವಾಗಿದ್ದ ಮರೀನ್ ಲೈನ್ಸ್ ಬಳಿ ರುದ್ರಭೂಮಿಯಲ್ಲಿ ನಾನಾರ ಮಗ ವಿನಾಯಕರಾವ್ ತಮ ತಂದೆಯ ಚಿತೆಗೆ ಅಗ್ನಿ ಸಂಸ್ಕಾರ ಮಾಡಿದರು. ಮುಂ ಜೀವನದ ಒಂದು ಉಜ್ವಲ ಅಧ್ಯಾಯ ಮುಕ್ತಾಯಗೊಂಡಿತು

ಅನೇಕ ದಿನಗಳವರೆಗೆ ನಾನಾ ಅವರ ಸೇವೆಯನ ಸ್ಮರಿಸಿ, ಅವರ ಗುಣಗಾನ ಮಾಡುವ ಲೇಖನಗಳು ಪತ್ರಿಕೆಯ ಪ್ರಕಟವಾಗಿ ಅವರಿಗೆ ಸೂಕ್ತ ಶ್ರದ್ಧಾಂಜಲಿ ಅರ್ಪಿಸಿದ ಪ್ರಾಂತ್ಯ ಪ್ರಮುಖರಾದ ಗವರ್ನರ್ ಫ್ರೇರೆ ಅವರು ನಾನಾರ ಪು ವಿನಾಯಕರಾವ್‌ಗೆ ಶೋಕ ಸಂದೇಶ ಕಳಿಸಿ ಸರ್ಕಾರದ ಪರವಾ ಗೌರವ ಸಲ್ಲಿಸಿದರು. ತಮ್ಮ ಶೋಕ ಸಂದೇಶದಲ್ಲಿ ಅವರು ನಾನ ಅವರ ನಿಧನದಿಂದ ವೈಯಕ್ತಿಕವಾಗಿ ತಮಗಾದ ದುಃಖವನ ಸೂಚಿಸುತ್ತ ಸರ್ಕಾರ ಒಬ್ಬ ಸನ್ಮಿತ್ರನನ್ನು ಕಳೆದುಕೊಂಡಿ ಅವರ ಅನುಪಸ್ಥಿತಿಯಿಂದ ಇಡೀ ಸಮುದಾಯಕ್ಕೆ ತುಂಬಲಾರ ಹಾನಿಯಾಗಿದೆ, ಎಂದು ತಮ್ಮ ಶ್ರದ್ಧಾಂಜಲಿ ಅರ್ಪಿಸಿದರು. (ಅವ ಇಂಗ್ಲೀಷ್ ಪತ್ರದ ಪೂರ್ಣ ಪಾಠಕ್ಕಾಗಿ ಅನುಬಂಧ ನೋಡಿ ದೈಹಿಕವಾಗಿ ಮರೆಯಾದರೂ ತಮ್ಮ ಅತ್ಯದ್ಭುತ ಕಾರ್ಯಶಕ್ತಿಂ ಮೂಲಕ ಮುಂಬೈನಗರದ ಬೆಳವಣಿಗೆಯ ಪ್ರತಿ ಹಂತದಲ ಜೀವಂತವಾಗಿ ಉಳಿದ ಭಾರತದ ಈ ಶ್ರೇಷ್ಠ ಪುತ್ರನಿಗೆ ನಾವ ನಮ್ಮ ಶ್ರದ್ಧಾ ಸಮುಗಳನ್ನರ್ಪಿಸೋಣ.

♦♦♦♦

